ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೧೭

# ಬ್ರಹ್ಮಾಂಡಪುರಾಣಂ

(ಕನ್ನಡ ಅನುವಾದಸಹಿತ)

ಸಂಚಿಕೆ ೨

---

ಅನುವಾದಕ:

ಆಸ್ಥಾನವಿದ್ವಾನ್ ಪಾಟಣಕರ ಚಂದ್ರಶೇಖರಭಟ್ಟ

ಮೈಸೂರು

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್

೧೯೪೫

# ವಿಷಯಾನುಕ್ರಮಣೀ

# ಮುನ್ನುಡಿ

ಬ್ರಹ್ಮಾಂಡಪುರಾಣದಲ್ಲಿ ಮೊದಲನೆಯ ಒಂದು ಸಂಚಿಕೆಯು ಪ್ರಕಾಶವಾಗಿರುವುದು ವಾಚಕರ ಗಮನಕ್ಕೆ ಬಂದ ವಿಷಯವಾಗಿದೆ. ಈಗ ಅವಿಚ್ಛಿನ್ನವಾದ ಉದ್ಯಮದಿಂದ ಮುಂದಿನ ಸಂಚಿಕೆಯು ಹೊರಬೀಳುವ ಸುಯೋಗವು ಪ್ರಾಪ್ತವಾಗಿದೆಯೆಂಬುದನ್ನು ಅರಿಕೆ ಮಾಡಿಕೊಳ್ಳುತ್ತೇನೆ.

ಈ ಸಂಚಿಕೆಯಲ್ಲಿ ಸೇರಿರುವ ಅಧ್ಯಾಯಗಳಲ್ಲಿ ಖಗೋಳದಲ್ಲಿ ಸೂರ್ಯ-ಚಂದ್ರಾದಿಗಳ ರಥಸನ್ನಿವೇಶ, ಯುಗವ್ಯವಸ್ಥಾ, ಮತ್ತು ವರ್ಣಾಶ್ರಮ ಧರ್ಮಮುಂತಾದುವುಗಳ ಪ್ರತಿಪಾದನೆಯು ಮುಖ್ಯವಾದುದಾಗಿದೆ.

ಧ್ರುವಮಂಡಲಕ್ಕೆ ಅಧೀನವಾಗಿ ಸಕಲ ತೇಜೋಮಂಡಲವು ನಿಯತ ಕ್ರಮದಲ್ಲಿ ಸಂಚರಿಸುವ ವಿಷಯದಲ್ಲಿ ಇಲ್ಲಿ ಮಾಡಿರುವ ವರ್ಣನೆಯು ಆಶ್ಚರ್ಯಕರವಾಗಿದೆ. ನಮ್ಮ ಶರೀರಯಂತ್ರವನ್ನು ಪರ್ಯಾಲೋಚಿಸಿದರೆ ಅಲ್ಲಿ ಸೇರಿರುವ ಯಂತ್ರಾವಯವಗಳು ಸಂಕೋಚ, ವಿಕಾಸ ಧರ್ಮಗಳಿಂದ ಕೂಡಿ ಕಾರ್ಯಸಾಧನೆಯನ್ನು ಮಾಡುತ್ತಿರುವುದು ಪ್ರತ್ಯಕ್ಷಗೋಚರವಾಗುವುದಲ್ಲವೆ! ಒಂದು ತೋಳನ್ನು ಮೇಲಕ್ಕೆ ಎತ್ತಬಹುದು, ಅಡ್ಡಲಾಗಿ ಚಾಚಬಹುದು, ಕೆಳಕ್ಕೆ ಬಗ್ಗಿಸಬಹುದು, ತಿರುಗಿಸಬಹುದು, ಹೀಗೆ ಅನೇಕ ತರಗಳಿಂದ ಅದರ ಉಪಯೋಗವನ್ನು ಹೊಂದಬಹುದು. ಈಗಿನ ಬಾಹ್ಯ ಯಂತ್ರ ಅವಯುವಗಳಲ್ಲಿ ಇಷ್ಟೊಂದು ಪರಿವರ್ತನೆಯು ಕಂಡು ಬರುವುದಿಲ್ಲ. ಈ ಶರೀರಯಂತ್ರವನ್ನು ಪ್ರತ್ಯಕ್ಷವಾಗಿ ನೋಡುವವರಿಗೆ ವಚನದಿಂದ ಇದರ ಸಮಸ್ತ ಉಪಯೋಗಗಳನ್ನು ವರ್ಣಿಸಿದರೆ ಯಾರಿಗೂ ಆಶ್ಚರ್ಯವಾಗದಿರದು. ಸಾಮಾನ್ಯ ಪರಿಚ್ಛೇದದಿಂದ ಕೂಡಿದ ಈ ಚಿಕ್ಕ ಯಂತ್ರವು ಇಷ್ಟು ಗಂಭೀರವಾದ ಸನ್ನಿವೇಶದಿಂದ ಕೂಡಿರುವಲ್ಲಿ ಇದಕ್ಕಿಂತ ಅನಿರ್ವಚನೀಯುವಾದ ವಿಶಿಷ್ಟ ತೇಜೋಮಂಡಲ ಯಂತ್ರ ಪ್ರತಿಷ್ಠೆಯು ಅದ್ಭುತವಾಗಿರುವುದು ಸಹಜವಾಗಿದೆ.

ಇಂತಹ ತೇಜೋಮಂಡಲದಿಂದ ಪ್ರಸರಿಸುತ್ತಿರುವ ಕಾಲವು ಪ್ರಪಂಚದ ವಿವಿಧ ಪರಿವರ್ತನೆಯನ್ನು ನಡೆಸುತ್ತಿರುವುದು. ಭೌತಿಕ ವಸ್ತುಗಳಲ್ಲಿ ಆಗುತ್ತಿರುವ ಕಾಲಾಧೀನವಾದ ಸೂಕ್ಷ್ಮವ್ಯತ್ಯಾಸಗಳು ಅನೇಕವಿರುವುವು. ಅದರಂತೆ ಪ್ರಜೆಗಳ ಕರ್ತವ್ಯವಾದ ವರ್ಣಾಶ್ರಮ ಧರ್ಮಗಳಲ್ಲಿಯೂ ಬದಲಾವಣೆಯುಂಟು. ಆದರೆ ಭೌತಿಕ ವಸ್ತುಗಳ ವ್ಯತ್ಯಾಸವು ವರ್ಷ, ಋತು, ಪಕ್ಷ, ಅಹೋರಾತ್ರಗಳೆಂಬ ಕಾಲಾಂಶಗಳ

ನಿಮಿತ್ತದಿಂದ ನಿಯತವಾಗಿರುವಂತೆ ವರ್ಣಾಶ್ರಮಧರ್ಮ ಕರ್ತವ್ಯತೆಯು ನಿಯತವಾದ ಮಾರ್ಪಾಟನ್ನು ಹೊಂದಿರುವುದೆಂಬುದು ಸನಾತನಿಗಳ ಒಮ್ಮತವು. ಅದನ್ನು ಸಾಮಾನ್ಯ ರೂಪದಿಂದ ಈ ಭಾಗದಲ್ಲಿ ಪ್ರತಿಪಾದಿಸಿದೆ. ಪ್ರತಿಯೊಂದು ಪರ್ವಗಳಲ್ಲಿಯೂ ಉತ್ತರೋತ್ತರ ಗಂಭೀರಾರ್ಥಗಳಿಂದ ಈ ಪುರಾಣದ ವಿಷಯಗಳ ಜ್ಞಾನ ವಿಜ್ಞಾನಗಳು ಮಾನವನ ಉನ್ನತಿಗೆ ಸಾಧನವಾಗಿವೆ.

ಈ ಸಂಚಿಕೆಯಲ್ಲಿ ಅನುಷಂಗಪಾದವೆಂಬ ದ್ವಿತೀಯ ಪಾದದ ಸಂಗಡ ಈ ಪುರಾಣದ ಪೂರ್ವಾರ್ಧವು ಸಮಗ್ರ ಮುಗಿದಿರುತ್ತದೆ.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಎಸ್ ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನ ಮಾಡುವ ಉದ್ಯಮವನ್ನು ಮುಂದುವರಿಸಿರುತ್ತೇನೆ. ಅದರ ಫಲವಾಗಿ ಉತ್ತಮ ರೀತಿಯಿಂದ ಅಂದವಾಗಿ ಮುದ್ರಿಸಿರುವ ಈ ಸಂಚಿಕೆಯನ್ನು ಪ್ರಕಾಶಕ್ಕೆ ತಂದು ಸಜ್ಜನರ ಸೇವೆ ಮಾಡಲು ಅವಕಾಶ ಮಾಡಿಕೊಟ್ಟ ಮಹನೀಯರಿಗೆ ತುಂಬ ಕೃತಜ್ಞನಾಗಿದ್ದೇನೆ.

ಅನುವಾದಕ.

ಶ್ರೀಃ

# ಬ್ರಹ್ಮಾಂಡಪುರಾಣಂ

## ತ್ರಯೋವಿಂಶತಿತಮೋಽಧ್ಯಾಯಃ

**ಸೂತ ಉವಾಚ—**

**ಸ ರಥೋಽಧಿಷ್ಠಿತೋ ದೇವೈರಾದಿತ್ಯೈರ್ಮುನಿಭಿಸ್ತಥಾ ।**
**ಗಂಧರ್ವೈರಪ್ಸರೋಭಿಶ್ಚ ಗ್ರಾಮಣೀಸರ್ಪರಾಕ್ಷಸೈಃ ॥ ೧ ॥**

**ಏತೇ ವಸಂತಿ ವೈ ಸೂರ್ಯೇ ದ್ವೌ ದ್ವೌ ಮಾಸೌ ಕ್ರಮೇಣ ತು ।**
**ಧಾತಾಽರ್ಯಮಾ ಪುಲಸ್ತ್ಯಶ್ಚ ಪುಲಹಶ್ಚ ಪ್ರಜಾಪತಿಃ ॥ ೨ ॥**

**ಐರಾವತೋ ವಾಸುಕಿಶ್ಚ ಕಂಸೋ ಭೀಮಶ್ಚ ತಾವುಭೌ ।**
**ರಥಕೃಚ್ಚ ರಥೌಜಾಶ್ಚ ಯಕ್ಷಾವೇತಾವುದಾಹೃತೌ ॥ ೩ ॥**

**ತುಂಬುರುರ್ನಾರದಶ್ಚೈವ ಸುಸ್ಥಲಾ ಪುಂಜಿಕಸ್ಥಲಾ ।**
**ರಕ್ಷೋ ಹೇತಿಃ ಪ್ರಹೇತಿಶ್ಚ ಯಾತುಧಾನಾವುದಾಹೃತೌ ॥ ೪ ॥**

**ಏತೇ ವಸಂತಿ ವೈ ಸೂರ್ಯೇ ಮಧುಮಾಧವಯೋಃ ಸದಾ ।**
**ಮಿತ್ರಶ್ಚ ವರುಣಶ್ಚೈವ ಮುನಿರತ್ರಿರುದಾಹೃತಃ ॥ ೫ ॥**

---

ಸೂತಮುನಿಯು ಹೀಗೆ ಹೇಳಿದನು :—

೧. ಹಿಂದೆ ಹೇಳಿರುವ ಸೂರ್ಯನ ರಥವು ಆದಿತ್ಯರು, ದೇವತೆಗಳು, ಮುನಿಗಳು, ಗಂಧರ್ವರು, ಅಪ್ಸರಃಸ್ತ್ರೀಯರು, ಗ್ರಾಮಣಿಯರು, ಸರ್ಪಗಳು ಮತ್ತು ರಾಕ್ಷಸರು ಇಷ್ಟುಮಂದಿಯ ಗಣದಿಂದ ವಾಸಮಾಡಲ್ಪಟ್ಟಿದೆ

೨-೩-೪-೫. ಈ ಇಷ್ಟು ಜಾತಿಯ ಪ್ರಜೆಗಳು ಸೂರ್ಯನಲ್ಲಿ ಕ್ರಮವಾಗಿ ಎರಡೆರಡು ಮಾಸಗಳು ವಾಸಮಾಡುತ್ತಾರೆ. ಧಾತಾ-ಅರ್ಯಮಾ ಎಂಬ ಆದಿತ್ಯರು, ಪುಲಸ್ತ್ಯಪ್ರಜಾಪತಿ-ಪುಲಹಪ್ರಜಾಪತಿ ಎಂಬ ಮುನಿಗಳು, ಐರಾವತ-ವಾಸುಕಿ ಎಂಬ ಸರ್ಪಗಳು, ಕಂಸ-ಭೀಮ ಅಥವಾ ರಥಕೃತ್-ರಥೌಜ ಎಂಬ ಸೇನಾನೀ-ಗ್ರಾಮಣಿ

1

ತಥಾ ವಸಿಷ್ಠೋ ವಿಶ್ವಾತಃ ಸಹಜನ್ಯಾ ಚ ಮೇನಕಾ ।
ರಾಕ್ಷಸೌ ಚ ಸಮಾಖ್ಯಾತೌ ಪೌರುಷೇಯೋ ವಧಸ್ತಥಾ ॥ ೬ ॥

ಹಾಹಾ ಹೂಹೂಶ್ಚ ಗಂಧರ್ವೌ ಯಕ್ಷಶ್ಚಾಪಿ ರಥಸ್ವನಃ ।
ರಥಚಿತ್ರಸ್ತಥೈವಾನ್ಯೋ ನಾಗಸಾಕ್ಷಕಸಂಜ್ಞಿತಃ ॥ ೭ ॥

ರಂಭಕಶ್ಚ ವಸಂತ್ಯೇತೇ ಮಾಸಯೋಃ ಶುಚಿಶುಕ್ರಯೋಃ ।
ತತಃ ಸೂರ್ಯೇ ಪುನಸ್ತ್ವನ್ಯಾ ನಿವಸಂತೀಹ ದೇವತಾಃ ॥ ೮ ॥

ಇಂದ್ರಶ್ಚೈವ ವಿವಸ್ವಾಂಶ್ಚ ಅಂಗಿರಾ ಭೃಗುರೇವ ಚ ।
ಏಲಾಪತ್ರಸ್ತಥಾ ಸರ್ಪಃ ಶಂಖಪಾಲಶ್ಚ ತಾವುಭೌ ॥ ೯ ॥

ವಿಶ್ವಾವಸೂಗ್ರಸೇನೌ ಚ ಶ್ವೇತಶ್ಚೈವಾರುಣಸ್ತಥಾ ।
ಪ್ರಮ್ಲೋಚಾ ಇತಿ ವಿಖ್ಯಾತಾನುಮ್ಲೋಚೇತಿ ಚ ತೇ ಉಭೇ ॥ ೧೦ ॥

ಯಾತುಧಾನಸ್ತದಾ ಸರ್ಪೋ ವ್ಯಾಘ್ರಶ್ಚೈವ ತು ತಾವುಭೌ ।
ನಭೋನಭಸ್ಯಯೋರೇಷ ಗಣೋ ವಸತಿ ಭಾಸ್ಕರೇ ॥ ೧೧ ॥

---

ಯರು, ತುಂಬುರು-ನಾರದ ಎಂಬ ಗಂಧರ್ವರು, ಸುಸ್ಥಲಾ-ಪುಂಜಿಕಸ್ಥಲಾ ಎಂಬ ಅಪ್ಸರಃಸ್ತ್ರೀಯರು, ಮತ್ತು ಹೇತಿ-ಪ್ರಹೇತಿ ಎಂಬ ರಾಕ್ಷಸರು—ಇವರೆಲ್ಲರೂ ಸೂರ್ಯ ಮಂಡಲದಲ್ಲಿ ಚೈತ್ರ-ವೈಶಾಖ ಮಾಸಗಳಲ್ಲಿ ವಾಸಮಾಡುವರು.

೬-೭-೮. ಮಿತ್ರ-ವರುಣ ಎಂಬ ದೇವತೆಗಳು, ಅತ್ರಿ-ವಸಿಷ್ಠ ಎಂಬ ಮುನಿಗಳು, ಸಹಜನ್ಯಾ-ಮೇನಕಾ ಎಂಬ ಅಪ್ಸರಃಸ್ತ್ರೀಯರು, ಪೌರುಷೇಯ-ವಧ ಎಂಬ ರಾಕ್ಷಸರು, ಹಾಹಾ-ಹೂಹೂ ಎಂಬ ಗಂಧರ್ವರು, ರಥಸ್ವನ-ರಥಚಿತ್ರರೆಂಬ ಸೇನಾನೀ ಅಥವಾ ಗ್ರಾಮಣೀ ಯಕ್ಷರು ಮತ್ತು ನಾಕ್ಷಸ-ರಂಭಕ ಎಂಬ ಸರ್ಪಗಳು—ಇವರು ಜ್ಯೇಷ್ಠ-ಆಷಾಢ ಮಾಸಗಳಲ್ಲಿ ಸೂರ್ಯಬಿಂಬದಲ್ಲಿ ವಾಸಮಾಡುವರು.

೯-೧೦-೧೧. ಮತ್ತೆ ಮುಂದಿನ ಮಾಸಗಳಲ್ಲಿ ಇತರ ದೇವತೆಗಳು ವಾಸಮಾಡುತ್ತಾರೆ. ಇಂದ್ರ-ವಿವಸ್ವಾನ್ ಎಂಬ ದೇವತೆಗಳು, ಅಂಗಿರಾ-ಭೃಗು ಎಂಬ ಮುನಿಗಳು, ಏಲಾಪತ್ರ-ಶಂಖಪಾಲ ಎಂಬ ಸರ್ಪಗಳು, ವಿಶ್ವಾವಸು-ಉಗ್ರಸೇನ ಎಂಬ ಗಂಧರ್ವರು, ಶ್ವೇತ-ಅರುಣ ಎಂಬ ಸೇನಾನೀ ಅಥವಾ ಗ್ರಾಮಣೀ ಯಕ್ಷರು, ಪ್ರಮ್ಲೋಚಾ-ಅನು

ಶರದ್ಯನ್ಯಾಃ ಪುನಃ ಶುಭ್ರಾ ವಸಂತಿ ಮುನಿದೇವತಾಃ ।
ಪರ್ಜನ್ಯಶ್ಚೈವ ಪೂಷಾ ಚ ಭಾರದ್ವಾಜಃ ಸಗೌತಮಃ ॥ ೧೨ ॥

ಪರಾವಸುಶ್ಚ ಗಂಧರ್ವಸ್ತಥೈವ ಸುರುಚಿಶ್ಚ ಯಃ ।
ವಿಶ್ವಾಚೀ ಚ ಘೃತಾಚೀ ಚ ಉಭೇ ತೇ ಶುಭಲಕ್ಷಣೇ ॥ ೧೩ ॥

ನಾಗ ಐರಾವತಶ್ಚೈವ ವಿಶ್ರುತಶ್ಚ ಧನಂಜಯಃ ।
ಶ್ಯೇನಜಿಚ್ಚ ಸುಷೇಣಶ್ಚ ಸೇನಾನೀಗ್ರಾಮಣೀಶ್ಚ ತೌ ॥ ೧೪ ॥

ಆಪೋ ವಾತಶ್ಚ ದ್ವಾವೇತೌ ಯಾತುಧಾನಾವುದಾಹೃತೌ ।
ವಸಂತ್ಯೇತೇ ತು ವೈ ಸೂರ್ಯೇ ಸದೈವಾಶ್ವಿನಕಾರ್ತಿಕೇ ॥ ೧೫ ॥

ಹೈಮಂತಿಕೌ ತು ದ್ವೌ ಮಾಸೌ ವಸಂತಿ ಚ ದಿವಾಕರೇ ।
ಅಂಶೋ ಭಗಶ್ಚ ದ್ವಾವೇತೌ ಕಶ್ಯಪಶ್ಚ ಕ್ರತುಶ್ಚ ಹ ॥ ೧೬ ॥

ಭುಜಂಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕಸ್ತಥಾ ।
ಚಿತ್ರಸೇನಶ್ಚ ಗಂಧರ್ವ ಊರ್ಣಾಯುಶ್ಚೈ .ವ ತಾವುಭೌ ॥ ೧೭ ॥

---

ಮ್ಲೋಚಾ ಎಂಬ ಅಪ್ಸರಃಸ್ತ್ರೀಯರು ಮತ್ತು ಸರ್ಪ-ವ್ಯಾಘ್ರ ಎಂಬ ರಾಕ್ಷಸರು—ಇವರೆಲ್ಲರೂ ಶ್ರಾವಣ-ಭಾದ್ರಪದ ಮಾಸಗಳಲ್ಲಿ ವಾಸಮಾಡುವರು.

೧೨-೧೩-೧೪-೧೫. ಶರತ್ಕಾಲದಲ್ಲಿ ಬೇರೆ ಶುಭ್ರರಾದ ಮುನಿ-ದೇವತೆಗಳು ವಾಸ ಮಾಡುತ್ತಾರೆ. ಪರ್ಜನ್ಯ-ಪೂಷಾ ಎಂಬ ದೇವತೆಗಳು, ಭಾರದ್ವಾಜ-ಗೌತಮ ಎಂಬ ಮುನಿಗಳು, ಪರಾವಸು-ಸುರುಚಿ ಎಂಬ ಗಂಧರ್ವರು, ವಿಶ್ವಾಚೀ-ಘೃತಾಚೀ ಎಂಬ ಅಪ್ಸರಃಸ್ತ್ರೀಯರು, ಐರಾವತ-ಧನಂಜಯ ಎಂಬ ಸರ್ಪಗಳು ಮತ್ತು ಶ್ಯೇನಜಿತ್-ಸುಷೇಣ ಎಂಬ ಸೇನಾನೀ ಮತ್ತು ಗ್ರಾಮಣಿಯರು, ಆಪ-ವಾತ ಎಂಬ ರಾಕ್ಷಸರು—ಇವರು ಆಶ್ವೀಜ-ಕಾರ್ತಿಕ ಮಾಸಗಳಲ್ಲಿ ವಾಸಮಾಡುವರು.

೧೬-೧೭-೧೮-೧೯. ಇನ್ನು ಮುಂದೆ ಬರುವ ಹೇಮಂತಋತುವಿನ ಮಾಸಗಳಲ್ಲಿ ಮುಂದೆ ಹೇಳುವ ಮುನಿ ಮತ್ತು ದೇವತೆಗಳು ವಾಸಿಸುತ್ತಾರೆ. ಅಂಶ-ಭಗ ಎಂಬ ದೇವತೆಗಳು, ಕಶ್ಯಪ-ಕ್ರತು ಎಂಬ ಮುನಿಗಳು, ಮಹಾಪದ್ಮ-ಕರ್ಕೋಟಕ ಎಂಬ ಸರ್ಪಗಳು, ಚಿತ್ರಸೇನ, ಊರ್ಣಾಯು ಎಂಬ ಗಂಧರ್ವರು, ಊರ್ವಶೀ-ಪೂರ್ವಚಿತ್ತಿ

ಉರ್ವಶೀ ಪೂರ್ವಚಿತ್ತಿಶ್ಚ ತಥೈವಾಪ್ಸರಸಾ ಉಭೇ ।
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಸೇನಾನೀಗ್ರಾಮಣೀಶ್ಚ ತೌ ॥ ೧೮ ॥

ವಿದ್ಯುತ್‌ಸ್ಫೂರ್ಜಃ ಶತಾಯುಶ್ಚ ಯಾತುಧಾನಾವುದಾಹೃತೌ ।
ಸಹೇ ಚೈವ ಸಹಸ್ಯೇ ಚ ವಸಂತ್ಯೇತೇ ದಿವಾಕರೇ ॥ ೧೯ ॥

ತತಃ ಶೈಶಿರಯೋಶ್ಚಾಪಿ ಮಾಸಯೋರ್ನಿವಸಂತಿ ವೈ ।
ತ್ವಷ್ಟಾ ವಿಷ್ಣುರ್ಜಾಮದಗ್ನ್ಯೋ ವಿಶ್ವಾಮಿತ್ರಸ್ತಥೈವ ಚ ॥ ೨೦ ॥

ಕಾದ್ರವೇಯೌ ತಥಾ ನಾಗೌ ಕಂಬಲಾಶ್ವತರಾವುಭೌ ।
ಗಂಧರ್ವೋ ಧೃತರಾಷ್ಟ್ರಶ್ಚ ಸೂರ್ಯವರ್ಚಾಸ್ತಥೈವ ಚ ॥ ೨೧ ॥

ತಿಲೋತ್ತಮಾ ತಥಾ ರಂಭಾ ಬ್ರಹ್ಮಾಪೇತಶ್ಚ ರಾಕ್ಷಸಃ ।
ಯಜ್ಞಾಪೇತಸ್ತಥೈವಾನ್ಯೋ ವಿಖ್ಯಾತೋ ರಾಕ್ಷಸೋತ್ತಮಃ ॥ ೨೨ ॥

ಋತಜಿತ್ಸತ್ಯಜಿಚ್ಚೈವ ಗಂಧರ್ವೌ ಸಮುದಾಹೃತೌ ।
ತಪಸ್ತಪಸ್ಯಯೋಃ ಸೂರ್ಯೇ ವಸಂತಿ ಮುನಿಸತ್ತಮಾಃ ॥ ೨೩ ॥

---

ಎಂಬ ಅಪ್ಸರಃಸ್ತ್ರೀಯರು, ತಾರ್ಕ್ಷ್ಯ-ಅರಿಷ್ಟನೇಮಿ ಎಂಬ ಗ್ರಾಮಣಿ ಅಥವಾ ಸೇನಾನಿಯರು ಮತ್ತು ವಿದ್ಯುತ್‌ಸ್ಫೂರ್ಜ-ಶತಾಯುಗಳೆಂಬ ಯಾತುಧಾನರು – ಇವರು ಮಾರ್ಗಶಿರ-ಪುಷ್ಯಮಾಸಗಳಲ್ಲಿ ಸೂರ್ಯಮಂಡಲದಲ್ಲಿ ವಾಸಮಾಡುವರು.

೨೦-೨೧-೨೨-೨೩. ಅನಂತರದಲ್ಲಿ ಶಿಶಿರಋತುವಿನ ಎರಡು ಮಾಸಗಳಲ್ಲಿ ಬೇರೆ ಯಾವ ಮುನಿ ದೇವತೆಗಳು ವಾಸಮಾಡುವರು : ತ್ವಷ್ಟಾ-ವಿಷ್ಣು ಎಂಬ ದೇವತೆಗಳು, ಜಾಮದಗ್ನ್ಯ-ವಿಶ್ವಾಮಿತ್ರ ಮುನಿಗಳು, ಕದ್ರೂ ಪುತ್ರರಾದ ಕಂಬಲ-ಅಶ್ವತರ ಎಂಬ ಸರ್ಪಗಳು, ಧೃತರಾಷ್ಟ್ರ-ಸೂರ್ಯವರ್ಚಾ ಎಂಬ ಗಂಧರ್ವರು, ತಿಲೋತ್ತಮಾ-ರಂಭಾ ಎಂಬ ಅಪ್ಸರಃಸ್ತ್ರೀಯರು, ಬ್ರಹ್ಮಾಪೇತ-ಯಜ್ಞಾಪೇತ ಎಂಬ ರಾಕ್ಷಸರು ಮತ್ತು ಋತಜಿತ್-ಸತ್ಯಜಿತ್ ಎಂಬ ಸೇನಾನಿ ಅಥವಾ ಗ್ರಾಮಣೀ ಆದ ಯಕ್ಷರು ಇಷ್ಟುಮಂದಿಯು ಮಾಘ-ಫಾಲ್ಗುಣ ಮಾಸಗಳಲ್ಲಿ ಸೂರ್ಯಬಿಂಬದಲ್ಲಿ ವಾಸಮಾಡುವರು.

ಪಿತೃದೇವಮನುಷ್ಯಾದೀನ್ ಸ ಸದಾಽಪ್ಯಾಯಯನ್ ಪ್ರಭುಃ ।
ಪರಿವರ್ತತ್ಯಹೋರಾತ್ರಕಾರಣಂ ಸವಿತಾ ದ್ವಿಜಾಃ ॥ ೨೪ ॥

ಏತೇ ದೇವಾ ವಸಂತ್ಯರ್ಕೇ ದ್ವೌ ದ್ವೌ ಮಾಸೌ ಕ್ರಮೇಣ ತು ।
ಸ್ಥಾನಾಭಿಮಾನಿನೋ ಹ್ಯೇತೇ ಗಣಾ ದ್ವಾದಶ ಸಪ್ತಕಾಃ ॥ ೨೫ ॥

ಸೂರ್ಯಮಾಪ್ಯಾಯಯಂತ್ಯೇತೇ ತೇಜಸಾ ತೇಜ ಉತ್ತಮಮ್ ।
ಗ್ರಥಿತೈಃ ಸ್ವೈರ್ವಚೋಭಿಶ್ಚ ಸ್ತುವಂತಿ ಹ್ಯೃಷಯೋ ರವಿಮ್ ॥ ೨೬ ॥

ಗಂಧರ್ವಾಪ್ಸರಸಶ್ಚೈವ ಗೀತನೃತ್ಯೈರುಪಾಸತೇ ।
ಗ್ರಾಮಣೀಯಕ್ಷಭೂತಾನಿ ಕುರ್ವತೇಽಭೀಷುಸಂಗ್ರಹಮ್ ॥ ೨೭ ॥

ಸರ್ಪಾ ವಹಂತಿ ವೈ ಸೂರ್ಯಂ ಯಾತುಧಾನಾಸ್ತು ಯಾಂತಿ ಚ ।
ವಾಲಖಿಲ್ಯಾ ನಯಂತ್ಯಸ್ತಂ ಪರಿವಾರ್ಯೋದಯಾದ್ರವಿಮ್ ॥ ೨೮ ॥

---

೨೪. ದ್ವಿಜರೆ! ಇಂತಹ ಮಂಡಲಾಧಿಪತಿಯಾದ ಸೂರ್ಯನು ತನ್ನ ಉದಯಾಸ್ತಮಯಗಳಿಂದ ಪಿತೃ-ದೇವ-ಮನುಷ್ಯಗಣಕ್ಕೆ ತೃಪ್ತಿ-ಆನಂದಗಳನ್ನು ಕೊಟ್ಟು ಅಹೋರಾತ್ರಿಗಳೆಂಬ ಕಾಲ ವಿಭಜನೆಗೆ ಕಾರಣನಾಗಿ ಪರಿವರ್ತನೆಯಾಗುತ್ತಿರುವನು.

೨೫. ಹಿಂದೆ ಹೇಳಿದ ದೇವ-ಮುನಿ ಯಕ್ಷ ಮುಂತಾದವರು ಏಳು ಏಳು ವ್ಯಕ್ತಿಗಳ ಹನ್ನೆರಡು ಗಣವು ಸೂರ್ಯಮಂಡಲದ ಸ್ಥಾನಾಭಿಮಾನಿ ದೇವತೆಗಳು. ಈ ದೇವತೆಗಳು ಕ್ರಮವಾಗಿ ಎರಡೆರಡು ಮಾಸಗಳ ಅವಧಿಯಲ್ಲಿ ಸೂರ್ಯನಲ್ಲಿ ವಾಸಮಾಡುವರು.

೨೬. ದೇವತೆಗಳು ತಮ್ಮ ತೇಜಸ್ಸಿನಿಂದ ಸೂರ್ಯನ ತೇಜಸ್ಸನ್ನು ಉತ್ತಮವಾಗುವಂತೆ ವೃದ್ಧಿಯನ್ನು ಉಂಟುಮಾಡುತ್ತಾರೆ. ಮುನಿಗಳು ತಾವು ರಚಿಸಿದ ಸ್ತುತಿ ವಾಕ್ಯಗಳಿಂದ ಸೂರ್ಯಭಗವಂತನನ್ನು ಸ್ತುತಿಮಾಡುತ್ತಾರೆ.

೨೭. ಗಂಧರ್ವರು ಗಾನಕಲೆಯಿಂದ ಸೂರ್ಯನನ್ನು ಸೇವಿಸುತ್ತಾರೆ. ಹಾಗೆ ಅಪ್ಸರಸ್ತ್ರೀಯರು ನರ್ತನದಿಂದ ಸೂರ್ಯನನ್ನು ಆನಂದಪಡಿಸುತ್ತಾರೆ. ಗ್ರಾಮಣೀ-ಯಕ್ಷ ಅಥವಾ ಭೂತಗಳು ಕಿರಣಗಳ ಸಂಗ್ರಹವನ್ನು ಮಾಡುತ್ತಾರೆ.

೨೮. ಸರ್ಪಗಳು ಸೂರ್ಯನನ್ನು ಹೊತ್ತುಕೊಂಡಿವೆ. ಯಾತುಧಾನರು ಮುಂದಕ್ಕೆ ನಡೆಸುತ್ತಾರೆ. ವಾಲಖಿಲ್ಯ ಮುನಿಗಳು ಉದಯ ಮೊದಲುಗೊಂಡು ಸೂರ್ಯನ ಸುತ್ತಲೂ ವ್ಯಾಪಿಸಿ ನಿಂತು ಅಸ್ತವನ್ನು ಹೊಂದಿಸುವರು.

ಏತೇಷಾಮೇವ ದೇವಾನಾಂ ಯಥಾವೀರ್ಯಂ ಯಥಾತಪಃ ।
ಯಥಾಧರ್ಮಂ ಯಥಾಯೋಗಂ ಯಥಾಸತ್ಯಂ ಯಥಾಬಲಮ್॥೨೯॥

ತಪತ್ಯಸೌ ತಥಾ ಸೂರ್ಯ ಏಷಾಮಿಂದ್ರಸ್ತು ತೇಜಸಾ ।
ಇತ್ಯೇತೇ ನಿವಸಂತೀಹ ದ್ವೌ ದ್ವೌ ಮಾಸೌ ದಿವಾಕರೇ ॥ ೩೦ ॥

ಋಷಯೋ ದೇವಗಂಧರ್ವಾಃ ಪನ್ನಗಾಪ್ಸರಸಾಂ ಗಣಾಃ ।
ಗ್ರಾಮಣ್ಯಶ್ಚ ತಥಾ ಯಕ್ಷಾ ಯಾತುಧಾನಾಶ್ಚ ಮುಖ್ಯಶಃ ॥ ೩೧ ॥

ಏತೇ ತಪಂತಿ ವರ್ಷಂತಿ ಭಾಂತಿ ವಾಂತಿ ಸೃಜಂತಿ ಚ ।
ಭೂತಾನಾಂ ಚಾಶುಭಂ ಕರ್ಮ ವ್ಯಪೋಹಂತಿ ಪ್ರಕೀರ್ತಿತಾಃ ॥ ೩೨ ॥

ಮಾನವಾನಾಂ ಶುಭಂ ಹ್ಯೇತೇ ಹರಂತೇ ದುರಿತಾತ್ಮನಾಮ್ ।
ದುರಿತಂ ಸುಪ್ರಚಾರಾಣಾಂ ವ್ಯಪೋಹಂತಿ ಕ್ವಚಿತ್ ಕ್ವಚಿತ್ ॥ ೩೩ ॥

---

೨೯-೩೦. ಈ ದೇವತೆಗಳ ಪರರನ್ನು ಕೆಣಕುವ ವೀರ್ಯ, ತಪಸ್ಸು, ಧರ್ಮ, ಯೋಗಾಭ್ಯಾಸ, ಸತ್ಯವಚನ, ಸಹನಶಕ್ತಿ ಮುಂತಾದ ಗುಣಗಳನ್ನು ಅನುಸರಿಸಿ ತನ್ನ ತೇಜೋವಿಶೇಷದಿಂದ ಎಲ್ಲರಿಗೂ ಅಧಿಪತಿಯಾಗಿ ಸೂರ್ಯನು ತಪಿಸುತ್ತಾನೆ. ಈ ರೀತಿಯಾಗಿ ಎರಡೆರಡು ಮಾಸಗಳಲ್ಲಿ ಕ್ರಮವಾಗಿ ಸೂರ್ಯನ ಮಂಡಲದಲ್ಲಿ ದೇವತೆಗಳು ವಾಸಮಾಡುತ್ತಾರೆ.

೩೧. ಋಷಿಗಳು, ದೇವತೆಗಳು, ಗಂಧರ್ವರು, ಸರ್ಪಗಳು, ಅಪ್ಸರಃಸ್ತ್ರೀಯರು, ಗ್ರಾಮಣೀ ಅಥವಾ ಯಕ್ಷರು, ಮತ್ತು ರಾಕ್ಷಸರು ಮುಂತಾದವರು ಸೂರ್ಯನಲ್ಲಿ ಬಲು ಮುಖ್ಯರಾಗಿರುವ ಪರಿವಾರಗಳು.

೩೨. ಸೂರ್ಯನ ಈ ಪರಿವಾರವನ್ನು ಭಕ್ತಿಯಿಂದ ಕೀರ್ತನ ಮಾಡಿದವರ ಅಶುಭ ಕರ್ಮವನ್ನು ನಿರ್ಮೂಲಮಾಡುವುದಲ್ಲದೆ ತಪಿಸುವುದು, ಮಳೆ ಸುರಿಸುವುದು, ಪ್ರಕಾಶಿಸುವುದು, ಗಮನಮಾಡುವುದು, ಮತ್ತು ಸೃಷ್ಟಿಸುವುದು ಮುಂತಾದ ವ್ಯಾಪಾರಗಳನ್ನು ಪರಿವಾರ ದೇವತೆಗಳು ನಡೆಸುತ್ತಾರೆ.

೩೩. ನೀಚಸ್ವಭಾವದ ಮನುಜರ ಅಲ್ಪಸ್ವಲ್ಪ ಪುಣ್ಯವನ್ನು ಅಪಹರಿಸುತ್ತಾರೆ. ಮತ್ತು ಸಾಧುಶೀಲರಾದ ಮನುಜರ ಪಾಪವನ್ನು ಭಂಗಮಾಡುತ್ತಾರೆ.

ಏತೇ ಸಹೈವ ಸೂರ್ಯೇಣ ಭ್ರಮಂತಿ ದಿವಸಾನುಗಾಃ ।
ವರ್ಷಂತಶ್ಚ ತಪಂತಶ್ಚ ಹ್ಲಾದಯಂತಶ್ಚ ವೈ ಪ್ರಜಾಃ　॥ ೩೪ ॥

ಗೋಪಾಯಂತಿ ಚ ಭೂತಾನಿ ಸರ್ವಾಣೀಹಾಮನುಕ್ಷಯಾತ್ ।
ಸ್ಥಾನಾಭಿಮಾನಿನಾಮೇತತ್ ಸ್ಥಾನಂ ಮನ್ವಂತರೇಷು ವೈ　॥ ೩೫ ॥

ಅತೀತಾನಾಗತಾನಾಂ ಚ ವರ್ತಂತೇ ಸಾಂಪ್ರತಂ ಚ ಯೇ ।
ಏವಂ ವಸಂತಿ ವೈ ಸೂರ್ಯೇ ಸಪ್ತಕಾಸ್ತೇ ಚತುರ್ದಶ ॥
ಚತುರ್ದಶಸು ಸರ್ವೇಷು ಗಣಾ ಮನ್ವಂತರೇಷ್ವಿಹ　॥ ೩೬ ॥

ಗ್ರೀಷ್ಮೇಷು ವರ್ಷಾಸು ಚ ಮುಂಚಮಾನೋ ।
ಘರ್ಮಂ ಹಿಮಂ ವರ್ಷದಿನಂ ನಿಶಾಂ ಚ ॥
ಗಚ್ಛತ್ಯಸಾವೃತುವಶಾತ್ ಪರಿವೃತ್ತರಶ್ಮಿ ।
ದೇವಾನ್ ಪಿತೄಂಶ್ಚ ಮನುಜಾಂಶ್ಚ ಹಿ ತರ್ಪಯನ್ ವೈ　॥ ೩೭ ॥

---

೩೪. ಇವರು ಸೂರ್ಯನನ್ನು ಹಿಂಬಾಲಿಸಿದವರಾಗಿ ದಿನವೆಲ್ಲವೂ ವೃಷ್ಟಿಯನ್ನು ಸುರಿಸುತ್ತ ತಪಿಸುತ್ತ ಮತ್ತು ಪ್ರಜೆಗಳನ್ನು ಸಂತೋಷಪಡಿಸುತ್ತ ಸುತ್ತುತ್ತಲಿರುವರು.

೩೫. ಮತ್ತು ಸರ್ವಭೂತಗಳನ್ನು ಮನ್ವಂತರಕಾಲವು ಕ್ಷಯಿಸುವವರೆಗೆ ಸಂರಕ್ಷಿಸುತ್ತಾರೆ. ಸ್ಥಾನಾಭಿಮಾನಿಗಳಾದ ಈ ದೇವತೆಗಳಿಗೆ ಮನ್ವಂತರ ಕಾಲದಲ್ಲಿ ಈ ಸೂರ್ಯ ಮಂಡಲವು ಉತ್ತಮವಾದ ಸ್ಥಾನವು.

೩೬. ಹಿಂದೆ ಕಳೆದುಹೋಗಿರುವ ಅಥವ ಮುಂದೆ ಬರುವ ಮತ್ತು ವರ್ತಮಾನ ಕಾಲಗಳಲ್ಲಿರುವ ಪ್ರತಿಯೊಂದು ಮನ್ವಂತರಗಳಲ್ಲಿಯೂ ಈ ಸಪ್ತಕ ಗಣವು ಸೂರ್ಯ ಮಂಡಲದಲ್ಲಿ ವಾಸಮಾಡುತ್ತಿದೆ. ಹದಿನಾಲ್ಕು ಮನ್ವಂತರಗಳಿಗೆ ತಕ್ಕಂತೆ ಈ ಸಪ್ತಕಗಣವು ಹದಿನಾಲ್ಕು ಸಂಖ್ಯೆಯಿಂದಿದೆ.

೩೭. ಸೂರ್ಯಭಗವಂತನು ಗ್ರೀಷ್ಮಕಾಲ, ವರ್ಷಾಕಾಲ, ಮತ್ತು ಹಿಮಕಾಲ ಮುಂತಾದ ಕಾಲಾನುಗುಣವಾಗಿ ತಾಪ, ಹಿಮ, ದುರ್ದಿನ, ರಾತ್ರಿಕಾಲ ಮುಂತಾದುವುಗಳನ್ನು ಸೃಜಿಸುತ್ತ ವಸಂತಾದಿ ಋತುಗಳ ವಶದಿಂದ ರಶ್ಮಿ ಪರಿವರ್ತನವುಳ್ಳವನಾಗಿ ದೇವ ಪಿತೃ ಮನುಷ್ಯರನ್ನು ತೃಪ್ತಿಪಡಿಸುತ್ತ ಸಂಚರಿಸುವನು.

ಪ್ರೀಣಾತಿ ದೇವಾನಮೃತೇನ ಸೂರ್ಯಃ ।
ಸೋಮಂ ಸುಷುಮ್ಣೇನ ಚ ವರ್ಧಯಿತ್ವಾ ॥
ಶುಕ್ಲೇ ತು ಪೂರ್ಣಂ ದಿವಸಕ್ರಮೇಣ ।
ತಂ ಕೃಷ್ಣಪಕ್ಷೇ ವಿಬುಧಾಃ ಪಿಬಂತಿ ॥ ೩೮ ॥
ಪೀತಂ ಚ ಸೋಮಂ ಹಿ ಕಲಾಽವಶಿಷ್ಟಂ ।
ಕೃಷ್ಣಕ್ಷಯೇ ರಶ್ಮಿಭಿರಕ್ಷರಂತಂ ॥
ಸುಧಾಮೃತಂ ತತ್ಪಿತರಃ ಪಿಬಂತಿ ।
ದೇವಾಶ್ಚ ಸೌಮ್ಯಾಶ್ಚ ತಥೈವ ಕಾವ್ಯಾಃ ॥ ೩೯ ॥
ಸೂರ್ಯೇಣ ಗೋಭಿಶ್ಚ ಸಮುಜ್ಝಿತಾಭಿ—
ರದ್ಭಿಃ ಪುನಶ್ಚೈವ ಸಮುದ್ಧೃತಾಭಿಃ ।
ವೃಷ್ಟ್ಯಾಭಿವೃದ್ಧಾಭಿರಥೌಷಧೀಭಿ-
ರ್ಮರ್ತ್ಯಾಃ ಕ್ಷುಧಂ ತ್ವನ್ನಪಾನೈರ್ಜಯಂತಿ ॥ ೪೦ ॥
ತೃಪ್ತಿಶ್ಚ ಶುಕ್ಲೇ ಸುಧಯಾ ಸುರಾಣಾಂ
ಪಕ್ಷೇ ಚ ಕೃಷ್ಣೇ ಸುಧಯಾ ಪಿತೃಣಾಮ್ ।
ಅನ್ನೇನ ಶಶ್ವಚ್ಚ ದಧಾತಿ ಮರ್ತ್ಯಾನ್
ಸೂರ್ಯಸ್ತಪಂಸ್ತಾನ್ ಸುಬಿಭರ್ತಿ ಗೋಭಿಃ ॥ ೪೧ ॥

---

೩೮. ಸೂರ್ಯನು ಅಮೃತವನ್ನು ಪ್ರದಾನಮಾಡಿ ದೇವತೆಗಳನ್ನು ತೃಪ್ತಿಪಡಿಸುವನು. ಮತ್ತು ಸುಷುಮ್ಣ ಎಂಬ ರಶ್ಮಿಯಿಂದ ಅಮೃತವನ್ನು ಪೂರ್ಣಮಾಡಿ ಚಂದ್ರನ ಮಂಡಲವನ್ನು ವೃದ್ಧಿಪಡಿಸುವನು. ಆದುದರಿಂದ ಶುಕ್ಲಪಕ್ಷದಲ್ಲಿ ಕಲಾಪರಿಪೂರ್ಣನಾದ ಚಂದ್ರನನ್ನು ದಿವಸಕ್ರಮದಿಂದ ದೇವತೆಗಳು ಪಾನಮಾಡುವರು.

೩೯. ದೇವತೆಗಳು ಪಾನಮಾಡಿ ಕೃಷ್ಣಪಕ್ಷದ ಸಮಾಪ್ತಿಯಲ್ಲಿ ಒಂದು ಕಲಾಮಾತ್ರ ಅವಶಿಷ್ಟನಾಗಿರುವ ಚಂದ್ರನ ಇತರ ಕಲೆಗಳಿಂದ ಪೂರ್ಣವಾಗಿ ಸುರಿಯುತ್ತಲಿರುವ ಅಮೃತವನ್ನು ಸೌಮ್ಯ-ಕಾವ್ಯರೆಂಬ ದ್ವಿವಿಧ ಪಿತೃದೇವತೆಗಳು ಪಾನಮಾಡುವರು.

೪೦. ಸೂರ್ಯನು ತನ್ನ ಕಿರಣಗಳಿಂದ ಮೇಲಕ್ಕೆತ್ತಿ ಮತ್ತೆ ಕೆಳಗೆ ಸುರಿಸಿರುವ ವೃಷ್ಟಿರೂಪವಾದ ಜಲಗಳಿಂದ ಸಸ್ಯಗಳೆಲ್ಲವೂ ಅಭಿವೃದ್ಧಿ ಹೊಂದಿ ಅವುಗಳಿಂದ ಸಂಪಾದಿಸಿರುವ ಅನ್ನಪಾನಾಹಾರಗಳಿಂದ ಮರ್ತ್ಯರು ಹಸಿವನ್ನು ಹೋಗಲಾಡಿಸಿಕೊಳ್ಳುತ್ತಾರೆ.

೪೧. ದೇವತೆಗಳಿಗೆ ಶುಕ್ಲಪಕ್ಷದಲ್ಲಿ ಅಮೃತದಿಂದ ತೃಪ್ತಿಯಾಗುವುದು. ಪಿತೃಗಳಿಗೆ ಕೃಷ್ಣಪಕ್ಷದಲ್ಲಿ ಅಮೃತದಿಂದ ತೃಪ್ತಿಯಾಗುವುದು. ಮರ್ತ್ಯರಿಗೆ ಯಾವಾಗಲೂ

ಹ್ರಿಯೆನ್ ಹರಿಸ್ತೈರ್ಹರಿಭಿಸ್ತುರಂಗೈ—
ರ್ಹರತ್ಯಥಾಽಪಃ ಕಿರಣೈರ್ಹರಿದ್ಭಿಃ ।
ವಿಸರ್ಗಕಾಲೇ ವಿಸೃಜಂಶ್ಚ ತಾಃ ಪುನ-
ರ್ಬಿಭರ್ತಿ ಶಶ್ವತ್ ಸವಿತಾ ಚರಾಚರಮ್ ॥ ೪೨ ॥

ಹರಿರ್ಹರಿದ್ಭಿರ್ಹ್ರಿಯತೇ ತುರಂಗಮೈಃ
ಪಿಬತ್ಯಥಾಽಪೋ ಹರಿಭಿಃ ಸಹಸ್ರಧಾ ।
ತತಃ ಪ್ರಮುಂಚತ್ಯಪಿ ತಾಸ್ವಸೌ ಹರಿಃ
ಸಮೂಹ್ಯಮಾನೋ ಹರಿಭಿಸ್ತುರಂಗಮೈಃ ॥ ೪೩ ॥

ಇತ್ಯೇಷ ಏಕಚಕ್ರೇಣ ಸೂರ್ಯಸ್ತೂರ್ಣರಥೇನ ತು ।
ಭದ್ರೈಸ್ತೈರಕ್ರಮೈರಶ್ವೈಃ ಸ್ಪಂದತೇ ವೈದಿಕಕ್ಷಯಃ ॥ ೪೪ ॥

---

ಸಸ್ಯಗಳಿಂದ ಹುಟ್ಟಿದ ಅನ್ನಪಾನಗಳಿಂದ ತೃಪ್ತಿಯು. ಹೀಗೆ ಸೂರ್ಯನು ತನ್ನ ಕಿರಣಗಳಿಂದ ತಪಿಸುತ್ತ ಅಮೃತ-ಅನ್ನಪಾನಾದಿ ಸಾಮಗ್ರಿಯನ್ನು ಸೃಜಿಸಿ ದೇವ-ಪಿತೃ-ಮನುಷ್ಯರನ್ನು ರಕ್ಷಿಸುವನು.

೪೨. ಹರಿತ್=ಹಸುರು ವರ್ಣದ ಕುದುರೆಗಳಿಂದ ಮುಂದೆ ಮುಂದೆ ಒಯ್ಯಲ್ಪಡುವನಾದ್ದರಿಂದ ಸೂರ್ಯನು "ಹರಿ" ಎಂಬ ಸಂಕೇತವನ್ನು ಹೊಂದಿರುವನು. ಮತ್ತು ಹರಣಶೀಲವಾದ ಕಿರಣಗಳಿಂದ ಜಲವನ್ನು ಹರಣಮಾಡುವುದರಿಂದಲೂ "ಹರಿ" ಎಂಬ ಸಂಕೇತವನ್ನು ಸಮರ್ಥಿಸಬಹುದು. ಸೂರ್ಯನು ಸಕಾಲದಲ್ಲಿ ಜಲವನ್ನು ವೃಷ್ಟಿರೂಪವಾಗಿ ಸುರಿಸಿ ಚರಾಚರವನ್ನು ಯಾವಾಗಲೂ ಭರಣಮಾಡುವನು.

೪೩. ಹರಿತ್ (ಹಸುರು) ಬಣ್ಣದ ಅಶ್ವಗಳಿಂದ ಸೂರ್ಯನು ಮುಂದಕ್ಕೆ ಸಾಗಿಸಲ್ಪಡುತ್ತಾನೆ. ಮತ್ತು ತನ್ನ ಕಿರಣಗಳಿಂದ ಸಾವಿರಾರು ಬಗೆಗಳಿಂದ ಜಲವನ್ನು ಅಪಹರಿಸುತ್ತಾನೆ. ತರುವಾಯ ಅಶ್ವಗಳಿಂದ ಹಾಗೆಯೇ ವಹಿಸಲ್ಪಡುತ್ತ ಕಿರಣಗಳನ್ನು ಸಂಕೋಚಮಾಡಿಕೊಂಡವನಾಗಿ ಉಚಿತಕಾಲದಲ್ಲಿ ಜಲವನ್ನು ವರ್ಷಿಸುವನು.

೪೪. ಈ ವಿಧವಾಗಿ ವೇದಧನರಾದ ಆಸ್ತಿಕರಿಗೆ ಶರಣನಾದ ಸೂರ್ಯನು ವೇಗವಾಗಿ ಹೋಗುವ ಏಕಚಕ್ರದಿಂದ ಕೂಡಿದ ರಥದಿಂದ ಮಂಗಳಕರವೂ ಮತ್ತು ಪರ್ಯಾಯ ಕ್ರಮರಹಿತವೂ ಆದ ಅಶ್ವಗಳಿಂದ ಸೆಳೆಯಲ್ಪಡುತ್ತ ಮುಂದಕ್ಕೆ ಪ್ರಯಾಣ ಮಾಡುವನು.

ಅಹೋರಾತ್ರಾದ್ರಥೇನಾಸಾವೇಕಚಕ್ರೇಣ ವೈ ಭ್ರಮನ್ ।
ಸಪ್ತದ್ವೀಪಸಮುದ್ರಾಂತಾಂ ಸಪ್ತಭಿಃ ಸಪ್ತಭಿರ್ಹಯೈಃ ॥ ೪೫ ॥

ಛಂದೋಭಿರಶ್ವರೂಪೈಸ್ತೈರ್ಯತಶ್ಚಕ್ರಂ ತತಃ ಸ್ಥಿತೈಃ ।
ಕಾಮರೂಪೈಃ ಸಕೃದ್ಯುಕ್ತೈರ್ವಾಮತಸ್ತೈರ್ಮನೋಜವೈಃ ॥ ೪೬ ॥

ಹರಿತೈರವ್ಯಯೈಃ ಪಿಂಗೈರೀಶ್ವರೈರ್ಬ್ರಹ್ಮವಾದಿಭಿಃ ।
ತ್ರ್ಯಶೀತಿಮಂಡಲಶತಂ ಭ್ರಮಂತ್ಯಬ್ದೇನ ತೇ ಹಯಾಃ ॥ ೪೭ ॥

ಬಾಹ್ಯಮಾಭ್ಯಂತರಂ ಚೈವ ಮಂಡಲಂ ದಿವಸಕ್ರಮಾತ್ ।
ಕಲ್ಪಾದೌ ಸಂಪ್ರಯುಕ್ತಾಸ್ತೇ ವಹಂತ್ಯಾಭೂತಸಂಪ್ಲವಾತ್ ॥ ೪೮ ॥

ಆವೃತಾ ವಾಲಖಿಲ್ಯೈಸ್ತೇ ಭ್ರಮಂತೇ ರಾತ್ರ್ಯಹಾನಿ ತು ।
ವಚೋಭಿರಗ್ರ್ಯೈರ್ಗ್ರಥಿತೈಃ ಸ್ತೂಯಮಾನೋ ಮಹರ್ಷಿಭಿಃ ॥ ೪೯ ॥

---

೪೫. ಈ ಸೂರ್ಯನು ಒಂದು ಅಹೋರಾತ್ರದೊಳಗೆ ಏಳು ಅಶ್ವಗಳಿಂದ ಸೆಳೆಯಲ್ಪಡುವ ಏಕಚಕ್ರದ ರಥದಿಂದ ಭ್ರಮಿಸುತ್ತ ಸಪ್ತದ್ವೀಪ-ಸಪ್ತಸಮುದ್ರಗಳಿಂದ ಕೂಡಿದ ವಿಸ್ತಾರವಾದ ಭೂಮಿಯನ್ನು ಸಂಚರಿಸುವನು.

೪೬. ಏಕಚಕ್ರ ರಥದಲ್ಲಿ ಚಕ್ರಸ್ಥಾನಕ್ಕೆ ಸರಿಯಾಗಿ ಕಾಮರೂಪವುಳ್ಳವುಗಳೂ ಎಡಭಾಗದಲ್ಲಿ ಒಂದೇಸಲ ಕಟ್ಟಲ್ಪಟ್ಟವುಗಳೂ ಮತ್ತು ಮನೋವೇಗವುಳ್ಳವುಗಳೂ ಆದ ಅಶ್ವರೂಪದಿಂದ ಗಾಯತ್ರೀ ಮುಂತಾದ ಏಳು ಛಂದಸ್ಸುಗಳು ಕಟ್ಟಲ್ಪಟ್ಟಿವೆ.

೪೭. ಹರಿತವರ್ಣದವರೂ ಮತ್ತು ಪಿಂಗಲವರ್ಣದವರೂ ಆದ ಆದ್ಯಂತರಹಿತರಾದ ಅನೇಕ ಬ್ರಹ್ಮರ್ಷಿಗಳೆಂಬ ಪಾರಿಪಾರ್ಶ್ವಕರೊಂದಿಗೆ ಸೂರ್ಯನ ರಥದ ಅಶ್ವಗಳು ಒಂದು ವರ್ಷದಿಂದ ಒಂದುನೂರ ಎಂಭತ್ತಮೂರು ಮಂಡಲಗಳನ್ನು ಭ್ರಮಿಸುತ್ತವೆ.

೪೮. ಒಂದು ಕಲ್ಪದ ಆದಿಯಲ್ಲಿ ಕಟ್ಟಲ್ಪಟ್ಟಿರುವ ಆ ಅಶ್ವಗಳು ದಿವಸಗಳ ಕ್ರಮದಿಂದ ಕೆಲವುವೇಳೆ ಬಾಹ್ಯ ಮಂಡಲಾಕಾರವಾಗಿಯೂ ಮತ್ತೆ ಕೆಲವುವೇಳೆ ಆಂತರ ಮಂಡಲಾಕಾರವಾಗಿಯೂ ಪ್ರಲಯಕಾಲದವರೆಗೂ ಸೂರ್ಯನನ್ನು ನಡೆಸುತ್ತವೆ.

೪೯. ಹಗಲು ಅಥವಾ ರಾತ್ರಿಗಳಲ್ಲಿ ವಾಲಖಿಲ್ಯ ಮಹರ್ಷಿಗಳಿಂದ ಸುತ್ತುವರಿ

**ಸೇವ್ಯತೇ ಗೀತನೃತ್ಯೈಶ್ಚ ಗಂಧರ್ವೈರಶ್ಚಾಪ್ಸರೋಗಣೈಃ ।**
**ಪತಂಗಃ ಪತಗೈರಶ್ವೈರ್ಭ್ರಮಮಾಣೋ ದಿವಸ್ಪತಿಃ ॥ ೫೦ ॥**

**ರಥಸ್ತ್ರಿಚಕ್ರಃ ಸೋಮಸ್ಯ ಕುಂದಾಭಾಸ್ತಸ್ಯ ವಾಜಿನಃ ।**
**ವಾಮದಕ್ಷಿಣತೋ ಯುಕ್ತಾ ದಶ ತೇನ ಚರತ್ಯಸೌ ॥ ೫೧ ॥**

**ವೀಥ್ಯಾಶ್ರಯಾಣಿ ಋಕ್ಷಾಣಿ ಧ್ರುವಾಧಾರೇಣ ವೇಗಿತಾಃ ।**
**ಹ್ರಾಸವೃದ್ಧೀ ತಥೈವಾಸ್ಯ ರಶ್ಮೀನಾಂ ಸೂರ್ಯವತ್ ಸ್ಮೃತೇ ॥ ೫೨ ॥**

**ತ್ರಿಚಕ್ರೋಭಯಯುತೋಽಶ್ವಶ್ಚ ವಿಜ್ಞೇಯಃ ಶಶಿನೋ ರಥಃ ।**
**ಅಪಾಂ ಗರ್ಭಾತ್ ಸಮುತ್ಪನ್ನೋ ರಥಃ ಸಾಶ್ವಃ ಸಸಾರಥಿಃ ॥ ೫೩ ॥**

---

ಯಲ್ಪಟ್ಟವುಗಳಾಗಿ ಸುತ್ತುತ್ತವೆ. ಹಾಗೆ ಶ್ರೀ ಸೂರ್ಯನಾರಾಯಣನು ಮಹರ್ಷಿಗಳು ರಚಿಸಿದ ಸ್ತುತಿ ವಾಕ್ಯಗಳಿಂದ ಸ್ತುತಿಸಲ್ಪಡುತ್ತ ಪ್ರಯಾಣ ಮಾಡುವನು.

೫೦. ದ್ಯುಲೋಕಾಧಿಪತಿಯಾಗಿ ಅಶ್ವಗಳಿಂದ ಭ್ರಮಿಸುತ್ತಿರುವ ಸೂರ್ಯಭಗವಂತನು ಗಂಧರ್ವರಿಂದ ಗಾನಕಲೆಯಿಂದಲೂ ಅಪ್ಸರಃಸ್ತ್ರೀಯರಿಂದ ನೃತ್ಯಾರಂಭದಿಂದಲೂ ಸೇವಿಸಲ್ಪಡುವನು.

೫೧. ಚಂದ್ರನ ರಥವು ಮೂರು ಚಕ್ರಗಳಿಂದ ಕೂಡಿರುವುದು. ಆ ರಥದ ಅಶ್ವಗಳು ಮಲ್ಲಿಗೆ ಹೂವಿನಂತೆ ಬಿಳಿಯ ಬಣ್ಣದಿಂದ ಪ್ರಕಾಶಿಸುವುವು. ಆ ಅಶ್ವಗಳು ಹತ್ತು ಸಂಖ್ಯೆಯುಳ್ಳವುಗಳೂ ಎಡ-ಬಲ ಭಾಗಗಳಲ್ಲಿ ಕಟ್ಟಲ್ಪಟ್ಟವುಗಳೂ ಆಗಿವೆ. ಆ ಸಾಧನಗಳಿಂದ ಚಂದ್ರನು ಸಂಚರಿಸುವನು.

೫೨. ಇತರ ನಕ್ಷತ್ರಗಳೆಲ್ಲವೂ ಈ ಚಂದ್ರನ ವೀಥಿಯನ್ನು ಆಶ್ರಯಿಸಿಕೊಂಡಿವೆ, ಅಂತಹ ವೀಥಿಯಲ್ಲಿ ಧ್ರುವನೆಂಬ ಆಧಾರದಿಂದ ವೇಗವನ್ನು ಪಡೆದು ಅಶ್ವಗಳು ಚಲಿಸುತ್ತವೆ. ಈ ಚಂದ್ರನ ಕಿರಣಗಳಿಗೆ ಹ್ರಾಸ ಮತ್ತು ವೃದ್ಧಿಗಳು ಸೂರ್ಯನ ರಶ್ಮಿಗಳಂತೆಯೇ ಇರುತ್ತವೆ.

೫೩. ಚಂದ್ರನ ರಥವನ್ನು ಮೂರು ಚಕ್ರಗಳು, ಎರಡು ಭಾಗಗಳಲ್ಲಿ ಕಟ್ಟಲ್ಪಟ್ಟ ಅಶ್ವಗಳು ಮುಂತಾದ ಸನ್ನಿವೇಶದಿಂದ ಕೂಡಿರುವುದನ್ನಾಗಿ ತಿಳಿಯಬೇಕು. ಸಾರಥಿ, ಅಶ್ವಗಳಿಂದ ಸಹಿತವಾಗಿ ಈ ಚಂದ್ರನ ರಥವು ಜಲದ ಗರ್ಭದಿಂದ ಹುಟ್ಟಿರುವುದು.

ಶತಾರೈಶ್ಚ ತ್ರಿಭಿಶ್ಚಕ್ರೈರ್ಯುಕ್ತಃ ಶುಕ್ಲೈರ್ಹಯೋತ್ತಮೈಃ ।
ದಶಭಿಸ್ತು ಕೃಶೈರ್ದಿವ್ಯೈರಸಂಗೈಸ್ತೈರ್ಮನೋಜವೈಃ ॥ ೫೪ ॥

ಸಕೃದ್ಯುಕ್ತೇ ರಥೇ ತಸ್ಮಿನ್ ವಹಂತೇ ಚಾಯುಗಕ್ಷಯಾತ್ ।
ಸಂಗೃಹೀತರಥೇ ತಸ್ಮಿನ್ ಶ್ವೇತಶ್ಚಕ್ಷುಃಶ್ರವಾಶ್ಚ ವೈ ॥ ೫೫ ॥

ಅಶ್ವಾಸ್ತಮೇಕವರ್ಣಾಸ್ತೇ ವಹಂತೇ ಶಂಖವರ್ಚಸಃ ।
ಯಜುಶ್ಚಂಡಮನಾಶ್ಚೈವ ವೃಷೋ ವಾಜೀ ನರೋ ಹಯಃ ॥ ೫೬ ॥

ಅಶ್ವೋ ಗವಿಷ್ಣುರ್ವಿಖ್ಯಾತೋ ಹಂಸೋ ವ್ಯೋಮೋ ಮೃಗಸ್ತಥಾ ।
ಇತ್ಯೇತೇ ನಾಮಭಿಃ ಸರ್ವೇ ದಶ ಚಂದ್ರಮಸೋ ಹಯಾಃ ॥ ೫೭ ॥

ಏತೇ ಚಂದ್ರಮಸಂ ದೇವಂ ವಹಂತಿ ಸಹ ದೀಕ್ಷಯಾ ।
ದೇವೈಃ ಪರಿವೃತಃ ಸೋಮಃ ಪಿತೃಭಿಶ್ಚೈವ ಗಚ್ಛತಿ ॥ ೫೮ ॥

---

೫೪. ಈ ರಥವು ಒಂದುನೂರು ಅರಗಳಿಂದ ಕೂಡಿದ ಮೂರು ಚಕ್ರಗಳಿಂದ ರಮ್ಯವೂ ಶುಭ್ರವೂ, ಕೃಶವೂ, ದಿವ್ಯವೂ, ಪಾಪಾಸಂಗರಹಿತವೂ, ಮತ್ತು ಮನೋವೇಗ ಶಾಲಿಯೂ ಆಗಿ ಹತ್ತು ಅಶ್ವಗಳಿಂದ ಕೂಡಿಕೊಂಡಿದೆ.

೫೫. ಶ್ವೇತವರ್ಣದ ಸರ್ಪವೆಂಬ ಪಾಶದಿಂದ ಆ ರಥದಲ್ಲಿ ವಿಶ್ರಾಂತಿಯಿಲ್ಲದೇ ಗಮನಮಾಡುವುದರಿಂದ ಒಂದೇಸಲ ಕಟ್ಟಲ್ಪಟ್ಟಿರುವ ಅಶ್ವಗಳು ಕಲ್ಪಾವಸಾನದ ವರೆಗೂ ಏಕಪ್ರಕಾರವಾಗಿ ನಡೆಯುತ್ತವೆ.

೫೬. ಚಂದ್ರನು ಶುಭ್ರವರ್ಣದಿಂದಿರುವುದರಿಂದ ಅವನಿಗೆ ಸಮಾನವಾದ ಶಂಖದಂತೆ ಶುಭ್ರವಾದ ವರ್ಚಸ್ಸುಳ್ಳ ಅಶ್ವಗಳು ಚಂದ್ರನನ್ನು ಧರಿಸಿಕೊಂಡಿವೆ.

೫೭. ಆ ಹತ್ತು ಅಶ್ವಗಳಿಗೆ ಕ್ರಮವಾಗಿ ಹೆಸರುಗಳು ಈ ರೀತಿಯಾಗಿವೆ :— ಯಜು, ಚಂಡಮನಾ, ವೃಷ, ವಾಜೀ, ನರ, ಹಯ, ಗವಿಷ್ಣು, ಹಂಸ, ವ್ಯೋಮ ಮತ್ತು ಮೃಗ ಎಂಬುವು ಪ್ರಖ್ಯಾತವಾದ ಅಶ್ವನಾಮಗಳು.

೫೮. ಚಂದ್ರನು ಅನೇಕ ದೇವತೆಗಳಿಂದಲೂ ಪಿತೃಗಳಿಂದಲೂ ಪರಿವಾರಸಮೇತನಾಗಿ ರಥದಲ್ಲಿ ಸಂಚರಿಸುತ್ತಾನೆ. ಹಿಂದೆ ಹೇಳಿರುವ ಅಶ್ವಗಳು ದೀಕ್ಷಾಬದ್ಧವಾಗಿ ಚಂದ್ರನನ್ನು ಹೊತ್ತುಕೊಂಡಿವೆ.

ಸೋಮಸ್ಯ ಶುಕ್ಲಪಕ್ಷಾದೌ ಭಾಸ್ಕರೇ ಪರತಃ ಸ್ಥಿರೇ ।
ಆಪೂರ್ಯತೇ ಪರಸ್ಯಾಂತೇ ಸತತಂ ದಿವಸಕ್ರಮಾತ್ ॥ ೫೯ ॥

ದೇವೈಃ ಪೀತತನುಂ ಸೋಮಮಪ್ಯಾಯಯತಿ ನಿತ್ಯದಾ ।
ಕ್ಷೀಣಂ ಪಂಚದಶಾಹಂ ತು ರಶ್ಮಿನೈಕೇನ ಭಾಸ್ಕರಃ ॥ ೬೦ ॥

ಆಪೂರಯನ್ ಸುಷುಮ್ಣೇನ ಭಾಗಂ ಭಾಗಮಹಃಕ್ರಮಾತ್ ।
ಸುಷುಮ್ನಾಪ್ಯಾಯಮಾನಸ್ಯ ಶುಕ್ಲಾ ವರ್ಧಂತಿ ವೈ ಕಲಾಃ ॥ ೬೧ ॥

ತಸ್ಮಾದ್ಧ್ರಸಂತಿ ವೈ ಕೃಷ್ಣೇ ಶುಕ್ಲೇ ಸ್ವಾಪ್ಯಾಯಯಂತಿ ತಮ್ ।
ಇತ್ಯೇವಂ ಸೂರ್ಯವೀರ್ಯೇಣ ಚಂದ್ರಶ್ಚಾಪ್ಯಾಯಿತಸ್ತತಃ ॥ ೬೨ ॥

ಪೌರ್ಣಮಾಸ್ಯಾಂ ಸ ದೃಶ್ಯೇತ ಶುಕ್ಲಃ ಸಂಪೂರ್ಣಮಂಡಲಃ ।
ಏವಮಾಪ್ಯಾಯಿತಃ ಸೋಮಃ ಶುಕ್ಲಪಕ್ಷೇ ದಿನಕ್ರಮಾತ್ ॥ ೬೩ ॥

---

೫೯. ಕೃಷ್ಣಪಕ್ಷದ ಅಂತ್ಯದಲ್ಲಿ ದಿನಕ್ರಮದಿಂದ ಕ್ಷೀಣನಾಗಿ ಹೋದ ಚಂದ್ರನು ಆ ಪಕ್ಷದ ಕಡೆಯಲ್ಲಿ ಅಥವಾ ಶುಕ್ಲಪಕ್ಷದ ಆದಿಯಲ್ಲಿ ಸೂರ್ಯನ ಸಂಗಡ ಸೇರಿದವನಾಗಿ ಸೂರ್ಯರಶ್ಮಿಗಳಿಂದ ಪೂರ್ಣಾಕಾರವಾಗಿ ಮಾಡಲ್ಪಡುತ್ತಾನೆ.

೬೦. ದೇವತೆಗಳು ಕಲೆಗಳನ್ನು ಪಾನಮಾಡಿ ಹದಿನೈದು ದಿನಗಳಿಂದ ಕೃಶನಾದ ಚಂದ್ರನನ್ನು ಸೂರ್ಯನು ಯಾವಾಗಲೂ ತನ್ನ ಒಂದು ರಶ್ಮಿಯಿಂದ ಆಪ್ಯಾಯನ ಮಾಡುವನು.

೬೧. ಸೂರ್ಯನು ದಿನಕ್ರಮದಿಂದ ಸುಷುಮ್ನ ಎಂಬ ಒಂದು ರಶ್ಮಿಯಿಂದ ಒಂದೊಂದು ಕಲೆಯನ್ನಾಗಿ ವೃದ್ಧಿ ಮಾಡುವನು. ಹೀಗೆ ಸುಷುಮ್ನರಶ್ಮಿಯಿಂದ ವೃದ್ಧಿಯಾಗುವುದರಿಂದ ಚಂದ್ರನ ಕಲೆಗಳು ಶುಕ್ಲಪಕ್ಷದಲ್ಲಿ ಹೆಚ್ಚುತ್ತವೆ.

೬೨. ದೇವತೆಗಳು ಕಲಾಪಾನ ಮಾಡುವುದರಿಂದ ಕೃಷ್ಣಪಕ್ಷದಲ್ಲಿ ಚಂದ್ರನ ಕಲೆಗಳಿಗೆ ಹ್ರಾಸವೂ ಸೂರ್ಯನು ತನ್ನ ರಶ್ಮಿಯಿಂದ ಶುಕ್ಲಪಕ್ಷದ ಆದಿಯಲ್ಲಿ ಪೂರಣ ಮಾಡುವುದರಿಂದ ಚಂದ್ರನ ಕಲೆಗಳಿಗೆ ವೃದ್ಧಿಯೂ ಆಗುವುದು. ಆದ್ದರಿಂದ ಈ ಕ್ರಮದಿಂದ ಸೂರ್ಯನ ವೀರ್ಯದಿಂದ ಚಂದ್ರನು ಪೋಷಿಸಲ್ಪಟ್ಟಿರುವನು.

೬೩. ಶುಕ್ಲಪಕ್ಷದ ಆದಿಯಿಂದ ದಿನಕ್ರಮವಾಗಿ ಸೂರ್ಯನಿಂದ ವೃದ್ಧಿಗೊಳಿಸ

ತತೋ ದ್ವಿತೀಯಾಪ್ರಭೃತಿ ಬಹುಲಸ್ಯ ಚತುರ್ದಶೀಮ್ ।
ಅಪಾಂ ಸಾರಮಯಸ್ಯೇಂದೋ ರಸಮಾತ್ರಾತ್ಮಕಸ್ಯ ತು ॥ ೬೪ ॥

ಪಿಬಂತ್ಯಂಬುಮಯಂ ದೇವಾ ಹೃಷ್ಟಾಃ ಸೌಮ್ಯಂ ಸ್ವಧಾಽಮೃತಮ್ ।
ಸಂಭೃತಂ ತ್ವರ್ಧಮಾಸೇನ ಹ್ಯಮೃತಂ ಸೂರ್ಯತೇಜಸಾ ॥ ೬೫ ॥

ಭಕ್ಷಾರ್ಥಮಮೃತಂ ಸೋಮಃ ಪೌರ್ಣಮಾಸ್ಯಾಮುಪಾಸತೇ ।
ಏಕಾಂ ರಾತ್ರಿಂ ಸುರೈಃ ಸರ್ವೈಃ ಪಿತೃಭಿಃ ಸರ್ಷಿಭಿಃ ಸಹ ॥ ೬೬ ॥

ಸೋಮಸ್ಯ ಕೃಷ್ಣಪಕ್ಷಾದೌ ಭಾಸ್ಕರಾಭಿಮುಖಸ್ಯ ತು ।
ಪ್ರಕ್ಷೀಯಂತೇ ಪಿತೃದೇವೈಃ ಪೀಯಮಾನಾಃ ಕಲಾಃ ಕ್ರಮಾತ್ ॥ ೬೭ ॥

ತ್ರಯಶ್ಚ ತ್ರಿಂಶತಶ್ಚೈವ ತ್ರಯಸ್ತ್ರಿಂಶತ್ತಥೈವ ಚ ।
ತ್ರಯಶ್ಚ ತ್ರಿಸಹಸ್ರಾಶ್ಚ ದೇವಾಃ ಸೋಮಂ ಪಿಬಂತಿ ವೈ ॥ ೬೮ ॥

---

ಲ್ಪಟ್ಟ ಚಂದ್ರನು ಆ ಪಕ್ಷದ ಕಡೆಯದಿನವಾದ ಪೂರ್ಣಿಮಾ ತಿಥಿಯಲ್ಲಿ ಶುಭ್ರವರ್ಣವಾಗಿಯೂ ಪೂರ್ಣವಾದ ಮಂಡಲವುಳ್ಳವನಾಗಿಯೂ ಪ್ರಕಾಶಿಸುವನು.

೬೪. ಮುಂದೆ ಕೃಷ್ಣಪಕ್ಷವು ಪ್ರಾಪ್ತವಾಗಿ ದ್ವಿತೀಯಾ ತಿಥಿ ಮೊದಲುಗೊಂಡು ಚತುರ್ದಶೀ ತಿಥಿಯವರೆಗೆ ಜಲದ ಸಾರಾಂಶರೂಪನೂ ರಸಮಾತ್ರಸ್ವರೂಪನೂ ಆದ ಚಂದ್ರನ ಕಲೆಗಳನ್ನು ದೇವತೆಗಳು ಭುಂಜಿಸುವರು.

೬೫. ಕೇವಲ ಜಲಾಂಶದಿಂದ ಪೂರ್ಣವಾದ ಚಂದ್ರನ ಕಲೆಗಳ ಸ್ವಧಾರೂಪವಾದ ಅಮೃತವನ್ನು ದೇವತೆಗಳು ಸಂತೋಷದಿಂದ ಪಾನಮಾಡುವರು. ಆ ಅಮೃತವು ಸೂರ್ಯನ ವೀರ್ಯದಿಂದ ಒಂದು ಪಕ್ಷದಲ್ಲಿ ಸಂಗ್ರಹಿಸಲ್ಪಡುವುದು.

೬೬. ಸಕಲ ದೇವತೆಗಳು, ಪಿತೃಗಳು ಮತ್ತು ಋಷಿಗಳು ಎಲ್ಲರೂ ಸೇರಿ ಚಂದ್ರನಲ್ಲಿದ್ದ ಅಮೃತವನ್ನು ಭಕ್ಷಿಸಲೋಸ್ಕರ ಪೂರ್ಣಿಮಾ ತಿಥಿಯ ಒಂದು ರಾತ್ರಿಯನ್ನೆಲ್ಲ ಚಂದ್ರನನ್ನು ಉಪಾಸನ ಮಾಡುವರು.

೬೭. ಕೃಷ್ಣಪಕ್ಷದ ಆದಿಯಿಂದ ಸೂರ್ಯನಿಗೆ ಅಭಿಮುಖನಾಗಿ ಸಂಚರಿಸುವ ಚಂದ್ರನ ಕಲೆಗಳು ಕ್ರಮವಾಗಿ ಪಿತೃ-ದೇವತೆಗಳಿಂದ ಪಾನಮಾಡಲ್ಪಡುವುದರಿಂದ ಕ್ಷಯಿಸಿಹೋಗುತ್ತವೆ.

೬೮. ಸಂಕೋಚವಿಕಾಸಗಳಿಂದ ನ್ಯೂನ ಅಧಿಕ ಸಂಖ್ಯೆಗಳಿಂದ ಕೂಡಿರುವುದ

**ಇತ್ಯೇತೈಃ ಪೀಯಮಾನಸ್ಯ ಕೃಷ್ಣಾ ವರ್ಧಂತಿ ವೈ ಕಲಾಃ ।**
**ಕ್ಷೀಯಂತಿ ತಸ್ಮಾಚ್ಛುಕ್ಲಾಶ್ಚ ಕೃಷ್ಣಾ ಆಪ್ಯಾಯಯಂತಿ ಚ ॥ ೧೯ ॥**

**ಏವಂ ದಿನಕ್ರಮಾತ್ಪೀತೇ ವಿಬುಧೈಸ್ತು ನಿಶಾಕರೇ ।**
**ಪೀತ್ವಾರ್ಧಮಾಸಂ ಗಚ್ಛಂತಿ ಚಾಮಾವಾಸ್ಯಾಂ ಸುರೋತ್ತಮಾಃ ॥ ೨೦ ॥**

**ಪಿತರಶ್ಚೋಪತಿಷ್ಠಂತಿ ಹ್ಯಮಾವಾಸ್ಯಾಂ ನಿಶಾಕರಮ್ ।**
**ತತಃ ಪಂಚದಶೇ ಕಾಲೇ ಕಿಂಚಿಚ್ಛಿಷ್ಟೇ ಕಲಾತ್ಮಕೇ ॥ ೨೧ ॥**

**ಅಪರಾಹ್ಣೇ ಪಿತೃಗಣಾ ಜಘನ್ಯಂ ಪರ್ಯುಪಾಸತೇ ।**
**ಪಿಬಂತಿ ದ್ವಿಲವಂ ಕಾಲಂ ಶಿಷ್ಟಾಸ್ತಸ್ಯ ಕಲಾಸ್ತು ಯಾಃ ॥ ೨೨ ॥**

---

ರಿಂದ ಮೂವತ್ತಮೂರು, ಮುನ್ನೂರಮೂರು, ಅಥವಾ ಮೂರುಸಾವಿರದ ಮೂರು ಸಂಖ್ಯೆಯ ದೇವತೆಗಳು ಚಂದ್ರನ ಕಲೆಗಳನ್ನು ಪಾನಮಾಡುತ್ತಾರೆ. ವಿಭೂತಿ ವಿಸ್ತಾರದಿಂದ ದೇವತೆಗಳ ಸಂಖ್ಯೆಯು ಹೆಚ್ಚುವಂತೆ ಸಂಕೋಚದಿಂದ ನ್ಯೂನವೂ ಆಗುವುದೆಂದು ವೈದಿಕ ದರ್ಶನದ ಮತವು.

೧೯. ಈ ದೇವತೆಗಳಿಂದ ಚಂದ್ರನ ಶುಕ್ಲ ಕಲೆಗಳು ಪಾನ ಮಾಡಲ್ಪಡುವುದ ರಿಂದ ಕೃಷ್ಣ ಕಲೆಗಳು ಆಗ ವೃದ್ಧಿಯಾಗುತ್ತವೆ. ಶುಕ್ಲ ಕಲೆಗಳು ಕ್ಷಯಿಸುತ್ತಿರುತ್ತವೆ. ಕೃಷ್ಣಕಲೆಗಳು ಮಾತ್ರ ಚಂದ್ರನನ್ನು ವೃದ್ಧಿಸ್ಥಿತಿಯಲ್ಲಿರಿಸುತ್ತವೆ.

೨೦. ಹೀಗೆ ದೇವತೆಗಳು ದಿನಕ್ರಮದಿಂದ ಚಂದ್ರನನ್ನು ಪಾನಮಾಡುವುದ ರಿಂದ ಇದೇ ಕ್ರಮದಿಂದ ಅರ್ಧಮಾಸ (ಪಕ್ಷ) ಪೂರ್ತಿಯಾಗುವವರೆಗೆ ಪಾನಮಾಡಿ ಆ ಶ್ರೇಷ್ಠರಾದ ದೇವತೆಗಳು ಕಡೆಗೆ ಅಮಾವಾಸ್ಯಾ ತಿಥಿಯನ್ನು ಹೊಂದುತ್ತಾರೆ.

೨೧. ಆ ಹದಿನೈದು ದಿನಗಳ ಕಡೆಯ ಭಾಗದಲ್ಲಿ ಚಂದ್ರನು ಸ್ವಲ್ಪಭಾಗಮಾತ್ರ ಶಿಷ್ಟನಾಗಿರಲು ಆ ಅಮಾವಾಸ್ಯಾ ಕಾಲದಲ್ಲಿ ಪಿತೃಗಳು ಚಂದ್ರನನ್ನು ಉಪಾಸನೆ ಮಾಡುತ್ತಾರೆ.

೨೨. ಪಿತೃಗಣವು ಆ ಅಮಾವಾಸ್ಯೆಯ ಅಪರಾಹ್ಣ ಕಾಲದಲ್ಲಿ ದೇವತೆಗಳಿಂದ ಚಂದ್ರನು ಭುಕ್ತನಾದಮೇಲೆ ಚಂದ್ರನನ್ನು ಉಪಾಸನೆ ಮಾಡುವರು. ಮತ್ತು ಆಗ

**ನಿಃಸೃತಂ ತದಮಾವಾಸ್ಯಾಂ ಗಭಸ್ತಿಭ್ಯಃ ಸ್ವಧಾಮೃತಮ್ ।**
**ತಾಂ ಸ್ವಧಾಂ ಮಾಸತೃಪ್ತ್ಯೈ ಚ ಪೀತ್ವಾ ಗಚ್ಛಂತಿ ತೇಽಮೃತಮ್ ॥ ೭೩ ॥**

**ಸೂರ್ಯಸ್ತಸ್ಮಿನ್ ಸುಷುಮ್ನೇ ಯಸ್ತಾಪಿತಸ್ತೇನ ಚಂದ್ರಮಾಃ ।**
**ಕೃಷ್ಣಪಕ್ಷೇ ಸುರೈಸ್ತದ್ವತ್ಪೀಯತೇ ವೈ ಸುಧಾಮಯಃ ॥ ೭೪ ॥**

**ಸೌಮ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಶ್ಚ ತೇ ತ್ರಿಧಾ ।**
**ಕಾವ್ಯಾಶ್ಚೈವ ತು ಯೇ ಪ್ರೋಕ್ತಾಃ ಪಿತರಃ ಸರ್ವ ಏವ ತೇ ॥ ೭೫ ॥**

**ಸಂವತ್ಸರಾಸ್ತು ವೈ ಕಾವ್ಯಾಃ ಪಂಚಾಬ್ದಾ ಯೇ ದ್ವಿಜೈಃ ಸ್ಮೃತಾಃ ।**
**ಸೌಮ್ಯಾಸ್ತು ಋತವೋ ಜ್ಞೇಯಾ ಮಾಸಾ ಬರ್ಹಿಷದಃ ಸ್ಮೃತಾಃ ॥ ೭೬ ॥**

---

ಚಂದ್ರನಲ್ಲಿ ಮಿಕ್ಕಿರುವ ಅಲ್ಪವಾದ ಕಲೆಗಳನ್ನು ಎರಡು ಲವ ಮಾತ್ರ ಸೂಕ್ಷ್ಮಕಾಲದ ವರೆಗೆ ಪಾನಮಾಡುವರು.

೭೩. ಅಮಾವಾಸ್ಯೆಯಲ್ಲಿ ಪಿತೃಗಣಕ್ಕೋಸ್ಕರ ಚಂದ್ರಮಂಡಲದ ರಶ್ಮಿಗಳಿಂದ ಅಮೃತವು ಸ್ವಧಾರೂಪವಾಗಿ ಸುರಿಯುವುದು. ಆ ಸ್ವಧಾರೂಪವಾದ ಅಮೃತವನ್ನು ಒಂದು ಮಾಸ ಪೂರ್ತಿಯಾಗಿ ತೃಪ್ತಿಯಾಗುವುದಕ್ಕೋಸ್ಕರ ಪಿತೃಗಳು ಪಾನಮಾಡಿ ಹೋಗುವರು.

೭೪. ಸೂರ್ಯನು ತನ್ನ ಸುಷುಮ್ನ ರಶ್ಮಿಯಿಂದ ಚಂದ್ರನನ್ನು ತಪಿಸಿ ಪೂರಣ ಮಾಡುವುದರಿಂದ ಕೃಷ್ಣಪಕ್ಷದಲ್ಲಿ ಸುಧಾಮಯನಾದ ಚಂದ್ರನನ್ನು ದೇವತೆಗಳು ಸುಖವಾಗಿ ಪಾನಮಾಡುವರು.

೭೫. ಸೌಮ್ಯ, ಬರ್ಹಿಷದ, ಅಗ್ನಿಷ್ವಾತ್ತ ಮತ್ತು ಕಾವ್ಯರೆಂದು ಸಮಸ್ತ ಪಿತೃಗಣವು ನಾಲ್ಕು ವಿಭಾಗವನ್ನು ಹೊಂದಿದೆ.

೭೬. ಸಂವತ್ಸರ ಮೊದಲಾಗಿ ವತ್ಸರ ಪರ್ಯಂತವಾಗಿ ಹಿಂದೆ ಹೇಳಿದ ಐದು ಅಬ್ದಗಳನ್ನು ದ್ವಿಜರು ಕಾವ್ಯ ಪಿತೃಗಳೆಂದು ಹೇಳುತ್ತಾರೆ. ಹಾಗೆ ಷಡೃತುಗಳನ್ನು ಸೌಮ್ಯ ಪಿತೃಗಳೆಂದು ತಿಳಿಯಬೇಕು. ಮಾಸಗಳನ್ನು ಬರ್ಹಿಷದ ಪಿತೃಗಳೆಂದು ಶಾಸ್ತ್ರಜ್ಞರು ಹೇಳುತ್ತಾರೆ.

ಅಗ್ನಿಷ್ವಾತ್ತಾರ್ತವಾಶ್ಚೈವ ಪಿತೃಸರ್ಗಾ ಹಿ ವೈ ದ್ವಿಜಾಃ ।
ಪಿತೃಭಿಃ ಪೀಯಮಾನಸ್ಯ ಪಂಚದಶ್ಯಾಂ ಕಲಾ ತು ವೈ ॥ ೭೭ ॥

ಯಾವತ್ಪ್ರಕ್ಷೀಯತೇ ತಸ್ಯ ಭಾಗಃ ಪಂಚದಶಸ್ತು ಯಃ ।
ಅಮಾವಾಸ್ಯಾಂ ತದಾ ತಸ್ಯ ಅಂತಃ ಪೂರ್ಯತೇ ಪರಃ ॥ ೭೮ ॥

ವೃದ್ಧಿಕ್ಷಯೌ ವೈ ಪಕ್ಷಾದೌ ಷೋಡಶ್ಯಾಂ ಶಶಿನಃ ಸ್ಮೃತೌ ।
ಏವಂ ಸೂರ್ಯನಿಮಿತ್ತೈಷ ಕ್ಷಯೋ ವೃದ್ಧಿರ್ನಿಶಾಕರೇ ॥ ೭೯ ॥

ತಾರಾಗ್ರಹಾಣಾಂ ವಕ್ಷ್ಯಾಮಿ ಸ್ವರ್ಭಾನೋಶ್ಚ ರಥಾನ್ ಪುನಃ
ತೋಯತೇಜೋಮಯಃ ಶುಭ್ರಃ ಸೋಮಪುತ್ರಸ್ಯ ವೈ ರಥಃ॥ ೮೦ ॥

ಸೋಪಾಸಂಗಪತಾಕಸ್ತು ಸಧ್ವಜೋ ಮೇಘನಿಃಸ್ವನಃ ।
ಭಾರ್ಗವಸ್ಯ ರಥಃ ಶ್ರೀಮಾನ್ ತೇಜಸಾ ಸೂರ್ಯಸನ್ನಿಭಃ ॥ ೮೧ ॥

---

೭೭. ಆರ್ತವವೆಂಬ ಪಿತೃಸೃಷ್ಟಿಯೆಲ್ಲವನ್ನು ಅಗ್ನಿಷ್ವಾತ್ತ ಪಿತೃಗಳೆಂದು ಭಾವಿಸಬೇಕು. ಪಿತೃಗಳಿಂದ ಪಾನಮಾಡಲ್ಪಡುವಾಗ ಹದಿನೈದನೆಯ ತಿಥಿಯಲ್ಲಿ ಚಂದ್ರನಲ್ಲಿ ಒಂದು ಕಲೆಯು ಮಾತ್ರ ಶಿಷ್ಟವಾಗಿರುವುದು.

೭೮. ಆ ಅಮಾವಾಸ್ಯಾ ತಿಥಿಯಲ್ಲಿ ಚಂದ್ರನ ಹದಿನೈದನೆಯ ಆ ಭಾಗವು ಯಾವಾಗ ಕ್ಷೀಣವಾಗುವುದೋ ಆಗ ಅಮಾವಾಸ್ಯಾ ಎಂಬ ಕೃಷ್ಣಪಕ್ಷದ ಅಂತ್ಯಭಾಗವು ಸಮಾಪ್ತಿಯಾಗುವುದರಿಂದ ಮುಂದೆ ಅದರ ಭಾಗವು ತುಂಬುತ್ತ ಬರುವುದು.

೭೯. ಚಂದ್ರನ ಹದಿನಾರನೆಯ ಒಂದು ಕಲೆಯು ಮೂಲವಾಗಿದ್ದು ಅದರಲ್ಲಿ ಪಕ್ಷದ ಆದಿಯಲ್ಲಿ ವೃದ್ಧಿ ಮತ್ತು ಕ್ಷಯಗಳು ಸಂಭವಿಸುತ್ತವೆ. ಹೀಗೆ ಚಂದ್ರನಲ್ಲಿ ಆಗುವ ವೃದ್ಧಿ ಕ್ಷಯಗಳು ಸೂರ್ಯನ ನಿಮಿತ್ತದಿಂದ ಸಂಭವಿಸುವುವು.

೮೦. ಇನ್ನು ಮುಂದೆ ಇತರ ತಾರಕಾರೂಪವಾದ ಗ್ರಹಗಳ ಮತ್ತು ರಾಹುಗ್ರಹದ ರಥಗಳನ್ನು ಹೇಳುತ್ತೇನೆ, ಕೇಳಿರಿ. ಚಂದ್ರಪುತ್ರನಾದ ಬುಧನ ರಥವು ಶುಭ್ರವೂ ಮತ್ತು ಜಲ-ತೇಜಸ್ಸುಗಳ ಪುಂಜದಿಂದ ಕಲ್ಪಿತವೂ ಆಗಿದೆ.

೮೧. ಮತ್ತು ಆ ಬುಧನ ರಥವು ಪತಾಕೆಯಿಂದಲೂ ಧ್ವಜದಿಂದಲೂ ಕೂಡಿರುವುದಲ್ಲದೇ ಮೇಘದಂತೆ ಗಂಭೀರವಾದ ಧ್ವನಿಯುಳ್ಳದ್ದಾಗಿದೆ. ಶುಕ್ರನ ರಥವು

2

ಪೃಥಿವೀಸಂಭವೈರ್ಯುಕ್ತೋ ನಾನಾವರ್ಣೈರ್ಹಯೋತ್ತಮೈಃ ।
ಶ್ವೇತಃ ಪಿಶಂಗಃ ಸಾರಂಗೋ ನೀಲಃ ಪೀತೋ ವಿಲೋಹಿತಃ ॥ ೮೨ ॥

ಕೃಷ್ಣಶ್ಚ ಹರಿತಶ್ಚೈವ ಪೃಷತಃ ಪೃಶ್ನಿರೇವ ಚ ।
ದಶಭಿಸ್ತೈರ್ಮಹಾಭಾಗೈರಕ್ಲೈಶೈರ್ವಾತರಂಹಸೈಃ ॥ ೮೩ ॥

ಅಷ್ಟಾಶ್ವಃ ಕಾಂಚನಃ ಶ್ರೀಮಾನ್ ಭೌಮಸ್ಯಾಪಿ ರಥೋತ್ತಮಃ ।
ಅಸಂಗೈರ್ಲೋಹಿತೈರಶ್ವೈಃ ಸರ್ವಗೈರಗ್ನಿಸಂಭವೈಃ ॥ ೮೪ ॥

ಪ್ರಸರ್ಪತಿ ಕುಮಾರೋ ವೈ ಋಜುವಕ್ರಾನುವಕ್ರಗೈಃ ।
ತತಶ್ಚಾಂಗಿರಸೋ ವಿದ್ವಾನ್ ದೇವಾಚಾರ್ಯೋ ಬೃಹಸ್ಪತಿಃ ॥ ೮೫ ॥

ಗೌರೈರಶ್ವೈಃ ಕಾಂಚನೇನ ಸ್ಯಂದನೇನ ಪ್ರಸರ್ಪತಿ ।
ಅಬ್ಜೈಸ್ತು ವಾಜಿಭಿರ್ದಿವ್ಯೈರಷ್ಟಭಿರ್ವಾತರಂಹಸೈಃ ॥ ೮೬ ॥

---

ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತ ಅತ್ಯಂತ ಕಾಂತಿಯುಕ್ತವಾಗಿದೆ.

೮೨-೮೩. ಶ್ವೇತ, ಪಿಶಂಗ, ಸಾರಂಗ, ನೀಲ, ಪೀತ, ವಿಲೋಹಿತ, ಕೃಷ್ಣ, ಹರಿತ, ಪೃಷತ ಮತ್ತು ಪೃಶ್ನಿ ಎಂಬ ಪ್ರಖ್ಯಾತನಾಮವುಳ್ಳವುಗಳೂ, ನಾನಾ ವರ್ಣಗಳಿಂದ ಶೋಭಿಸುವುವೂ, ಭೂಮಿಯಲ್ಲಿ ಹುಟ್ಟಿರುವುವೂ, ಮಹಾ ಬಲಶಾಲಿಗಳೂ, ಪುಷ್ಟವಾದವುಗಳೂ ಮತ್ತು ವಾಯುವೇಗದಿಂದ ಕೂಡಿದುವುಗಳೂ ಆದ ಹತ್ತು ಉತ್ತಮವಾದ ಅಶ್ವಗಳಿಂದ ಕೂಡಿರುತ್ತದೆ.

೮೪-೮೫. ಎಂಟು ಕುದುರೆಗಳಿಂದ ಕೂಡಿದ ಸುವರ್ಣಮಯವಾದ ಕಾಂತಿಯಿಂದ ಕೂಡಿದ ಉತ್ತಮವಾದ ರಥವು ಅಂಗಾರಕನಿಗೆ ಇರುವುದು. ಪಾಪಾಸಂಗವಿಲ್ಲದ, ಕೆಂಪುವರ್ಣದ, ಸರ್ವ ಸ್ಥಳಗಳಲ್ಲಿಯೂ ಗಮನವುಳ್ಳ, ಕೆಲವುಕಡೆ ಋಜುಭಾವದಿಂದ ಕೆಲವುಕಡೆ ವಕ್ರ ಮತ್ತೆ ಅನುವಕ್ರ ಭಾವದಿಂದ ಗಮನವುಳ್ಳ, ಮತ್ತು ಅಗ್ನಿಯಿಂದ ಹುಟ್ಟಿದ ಅಶ್ವಗಳಿಂದ ಕೂಡಿದ ರಥದಲ್ಲಿ ಅಂಗಾರಕನು ಸಂಚರಿಸುವನು.

೮೬. ಅಂಗಿರೋ ಮುನಿಯ ಪುತ್ರನೂ, ದೇವಾಚಾರ್ಯನೂ, ಮತ್ತು ಜ್ಞಾನಿಯೂ ಆದ ಬೃಹಸ್ಪತಿಯು ವಾಯುವೇಗದಿಂದ ಕೂಡಿದ, ಶುಭ್ರವಾದ ಮತ್ತು ನೀರಿನಲ್ಲಿ ಹುಟ್ಟಿದ ಎಂಟು ದಿವ್ಯಾಶ್ವಗಳನ್ನು ಕಟ್ಟಿದ ರಥದಲ್ಲಿ ಸಂಚರಿಸುತ್ತಾನೆ.

ನಕ್ಷತ್ರೇಽಬ್ದಂ ಸ ತಿಷ್ಠನ್ ವೈ ಸಂವೇಧಾಸ್ತೇನ ಗಚ್ಛತಿ ।
ತತಃ ಶನೈಶ್ಚರೋಽಪ್ಯಶ್ವೈಃ ಸಬಲೈರ್ವ್ಯೋಮಸಂಭವೈಃ ॥ ೮೭ ॥

ಕಾರ್ಷ್ಣಾಯಸಂ ಸಮಾರುಹ್ಯ ಸ್ಯಂದನಂ ಯಾತಿ ವೈ ಶನೈಃ ।
ಸ್ವರ್ಭಾನೋಶ್ಚ ತಥೈವಾಶ್ವಾಃ ಕೃಷ್ಣಾ ಹ್ಯಷ್ಟೌ ಮನೋಜವಾಃ॥ ೮೮ ॥

ರಥಂ ತಮೋಮಯಂ ತಸ್ಯ ಸಕೃದ್ಯುಕ್ತಾ ವಹಂತ್ಯುತ ।
ಆದಿತ್ಯಾನ್ನಿಸ್ಸೃತೋ ರಾಹುಃ ಸೋಮಂ ಗಚ್ಛತಿ ಪರ್ವಸು ॥ ೮೯ ॥

ಆದಿತ್ಯಮೇತಿ ಸೋಮಶ್ಚ ಪುನಃ ಸೌರೇಷು ಪರ್ವಸು ।
ಅಥ ಕೇತುರಥಸ್ಯಾಶ್ವಾ ಅಷ್ಟೌ ವೈ ವಾತರಂಹಸಃ ॥ ೯೦ ॥

ಪಲಾಲಧೂಮವರ್ಣಾಭಾ ಸಬಲಾ ರಾಸಭಾರುಣಾಃ ।
ಏತೇ ವಾಹಾ ಗ್ರಹಾಣಾಂ ವೈ ಹ್ಯುಪಾಖ್ಯಾತಾ ರಥೈಃ ಸಹ ॥ ೯೧ ॥

---

೮೭-೮೮. ಬೃಹಸ್ಪತಿಯು ಒಂದೊಂದು ನಕ್ಷತ್ರದಲ್ಲಿ ಒಂದು ವರ್ಷಕಾಲವಿದ್ದು ಚಾರಕ್ರಮದಿಂದ ಮುಂದಕ್ಕೆ ಹೋಗುವನು. ಅನಂತರ ಶನೈಶ್ಚರನು ಬಲಿಷ್ಠವಾದ, ಆಕಾಶದಿಂದ ಉತ್ಪನ್ನವಾದ ಉತ್ತಮಾಶ್ವಗಳಿಂದ ಕೂಡಿದ ಕಬ್ಬಿಣವೆಂಬ ಲೋಹದಿಂದ ಮಾಡಿದ ರಥವನ್ನು ಹತ್ತಿಕೊಂಡು ಮೆಲ್ಲಗೆ ಸಂಚಾರಮಾಡುವನು. ಹಾಗೆಯೇ ರಾಹುವಿಗೆ ಮನೋವೇಗದಿಂದ ಕೂಡಿದ ಕಪ್ಪುಬಣ್ಣದ ಎಂಟು ಅಶ್ವಗಳಿವೆ.

೮೯. ವಿಶ್ರಾಂತಿ ಇಲ್ಲದಂತೆ ಒಂದೇ ಸಲ ಕಟ್ಟಲ್ಪಟ್ಟ ಅಶ್ವಗಳು ರಾಹುವಿನ ತಮೋರೂಪವಾದ ರಥವನ್ನು ಸೆಳೆಯುತ್ತವೆ. ಆದಿತ್ಯನಿಂದ ಹೊರಟಿರುವ ರಾಹುವು ಸೋಮಮಂಡಲವನ್ನು ಪರ್ವಕಾಲದಲ್ಲಿ ಆಕ್ರಮಿಸುತ್ತಾನೆ.

೯೦. ಸೂರ್ಯನ ಪರ್ವಕಾಲಗಳಲ್ಲಿ ಚಂದ್ರನೂ ಕೂಡ ಆದಿತ್ಯನನ್ನು ಸೇರುತ್ತಾನೆ. ಕೇತುವಿನ ರಥಕ್ಕೆ ವಾಯುವೇಗದಿಂದ ಕೂಡಿದ ಎಂಟು ಅಶ್ವಗಳು ಕಟ್ಟಲ್ಪಟ್ಟಿವೆ.

೯೧. ಆ ಅಶ್ವಗಳು ಉಮಿಯರಾಶಿಯನ್ನು ಅಗ್ನಿಯಿಂದ ಜ್ವಲನಮಾಡಿದಾಗ ಹೊರಡುವ ಧೂಮದಂತೆ ವರ್ಣವುಳ್ಳವುಗಳೂ ಬಲಶಾಲಿಗಳೂ ಮತ್ತು ಕತ್ತೆಯ ಬಣ್ಣವುಳ್ಳವುಗಳೂ ಆಗಿವೆ. ಈ ರೀತಿಯಾಗಿ ಗ್ರಹಗಣದ ರಥಗಳು ಮತ್ತು ವಾಹನಗಳು ಹೇಳಲ್ಪಟ್ಟಿವೆ.

**ಸರ್ವೇ ಧ್ರುವನಿಬದ್ಧಾಸ್ತೇ ಪ್ರವೃದ್ಧಾ ವಾತರಶ್ಮಿಭಿಃ ।**
**ತಪಂತೇ ಭ್ರಾಮ್ಯಮಾಣಾಸ್ತು ಯಥಾಯೋಗಂ ಭ್ರಮಂತಿ ವೈ ॥ ೯೨ ॥**

**ವಾಯವ್ಯಾಭಿರದೃಶ್ಯಾಭಿಃ ಪ್ರವೃದ್ಧಾ ವಾತರಶ್ಮಿಭಿಃ ।**
**ಪರಿಭ್ರಮಂತಿ ತದ್ಬದ್ಧಾಶ್ಚಂದ್ರಸೂರ್ಯಗ್ರಹಾ ದಿವಿ । ॥ ೯೩ ॥**

**ಭ್ರಮಂತಮನುಗಚ್ಛಂತಿ ಧ್ರುವಂ ತೇ ಜ್ಯೋತಿಷಾಂ ಗಣಾಃ ।**
**ಯಥಾ ನದ್ಯುದಕೇ ನೌಸ್ತು ಸಲಿಲೇನ ಸಹೋಹ್ಯತೇ ॥ ೯೪ ॥**

**ತಥಾ ದೇವಾಲಯಾ ಹ್ಯೇತೇ ಊಹ್ಯಂತೇ ವಾತರಶ್ಮಿಭಿಃ ।**
**ಸರ್ಪಮಾಣಾ ನ ದೃಶ್ಯಂತೇ ವ್ಯೋಮ್ನಿ ದೇವಗಣಾಸ್ತು ತೇ ॥ ೯೫ ॥**

**ಯಾವತ್ಯಶ್ಚೈವ ತಾರಾಶ್ಚ ತಾವಂತೋ ವಾತರಶ್ಮಯಃ ।**
**ಸರ್ವಾ ಧ್ರುವೇ ನಿಬದ್ಧಾಶ್ಚ ಭ್ರಮಂತ್ಯೋ ಭ್ರಾಮಯಂತಿ ತಾಃ ॥ ೯೬ ॥**

---

೯೨. ಈ ಎಲ್ಲ ಗ್ರಹಗಳು ಧ್ರುವಮಂಡಲದಲ್ಲಿ ವಾಯುರೂಪವಾದ ರಶ್ಮಿಗಳಿಂದ ಕಟ್ಟಲ್ಪಟ್ಟವುಗಳಾಗಿ ತಮ್ಮ ಸ್ವರೂಪ ವೀರ್ಯಸ್ವಭಾವಗಳಿಗೆ ತಕ್ಕಂತೆ ಗತಿವಿಶೇಷ ದಿಂದ ಭ್ರಮಿಸುತ್ತ ತಪಿಸುತ್ತಿರುತ್ತವೆ.

೯೩. ವಾಯುಸಂಬಂಧದಿಂದ ಕೂಡಿರುವುದರಿಂದ ಕಣ್ಣಿಗೆ ಕಾಣದಿರುವ ವಾತಮಯವಾದ ರಶ್ಮಿಗಳಿಂದ ಕಟ್ಟಲ್ಪಟ್ಟಂತಿರುವ ಚಂದ್ರ-ಸೂರ್ಯ ಆದಿಯಾದ ಸಕಲಗ್ರಹಗಳು ಆಕಾಶದಲ್ಲಿ ಸಂಚರಿಸುತ್ತಾರೆ.

೯೪. ಆಧಾರವಾದ ಧ್ರುವಮಂಡಲವು ಸುತ್ತುತ್ತಿರುವುದನ್ನು ಅನುಸರಿಸಿ ಸಕಲ ಜ್ಯೋತಿರ್ಗಣಗಳು ನದಿಯ ನೀರಿನಲ್ಲಿ ಬಿಟ್ಟಿರುವ ದೋಣಿಯು ನೀರಿನಿಂದ ಧರಿಸಲ್ಪಟ್ಟು ನೀರಿನ ಜೊತೆಗೆ ತೇಲಿಹೋಗುವಂತೆ ಸುತ್ತುತ್ತಿವೆ

೯೫. ಹಾಗೆಯೇ ಸಕಲದೇವತೆಗಳ ಆಲಯಗಳು ವಾತಮಯವಾದ ರಶ್ಮಿಗಳಿಂದ ಧರಿಸಲ್ಪಡುತ್ತವೆ. ಆ ಆಲಯಗಳಲ್ಲಿರುವ ದೇವಗಣಗಳು ಆಕಾಶದಲ್ಲಿ ಮುಂದೆ ಮುಂದೆ ನಡೆಯುತ್ತಿರುವುದು ಕಾಣುವುದಿಲ್ಲ.

೯೬. ನಕ್ಷತ್ರಗಳು ಎಷ್ಟು ಸಂಖ್ಯೆಯಿಂದಿರುವುವೋ, ಅಷ್ಟು ಸಂಖ್ಯೆಯ ವಾತ ರಶ್ಮಿಗಳು ಧ್ರುವಮಂಡಲದಿಂದ ನಕ್ಷತ್ರಗಳವರೆಗೆ ಕಟ್ಟಲ್ಪಟ್ಟಿವೆ. ಅವು ತಾವು ಸುತ್ತುತ್ತ ನಕ್ಷತ್ರಮಂಡಲವನ್ನು ಸುತ್ತಿಸುತ್ತವೆ.

ತೈಲಪೀಡಾ ಯಥಾ ಚಕ್ರಂ ಭ್ರಮಂತೋ ಭ್ರಾಮಯಂತಿ ಹ ।
ತಥಾ ಭ್ರಮಂತಿ ಜ್ಯೋತೀಂಷಿ ವಾತಬದ್ಧಾನಿ ಸರ್ವಶಃ ॥ ೯೭ ॥

ಅಲಾತ ಚಕ್ರವದ್ಯಾಂತಿ ವಾತಚಕ್ರೇರಿತಾನಿ ತು ।
ಯತೋ ಜ್ಯೋತೀಂಷಿ ವಹತೇ ಪ್ರವಹಸ್ತೇನ ಸ ಸ್ಮೃತಃ ॥ ೯೮ ॥

ಏವಂ ಧ್ರುವನಿಬದ್ಧೋಽಸೌ ಸರ್ಪತೇ ಜ್ಯೋತಿಷಾಂ ಗಣಃ ।
ಸೈಷ ತಾರಾಮಯೋ ಜ್ಞೇಯಃ ಶಿಶುಮಾರೋ ಧ್ರುವೋ ದಿವಿ ॥ ೯೯ ॥

ಯದಹ್ನಾ ಕುರುತೇ ಪಾಪಂ ದೃಷ್ಟ್ವಾ ತನ್ನಿಶಿ ಮುಂಚತೇ ।
ಯಾವತ್ಯಶ್ಚೈವ ತಾರಾಸ್ತಾಃ ಶಿಶುಮಾರಾಶ್ರಿತಾ ದಿವಿ ॥ ೧೦೦ ॥

ತಾವಂತ್ಯೇವ ತು ವರ್ಷಾಣಿ ಜೀವತ್ಯಭ್ಯಧಿಕಾನಿ ತು ।
ಸಾಕಾ ಃ ಶಿಶುಮಾರಶ್ಚ ವಿಜ್ಞೇಯಃ ಪ್ರವಿಭಾಗಶಃ ॥ ೧೦೧ ॥

---

೯೭. ಎಣ್ಣೆಯಗಾಣದ ದೀರ್ಘಾಕಾರದ ಸ್ತಂಭವು ಸುತ್ತುತ್ತ ಚಕ್ರವನ್ನು ಸುತ್ತಿಸುತ್ತಿರುವಂತೆ ವಾತರಶ್ಮಿಗಳು ಅವುಗಳಿಂದ ಬದ್ಧವಾದ ಜ್ಯೋತಿಸ್ಸುಗಳನ್ನು ಸುತ್ತಲೂ ಸುತ್ತಿಸುತ್ತವೆ.

೯೮. ಚಕ್ರಾಕಾರವಾದ ವಾತದಿಂದ ಪ್ರೇರೇಪಿಸಲ್ಪಟ್ಟ ತೇಜಸ್ಸುಗಳು ಬೆಂಕಿಯ ಕೊಳ್ಳಿಯಂತೆ ಗುಂಡಾಗಿ ಸುತ್ತುತ್ತವೆ. ಇಂತಹ ಜ್ಯೋತಿರ್ಮಂಡಲವನ್ನು ವಹಿಸಿರುವುದರಿಂದ ವಾಯುವಿಗೆ ಪ್ರವಹವೆಂಬ ಸಂಕೇತವು ಬಂದಿರುವುದು.

೯೯. ಈರೀತಿಯಾಗಿ ಧ್ರುವಮಂಡಲದಲ್ಲಿ ಬದ್ಧವಾಗಿ ಜ್ಯೋತಿರ್ಗಣವು ಆಕಾಶದಲ್ಲಿ ನಡೆಯುತ್ತಿರುವುದು. ಆಕಾಶದಲ್ಲಿ ತಾರಕೆಗಳಿಂದ ಪರಿಪೂರ್ಣವಾದ ಧ್ರುವಮಂಡಲವನ್ನು ವಿಶಿಷ್ಟಾಕಾರದಿಂದ ಶಿಶುಮಾರವೆಂದು ತಿಳಿಯಬೇಕು.

೧೦೦. ಆಕಾಶದಲ್ಲಿ ಶಿಶುಮಾರಮಂಡಲವನ್ನು ಆಶ್ರಯಿಸಿರುವ ಸಕಲ ನಕ್ಷತ್ರಮಂಡಲವನ್ನು ರಾತ್ರಿಯಲ್ಲಿ ದರ್ಶನಮಾಡಿದ ನರನು ಅಹಸ್ಸಿನಲ್ಲಿ ಮಾಡಿರುವ ಸಕಲ ಪಾಪ ಪುಂಜವನ್ನೂ ಕಳೆದು ಕೊಳ್ಳುತ್ತಾನೆ.

೧೦೧. ಈ ರೀತಿಯಾಗಿ ಶಿಶುಮಾರಮಂಡಲದ ಆಕಾರಸ್ವರೂಪಗಳನ್ನು ಪ್ರಮಾಣದಿಂದ ತಿಳಿದ ನರನು ಆ ಜ್ಞಾನದ ಮಹಿಮೆಯಿಂದ ಅಲ್ಲಿರುವ ನಕ್ಷತ್ರಗಳಷ್ಟು ಅಥವಾ ಅದಕ್ಕಿಂತ ಹೆಚ್ಚುಕಾಲ ಜೀವಿಸುವನು.

ಔತ್ತಾನಪಾದಸ್ತಸ್ಯಾಥ ವಿಜ್ಞೇಯೋ ಹ್ಯುತ್ತರೋ ಹನುಃ ।
ಯಜ್ಞೋ ಽಪರಸ್ತು ವಿಜ್ಞೇಯೋ ಧರ್ಮೋ ಮೂರ್ಧಾನಮಾಶ್ರಿತಃ
॥ ೧೦೨ ॥

ಹೃದಿ ನಾರಾಯಣಃ ಸಾಧ್ಯೋ ಹ್ಯಶ್ವಿನೌ ಪೂರ್ವಪಾದಯೋಃ ।
ವರುಣಶ್ಚಾರ್ಯಮಾ ಚೈವ ಪಶ್ಚಿಮೇ ತಸ್ಯ ಸಕ್ಥಿನೀ ॥ ೧೦೩ ॥

ಶಿಶ್ನಂ ಸಂವತ್ಸರಸ್ತಸ್ಯ ಮಿತ್ರೋ ಽಪಾನಂ ಸಮಾಶ್ರಿತಃ ।
ಪುಚ್ಛೇ ಽಗ್ನಿಶ್ಚ ಮಹೇಂದ್ರಶ್ಚ ಮಾರೀಚಃ ಕಶ್ಯಪೋ ಧ್ರುವಃ ॥ ೧೦೪ ॥

ತಾರಕಾಃ ಶಿಶುಮಾರಸ್ಯ ನಾಸ್ತಂ ಯಾಂತಿ ಚತುಷ್ಟಯಮ್ ।
ನಕ್ಷತ್ರಚಂದ್ರಸೂರ್ಯಾಶ್ಚ ಗ್ರಹಾಸ್ತಾರಾಗಣೈಃ ಸಹ ॥ ೧೦೫ ॥

ಉನ್ಮುಖಾ ವಿಮುಖಾಃ ಸರ್ವೇ ವಕ್ರೀಭೂತಾಃ ಶ್ರಿತಾ ದಿವಿ ।
ಧ್ರುವೇಣಾಧಿಷ್ಠಿತಾಶ್ಚೈವ ಧ್ರುವಮೇವ ಪ್ರದಕ್ಷಿಣಮ್ ॥ ೧೦೬ ॥

---

೧೦೨. ಆ ಶಿಶುಮಾರ ಮಂಡಲದಲ್ಲಿ ಧರ್ಮ, ಧ್ರುವ ಮುಂತಾದವರು ವಾಸ ಮಾಡಿರುವರು. ಆ ಶಿಶುಮಾರಮಂಡಲದ ಸನ್ನಿವೇಶದಲ್ಲಿ ಉತ್ತಾನಪಾದನ ಪುತ್ರನಾದ ಧ್ರುವನು ಉತ್ತರಹನುಪ್ರದೇಶವೆಂದೂ ಯಜ್ಞನು ಮತ್ತೊಂದು ಹನು ಪ್ರದೇಶವೆಂದೂ ತಿಳಿಯಬೇಕು. ಮತ್ತು ಧರ್ಮವು ಶಿರಸ್ಸನ್ನು ಆಶ್ರಯಿಸಿರುವುದೆಂದು ತಿಳಿಯಬೇಕು.

೧೦೩. ಮತ್ತು ಹೃದಯದಲ್ಲಿ ಸಾಧ್ಯಾತ್ಮಕನಾದ ನಾರಾಯಣನೂ ಪೂರ್ವ ಪಾದಗಳಲ್ಲಿ ಅಶ್ವಿನೀದೇವತೆಗಳೂ ಹಿಂಭಾಗದ ತೊಡೆಗಳಲ್ಲಿ ಮಿತ್ರ ಮತ್ತು ವರುಣ ದೇವತೆಗಳೂ ಇರುವರು.

೧೦೪. ಸಂವತ್ಸರವು ಶಿಶ್ನೇಂದ್ರಿಯವನ್ನೂ ಮಿತ್ರದೇವನು ಅಪಾನವನ್ನೂ ಅಗ್ನಿ ಮಹೇಂದ್ರ, ಮಾರೀಚ ಪುತ್ರನಾದ ಕಶ್ಯಪ, ಧ್ರುವ-ಇವರೆಲ್ಲರೂ ಪುಚ್ಛದೇಶವನ್ನೂ ಅವಲಂಬಿಸಿರುವರು.

೧೦೫. ಶಿಶುಮಾರದಲ್ಲಿರುವ ಅಗ್ನಿ, ಇಂದ್ರ, ಕಶ್ಯಪ ಮತ್ತು ಧ್ರುವ ಎಂಬ ಚತುರ್ವಿಧವಾದ ಜ್ಯೋತಿರ್ಮಂಡಲವು ಯಾವಾಗಲೂ ಅಸ್ತಹೊಂದುವುದಿಲ್ಲ.

೧೦೬. ನಕ್ಷತ್ರ-ಚಂದ್ರ-ಸೂರ್ಯ-ಗ್ರಹಗಣ ಮುಂತಾದ ಎಲ್ಲ ಜ್ಯೋತಿಗಳು ಮೇಲು ಮುಖವಾಗಿಯೂ ಪರಸ್ಪರ ಅಭಿಮುಖ್ಯವಿಲ್ಲದವುಗಳಾಗಿಯೂ, ಧ್ರುವನಿಂದ

ಪರಿಯಾಂತೀಶ್ವರಶ್ರೇಷ್ಠಂ ಮೇಢೀಭೂತಂ ಧ್ರುವಂ ದಿವಿ ।
ಅಗ್ನೀಂದ್ರಕಶ್ಯಪಾನಾಂ ತು ಚರಮೋಽಸೌ ಧ್ರುವಃ ಸ್ಮೃತಃ ॥ ೧೦೭ ॥

ಏಕ ಏವ ಭ್ರಮತ್ಯೇಷ ಮೇರುಪರ್ವತಮೂರ್ಧನಿ ।
ಜ್ಯೋತಿಷಾಂ ಚಕ್ರಮೇತದ್ಧಿ ಸದಾ ಕರ್ಷನ್ನವಾಙ್ಮುಖಃ ॥
ಮೇರುಮಾಲೋಕಯತ್ಯೇಷ ಪರ್ಯಂತೇ ಹಿ ಪ್ರದಕ್ಷಿಣಮ್॥ ೧೦೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ತ್ರಯೋವಿಂಶತಿತಮೋಽಧ್ಯಾಯಃ

---

ನಿಯಮಿಸಲ್ಪಟ್ಟು ವಕ್ರವಾಗಿ ಆಕಾಶವನ್ನಾಶ್ರಯಿಸಿ ಧ್ರುವಮಂಡಲವನ್ನು ದಕ್ಷಿಣಾಕಾರವಾಗಿ ಸುತ್ತುತ್ತವೆ.

೧೦೭. ಸರ್ವಜ್ಯೋತಿರ್ನಿಯಾಮಕನಾದ, ಮೇಢೀಸ್ತಂಭದಂತಿರುವ ಧ್ರುವಮಂಡಲವನ್ನು ಆಕಾಶದಲ್ಲಿ ಸಕಲ ಜ್ಯೋತಿರ್ಮಂಡಲವು ಪ್ರದಕ್ಷಿಣೆ ಮಾಡುತ್ತಿರುವುದು. ಅಗ್ನಿ, ಇಂದ್ರ, ಕಶ್ಯಪ ಎಂಬ ಶಿಶುಮಾರಮಂಡಲದಲ್ಲಿರುವ ಮಹಾತ್ಮರಿಗೆ ನಾಲ್ಕನೆಯವನು ಧ್ರುವನು.

೧೦೮. ಈ ಧ್ರುವನು ಮಾತ್ರ ಮೇರುಪರ್ವತದ ಶಿಖರದಲ್ಲಿ ಸುತ್ತುತ್ತಲಿರುವನು. ಹೀಗೆ ಜ್ಯೋತಿಶ್ಚಕ್ರವನ್ನು ಸೆಳೆಯುತ್ತ ಅಧೋಮುಖನಾಗಿರುವ ಧ್ರುವನು ಪ್ರದಕ್ಷಿಣಾಕಾರವಾಗಿ ಮೇರುಪರ್ವತವನ್ನು ಸುತ್ತುತ್ತ ಮೇರುವನ್ನು ಈಕ್ಷಿಸುತ್ತಿರುವನು.

ಬ್ರಹ್ಮಾಂಡಪುರಾಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

# ಚತುರ್ವಿಂಶತಿತಮೋಽಧ್ಯಾಯಃ

**ಸೂತ ಉವಾಚ :—**

**ಏತಚ್ಛ್ರುತ್ವಾ ತು ಮುನಯಃ ಪುನಸ್ತೇ ಸಂಶಯಾನ್ವಿತಾಃ ।**
**ಪಪ್ರಚ್ಛುರುತ್ತರಂ ಭೂಯಸ್ತದಾ ತೇ ರೋಮಹರ್ಷಣಮ್ ॥ ೧ ॥**

**ಯದೇತದುಕ್ತಂ ಭವತಾ ಗೃಹಾಣೀತ್ಯೇವ ವಿಸ್ತೃತಮ್ ।**
**ಕಥಂ ದೇವಗೃಹಾಣಿ ಸ್ಯುಃ ಕಥಂ ಜ್ಯೋತೀಂಷಿ ವರ್ಣಯ ॥ ೨ ॥**

**ಏತತ್ಸರ್ವಂ ಸಮಾಚಕ್ಷ್ವ ಜ್ಯೋತಿಷಾಂ ಚೈವ ನಿರ್ಣಯಮ್ ।**

**ವಾಯುರುವಾಚ :—**

**ಶ್ರುತ್ವಾ ತು ವಚನಂ ತೇಷಾಂ ತದಾ ಸೂತಃ ಸಮಾಹಿತಃ ॥ ೩ ॥**

**ಉವಾಚ ಪರಮಂ ವಾಕ್ಯಂ ತೇಷಾಂ ಸಂಶಯನಿರ್ಣಯಮ್ ।**
**ಅಸ್ಮಿನ್ನರ್ಥೇ ಮಹಾಪ್ರಾಜ್ಞೈರ್ಯದುಕ್ತಂ ಜ್ಞಾನಬುದ್ಧಿಭಿಃ ॥ ೪ ॥**

---

೧. ಸೂತ ಮಹರ್ಷಿಯು ಈ ರೀತಿಯಾಗಿ ಮುಂದುವರಿಸಿದನು :—ಈ ರೀತಿಯಾಗಿ ಜ್ಯೋತಿರ್ಮಂಡಲದ ವಿಷಯವನ್ನು ಕೇಳಿ ಮತ್ತೆ ಸಂಶಯಗ್ರಸ್ತರಾದ ಮುನಿಗಳು ರೋಮಹರ್ಷಣನನ್ನು ಈ ರೀತಿಯಾಗಿ ಪ್ರಶ್ನೆ ಮಾಡಿದರು.

೨. ದೇವತೆಗಳು ಗೃಹವನ್ನು ರಚಿಸಿಕೊಂಡಿರುವರೆಂದು ಸಾಮಾನ್ಯವಾಗಿ ಹಿಂದೆ ಹೇಳಿರುವೆ. ಆ ದೇವಗೃಹಗಳು ಹೇಗೆ ಇರುವುವು ? ಜ್ಯೋತಿಗಳು ಹೇಗೆ ಇರುವುವು? ಎಂಬುದನ್ನು ವಿಸ್ತಾರವಾಗಿ ಹೇಳು.

೩. ಇದೆಲ್ಲವನ್ನು ಹೇಳಿ ಜ್ಯೋತಿರ್ಮಂಡಲದ ವಿಷಯದಲ್ಲಿ ನಮಗೆ ನಿರ್ಣಯವುಂಟಾಗುವಂತೆ ಮಾಡು. ಆಗ ವಾಯು ಭಗವಂತನು ಹೇಳಿದನೇನೆಂದರೆ, ಮುನಿಗಳ ಪ್ರಶ್ನವಾಕ್ಯವನ್ನು ಕೇಳಿ ಆಗ ಸೂತಮುನಿಯು ಏಕಾಗ್ರತೆಯುಳ್ಳ ಮನಸ್ಸುಳ್ಳವನಾದನು.

೪. ಮತ್ತು ಈ ವಿಷಯದಲ್ಲಿ ಪ್ರಜ್ಞಾವಂತರಾದ ಮಹಾತ್ಮರು ಯಾವ ನಿರ್ಣಯವನ್ನು ತೋರಿಸಿರುವರೋ, ಅದನ್ನು ಅನುಸರಿಸಿ ಸಂಶಯವು ದೂರವಾಗುವಂತೆ ಸೂತಮುನಿಯು ಉತ್ತಮವಾದ ವಚನವನ್ನು ಆಡಿದನು.

ಏತದ್ವೋऽಹಂ ಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಭವಮ್ ।
ಯಥಾ ದೇವಗೃಹಾಣೀಹ ಸೂರ್ಯಚಂದ್ರಗ್ರಹಾಃ ಸ್ಮೃತಾಃ ॥ ೫ ॥

ತತಃ ಪರಂ ಚ ತ್ರಿವಿಧಸ್ಯಾಗ್ನೇರ್ವಕ್ಷ್ಯೇ ಸಮುದ್ಭವಮ್ ।
ದಿವ್ಯಸ್ಯ ಭೌತಿಕಸ್ಯಾಗ್ನೇರಬ್ಯೋನೇಃ ಪಾರ್ಥಿವಸ್ಯ ತು ॥ ೬ ॥

ವ್ಯುಷ್ಟಾಯಾಂ ತು ರಜನ್ಯಾಂ ವೈ ಬ್ರಹ್ಮಣೋऽವ್ಯಕ್ತಜನ್ಮನಃ ।
ಅವ್ಯಾಕೃತಮಿದಂ ತ್ವಾಸೀನ್ನೈಶೇನ ತಮಸಾ ವೃತಮ್ ॥ ೭ ॥

ಸರ್ವಭೂತಾವಶಿಷ್ಟೇऽಸ್ಮಿಂಲ್ಲೋಕೇ ನಷ್ಟವಿಶೇಷಣೇ ।
ಸ್ವಯಂಭೂರ್ಭಗವಾಂಸ್ತತ್ರ ಲೋಕತಂತ್ರಾರ್ಥಸಾಧಕಃ ॥ ೮ ॥

ಖದ್ಯೋತವತ್ಸ ವ್ಯಚರದಾವಿರ್ಭಾವಚಿಕೀರ್ಷಯಾ ।
ಸೋऽಗ್ನಿಂ ದೃಷ್ಟ್ವಾಽಥ ಲೋಕಾದೌ ಪೃಥಿವೀಜಲಸಂಶ್ರಿತಮ್ ॥ ೯ ॥

---

೫. ಸೂರ್ಯ ಚಂದ್ರರ ಉತ್ಪತ್ತಿ ಪರಿವಾರವನ್ನು ನಿಮಗೆ ನಾನು ಹೇಳುತ್ತೇನೆ. ಸೂರ್ಯ, ಚಂದ್ರ, ಗ್ರಹಗಳ ಮಂಡಲಗಳು ದೇವಗೃಹವೆಂದು ಶಾಸ್ತ್ರಜ್ಞರಿಂದ ಸ್ಮರಿಸಲ್ಪಟ್ಟಿದೆ.

೬. ಇನ್ನು ಮುಂದೆ ತ್ರಿವಿಧವಾದ ಅಗ್ನಿಯ ಉತ್ಪತ್ತಿಯ ವಿಷಯವನ್ನು ಹೇಳುತ್ತೇನೆ. ಭೌತಿಕವಾದ ಅಗ್ನಿಯು ದಿವ್ಯ, ಅಬಿಂಧನ, ಪಾರ್ಥಿವ ವೆಂದು ತ್ರಿವಿಧವಾಗಿದೆ.

೭. ಅವ್ಯಕ್ತದಿಂದ ಹುಟ್ಟಿದ ಬ್ರಹ್ಮನಿಗೆ ರಾತ್ರಿಯು ಕಳೆದ ತರುವಾಯ ಮತ್ತೆ ಕಲ್ಪಸೃಷ್ಟಿಯ ಆರಂಭದಲ್ಲಿ ಈಗ ಕಾಣುವ ಜಗತ್ತೆಲ್ಲವೂ ರಾತ್ರಿಯ ಕತ್ತಲೆಯಿಂದ ಮುಚ್ಚಿಹೋಗಿ ಎಲ್ಲವೂ ಬೀಜರೂಪವಾಗಿ ಅವ್ಯಕ್ತವಾಗಿತ್ತು.

೮. ಹಿಂದಿನ ಪ್ರಲಯದಲ್ಲಿ ಸ್ಥಾವರ ಜಂಗಮವೆಲ್ಲವೂ ನಾಶಹೊಂದಿ ಸ್ಥೂಲ ಆಕಾರದ ವಿಶೇಷವು ಯಾವುದೂ ಇಲ್ಲದಂತೆ ಆಗಿರಲು ಲೋಕತಂತ್ರವನ್ನು ಸಾಧಿಸುವ ಶಕ್ತಿಯನ್ನು ಹೊಂದಿದ ಭಗವಂತನಾದ ಬ್ರಹ್ಮನು ಸೃಷ್ಟಿಸಂಕಲ್ಪವುಳ್ಳವನಾದನು.

೯. ಮತ್ತೆ ಪ್ರಪಂಚವನ್ನು ಸೃಷ್ಟಿಸಬೇಕೆಂಬ ಕತೂಹಲದಿಂದ ಬ್ರಹ್ಮನು ಖದ್ಯೋತದಂತೆ ಸಂಚರಿಸಿದನು. ಮತ್ತು ಲೋಕಗಳ ಸೃಷ್ಟಿಯ ಆದಿಯಲ್ಲಿ ಪೃಥಿವೀ ಮತ್ತು ಜಲವೆಂಬ ಭೂತಗಳನ್ನು ಆಶ್ರಯಿಸಿರುವ ಅಗ್ನಿಯನ್ನು ನೋಡಿದನು.

**ಸಂವೃತ್ಯ ತಂ ಪ್ರಕಾಶಾರ್ಥಂ ತ್ರಿಧಾ ವ್ಯಭಜದೀಶ್ವರಃ ।**
**ಪವನೋ ಯಸ್ತು ಲೋಕೇಽಸ್ಮಿನ್ ಪಾರ್ಥಿವಃ ಸೋಽಗ್ನಿರುಚ್ಯತೇ॥೧೦॥**

**ಯಶ್ಚಾಸೌ ತಪತೇ ಸೂರ್ಯೇ ಶುಚಿರಗ್ನಿಸ್ತು ಸ ಸ್ಮೃತಃ ।**
**ವೈದ್ಯುತೋಽಬ್ಜಸ್ತು ವಿಜ್ಞೇಯಸ್ತೇಷಾಂ ವಕ್ಷ್ಯೇಽಥ ಲಕ್ಷಣಮ್ ॥೧೧॥**

**ವೈದ್ಯುತೋ ಜಾಠರಃ ಸೌರೋ ಹ್ಯಪಾಂ ಗರ್ಭಾಸ್ತ್ರಯೋಽಗ್ನಯಃ ।**
**ತಸ್ಮಾದಪಃ ಪಿಬನ್ ಸೂರ್ಯೋ ಗೋಭಿರ್ದೀಪ್ಯತ್ಯಸೌ ದಿವಿ ॥ ೧೨ ॥**

**ವೈದ್ಯುತೇನ ಸಮಾವಿಷ್ಟೋ ವಾರ್ಷ್ಯೋ ನಾದ್ಭಿಃ ಪ್ರಶಾಮ್ಯತಿ ।**
**ಮಾನವಾನಾಂ ಚ ಕುಕ್ಷಿಸ್ಥೋ ನಾದ್ಭಿಃ ಶಾಮ್ಯತಿ ಪಾವಕಃ ॥ ೧೩ ॥**

**ತಸ್ಮಾತ್ ಸೌರೋ ವೈದ್ಯುತಶ್ಚ ಜಾಠರಶ್ಚಾಪ್ಯನಿಂಧನಃ ।**
**ಕಿಂಚಿದಪ್ಸು ಮತಂ ತೇಜಃ ಕಿಂಚಿದ್ದೃಷ್ಟಮಬಿಂಧನಮ್ ॥ ೧೪ ॥**

---

೧೦. ಆ ಅಗ್ನಿಯನ್ನು ವಿಸ್ತರಿಸಿ ಲೋಕದಲ್ಲಿ ಪ್ರಕಾಶವೆಂಬ ಕಾರ್ಯಕ್ಕೋಸ್ಕರ ನಿಯಾಮಕನಾದ ಬ್ರಹ್ಮನು ಮೂರಾಗಿ ವಿಂಗಡಿಸಿದನು, ಈ ಲೋಕದಲ್ಲಿ ಪವನ ಅಥವಾ ಪಾವಕವೆಂಬ ಹೆಸರಿನಿಂದ ಇರುವ ಅಗ್ನಿಯು ಪಾರ್ಥಿವಾಗ್ನಿಯು, ಇದು ಒಂದು ವಿಧವು.

೧೧. ಸೂರ್ಯಬಿಂಬದಲ್ಲಿ ತಪಿಸುತ್ತಿದ್ದ ಅಗ್ನಿಯು ಶುಚಿ ಎಂಬ ಹೆಸರಿನ ಅಗ್ನಿಯು, ಇದು ಎರಡನೆಯ ಅಗ್ನಿಯು, ವೈದ್ಯುತಾಗ್ನಿಯು ಜಲದಿಂದ ಹುಟ್ಟಿರುವುದು, ಇದು ಮೂರನೆಯ ವಿಧವು. ಇವುಗಳ ಪ್ರತ್ಯೇಕಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ.

೧೨. ವೈದ್ಯುತ, ಜಾಠರ ಮತ್ತು ಸೌರಾಗ್ನಿಗಳು ಜಲವೆಂಬ ಕಾರಣದಿಂದ ಹುಟ್ಟಿರುವುವು. ಆದುದರಿಂದ ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಕುಡಿಯುತ್ತ ಆಕಾಶದಲ್ಲಿ ಪ್ರಕಾಶಿಸುವನು.

೧೩. ವೃಷ್ಟಿಯಸಮಯದಲ್ಲಿ ಆವಿರ್ಭವಿಸುವ ಮಿಂಚಿನ ರೂಪವಾದ ಅಗ್ನಿಯು ವೃಷ್ಟಿಯಜಲದಿಂದ ಶಾಂತಿಯಾಗುವುದಿಲ್ಲ, ಮಾನವರ ಜಠರದಲ್ಲಿರುವ ಅಗ್ನಿಯು ಜಲಪಾನಮಾಡಿದ್ದರಿಂದ ಶಾಂತವಾಗುವುದಿಲ್ಲ, ಈ ಅಗ್ನಿಗಳು ಜಲದಿಂದ ಶಾಂತ ವಾಗದಿರುವುದು ಇವು ಜಲಜಗಳೆಂಬುದಕ್ಕೆ ಚಿಹ್ನವು.

೧೪. ಆದುದರಿಂದ ಸೌರ, ವೈದ್ಯುತ, ಜಾಠರಗಳೆಂಬ ಅಗ್ನಿಗಳಿಗೆ ಪಾರ್ಥಿವ

ಕಾಷ್ಠೇಂಧನಸ್ತು ನಿರ್ಮಥ್ಯಃ ಸೋಽದ್ಭಿಃ ಶಾಮ್ಯತಿ ಪಾವಕಃ ।
ಅರ್ಚಿಷ್ಮಾನ್ ಪವಮಾನೋಽಗ್ನಿರ್ನಿಷ್ಪ್ರಭೋ ಜಾಠರಃ ಸ್ಮೃತಃ ॥ ೧೫ ॥

ಯಶ್ಚಾಯಂ ಮಂಡಲೇ ಶುಕ್ಲೋ ನಿರೂಷ್ಮಾ ಸಂಪ್ರಕಾಶಕಃ ।
ಪ್ರಭಾ ಸೌರೀ ತು ಪಾದೇನ ಹ್ಯಸ್ತಂ ಯಾತಿ ದಿವಾಕರೇ ॥ ೧೬ ||

ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ಪ್ರಕಾಶತೇ ।
ಉದ್ಯಂತಂ ಚ ಪುನಃ ಸೂರ್ಯಮೌಷ್ಣ್ಯಮಾಗ್ನೇಯಮಾವಿಶತ್ ॥೧೭॥

ಪಾದೇನ ಪಾರ್ಥಿವಸ್ಯಾಗ್ನೇಸ್ತಸ್ಮಾದಗ್ನಿಸ್ತಪತ್ಯಸೌ ।
ಪ್ರಕಾಶ್ಯಂ ಚ ತಥೌಷ್ಣ್ಯಂ ಚ ಸೌರಾಗ್ನೇಯೋ ತು ತೇಜಸೀ ॥ ೧೮ ॥

---

ವಾದ ಕಾಷ್ಠಗಳು ಬೇಕಾಗಿಲ್ಲ. ಕೆಲವು ತೇಜಸ್ಸಿನ ಅಂಶಗಳು ನೀರಿನಲ್ಲಿಯೇ ಇರುವುವು. ಮತ್ತೆ ಕೆಲವು ನೀರಿನಿಂದ ಜ್ವಲಿಸಿ ದೀಪ್ತವಾಗುವುವು. ಎಂಬುದು ಲೋಕದಲ್ಲಿ ದೃಷ್ಟವಾದ ವಿಷಯವು.

೧೫. ಅರಣಿಗಳನ್ನು ಕಡೆಯುವಾಗ ಹುಟ್ಟುವ ಕಾಷ್ಠಾಗ್ನಿಯು ನೀರಿನಿಂದ ಆರಿಹೋಗುವುದು. ಇವುಗಳಲ್ಲಿ ಪವಮಾನವೆಂಬ ಪಾರ್ಥಿವಾಗ್ನಿಯು ಜ್ವಾಲೆಗಳಿಂದ ಕೂಡಿರುವುದು, ಜಾಠರಾಗ್ನಿಗೆ ಪ್ರಭಾಪುಂಜವಿಲ್ಲ.

೧೬. ಸೂರ್ಯ ಮಂಡಲದಲ್ಲಿರುವ ಅಗ್ನಿಯು ಶುಕ್ಲವಾದ ಪ್ರಭೆಯಿಂದ ಪ್ರಕಾಶಕವಾಗಿಯೂ ಆದರೆ ಸುಡುವ ಶಕ್ತಿಯಿಲ್ಲದಿರುವುದೂ ಆಗಿದೆ. ಸೂರ್ಯನ ಪ್ರಕಾಶಕವಾದ ಪ್ರಭೆಯು ಸೂರ್ಯನ ಅಸ್ತಮಯ ಸಮಯದಲ್ಲಿ ಕಾಲುಭಾಗದಷ್ಟು ಅಗ್ನಿಯನ್ನು ಪ್ರವೇಶಿಸುವುದು.

೧೭. ರಾತ್ರಿಯಲ್ಲಿ ಸೂರ್ಯಪ್ರಭೆಯ ಅಂಶವು ಅಗ್ನಿಯನ್ನು ಪ್ರವೇಶಮಾಡಿರುವುದರಿಂದ ಅಗ್ನಿಯು ಆ ವೇಳೆಯಲ್ಲಿ ದೂರದಿಂದ ಕಣ್ಣಿಗೆ ಕಾಣಿಸುವುದು. ಮತ್ತೆ ಸೂರ್ಯನು ಉದಯಿಸಿ ಬಂದಾಗ ಆ ಅಗ್ನಿಯ ಪ್ರಭೆಯು ಸೂರ್ಯನನ್ನು ಸೇರುವುದು.

೧೮. ಪಾರ್ಥಿವ ಅಗ್ನಿಯಲ್ಲಿದ್ದ ಔಷ್ಣ್ಯವು ಪಾದಾಂಶದಷ್ಟು ಸೂರ್ಯನನ್ನು ಪ್ರವೇಶಿಸುವುದರಿಂದ ಸೂರ್ಯರೂಪನಾದ ಅಗ್ನಿಯು ತಪಿಸುವನು. ಸೂರ್ಯರೂಪ ಅಗ್ನಿಗೆ ಪ್ರಕಾಶಗುಣವೂ ಪಾರ್ಥಿವಾಗ್ನಿಗೆ ಔಷ್ಣ್ಯಗುಣವೂ ಅಸಾಧಾರಣವಾಗಿವೆ.

ಪರಸ್ಪರಾನುಪ್ರವೇಶಾದಾಪ್ಯಾಯೇತೇ ಪರಸ್ಪರಮ್ ।
ಉತ್ತರೇ ಚೈವ ಭೂಮ್ಯರ್ಧೆ ತಥಾ ಹ್ಯಗ್ನಿಶ್ಚ ದಕ್ಷಿಣೇ ॥ ೧೯ ॥

ಉತ್ತಿಷ್ಠತಿ ಪುನಃ ಸೂರ್ಯೇ ರಾತ್ರಿರಾವಿಶತೇ ಹ್ಯಪಃ ।
ತಸ್ಮಾತ್ತಸ್ತಾ ಭವಂತ್ಯಾಪೋ ದಿವಾ ರಾತ್ರಿಪ್ರವೇಶನಾತ್ ॥ ೨೦ ॥

ಅಸ್ತಂಯಾತಿ ಪುನಃ ಸೂರ್ಯೇ ಅಹರ್ವೈ ಪ್ರವಿಶತ್ಯಪಃ ।
ತಸ್ಮಾನ್ನಕ್ತಂ ಪುನಃ ಶುಕ್ಲಾ ಆಪೋಽದೃಶ್ಯಂತ ಭಾಸ್ವರಾಃ ॥ ೨೧ ॥

ಏತೇನ ಕ್ರಮಯೋಗೇನ ಭೂಮ್ಯರ್ಧೇ ದಕ್ಷಿಣೋತ್ತರೇ ।
ಉದಯಾಸ್ತಮಯೇ ನಿತ್ಯಮಹೋರಾತ್ರಂ ವಿಶತ್ಯಪಃ ॥ ೨೨ ॥

ಯಶ್ಚಾಸೌ ತಪತೇ ಸೂರ್ಯಃ ಪಿಬನ್ನಂಭೋ ಗಭಸ್ತಿಭಿಃ ।
ಪಾರ್ಥಿವಾಗ್ನಿವಿಮಿಶ್ರೋಽಸೌ ದಿವ್ಯಃ ಶುಚಿರಿತಿ ಸ್ಮೃತಃ ॥ ೨೩ ॥

---

೧೯. ಈ ಎರಡು ತೇಜಸ್ಸುಗಳು ಪರಸ್ಪರ ಪ್ರವೇಶಮಾಡಿದ್ದರಿಂದ ಪರಸ್ಪರ ಸ್ವರೂಪವನ್ನು ವೃದ್ಧಿಗೊಳಿಸುತ್ತವೆ. ಭೂಲೋಕದ ಉತ್ತರ ಅರ್ಧವು ಸೂರ್ಯ ರೂಪಾಗ್ನಿಯ ಸ್ಥಾನವು. ದಕ್ಷಿಣಾರ್ಧವು ಪಾರ್ಥಿವಾಗ್ನಿಯ ಸ್ಥಾನವು.

೨೦. ಸೂರ್ಯನು ಉದಯಿಸಿದ ಕೂಡಲೇ ರಾತ್ರಿಯು ನೀರನ್ನು ಪ್ರವೇಶಿಸುವುದು. ಆದುದರಿಂದ ಹಗಲು ವೇಳೆಯಲ್ಲಿ ಜಲವು ರಾತ್ರಿ ಸಂಪರ್ಕದಿಂದ ತಪ್ತವಾಗಿರುವುದು.

೨೧. ಸೂರ್ಯನು ಮತ್ತೆ ಅಸ್ತಹೊಂದಿದಕೂಡಲೆ ಅಹಃಕಾಲವು ನೀರನ್ನು ಪ್ರವೇಶಿಸುವುದು. ಆ ಅಹಃಕಾಲದ ಸಂಪರ್ಕದಿಂದ ರಾತ್ರಿಯಲ್ಲಿ ಜಲಗಳು ಪ್ರಕಾಶಮಯವಾಗಿ ಕಾಣುತ್ತವೆ.

೨೨. ದಕ್ಷಿಣ-ಉತ್ತರವೆಂಬ ಭೂಗೋಳದ ಎರಡು ಅರ್ಧಗಳಲ್ಲಿ ಈ ಕ್ರಮದಿಂದ ಆಗುವ ಉದಯಾಸ್ತಮಯಗಳಿಂದ ಅಹಸ್ಸು ಮತ್ತು ರಾತ್ರಿಗಳು ನೀರನ್ನು ಪ್ರವೇಶಿಸುವವು.

೨೩. ಸೂರ್ಯಮಂಡಲದಲ್ಲಿ ಕಿರಣಗಳಿಂದ ನೀರನ್ನು ಪಾನಮಾಡುತ್ತ ಇರುವ ಪಾರ್ಥಿವಾಗ್ನಿಯ ಅಂಶದಿಂದ ಕೂಡಿದ ಅಗ್ನಿಯು ದಿವ್ಯವಾದ ಶುಚಿ ಅಗ್ನಿಯೆಂದು ಕರೆಯಲ್ಪಡುವುದು.

ಸಹಸ್ರಪಾದಸೌ ವಹ್ನಿರ್ಘೃತಕುಂಭ ನಿಭಃ ಶುಚಿಃ ।
ಆದತ್ತೇ ಸ ತು ನಾಡೀನಾಂ ಸಹಸ್ರೇಣ ಸಮಂತತಃ ॥ ೨೪ ॥

ನಾದೇಯೀಶ್ಚೈವ ಸಾಮುದ್ರೀಃ ಕೌಪ್ಯಾಶ್ಚೈವ ಸಮಂತತಃ ।
ಸ್ಥಾವರಾ ಜಂಗಮಾಶ್ಚೈವ ಯಾಶ್ಚ ಕುಲ್ಯಾದಿಕಾ ಅಪಃ ॥ ೨೫ ॥

ತಸ್ಯ ರಶ್ಮಿಸಹಸ್ರಂ ತು ಶೀತವರ್ಷೋಷ್ಣನಿಃಸ್ರವಮ್ ।
ತಾಸಾಂ ಚತುಃಶತಾ ನಾಡ್ಯೋ ವರ್ಷಂತೇ ಚಿತ್ರಮೂರ್ತಯಃ ॥ ೨೬ ॥

ಚಂದನಾಶ್ಚೈವ ಸಾಧ್ಯಶ್ಚ ಕೂತನಾಕೂತನಾಸ್ತಥಾ ।
ಅಮೃತಾ ನಾಮತಃ ಸರ್ವಾ ರಶ್ಮಯೋ ವೃಷ್ಟಿಸರ್ಜನಾಃ ॥ ೨೭ ॥

ಹಿಮೋದ್ವತಾಶ್ಚ ತಾಭ್ಯೋಽನ್ಯಾ ರಶ್ಮಯಸ್ತ್ರಿಶತಾಃ ಪುನಃ ।
ದೃಶ್ಯಾ ಮೇಘಾಶ್ಚ ಯಾಮ್ಯಶ್ಚ ಹ್ರಾದಿನ್ಯೋ ಹಿಮಸರ್ಜನಾಃ ॥ ೨೮ ॥

---

೨೪. ಆ ಶುಚಿವಹ್ನಿಯು ಸಹಸ್ರಕಿರಣಗಳಿಂದ ಕೂಡಿ ಘೃತಕುಂಭಕ್ಕೆ ಸಮಾನವಾಗಿರುವುದು. ಘೃತಕುಂಭದ ಸಾಮ್ಯದಿಂದ ದ್ರವತ್ವ, ಅಲ್ಪವಾದ ತಾಪ ಮುಂತಾದ ಆ ಅಗ್ನಿಯ ಧರ್ಮಗಳು ತೋರುತ್ತವೆ. ಆ ಅಗ್ನಿಯು ತನ್ನ ನಾಡೀರಶ್ಮಿಸಹಸ್ರದಿಂದ ಸುತ್ತಲೂ ಜಲವನ್ನು ಸಂಗ್ರಹಿಸುವುದು.

೨೫. ನದೀ, ಸಮುದ್ರ, ಕೂಪ, ಮತ್ತು ಕಾಲುವೆ ಮುಂತಾದ ಜಲಾಶಯಗಳಲ್ಲಿರುವ ಸ್ಥಾವರ ಅಥವಾ ಜಂಗಮಶೀಲವಾದ ಜಲವನ್ನು ಸೂರ್ಯರೂಪವಾದ ಅಗ್ನಿಯು ಸಂಗ್ರಹಿಸುತ್ತದೆ.

೨೬. ಆ ಅಗ್ನಿಗೆ ಶೀತ, ವೃಷ್ಟಿ, ಉಷ್ಣಗಳನ್ನು ಸ್ರವಿಸಲು ಅನುಕೂಲವಾಗಿ ಸಹಸ್ರರಶ್ಮಿಗಳು ಇರುತ್ತವೆ. ಅವುಗಳಲ್ಲಿ ನಾಲ್ಕುನೂರು ನಾಡೀರಶ್ಮಿಗಳು ವಿಚಿತ್ರವಾದ ಆಕಾರವುಳ್ಳವುಗಳಾಗಿ ವೃಷ್ಟಿಯನ್ನು ಸುರಿಸುತ್ತವೆ.

೨೭. ಈ ರೀತಿಯಾಗಿ ವೃಷ್ಟಿಯನ್ನು ಸುರಿಸುವ ಸೂರ್ಯನ ನಾಡೀರಶ್ಮಿಗಳಿಗೆ ಚಂದನ, ಸಾಧ್ಯ, ಕೂತನ, ಆಕೂತನ, ಮತ್ತು ಅಮೃತವೆಂಬ ಹೆಸರು ಪ್ರಸಿದ್ಧವಾಗಿವೆ.

೨೮. ಈ ಕಿರಣಗಳಿಗಿಂತ ಬೇರೆಯಾಗಿ ಹಿಮವನ್ನು ಸುರಿಸುವ ರಶ್ಮಿಗಳು ಮುನ್ನೂರು ಇವೆ. ಹಿಮವನ್ನು ಸುರಿಸುವ ಆ ರಶ್ಮಿಗಳಿಗೆ ದೃಶ್ಯಮೇಘಾ, ಯಾಮ್ಯಾ, ಹ್ರಾದಿನೀ ಮತ್ತು ಚಂದ್ರಾ ಎಂಬುವು ಪ್ರಸಿದ್ಧವಾದ ಹೆಸರು.

ಚಂದ್ರಾಸ್ತಾ ನಾಮತಃ ಪ್ರೋಕ್ತಾ ಮಿತಾಭಾಸ್ತು ಗಭಸ್ತಯಃ ।
ಶುಕ್ಲಾಶ್ಚ ಕುಹಕಾಶ್ಚೈವ ಗಾವೋ ವಿಶ್ವಭೃತಸ್ತಥಾ ॥ ೨೯ ॥

ಶುಕ್ಲಾಸ್ತಾ ನಾಮತಃ ಸರ್ವಾಸ್ತ್ರಿಶತಾ ಧರ್ಮಸರ್ಜನಾಃ ।
ಸಮಂ ವಿಭಜ್ಯ ನಾಡೀಸ್ತು ಮನುಷ್ಯಪಿತೃದೇವತಾಃ ॥ ೩೦ ॥

ಮನುಷ್ಯಾನೋಷಧೀನೇಹ ಸ್ವಧಯಾ ತು ಪಿತೄನಪಿ ।
ಅಮೃತೇನ ಸುರಾನ್ ಸರ್ವಾಂ ಸ್ತ್ರೀಂಸ್ತ್ರಿಭಿಸ್ತರ್ಪಯತ್ಯಸೌ ॥ ೩೧ ॥

ವಸಂತೇ ಚೈವ ಗ್ರೀಷ್ಮೇ ಚ ಶತೈಃ ಸ ತಪತಿ ತ್ರಿಭಿಃ ।
ವರ್ಷಾಸ್ವಥೋ ಶರದಿ ವೈ ಚತುರ್ಭಿಶ್ಚ ಪ್ರವರ್ಷತಿ ॥ ೩೨ ॥

ಹೇಮಂತೇ ಶಿಶಿರೇ ಚೈವ ಹಿಮಮುತ್ಸೃಜತೇ ತ್ರಿಭಿಃ ।
ಇಂದ್ರೋ ಧಾತಾ ಭಗಃ ಪೂಷಾ ಮಿತ್ರೋಽಥ ವರುಣೋಽರ್ಯಮಾ
॥ ೩೩ ॥

---

೨೯. ಮತ್ತು ಮತ್ತೊಂದು ಬಗೆಯ ಮಿತವಾದ ಕಾಂತಿಯುಳ್ಳ ರಶ್ಮಿಗಳು ಉಷ್ಣವನ್ನು ಉಂಟುಮಾಡುವುವು. ಅವುಗಳು ಮುನ್ನೂರು ಸಂಖ್ಯೆಯಿಂದಿವೆ. ಅವುಗಳಿಗೆ ಮಿತಾಭಾ, ಶುಕ್ಲಾ, ಕುಹಕಾ, ಗೋ, ಮತ್ತು ವಿಶ್ವಭೃತೀ ಎಂಬುವು ಸಂಕೇತಗಳು.

೩೦. ಹೀಗೆ ಹಿಮ, ವೃಷ್ಟಿ ಮತ್ತು ಪಾತವೆಂಬ ಕಾರ್ಯಗಳನ್ನು ಲೋಕಕ್ಕೆ ಕೊಡಲು ತನ್ನ ರಶ್ಮಿಗಳನ್ನು ಸಮವಾಗಿ ವಿಂಗಡಿಸಿ ಆಯಾಯ ರಶ್ಮಿಗಳಿಂದ ಆಯಾಯ ಕಾರ್ಯಗಳನ್ನು ನಿರ್ವಹಿಸುವನು.

೩೧. ಈ ಸೂರ್ಯನು ಸಸ್ಯದಿಂದ ಮನುಷ್ಯರನ್ನೂ ಸ್ವಧಾನ್ನದಿಂದ ಪಿತೃಗಳನ್ನೂ ಅಮೃತದಿಂದ ದೇವತೆಗಳನ್ನೂ--ಈ ರೀತಿಯಾಗಿ ಮೂರು ಉಪಕರಣಗಳಿಂದ ಮೂರು ಪಂಗಡಗಳನ್ನೂ ತೃಪ್ತಿಪಡಿಸುತ್ತಾನೆ

೩೨. ವಸಂತ ಮತ್ತು ಗ್ರೀಷ್ಮಋತುಗಳಲ್ಲಿ ಸೂರ್ಯನು ಮೂರುನೂರು ರಶ್ಮಿಗಳಿಂದ ತಪಿಸುತ್ತಾನೆ. ವರ್ಷಾ ಮತ್ತು ಶರದೃತುಗಳಲ್ಲಿ ನಾಲ್ಕುನೂರು ರಶ್ಮಿಗಳಿಂದ ವೃಷ್ಟಿಯನ್ನು ಸುರಿಸುತ್ತಾನೆ.

೩೩. ಹೀಗೆ ಲೋಕೋಪಕಾರವನ್ನು ಉಂಟುಮಾಡುವ ಆದಿತ್ಯರು ದ್ವಾದಶ

ಅಂಶುರ್ವಿವಸ್ವಾಂಸ್ತ್ವಷ್ಟಾ ಚ ಸವಿತಾ ವಿಷ್ಣುರೇವ ಚ ।
ಮಾಘಮಾಸೇ ತು ವರುಣಃ ಪೂಷಾ ಚೈವ ತು ಫಾಲ್ಗುನೇ ॥ ೩೪ ॥

ಚೈತ್ರೇ ಮಾಸಿ ತು ದೇವೋಽಂಶುರ್ಧಾತಾ ವೈಶಾಖತಾಪನಃ ।
ಜ್ಯೇಷ್ಠಮಾಸೇ ಭವೇದಿಂದ್ರಶ್ಚಾಷಾಢೇ ಸವಿತಾ ರವಿಃ ॥ ೩೫ ॥

ವಿವಸ್ವಾನ್ ಶ್ರಾವಣೇಮಾಸಿ ಪ್ರೋಷ್ಠೇ ಮಾಸೇ ಭಗಃ ಸ್ಮೃತಃ ।
ಅರ್ಯಮಾಶ್ವಯುಜೇ ಮಾಸಿ ತ್ವಷ್ಟಾ ಚ ಕಾರ್ತಿಕೇ ರವಿಃ ॥ ೩೬ ॥

ಮಾರ್ಗಶೀರ್ಷೇ ಭವೇನ್ಮಿತ್ರಃ ಪೌಷೇ ವಿಷ್ಣುಃ ಸನಾತನಃ ।
ಪಂಚರಶ್ಮಿಸಹಸ್ರಾಣಿ ವರುಣಸ್ಯಾರ್ಕಕರ್ಮಣಿ ॥ ೩೭ ॥

---

ಸಂಖ್ಯೆಯಿಂದಿರುವರು :—ಅವರು ಇಂದ್ರ, ಧಾತಾ, ಭಗ, ಪೂಷಾ, ಮಿತ್ರ, ವರುಣ, ಅರ್ಯಮಾ, ಅಂಶು, ವಿವಸ್ವಾನ್, ತ್ವಷ್ಟಾ, ಸವಿತಾ, ಮತ್ತು ವಿಷ್ಣುವೆಂಬುದಾಗಿ ಕ್ರಮವಾಗಿ ಹನ್ನೆರಡು ಸಂಜ್ಞೆಯುಳ್ಳವರಾಗಿರುವರು.

೩೪. ಈ ದ್ವಾದಶಾದಿತ್ಯರು ಕ್ರಮವಾಗಿ ಒಬ್ಬಬ್ಬನು ಒಂದೊಂದು ಮಾಸದಲ್ಲಿ ಸ್ವಾಧಿಕಾರದಲ್ಲಿ ನಿರತನಾಗುವನು. ಮಾಘಮಾಸದಲ್ಲಿ ವರುಣನೂ, ಫಾಲ್ಗುನ ಮಾಸದಲ್ಲಿ ಪೂಷಾದಿತ್ಯನೂ ಇರುವರು.

೩೫. ಚೈತ್ರಮಾಸದಲ್ಲಿ ಅಂಶುದೇವನೂ, ವೈಶಾಖಮಾಸದಲ್ಲಿ ಧಾತಾ ಎಂಬ ಆದಿತ್ಯನೂ, ಜ್ಯೇಷ್ಠಮಾಸದಲ್ಲಿ ಇಂದ್ರನೂ ಮತ್ತು ಆಷಾಢಮಾಸದಲ್ಲಿ ಸವಿತ್ರಾದಿತ್ಯನೂ ತಪಿಸುವರು.

೩೬. ಶ್ರಾವಣಮಾಸದಲ್ಲಿ ವಿವಸ್ವಾನ್ ಎಂಬ ಆದಿತ್ಯನೂ, ಭಾದ್ರಪದಮಾಸದಲ್ಲಿ ಭಗನೆಂಬ ಆದಿತ್ಯನೂ, ಆಶ್ವೀಜಮಾಸದಲ್ಲಿ ಅರ್ಯಮಾ ಎಂಬ ಆದಿತ್ಯನೂ, ಕಾರ್ತಿಕಮಾಸದಲ್ಲಿ ತ್ವಷ್ಟಾ ಎಂಬ ಆದಿತ್ಯನೂ ತಪಿಸುತ್ತಾರೆ.

೩೭. ಮಾರ್ಗಶಿರಮಾಸದಲ್ಲಿ ಮಿತ್ರದೇವನೂ, ಪುಷ್ಯಮಾಸದಲ್ಲಿ ಅನಾದಿಯಾದ ವಿಷ್ಣು ಆದಿತ್ಯನೂ ಉದಯಿಸುವರು. ವರುಣಾದಿತ್ಯನು ಸೂರ್ಯನ ಅಧಿಕಾರ ಕರ್ಮಗಳಲ್ಲಿ ಐದುಸಾವಿರ ಕಿರಣಗಳನ್ನು ಉಪಯೋಗಿಸುವನು.

ಷಡ್ಭಿಃ ಸಹಸ್ರೈಃ ಪೂಷಾ ತು ದೇವೋಽಂಶುಃ ಸಪ್ತಭಿಸ್ತಥಾ ।
ಧಾತಾಽಷ್ಟಭಿಃ ಸಹಸ್ರೈಸ್ತು ನವಭಿಸ್ತು ಶತಕ್ರತುಃ ॥ ೩೮ ॥

ಸವಿತಾ ದಶಭಿರ್ಯಾತಿ ಯಾತ್ಯೇಕಾದಶಭಿರ್ಭಗಃ ।
ಸಪ್ತಭಿಸ್ತಪತೇ ಮಿತ್ರಸ್ತ್ವಷ್ಟಾ ಚೈವಾಷ್ಟಭಿಸ್ತಪೇತ್ ॥ ೩೯ ॥

ಅರ್ಯಮಾ ದಶಭಿರ್ಯಾತಿ ವಿವಸ್ವಾನ್ ನವಭಿಸ್ತಪೇತ್ ।
ಷಡ್ಭೀ ರಶ್ಮಿಸಹಸ್ರೈಸ್ತು ವಿಷ್ಣುಸ್ತಪತಿ ಮೇದಿನೀಮ್ ॥ ೪೦ ॥

ವಸಂತೇ ಕಪಿಲಃ ಸೂರ್ಯೋ ಗ್ರೀಷ್ಮೇಽರ್ಕಃ ಕನಕಪ್ರಭಃ ।
ಶ್ವೇತವರ್ಣಸ್ತು ವರ್ಷಾಸು ಪಾಂಡುಃ ಶರದಿ ಭಾಸ್ಕರಃ ॥ ೪೧ ॥

---

೩೮. ಪೂಷಾದಿತ್ಯನು ಆರುಸಾವಿರ ಕಿರಣಗಳಿಂದಲೂ, ಅಂಶು ಆದಿತ್ಯನು ಏಳುಸಹಸ್ರ ಕಿರಣಗಳಿಂದಲೂ ಧಾತೃಆದಿತ್ಯನು ಎಂಟುಸಹಸ್ರ ಕಿರಣಗಳಿಂದಲೂ ಮತ್ತು ಇಂದ್ರಆದಿತ್ಯನು ಒಂಭತ್ತುಸಾವಿರ ಕಿರಣಗಳಿಂದಲೂ ಸೂರ್ಯನ ಅಧಿಕೃತ ಕಾರ್ಯಗಳನ್ನು ನಡೆಸುವರು.

೩೯. ಸವಿತೃದೇವನು ಹತ್ತುಸಾವಿರ ಕಿರಣಗಳಿಂದ, ಭಗದೇವನು ಏಕಾದಶ ಸಹಸ್ರ ರಶ್ಮಿಗಳಿಂದ, ಮಿತ್ರದೇವನು ಏಳುಸಹಸ್ರ ರಶ್ಮಿಗಳಿಂದ ಮತ್ತು ತ್ವಷ್ಟ್ರಾದಿತ್ಯನು ಅಷ್ಟಸಹಸ್ರ ಕಿರಣಗಳಿಂದ ತಪಿಸುವರು.

೪೦. ಅರ್ಯಮಾದಿತ್ಯನು ದಶಸಹಸ್ರ ಕಿರಣಗಳಿಂದಲೂ ಪರ್ಜನ್ಯನು ಒಂಭತ್ತು ಸಹಸ್ರ ಕಿರಣಗಳಿಂದಲೂ ವಿಷ್ಣು ಆದಿತ್ಯನು ಆರುಸಹಸ್ರ ಕಿರಣಗಳಿಂದಲೂ ಭೂಮಿಯನ್ನು ತಪಿಸುವರು. ಹೀಗೆ ಆದಿತ್ಯರಿಗೆ ಸ್ವಕಾರ್ಯಗಳಲ್ಲಿ ಉಪಯೋಗಿಸುವ ಕಿರಣಸಂಖ್ಯೆಯು ಹೇಳಲ್ಪಟ್ಟಿದೆ.

೪೧. ವಸಂತಮಾಸದಲ್ಲಿ ಸೂರ್ಯನು ಕಪಿಲವರ್ಣದಿಂದಲೂ ಗ್ರೀಷ್ಮಋತುವಿನಲ್ಲಿ ಸುವರ್ಣಕಾಂತಿಯಿಂದಲೂ ವರ್ಷಋತುವಿನಲ್ಲಿ ಶುಭ್ರವರ್ಣದಿಂದಲೂ ಶರತ್ಕಾಲದಲ್ಲ ಪಾಂಡುವರ್ಣದಿಂದಲೂ ಪ್ರಕಾಶಿಸುವನು.

ಹೇಮಂತೇ ತಾಮ್ರವರ್ಣಸ್ತು ಶೈಶಿರೇ ಲೋಹಿತೋ ರವಿಃ ।
ಇತಿ ವರ್ಣಾಃ ಸಮಾಖ್ಯಾತಾಃ ಸೂರ್ಯಸ್ಯರ್ತುಸಮುದ್ಭವಾಃ ॥ ೪೨ ॥

ಔಷಧೀಷು ಬಲಂ ಧತ್ತೇ ಸ್ವಧಯಾ ಚ ಪಿತೃಷ್ವಪಿ ।
ಸೂರ್ಯೋಽಮರೇಷ್ವಸ್ಯಮೃತಂ ತ್ರಯಂ ತ್ರಿಷು ನ ಯಚ್ಛತಿ ॥ ೪೩ ॥

ಏವಂ ರಶ್ಮಿಸಹಸ್ರಂ ತು ಸೌರಂ ಲೋಕಾರ್ಥಸಾಧಕಮ್ ।
ಭಿದ್ಯತೇ ಋತುಮಾಸಾದ್ಯ ಜಲಶೀತೋಷ್ಣನಿಸ್ರವಮ್ ॥ ೪೪ ॥

ಇತ್ಯೇತನ್ಮಂಡಲಂ ಶುಕ್ಲಂ ಭಾಸ್ವರಂ ಸೂರ್ಯಸಂಜ್ಞಿತಮ್ ।
ನಕ್ಷತ್ರಗ್ರಹಸೋಮಾನಾಂ ಪ್ರತಿಷ್ಠಾ ಯೋನಿರೇವ ಚ ॥ ೪೫ ॥

ಚಂದ್ರ ಋಕ್ಷಗ್ರಹಾಃ ಸರ್ವೇ ವಿಜ್ಞೇಯಾಃ ಸೂರ್ಯಸಂಭವಾಃ ।
ನಕ್ಷತ್ರಾಧಿಪತಿಃ ಸೋಮೋ ಗ್ರಹರಾಜೋ ದಿವಾಕರಃ ॥ ೪೬ ॥

---

೪೨. ಹೇಮಂತಋತುವಿನಲ್ಲಿ ತಾಮ್ರವರ್ಣದಿಂದಲೂ ಶಿಶಿರಋತುವಿನಲ್ಲಿ ಲೋಹಿತವರ್ಣದಿಂದಲೂ ಸೂರ್ಯನು ಪ್ರಕಾಶಿಸುವನು. ಈರೀತಿಯಾಗಿ ಸೂರ್ಯನಿಗೆ ಆಯಾಯ ಋತುಕಾಲಗಳಿಂದ ಸಂಭವಿಸುವ ವರ್ಣಗಳು ಹೇಳಲ್ಪಟ್ಟಿವೆ.

೪೩. ಸೂರ್ಯನು ಸಸ್ಯಾದಿ ಔಷಧಿಗಳಲ್ಲಿ ಪುಷ್ಟಿಕರವಾದ ಬಲವನ್ನೂ ಪಿತೃಗಳಲ್ಲಿ ಸ್ವಧಾನ್ನವನ್ನೂ ದೇವತೆಗಳಲ್ಲಿ ಅಮೃತವನ್ನೂ ಕೊಡುವನು. ಆದರೆ ಬಲ-ಸ್ವಧಾ-ಅಮೃತ-ತ್ರಯವನ್ನು ಒಂದು ವಸ್ತುವಿಗೆ ಕೊಡುವುದಿಲ್ಲ.

೪೪. ಹೀಗೆ ಲೋಕದ ಹಿತವನ್ನು ಸಾಧಿಸುವುದಕ್ಕೋಸ್ಕರವಿರುವ ಸೂರ್ಯನ ಸಹಸ್ರಕಿರಣಗಳು ಋತುಸಮಯಗಳಿಂದ ಭಿನ್ನವಾದ ಸ್ವರೂಪವನ್ನು ತೆಗೆದುಕೊಂಡು ಜಲ-ಶೀತ-ಉಷ್ಣಗಳ ವೃಷ್ಟಿಯನ್ನುಂಟುಮಾಡುವುದು.

೪೫. ಹೀಗೆ ಪ್ರಕಾಶಮಯವಾದ ಭಾಸ್ವರ ಶುಕ್ಲರೂಪದಿಂದ ಕೂಡಿದ ಸೂರ್ಯನೆಂಬ ತೇಜೋಮಂಡಲವು ನಕ್ಷತ್ರ, ಗ್ರಹ, ಸೋಮಮಂಡಲಗಳಿಗೆ ಕಾರಣವೂ ಮತ್ತು ಆಸ್ಪದವೂ ಆಗಿದೆ.

೪೬. ಚಂದ್ರ, ನಕ್ಷತ್ರ, ಗ್ರಹ ಈ ಎಲ್ಲರು ಸೂರ್ಯಬಿಂಬದಿಂದ ಹುಟ್ಟಿರುವರೆಂದು ತಿಳಿಯಬೇಕು. ಚಂದ್ರನು ನಕ್ಷತ್ರಗಳಿಗೆ ರಾಜನಾಗಿರುವನು. ಸೂರ್ಯನು ನಿಖಿಲ ಗ್ರಹಗಳಿಗೆ ರಾಜನಾಗಿರುವನು.

3

ಶೇಷಾಃ ಪಂಚಗ್ರಹಾ ಜ್ಞೇಯಾ ಈಶ್ವರಾಃ ಕಾಮಚಾರಿಣಃ ।
ಪಠ್ಯತೇ ಚಾಗ್ನಿರಾದಿತ್ಯ ಉದಕಂ ಚಂದ್ರಮಾಃ ಸ್ಮೃತಃ ॥ ೪೭ ॥

ಶೇಷಾಣಾಂ ಪ್ರಕೃತೀಃ ಸಮ್ಯಗ್ವರ್ಣ್ಯಮಾನಾ ನಿಬೋಧತ ।
ಸುರಸೇನಾಪತಿಃ ಸ್ಕಂದಃ ಪಠ್ಯತೇಽಂಗಾರಕೋ ಗ್ರಹಃ ॥ ೪೮ ॥

ನಾರಾಯಣಂ ಬುಧಂ ಪ್ರಾಹುರ್ವೇದಜ್ಞಾನವಿದೋ ಬುಧಾಃ ।
ರುದ್ರೋ ವೈವಸ್ವತಃ ಸಾಕ್ಷಾದ್ಯಮೋ ಲೋಕಪ್ರಭುಃ ಸ್ವಯಮ್ ॥ ೪೯ ॥

ಮಹಾಗ್ರಹೋ ದ್ವಿಜಶ್ರೇಷ್ಠಾ ಮಂದಗಾಮೀ ಶನೈಶ್ಚರಃ ।
ದೇವಾಸುರಗುರೂ ದ್ವೌತು ಭಾನುಮಂತೌ ಮಹಾಗ್ರಹೌ ॥ ೫೦ ॥

ಪ್ರಜಾಪತಿಸುತಾವೇತಾವುಭೌ ಶುಕ್ರಬೃಹಸ್ಪತೀ ।
ಆದಿತ್ಯಮೂಲಮಖಿಲಂ ತ್ರೈಲೋಕ್ಯಂ ನಾತ್ರ ಸಂಶಯಃ ॥ ೫೧ ॥

---

೪೭. ಮಿಕ್ಕ ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ ಮತ್ತು ಶನಿಗಳೆಂಬ ಐದು ಗ್ರಹಗಳು ಸ್ವತಂತ್ರವಾಗಿ ಸಂಚರಿಸುವ ಈಶ್ವರರೆಂದು ತಿಳಿಯಬೇಕು. ಆದಿತ್ಯನನ್ನು ಅಗ್ನಿಯೆಂಬುದಾಗಿಯೂ ಚಂದ್ರನನ್ನು ಜಲವೆಂಬುದಾಗಿಯೂ ಶಾಸ್ತ್ರಜ್ಞರು ಸ್ಮರಿಸಿರುತ್ತಾರೆ.

೪೮. ಮಿಕ್ಕ ಎಲ್ಲ ಗ್ರಹಗಳ ಪ್ರಕೃತಿಗಳನ್ನು ವರ್ಣಿಸುವುದನ್ನು ಕೇಳಿರಿ. ದೇವಸೇನೆಗಳ ನಾಯಕನಾದ ಕುಮಾರಸ್ವಾಮಿಯನ್ನು ಅಂಗಾರಕ ಗ್ರಹನನ್ನಾಗಿ ಹೇಳುವರು.

೪೯-೫೦. ವೇದಾರ್ಥಗಳನ್ನು ತಿಳಿದ ವಿದ್ವಾಂಸರು ಮಹಾವಿಷ್ಣುವನ್ನು ಬುಧ ಗ್ರಹನೆಂದು ಹೇಳುತ್ತಾರೆ. ಸಕಲಲೋಕಗಳ ಪ್ರಭುವೂ ಸೂರ್ಯಪುತ್ರನೂ, ಭೀಮ ಸ್ವರೂಪನೂ, ಆದ ಮೃತ್ಯುವನ್ನು ಮಂದಗಾಮಿಯಾದ ಶನೈಶ್ಚರ ಮಹಾಗ್ರಹ ಸ್ವರೂಪವನ್ನಾಗಿ ಹೇಳುತ್ತಾರೆ.

೫೧. ದೇವಗುರುವಾದ ಬೃಹಸ್ಪತಿ, ಅಸುರಗುರುವಾದ ಶುಕ್ರಾಚಾರ್ಯ ಎಂಬ ಕಿರಣಪುಂಜದಿಂದ ಕೂಡಿದ ಇಬ್ಬರು ಮಹಾಗ್ರಹಗಳು ಪ್ರಜಾಪತಿಯ ಪುತ್ರರು. ಈ ರೀತಿಯಾಗಿ ಸಕಲತ್ರೈಲೋಕ್ಯವು ಆದಿತ್ಯನಿಂದ ಉಂಟಾಗಿರುವುದು. ಈ ವಿಷಯದಲ್ಲಿ ಸಂಶಯವಿಲ್ಲ.

ಭವತ್ಯಸ್ಮಾಜ್ಜಗತ್ ಕೃತ್ಸ್ನಂ ಸದೇವಾಸುರಮಾನುಷಮ್ ।
ರುದ್ರೋಪೇಂದ್ರೇಂದ್ರಚಂದ್ರಾಣಾಂ ವಿಪ್ರೇಂದ್ರಾಸ್ತ್ರಿದಿವೌಕಸಾಮ್ ॥ ೫೨ ॥

ದ್ಯುತಿರ್ದ್ಯುತಿಮತಾಂ ಕೃತ್ಸ್ನಂ ಯತ್ತೇಜಃ ಸಾರ್ವಲೌಕಿಕಮ್ ।
ಸರ್ವಾತ್ಮಾ ಸರ್ವಲೋಕೇಶೋ ಮಹಾದೇವಃ ಪ್ರಜಾಪತಿಃ ॥ ೫೩ ॥

ಸೂರ್ಯ ಏವ ತ್ರಿಲೋಕಸ್ಯ ಮೂಲಂ ಪರಮದೈವತಮ್ ।
ತತಃ ಸಂಜಾಯತೇ ಸರ್ವಂ ತತ್ರ ಚೈವ ಪ್ರಲೀಯತೇ ॥ ೫೪ ॥

ಭಾವಾಭಾವೌ ಹಿ ಲೋಕಾನಾಮಾದಿತ್ಯಾನ್ನಿಃಸೃತೌ ಪುರಾ ।
ಜಗಜ್ಜ್ಞೇಯೋ ಗ್ರಹೋ ವಿಪ್ರಾ ದೀಪ್ತಿಮಾನ್ ಸುಪ್ರಭೋ ರವಿಃ ॥ ೫೫ ॥

ಅತ್ರ ಗಚ್ಛಂತಿ ನಿಧನಂ ಜಾಯಂತೇ ಚ ಪುನಃ ಪುನಃ ।
ಕ್ಷಣಾ ಮುಹೂರ್ತಾ ದಿವಸಾ ನಿಶಾಃ ಪಕ್ಷಾಶ್ಚ ಕೃತ್ಸ್ನಶಃ ॥ ೫೬ ॥

---

೫೨. ದೇವತೆಗಳಿಂದಲೂ ಅಸುರರಿಂದಲೂ, ಮತ್ತು ಮನುಷ್ಯರಿಂದಲೂ ಕೂಡಿದ ಸಕಲ ಪ್ರಪಂಚವು ಆದಿತ್ಯನಿಂದ ಹುಟ್ಟುವುದು. ವಿಪ್ರೋತ್ತಮರೇ ! ರುದ್ರ, ವಿಷ್ಣು, ಇಂದ್ರ, ಚಂದ್ರ ಮತ್ತು ಸಕಲ ದೇವತೆಗಳಿಗೆ ಆದಿತ್ಯನು ಪ್ರಭುವು.

೫೩. ಕಾಂತಿಯುಕ್ತವಾದ ವಸ್ತುಗಳಲ್ಲಿ ಸರ್ವಲೋಕಗಳಲ್ಲಿ ಪ್ರಸರಿಸುವ ಯಾವ ಕಾಂತಿರೂಪವಾದ ಉಜ್ಜ್ವಲ ತೇಜಸ್ಸು ಇರುವುದೋ, ಆ ತೇಜಸ್ಸು ಸೂರ್ಯನ ರೂಪವಾದುದು. ಸೂರ್ಯನು ಸರ್ವಾತ್ಮಕನೂ ಸಕಲ ಲೋಕಾಧಿಪತಿಯೂ ಮಹಾ ದೇವನೂ, ಪ್ರಜಾಪತಿ ಸ್ವರೂಪನೂ ಆಗಿರುವನು.

೫೪. ಮೂರು ಲೋಕಗಳಿಗೆ ಸೂರ್ಯನೇ ಮೂಲಭೂತನಾದ ಪರಮದೇವತೆಯು. ಸಕಲ ವಸ್ತುಗಳೂ ಸೂರ್ಯನಿಂದ ಹುಟ್ಟಿ ಸೂರ್ಯನಲ್ಲಿಯೇ ಕಡೆಗೆ ಲಯವನ್ನು ಹೊಂದುತ್ತವೆ.

೫೫. ವಿಪ್ರರೇ ! ಈ ಲೋಕಗಳ ಭಾವ ಮತ್ತು ಅಭಾವವೆಂಬ ಎರಡು ಅವಸ್ಥೆಗಳು ಆದಿತ್ಯನಿಂದಲೇ ಮೊದಲು ಜನಿಸಿದವುಗಳಾಗಿವೆ. ಪ್ರಭಾಪುಂಜದಿಂದ ಕೂಡಿದ ಸೂರ್ಯ ಗ್ರಹವು ಜಗತ್ತಿಗೆಲ್ಲ ದೃಶ್ಯನಾಗಿರುವನು.

೫೬. ಕ್ಷಣ, ಮುಹೂರ್ತ, ಹಗಲು, ರಾತ್ರಿ ಪಕ್ಷಗಳೆಂಬ ಕಾಲವಿಭಾಗಗಳೆಲ್ಲವೂ ಈ ಸೂರ್ಯನಿಂದ ಹುಟ್ಟಿ ಸೂರ್ಯನಲ್ಲಿಯೇ ಲಯವನ್ನು ಹೊಂದುತ್ತವೆ.

ಮಾಸಾಃ ಸಂವತ್ಸರಾಶ್ಚೈವ ಋತವೋಽಥ ಯುಗಾನಿ ಚ।
ತದಾದಿತ್ಯಾದೃತೇ ಹ್ಯೇಷಾ ಕಾಲಸಂಖ್ಯಾ ನ ವಿದ್ಯತೇ ॥ ೫೭ ॥

ಕಾಲಾದೃತೇ ನ ನಿಗಮೋ ನ ದೀಕ್ಷಾ ನಾಹ್ನಿಕಕ್ರಮಃ।
ಋತೂನಾಮವಿಭಾಗಾಚ್ಚ ಪುಷ್ಪಮೂಲಫಲಂ ಕುತಃ ॥ ೫೮ ॥

ಕುತಃ ಸಸ್ಯವಿನಿಷ್ಪತ್ತಿಸ್ತೃಣೌಷಧಿಗಣೋಽಪಿ ವಾ।
ಅಭಾವೋ ವ್ಯವಹಾರಾಣಾಂ ಜಂತೂನಾಂ ದಿವಿ ಚೇಹ ಚ ॥ ೫೯ ॥

ಜಗತ್ಪ್ರತಾಪನಮೃತೇ ಭಾಸ್ಕರಂ ವಾರಿತಸ್ಕರಮ್।
ಸ ಏಷ ಕಾಲಶ್ಚಾಗ್ನಿಶ್ಚ ದ್ವಾದಶಾತ್ಮಾ ಪ್ರಜಾಪತಿಃ ॥ ೬೦ ॥

ತಪತ್ಯೇಷ ದ್ವಿಜಶ್ರೇಷ್ಠಾಸ್ತ್ರೈಲೋಕ್ಯಂ ಸಚರಾಚರಮ್।
ಸ ಏಷ ತೇಜಸಾಂ ರಾಶಿಸ್ತಮೋ ಘ್ನನ್ ಸಾರ್ವಲೌಕಿಕಮ್ ॥ ೬೧ ॥

---

೫೭. ಮಾಸ, ಸಂವತ್ಸರ, ಋತು ಮತ್ತು ಯುಗ ಮುಂತಾದ ಸಕಲ ಕಾಲಗಳ ಗಣನೆಯ ವ್ಯವಹಾರವು ಆದಿತ್ಯನನ್ನು ಬಿಟ್ಟು ಆಗುವುದಿಲ್ಲ.

೫೮. ಕಾಲಗಣನೆಯಿಲ್ಲದೆ ವೇದಾಧ್ಯಯನ, ಯಜ್ಞದೀಕ್ಷಾವಿಧಿ, ಮತ್ತು ಐಹಿಕ ಕರ್ಮಗಳ ಪರಂಪರೆಯು ಇರುವುದಿಲ್ಲ. ಋತುಗಳು ಪರ್ಯಾಯವಾಗಿ ಸಂಭವಿಸದಿದ್ದರೆ ಪುಷ್ಪ, ಫಲ, ಮೂಲಗಳು ಹೇಗೆ ಜನಿಸುವುವು ?

೫೯. ಸಸ್ಯಗಳ ಉತ್ಪತ್ತಿಯು ಎಲ್ಲಿಯದು ? ಅಥವಾ ತೃಣ ಔಷಧಿಗಳ ಗುಂಪು ಹೇಗೆ ಆವಿರ್ಭಾವ ಹೊಂದುವುದು ? ದ್ಯುಲೋಕ ಮತ್ತು ಇಹಲೋಕಗಳಲ್ಲಿ ಪ್ರಾಣಿಗಳ ಸಮಸ್ತ ವ್ಯವಹಾರಗಳ ಪ್ರವೃತ್ತಿಯು ಸೂರ್ಯನಿಲ್ಲದೆ ಆಗಲಾರದು.

೬೦. ಎಲ್ಲ ವ್ಯವಹಾರಗಳ ಪ್ರವರ್ತನಕ್ಕೆ ಜಲವನ್ನು ಅಪಹರಿಸುವ ಮತ್ತು ಪ್ರಪಂಚವನ್ನು ತಪಿಸುವ ಸೂರ್ಯನು ನಿಮಿತ್ತನಾಗಿರುವನು. ಆ ಸೂರ್ಯ ಭಗವಂತನು ಕಾಲ, ಅಗ್ನಿ, ದ್ವಾದಶಾತ್ಮಾ ಮತ್ತು ಪ್ರಜಾಪತಿ ಸ್ವರೂಪನಾಗಿರುವನು.

೬೧. ಬ್ರಾಹ್ಮಣೋತ್ತಮರೆ ! ಈ ಆದಿತ್ಯನು ಚರಾಚರಗಳಿಂದ ಕೂಡಿದ ಲೋಕತ್ರಯವನ್ನು ತಪಿಸುತ್ತಾನೆ. ತೇಜೋರಾಶಿಯಾದ ಆ ಸೂರ್ಯನು ಸರ್ವಲೋಕಗಳ ಅಂಧಕಾರವನ್ನು ಧ್ವಂಸಮಾಡುತ್ತ ಪ್ರಕಾಶಿಸುವನು.

ಉತ್ತಮಂ ಮಾರ್ಗಮಾಸ್ಥಾಯ ವಾಯೋರ್ಭಾಭಿರಿದಂ ಜಗತ್ ।
ಪಾರ್ಶ್ವಮೂರ್ಧ್ವಮಧಶ್ಚೈವ ತಾಪಯತ್ಯೇಷ ಸರ್ವಶಃ ॥ ೬೨ ॥

ಯಥಾ ಪ್ರಭಾಕರೋ ದೀಪೋ ಗೃಹಮಧ್ಯೇಽವಲಂಬಿತಃ ।
ಪಾರ್ಶ್ವಮೂರ್ಧ್ವಮಧಶ್ಚೈವ ತಮೋ ನಾಶಯತೇ ಸಮಮ್ ॥ ೬೩ ॥

ತದ್ವತ್ ಸಹಸ್ರಕಿರಣೋ ಗ್ರಹರಾಜೋ ಜಗತ್ಪತಿಃ ।
ಸೂರ್ಯೋ ಗೋಭಿರ್ಜಗತ್ಸರ್ವಮಾದೀಪಯತಿ ಸರ್ವತಃ ॥ ೬೪ ॥

ರವೇ ರಶ್ಮಿಸಹಸ್ರಂ ಯತ್ ಪ್ರಾಙ್ಮಯಾ ಸಮುದಾಹೃತಮ್ ।
ತೇಷಾಂ ಶ್ರೇಷ್ಠಾಃ ಪುನಃ ಸಪ್ತ ರಶ್ಮಯೋ ಗ್ರಹಯೋನಯಃ ॥ ೬೫ ॥

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವ ಚ ।
ವಿಶ್ವಶ್ರವಾಃ ಪುನಶ್ಚಾನ್ಯಃ ಸಂಪದ್ವಸುರತಃ ಪರಃ ॥ ೬೬ ॥

---

೬೨. ಈ ಆದಿತ್ಯನು ವಾಯುವಿನ ಪವಿತ್ರವಾದ ಮಾರ್ಗವನ್ನು ಅವಲಂಬಿಸಿ ತನ್ನ ಪ್ರಭೆಗಳಿಂದ ಈ ಜಗತ್ತನ್ನು ಸರ್ವರೀತಿಗಳಿಂದಲೂ ಪಾರ್ಶ್ವ, ಊರ್ಧ್ವ, ಅಧೋ ಭಾಗಗಳಲ್ಲಿ ತಪಿಸುವನು.

೬೩. ಮನೆಯ ಮಧ್ಯದಲ್ಲಿ ಬೆಳಕಿಗೋಸ್ಕರ ಇಟ್ಟಿರುವ ದೀಪವು ಪ್ರಭೆಯನ್ನು ಬೀರುತ್ತ ಪಾರ್ಶ್ವ-ಊರ್ಧ್ವ-ಅಧೋಭಾಗಗಳಲ್ಲಿದ್ದ ಸಕಲ ತಮಸ್ಸನ್ನು ದೂರಮಾಡುವುದಲ್ಲವೆ.

೬೪. ಅದೇ ರೀತಿಯಿಂದ ಜಗತ್ಪ್ರಭುವೂ, ಸಹಸ್ರ ಕಿರಣಗಳಿಂದ ಕೂಡಿದವನೂ, ಮತ್ತು ಗ್ರಹರಾಜನೂ ಆದ ಸೂರ್ಯನು ಸರ್ವಭಾಗಗಳಲ್ಲಿ ತನ್ನ ಕಿರಣಗಳಿಂದ ಜಗತ್ತನ್ನೆಲ್ಲ ಬೆಳಗುವನು.

೬೫. ಈ ಸೂರ್ಯನಿಗೆ ಸಾವಿರಾರು ಕಿರಣಗಳು ಅವನ ಜಗದ್ರಕ್ಷಣ ವ್ಯಾಪಾರಕ್ಕೆ ಸಾಧಕವಾಗಿವೆಯೆಂದು ಹಿಂದೆ ನನ್ನಿಂದ ಹೇಳಲ್ಪಟ್ಟಿದೆ. ಅವುಗಳಲ್ಲಿ ಗ್ರಹೋತ್ಪತ್ತಿಗೆ ಕಾರಣವಾದ ಏಳು ರಶ್ಮಿಗಳು ಮುಖ್ಯವಾದವುಗಳಾಗಿವೆ.

೬೬-೬೭. ಆ ಏಳು ಕಿರಣಗಳಾವುವೆಂದರೆ:—ಸುಷುಮ್ನ, ಹರಿಕೇಶ, ವಿಶ್ವಕರ್ಮಾ, ವಿಶ್ವಶ್ರವಾ, ಸಂಪದ್ವಸುರತ, ಅರ್ವಾವಸು, ಮತ್ತು ಸ್ವರಾಟ್ ಎಂದು

ಅರ್ವಾವಸುಃ ಪುನಶ್ಚಾನ್ಯಃ ಸ್ವರಾಡನ್ಯಃ ಪ್ರಕೀರ್ತಿತಃ ।
ಸುಷುಮ್ನಃ ಸೂರ್ಯರಶ್ಮಿಸ್ತು ಕ್ಷೀಣಂ ಶಶಿನಮೇಧಯೇತ್ ॥ ೬೭ ॥

ತಿರ್ಯಗೂರ್ಧ್ವಪ್ರಚಾರೋಽಸೌ ಸುಷುಮ್ನಃ ಪರಿಕೀರ್ತಿತಃ ।
ಹರಿಕೇಶಃ ಪುರಸ್ತಾದ್ಯ ಋಕ್ಷಯೋನಿಃ ಸ ಕೀರ್ತ್ಯತೇ ॥ ೬೮ ॥

ದಕ್ಷಿಣೇ ವಿಶ್ವಕರ್ಮಾ ತು ರಶ್ಮೀನ್ ವರ್ಧಯತೇ ಬುಧಮ್ ।
ವಿಶ್ವಶ್ರವಾಸ್ತು ಯಃ ಪಶ್ಚಾತ್ ಶುಕ್ರಯೋನಿಃ ಸ್ಮೃತೋ ಬುಧೈಃ ॥೬೯॥

ಸಂಪದ್ವಸುಸ್ತು ಯೋ ರಶ್ಮಿಃ ಸ ಯೋನಿರ್ಲೋಹಿತಸ್ಯ ತು ।
ಷಷ್ಠಸ್ತ್ವರ್ವಾವಸೂ ರಶ್ಮಿರ್ಯೋನಿಸ್ತು ಸ ಬೃಹಸ್ಪತೇಃ ॥ ೭೦ ॥

ಶನೈಶ್ಚರಂ ಪುನಶ್ಚಾಪಿ ರಶ್ಮಿರಾಪ್ಯಾಯತೇ ಸ್ವರಾಟ್ ।
ಏವಂ ಸೂರ್ಯಪ್ರಭಾವೇಣ ಗ್ರಹನಕ್ಷತ್ರತಾರಕಾಃ ॥ ೭೧ ॥

---

ಪ್ರತ್ಯೇಕ ಹೆಸರುಗಳನ್ನು ಹೊಂದಿವೆ. ಇವುಗಳಲ್ಲಿ ಸೂರ್ಯನು ಸುಷುಮ್ನ ರಶ್ಮಿಯಿಂದ ಕ್ಷೀಣನಾದ ಚಂದ್ರನನ್ನು ವೃದ್ಧಿಪಡಿಸುವನು.

೬೮. ಸುಷುಮ್ನ ಎಂಬ ಈ ಸೂರ್ಯರಶ್ಮಿಯು ಅಡ್ಡಲಾಗಿಯೂ ಮತ್ತು ಊರ್ಧ್ವಾಗ್ರವಾಗಿಯೂ ಪ್ರಚಾರವುಳ್ಳದ್ದೆಂದು ಹೇಳಲ್ಪಟ್ಟಿದೆ. ಹರಿಕೇಶವೆಂಬ ರಶ್ಮಿಯು ಪೂರ್ವಭಾಗದಲ್ಲಿ ಪ್ರಚಾರವುಳ್ಳದ್ದಾಗಿ ನಕ್ಷತ್ರಗಳಿಗೆ ಕಾರಣವೆಂದು ಹೇಳಲ್ಪಟ್ಟಿರುತ್ತದೆ.

೬೯. ದಕ್ಷಿಣಭಾಗದಲ್ಲಿದ್ದ ವಿಶ್ವಕರ್ಮರಶ್ಮಿಯು ಬುಧಗ್ರಹದ ರಶ್ಮಿಗಳನ್ನು ವೃದ್ಧಿಪಡಿಸಿ ಬುಧನಿಗೆ ಸಹಾಯಕವಾಗಿದೆ. ವಿಶ್ವಶ್ರವಾ ಎಂಬ ರಶ್ಮಿಯು ಪಶ್ಚಿಮ ಭಾಗದಲ್ಲಿರುವುದೆಂದೂ ಶುಕ್ರಗ್ರಹಕ್ಕೆ ಅದು ಕಾರಣವೆಂದೂ ಹೇಳಲ್ಪಟ್ಟಿದೆ.

೭೦. ಸಂಪದ್ವಸು ಎಂಬ ರಶ್ಮಿಯು ಅಂಗಾರಕಗ್ರಹಕ್ಕೆ ಕಾರಣವಾದುದು. ಆರನೆಯ ಅರ್ವಾವಸು ಎಂಬ ರಶ್ಮಿಯು ಬೃಹಸ್ಪತಿಗ್ರಹಕ್ಕೆ ಕಾರಣವು.

೭೧. ಸ್ವರಾಟ್ ಎಂಬ ಏಳನೆಯ ರಶ್ಮಿಯು ಶನೈಶ್ಚರನೆಂಬ ಗ್ರಹವನ್ನು ವೃದ್ಧಿಪಡಿಸುತ್ತದೆ. ಈ ರೀತಿಯಾಗಿ ಸೂರ್ಯನ ರಶ್ಮಿರೂಪವಾದ ಪ್ರಭಾವದಿಂದ ಸಕಲ ಗ್ರಹ ನಕ್ಷತ್ರ-ತಾರಕೆಗಳು ಪ್ರತಿಷ್ಠೆಯನ್ನು ಹೊಂದಿವೆ.

ವರ್ತಂತೇ ದಿವಿ ತಾಃ ಸರ್ವಾ ವಿಶ್ವಂ ಚೇದಂ ಪುನರ್ಜಗತ್ ।
ನ ಕ್ಷೀಯಂತೇ ಯತಸ್ತಾನಿ ತಸ್ಮಾನ್ನಕ್ಷತ್ರಸಂಜ್ಞಿತಾಃ ॥ ೭೨ ॥

ಕ್ಷೇತ್ರಾಣ್ಯೇತಾನಿ ವೈ ಪೂರ್ವಮಾಪತಂತಿ ಗಭಸ್ತಿಭಿಃ ।
ತೇಷಾಂ ಕ್ಷೇತ್ರಾಣ್ಯಥಾದತ್ತೇ ಸೂರ್ಯೋ ನಕ್ಷತ್ರತಾರಕಾಃ ॥ ೭೩ ॥

ತೀರ್ಣಾನಾಂ ಸುಕೃತೇನೇಹ ಸುಕೃತಾಂತೇ ಗ್ರಹಾಶ್ರಯಾತ್ ।
ತಾರಣಾತ್ತಾರಕಾ ಹ್ಯೇತಾಃ ಶುಕ್ಲತ್ವಾಚ್ಚೈವ ತಾರಕಾಃ ॥ ೭೪ ॥

ದಿವ್ಯಾನಾಂ ಪಾರ್ಥಿವಾನಾಂ ಚ ನೈಶಾನಾಂ ಚೈವ ಸರ್ವಶಃ ।
ಆದಾನಾನ್ನಿತ್ಯಮಾದಿತ್ಯಸ್ತೇಜಸಾಂ ತಪಸಾಮಪಿ ॥ ೭೫ ॥

ಸವನಂ ಸ್ಯಂದನಾರ್ಥೇ ಚ ಧಾತುರೇಷ ವಿಭಾವ್ಯತೇ ।
ಸವನಾತ್ತೇಜಸೋಽಪಾಂ ಚ ತೇನಾಸೌ ಸವಿತಾ ಮತಃ ॥ ೭೬ ॥

---

೭೨. ಆ ಗ್ರಹ-ನಕ್ಷತ್ರಾದಿಗಳು ಆಕಾಶದಲ್ಲಿದ್ದುಕೊಂಡು ಸಮಸ್ತ ಜಗತ್ತನ್ನೂ ನಾಶವಾಗದಂತೆ ನಡೆಸಿಕೊಂಡು ಬರುವುದರಿಂದ ಅವುಗಳಿಗೆ ನಕ್ಷತ್ರವೆಂಬ ಹೆಸರು ಅನ್ವರ್ಥವಾಗಿ ಬಂದಿರುವುದು. ನ+ಕ್ಷತ್ರವೆಂದರೆ ನಾಶವಾಗದಿರುವುದೆಂದು ನಾಮ ಧೇಯದ ಅರ್ಥವು.

೭೩. ಇವುಗಳ ಶರೀರಗಳು ಮಾತ್ರ ಮೊದಲು ಉತ್ಪನ್ನವಾಗುತ್ತವೆ. ಅವು ಗಳನ್ನು ಸೂರ್ಯನು ತನ್ನ ಕಿರಣಗಳಿಂದ ಪರಿಗ್ರಹಿಸುವನು. ಅದರಿಂದ ನಕ್ಷತ್ರ-ತಾರಕಾರೂಪಗಳನ್ನು ಧರಿಸುವುವು.

೭೪, ಸುಕೃತ ಕರ್ಮವನ್ನು ಮಾಡಿದವರು ಆ ಸುಕೃತದಿಂದ ಅಲ್ಲಿಗೆ ಬಂದು ಆ ಸುಕೃತ ಫಲಾನುಭವದ ಅವಸಾನದಲ್ಲಿ ಗ್ರಹಗಳ ಆಶ್ರಯದಿಂದ ತಾರಣಹೊಂದು ವುದರಿಂದಲೂ ಶುಕ್ಲವರ್ಣವಾಗಿರುವುದರಿಂದಲೂ ಇವು ತಾರಕೆಗಳೆಂದು ಕರೆಯಲ್ಪಡು ತ್ತವೆ.

೭೫. ದಿವ್ಯ, ಪಾರ್ಥಿವ ಮತ್ತು ನಿಶಾಕಾಲದಲ್ಲಿರುವ ತೇಜಸ್ಸು ಮತ್ತು ತಾಪ ಗಳನ್ನು ಸರ್ವ ಪ್ರಕಾರಗಳಿಂದ ಸರ್ವದಾ ಸ್ವೀಕರಿಸುವುದರಿಂದ ಸೂರ್ಯನನ್ನು ಆದತ್ತೆ=ಸ್ವೀಕರಿಸುತ್ತಾನೆ ಎಂಬ ಅರ್ಥದಿಂದ ಆದಿತ್ಯನೆಂದು ಕರೆಯುತ್ತಾರೆ.

೭೬. "ಷು" ಎಂಬ ಧಾತುವು ಹರಿಯುವುದು ಎಂಬ ಅರ್ಥದಲ್ಲಿ "ಸವನ"

ಬಹ್ವರ್ಥಶ್ಚದಿರಿತ್ಯೇಷ ಹ್ಲಾದನೇ ಧಾತುರುಚ್ಯತೇ ।
ಶುಕ್ಲತ್ವೇ ಚಾಮೃತತ್ವೇ ಚ ಶೀತತ್ವೇ ಚ ವಿಭಾವ್ಯತೇ ॥ ೩೭ ॥

ಸೂರ್ಯಾಚಂದ್ರಮಸೋರ್ದಿವ್ಯೇ ಮಂಡಲೇ ಭಾಸ್ವರೇ ಖಗೇ ।
ಜಲತೇಜೋಮಯೇ ಶುಕ್ಲೇ ವೃತ್ತಕುಂಭನಿಭೇ ಶುಭೇ ॥ ೩೮ ॥

ಘನತೋಯಾತ್ಮಕಂ ತತ್ರ ಮಂಡಲಂ ಶಶಿನಃ ಸ್ಮೃತಮ್ ।
ಘನತೇಜೋಮಯಂ ಶುಕ್ಲಂ ಮಂಡಲಂ ಭಾಸ್ಕರಸ್ಯ ತು ॥ ೩೯ ॥

ವಿಶಂತಿ ಸರ್ವದೇವಾಸ್ತು ಸ್ಥಾನಾನ್ಯೇತಾನಿ ಸರ್ವಶಃ ।
ಮನ್ವಂತರೇಷು ಸರ್ವೇಷು ಋಕ್ಷಸೂರ್ಯಗ್ರಹಾಶ್ರಯಾಃ ॥ ೪೦ ॥

---

ಎಂಬ ರೂಪದಿಂದ ಭಾವಾರ್ಥವನ್ನು ಬೋಧಿಸುತ್ತದೆ. ಸೂರ್ಯನು ತೇಜಸ್ಸು ಮತ್ತು ಜಲಗಳನ್ನು ಹರಿಯುವಂತೆ ಮಾಡುವುದರಿಂದ "ಸವಿತಾ" ಎಂಬ ಹೆಸರನ್ನು ಹೊಂದಿರುವನು.

೩೭. ಹಾಗೆಯೇ "ಚದಿ" ಎಂಬ ಧಾತುವು ಅನೇಕಾರ್ಥಗಳನ್ನು ಬೋಧಿಸುವುದಾಗಿ ಧಾತುಪಾಠದಲ್ಲಿ ಪಠಿಸಲ್ಪಟ್ಟಿದೆ. ಅವುಗಳಲ್ಲಿ ಶುಕ್ಲತ್ವ, ಅಮೃತತ್ವ ಮತ್ತು ಶೀತತ್ವವೆಂಬ ಗುಣಗಳನ್ನು ಮುಖ್ಯವಾಗಿಟ್ಟುಕೊಂಡು "ಚಂದ್ರ" ಎಂಬ ರೂಪ ಹೊಂದಿ ಚಂದ್ರನನ್ನು ಬೋಧಿಸುತ್ತವೆ.

೩೮. ಸೂರ್ಯ-ಚಂದ್ರರ ಎರಡು ಬಿಂಬಗಳು ದಿವ್ಯವೂ, ತೇಜೋಮಯವೂ ಆಕಾಶದಲ್ಲಿ ಗಮನವುಳ್ಳದ್ದೂ, ಶುಕ್ಲವರ್ಣದಿಂದ ರಾಜಿಸುವುದೂ, ಶುಭಕರವೂ ಆಗಿವೆ.

೩೯. ಅವುಗಳಲ್ಲಿ ಚಂದ್ರನ ಮಂಡಲವು ಘನವಾದ ಜಲಮಯವಾಗಿರುವುದು. ಸೂರ್ಯನ ಮಂಡಲವು ಶುಕ್ಲವರ್ಣವುಳ್ಳದ್ದೂ ಘನವಾದ ತೇಜೋಮಂಡಲರೂಪವೂ ಆಗಿದೆ.

೪೦. ಈ ರೀತಿಯಾಗಿ ನಕ್ಷತ್ರ, ಸೂರ್ಯ, ಮತ್ತು ಗ್ರಹಗಳ ಆಶ್ರಯವುಳ್ಳ ಈ ಸ್ಥಾನಗಳನ್ನು ಸಕಲ ದೇವತೆಗಳು ಎಲ್ಲ ಮನ್ವಂತರಗಳಲ್ಲಿ ಸಮಸ್ತ ಭಾಗಗಳಲ್ಲಿಯೂ ಪ್ರವೇಶಿಸುತ್ತಾರೆ.

ತಾನಿ ದೇವಗೃಹಾಣ್ಯೇವ ತದಾಖ್ಯಾಸ್ತೇ ಭವಂತಿ ಚ ।
ಸೌರಂ ಸೂರ್ಯೋ ವಿಶೇತ್ ಸ್ಥಾನಂ ಸೌಮ್ಯಂ ಸೋಮಸ್ತಥೈವ ಚ
॥ ೮೧ ॥
ಶೌಕ್ರಂ ಶುಕ್ರೋ ವಿಶೇತ್ ಸ್ಥಾನಂ ಷೋಡಶಾರ್ಚಿಃ ಪ್ರಭಾಸ್ವರಮ್ ।
ಜೈವಂ ಬೃಹಸ್ಪತಿಶ್ಚೈವ ಲೌಹಿತಂ ಚೈವ ಲೋಹಿತಃ ॥ ೮೨ ॥

ಶನೈಶ್ಚರೋ ವಿಶೇತ್ ಸ್ಥಾನಂ ದೇವಃ ಶಾನೈಶ್ಚರಂ ತಥಾ ।
ಬೌಧಂ ಬುಧೋಽಥ ಸ್ವರ್ಭಾನುಃ ಸ್ವರ್ಭಾನುಸ್ಥಾನಮಾಸ್ಥಿತಃ ॥ ೮೩ ॥

ನಕ್ಷತ್ರಾಣಿ ಚ ಸರ್ವಾಣಿ ನಕ್ಷತ್ರಾಣಿ ವಿಶಂತ್ಯುತ ।
ಗೃಹಾಣ್ಯೇತಾನಿ ಸರ್ವಾಣಿ ಜ್ಯೋತೀಂಷಿ ಸುಕೃತಾತ್ಮನಾಮ್ ॥ ೮೪ ॥

ಕಲ್ಪಾದೌ ಸಂಪ್ರವೃತ್ತಾನಿ ನಿರ್ಮಿತಾನಿ ಸ್ವಯಂಭುವಾ ।
ಸ್ಥಾನಾನ್ಯೇತಾನಿ ತಿಷ್ಠಂತಿ ಯಾವದಾಭೂತಸಂಪ್ಲವಮ್ ॥ ೮೫ ॥

---

೮೧. ಅವುಗಳೆಲ್ಲವೂ ದೇವಗೃಹಗಳು. ಆ ದೇವ ಗೃಹಗಳು ಅಲ್ಲಿ ವಾಸಮಾಡುವ ದೇವತೆಗಳ ಹೆಸರಿನಿಂದ ಕೂಡಿಕೊಂಡಿವೆ. ಸೂರ್ಯನ ಸ್ಥಾನವನ್ನು ಸೂರ್ಯನು ಪ್ರವೇಶಿಸುವನು. ಹಾಗೆಯೇ ಚಂದ್ರಸ್ಥಾನವನ್ನು ಚಂದ್ರನು ಪ್ರವೇಶಮಾಡುವನು.

೮೨. ಶುಕ್ರನು ಷೋಡಶಕಲೆಗಳಿಂದ ಕೂಡಿದ ಭಾಸ್ವರವಾದ ಶುಕ್ರನ ಸ್ಥಾನವನ್ನು ಹೊಂದುವನು. ಹಾಗೆಯೇ ಬೃಹಸ್ಪತಿಯು ತನ್ನ ಸ್ಥಾನವನ್ನೂ ಅಂಗಾರಕನು ತನ್ನ ಸ್ಥಾನವನ್ನೂ ಹೊಂದಿರುವನು.

೮೩. ಶನೈಶ್ಚರ ಗ್ರಹರೂಪನಾದ ದೇವನು ಶನೈಶ್ಚರನ ಸ್ಥಾನವನ್ನೂ ಬುಧನು ಬುಧ ಸ್ಥಾನವನ್ನೂ ಸ್ವರ್ಭಾನುವಾದ ರಾಹುವು ರಾಹುಸ್ಥಾನವನ್ನೂ ಆಕ್ರಮಿಸುವರು. ಹೀಗೆ ಆಯಾಯ ಅಭಿಮಾನಿ ದೇವತೆಗಳು ಜ್ಯೋತಿರ್ಮಂಡಲ ರೂಪವಾದ ತಮ್ಮ ಸ್ಥಾನಗಳನ್ನು ಹೊಂದಿರುವರು.

೮೪. ಸಕಲ ನಕ್ಷತ್ರಗಳು ತಮ್ಮ ನಕ್ಷತ್ರಸ್ಥಾನವನ್ನು ಹೊಂದುವುವು. ಈ ತೇಜಃಸ್ಥಾನಗಳೆಲ್ಲವೂ ಪುಣ್ಯವಂತರು ಹೋಗಿ ಸೇರುವ ದೇವಗೃಹಗಳಾಗಿವೆ.

೮೫. ಈ ಸ್ಥಾನಗಳು ಪುಣ್ಯವಂತರ ಪುಣ್ಯಫಲಭೋಗಸ್ಥಾನಗಳಾಗಿ ಕಲ್ಪದ ಆದಿಯಲ್ಲಿ ಸ್ವಯಂಭುವಾದ ಬ್ರಹ್ಮನಿಂದ ರಚಿಸಲ್ಪಟ್ಟಿವೆ. ಈ ಸ್ಥಾನಗಳು ಪ್ರಲಯ ಕಾಲದವರೆಗೂ ಶಾಶ್ವತವಾಗಿರುವುವು.

ಮನ್ವಂತರೇಷು ಸರ್ವೇಷು ದೇವಸ್ಥಾನಾನಿ ಯಾನಿ ವೈ ।
ಅಭಿಮಾನಿನೋಽವತಿಷ್ಠಂತೇ ದೇವಸ್ಥಾನಾನಿ ವೈ ಪುನಃ ॥ ೮೬ ॥

ಅತೀತೈಸ್ತು ಸಹಾತೀತಾ ಭಾವ್ಯಾ ಭಾವ್ಯೈಃ ಸುರೈಃ ಸಹ ।
ವರ್ತಂತೇ ವರ್ತಮಾನೈಶ್ಚ ಸ್ಥಾನಿಭಿಸ್ತೈಃ ಸುರೈಃ ಸಹ ॥
ಅಸ್ಮಿನ್ ಮನ್ವಂತರೇ ಚೈವ ಗ್ರಹಾ ವೈತಾನಿಕಾಃ ಸ್ಮೃತಾಃ ॥ ೮೭ ॥

ವಿವಸ್ವಾನದಿತೇಃ ಪುತ್ರಃ ಸೂರ್ಯೋ ವೈವಸ್ವತೇಽಂತರೇ ।
ತ್ವಿಷಿನಾಮಾ ಧರ್ಮಸುತಃ ಸೋಮೋ ದೇವೋ ವಸುಃ ಸ್ಮೃತಃ
॥ ೮೮ ॥

ಶುಕ್ರೋ ದೇವಸ್ತು ವಿಜ್ಞೇಯೋ ಭಾರ್ಗವೋಽಸುರಯಾಜಕಃ ।
ಬೃಹತ್ತೇಜಾಃ ಸ್ಮೃತೋ ದೇವೋ ದೇವಾಚಾರ್ಯೋಽಂಗಿರಃಸುತಃ
॥ ೮೯ ॥

---

೮೬. ಸಮಸ್ತ ಮನ್ವಂತರಗಳಲ್ಲಿಯೂ ಅವುಗಳು ದೇವತೆಗಳ ವಾಸಸ್ಥಾನಗಳು. ಈ ದೇವಸ್ಥಾನಗಳನ್ನು ಆಯಾಯ ಅಭಿಮಾನಿ ದೇವತೆಗಳು ಆಶ್ರಯಿಸುವರು.

೮೭. ಸುಕೃತಿ ಜನರಲ್ಲಿ ಅತೀತರಾದವರು ಅಲ್ಲಿರುವ ಅತೀತ ಅಭಿಮಾನಿ ದೇವತೆಗಳೊಂದಿಗೆ, ಮುಂದೆ ಬರುವವರು ಭಾವಿ ದೇವತೆಗಳೊಂದಿಗೆ, ಮತ್ತು ವರ್ತಮಾನ ಕಾಲದವರು ವರ್ತಮಾನಕಾಲದ ದೇವತೆಗಳೊಂದಿಗೆ, ವಾಸಮಾಡುತ್ತಾರೆ. ಈ ಮನ್ವಂತರದಲ್ಲಿ ಯಜ್ಞಕರ್ಮವನ್ನು ಅನುಷ್ಠಾನ ಮಾಡಿದವರು ಗ್ರಹರೂಪದಿಂದಿರುವರು.

೮೮. ವೈವಸ್ವತ ಮನ್ವಂತರದಲ್ಲಿ ಅದಿತಿ ಪುತ್ರನಾದ ವಿವಸ್ವಾನ್ ಎಂಬುವನು ಸೂರ್ಯನ ಅಧಿಕಾರದಲ್ಲಿರುವನು. ಧರ್ಮಪುತ್ರನಾದ ತ್ವಿಷಿ ಅಥವಾ ವಸು ಎಂಬುವನು ಚಂದ್ರನಾಗಿರುವನು.

೮೯. ಭೃಗುಮುನಿಯ ಪುತ್ರ ಅಥವಾ ರಾಕ್ಷಸರ ಪುರೋಹಿತನು ಶುಕ್ರನ ಸ್ಥಾನವನ್ನು ಆಕ್ರಮಿಸಿರುವನು. ಅಂಗಿರೋಮುನಿಯ ಪುತ್ರನಾದ ಬೃಹತ್ತೇಜನೆಂಬುವನು ದೇವಗುರುವಾದ ಬೃಹಸ್ಪತಿಯಾಗಿರುವನು.

ಬುಧೋ ಮನೋಹರಶ್ಚೈವ ತ್ವಿಷಿಪುತ್ರಸ್ತು ಸ ಸ್ಮೃತಃ ।
ಶನೈಶ್ಚರೋ ವಿರೂಪಸ್ತು ಸಂಜ್ಞಾಪುತ್ರೋ ವಿವಸ್ವತಃ ॥ ೯೦ ॥

ಅಗ್ನೇರ್ವಿಕೇಶ್ಯಾಂ ಜಜ್ಞೇ ತು ಯುವಾಽಸೌ ಲೋಹಿತಾಧಿಪಃ ।
ನಕ್ಷತ್ರಾಣ್ಯೃಕ್ಷನಾಮಾನೋ ದಾಕ್ಷಾಯಣ್ಯಸ್ತು ತಾಃ ಸ್ಮೃತಾಃ ॥ ೯೧ ॥

ಸ್ವರ್ಭಾನುಃ ಸಿಂಹಿಕಾಪುತ್ರೋ ಭೂತಸಂತಾಪನೋಽಸುರಃ ।
ಸೋಮರ್ಕ್ಷಗ್ರಹಸೂರ್ಯೇಷು ಕೀರ್ತಿತಾ ಹ್ಯಭಿಮಾನಿನಃ ॥ ೯೨ ॥

ಸ್ಥಾನಾನ್ಯೇತಾನಿ ಚೋಕ್ತಾನಿ ಸ್ಥಾನಿನಶ್ಚಾಥ ದೇವತಾಃ ।
ಶುಕ್ಲಮಗ್ನಿಮಯಂ ಸ್ಥಾನಂ ಸಹಸ್ರಾಂಶೋರ್ವಿವಸ್ವತಃ ॥ ೯೩ ॥

ಸಹಸ್ರಾಂಶೋಸ್ತ್ವಿಷೇಃ ಸ್ಥಾನಮಮ್ಮಯಂ ಶುಕ್ಲಮೇವ ಚ ।
ಆಪ್ಯಂ ಶ್ಯಾಮಂ ಮನೋಜ್ಞಸ್ಯ ಪಂಚರಶ್ಮೇರ್ಗೃಹಂ ಸ್ಮೃತಮ್ ॥೯೪॥

---

೯೦. ತ್ವಿಷಿ ಎಂಬವನ ಮನೋಹರವಾದ ಪುತ್ರನು ಬುಧ ಪದವಿಯಲ್ಲಿರುತ್ತಾನೆ. ಸೂರ್ಯನಿಗೆ ಸಂಜ್ಞಾ ಎಂಬ ಪತ್ನಿಯಲ್ಲಿ ಹುಟ್ಟಿದ ವಿರೂಪನಾದ ಪುತ್ರನು ಶನೈಶ್ಚರ ಗ್ರಹನಾಗಿರುವನು.

೯೧. ಅಗ್ನಿಯ ವಿಕೇಶಿ ಎಂಬ ಧರ್ಮಪತ್ನಿಯಲ್ಲಿ ಹುಟ್ಟಿದ ಯುವಕನಾದ ಪುತ್ರನು ಅಂಗಾರಕನು, ದಕ್ಷಬ್ರಹ್ಮನ ಪುತ್ರಿಯರು ಋಕ್ಷ ಎಂಬ ಹೆಸರಿನಿಂದ ನಕ್ಷತ್ರ ಸ್ಥಾನಗಳಲ್ಲಿ ರಾಜಿಸುತ್ತಿರುವರು.

೯೨. ಸಿಂಹಿಕೆಯ ಮಗನಾದ ಮತ್ತು ಭೂತಗಳನ್ನು ತಪಿಸುತ್ತಿರುವ ಶೀಲವುಳ್ಳ ಅಸುರನು ರಾಹು ಗ್ರಹರೂಪದಿಂದಿರುವನು. ಹೀಗೆ ಚಂದ್ರ, ನಕ್ಷತ್ರ, ಗ್ರಹ, ಮತ್ತು ಸೂರ್ಯಬಿಂಬಗಳಲ್ಲಿ ವಾಸಮಾಡುವ ಅಭಿಮಾನಿ ದೇವತೆಗಳನ್ನು ಉಪದೇಶಿಸಿರುವೆನು.

೯೩. ಈ ವಿಧವಾದ ಸ್ಥಾನಗಳು ಮತ್ತು ಅಲ್ಲಲ್ಲಿ ಅಭಿಮಾನದಿಂದ ವಾಸಮಾಡುವ ದೇವತೆಗಳು ಈ ರೀತಿಯಾಗಿ ಪ್ರಮಾಣ ವಚನಗಳಿಂದ ಹೇಳಲ್ಪಟ್ಟಿವೆ. ಸಹಸ್ರ ಕಿರಣಗಳಿಂದ ಕೂಡಿದ ಸೂರ್ಯನಿಗೆ ಶುಭ್ರವಾದ ಅಗ್ನಿಮಯವಾದ ಸ್ಥಾನವು.

೯೪. ಸಹಸ್ರ ಕಿರಣಗಳಿಂದ ಕೂಡಿದ ತ್ವಿಷಿ ಪುತ್ರನಾದ ಚಂದ್ರನ ಸ್ಥಾನವು ಶುಕ್ಲವೂ ಜಲಮಯವೂ ಆಗಿರುವುದು. ಪಂಚರಶ್ಮಿಗಳಿಂದ ಕೂಡಿದ ಮನೋಹರನಾದ ಬುಧನ ಸ್ಥಾನವು ಶ್ಯಾಮವೂ ಮತ್ತು ಜಲಮಯವೂ ಆಗಿದೆ.

ಶುಕ್ರಸ್ಯಾಪ್ಯಮ್ಮಯಂ ಶುಕ್ಲಂ ಪದ್ಮಂ ಷೋಡಶರಶ್ಮಿಷು ।
ನವರಶ್ಮೇಸ್ತು ಭೌಮಸ್ಯ ಲೋಹಿತಂ ಸ್ಥಾನಮಮ್ಮಯಮ್ ॥ ೯೫ ॥

ಹರಿದಾಪ್ಯಂ ಬೃಹತ್ ಸ್ಥಾನಂ ದ್ವಾದಶಾಂಶೈರ್ಬೃಹಸ್ಪತೇಃ ।
ಅಷ್ಟರಶ್ಮಿಗೃಹಂ ಪ್ರೋಕ್ತಂ ಕೃಷ್ಣಂ ಮಂದಸ್ಯ ಚಾಮ್ಮಯಮ್॥ ೯೬ ॥

ಸ್ವರ್ಭಾನೋಸ್ತಾಮಸಂ ಸ್ಥಾನಂ ಭೂತಸಂತಾಪನಾಲಯಮ್ ।
ವಿಜ್ಞೇಯಾಸ್ತಾರಕಾಃ ಸರ್ವಾ ಅಮ್ಮಯಾಸ್ತ್ವೇಕರಶ್ಮಯಃ ॥ ೯೭ ॥

ಆಶ್ರಯಾಃ ಪುಣ್ಯಕೀರ್ತೀನಾಂ ಸುಶುಕ್ಲಾಶ್ಚಾಪಿ ವರ್ಣತಃ ।
ಘನತೋಯಾತ್ಮಿಕಾ ಜ್ಞೇಯಾಃ ಕಲ್ಪಾದಾವೇವ ನಿರ್ಮಿತಾಃ ॥ ೯೮ ॥

ಆದಿತ್ಯರಶ್ಮಿಸಂಯೋಗಾತ್ ಸಂಪ್ರಕಾಶಾತ್ಮಿಕಾಃ ಸ್ಮೃತಾಃ ।
ನವಯೋಜನಸಾಹಸ್ರೋ ವಿಷ್ಕಂಭಃ ಸವಿತುಃ ಸ್ಮೃತಃ ॥ ೯೯ ॥

---

೯೫. ಷೋಡಶ ರಶ್ಮಿಗಳಿಂದ ಕೂಡಿದ ಶುಕ್ರನಿಗೆ ಶುಭ್ರವೂ ಜಲಮಯವೂ ಆದ ಪದ್ಮಾಕಾರದ ಸ್ಥಾನವು. ನವರಶ್ಮಿಗಳಿಂದ ಕೂಡಿದ ಭೂಮಿ ಪುತ್ರನಾದ ಅಂಗಾರಕನಿಗೆ ಲೋಹಿತ ವರ್ಣದ ಜಲಮಯಸ್ಥಾನವು.

೯೬. ಹನ್ನೆರಡು ಅಂಶಗಳಿಂದ ಕೂಡಿದ ಬೃಹಸ್ಪತಿ ಗ್ರಹದ ಸ್ಥಾನವು ಹಸುರು ವರ್ಣವುಳ್ಳದ್ದೂ ಜಲಮಯವೂ ಆದ ಬೃಹತ್‌ಸ್ಥಾನವು, ಶನೈಶ್ಚರನಿಗೆ ಕೃಷ್ಣವರ್ಣವೂ ಜಲಮಯವೂ ಆದ ಅಷ್ಟರಶ್ಮಿಗಳಿಂದ ಕೂಡಿದ ಸ್ಥಾನವು.

೯೭. ರಾಹುವಿಗೆ ಭೂತಸಂತಾಪಕ್ಕೆ ತವರುಮನೆಯಂತೆ ಇರುವ ತಮೋಮಯವಾದ ಸ್ಥಾನವು. ಸಕಲ ತಾರಕೆಗಳಿಗೆ ಒಂದು ರಶ್ಮಿಯಿಂದ ಕೂಡಿದ ಜಲಮಯವಾದ ಸ್ಥಾನಗಳು ಈ ರೀತಿಯಾಗಿ ಸ್ಥಾನಗಳ ವಿಭಾಗವನ್ನು ತಿಳಿಯಬೇಕು.

೯೮. ಪುಣ್ಯಕೀರ್ತಿಗಳಾದ ಪ್ರಜೆಗಳ ಈ ಆಶ್ರಯರೂಪವಾದ ಸ್ಥಾನಗಳು ಶುದ್ಧವಾದ ವರ್ಣವುಳ್ಳವುಗಳಾಗಿವೆ. ಮತ್ತು ಘನವಾದ ಜಲತತ್ತ್ವದಿಂದ ಪೂರ್ಣವಾಗಿ ಕಲ್ಪದ ಆದಿಭಾಗದಲ್ಲಿ ರಚಿತಗಳಾಗಿವೆ.

೯೯. ಇವುಗಳಿಗೆ ಆದಿತ್ಯನ ರಶ್ಮಿಸಂಯೋಗವಾಗಿ ಪ್ರಕಾಶಸ್ವರೂಪವನ್ನು ಹೊಂದಿಕೊಂಡಿವೆ. ಸೂರ್ಯನ ಬಿಂಬವು ಒಂಭತ್ತು ಸಹಸ್ರ ಯೋಜನ ವಿಸ್ತಾರದ ವಿಷ್ಕಂಭ ಪರಿಮಾಣವನ್ನು ಹೊಂದಿರುವುದು.

ತ್ರಿಗುಣಸ್ತಸ್ಯ ವಿಸ್ತಾರೋ ಮಂಡಲಸ್ಯ ಪ್ರಮಾಣತಃ ।
ದ್ವಿಗುಣಃ ಸೂರ್ಯವಿಸ್ತಾರಾದ್ವಿಸ್ತಾರಃ ಶಶಿನಃ ಸ್ಮೃತಃ ॥ ೧೦೦ ॥

ತುಲ್ಯಸ್ತಯೋಸ್ತು ಸ್ವರ್ಭಾನುರ್ಭೂತ್ವಾಧಸ್ತಾತ್ ಪ್ರಸರ್ಪತಿ ।
ಉದ್ಧೃತ್ಯ ಪೃಥಿವೀಛಾಯಾಂ ನಿರ್ಮಿತೋ ಮಂಡಲಾಕೃತಿಃ ॥ ೧೦೧ ॥

ಸ್ವರ್ಭಾನೋಸ್ತು ಬೃಹತ್ ಸ್ಥಾನಂ ತೃತೀಯಂ ಯತ್ ತಮೋ
ಮಯಮ್ ।
ಆದಿತ್ಯಾತ್ ತಚ್ಚ ನಿಷ್ಕ್ರಮ್ಯ ಸೋಮಂ ಗಚ್ಛತಿ ಪರ್ವಸು ॥ ೧೦೨ ॥

ಆದಿತ್ಯ ಮೇತಿ ಸೋಮಾಚ್ಚ ಪುನಃ ಸೌರೇಷು ಪರ್ವಸು ।
ಸ್ವರ್ಭಾಸಾ ನುದತೇ ಯಸ್ಮಾತ್ ತಸ್ಮಾತ್ ಸ್ವರ್ಭಾನುರುಚ್ಯತೇ॥ ೧೦೩ ॥

---

೧೦೦. ಸಂಪೂರ್ಣ ಮಂಡಲದ ವಿಸ್ತಾರವು ವಿಷ್ಕಂಭ ಪರಿಮಾಣಕ್ಕಿಂತ ತ್ರಿಗುಣವಾದ ಪರಿಮಾಣವುಳ್ಳದ್ದಾಗಿದೆ. ಸೂರ್ಯಮಂಡಲದ ವಿಸ್ತಾರಕ್ಕಿಂತ ಚಂದ್ರಬಿಂಬದ ವಿಸ್ತಾರವು ದ್ವಿಗುಣಿತವೆಂದು ಹೇಳಲ್ಪಟ್ಟಿದೆ.

೧೦೧. ರಾಹುವು ಈ ಸೂರ್ಯ-ಚಂದ್ರರಲ್ಲಿ ಒಂದೇ ವಿಧವಾಗಿ ಮಂಡಲಗಳ ಅಧೋಭಾಗದಲ್ಲಿ ಚಲಿಸುವನು. ರಾಹುವು ಪೃಥಿವಿಯ ಛಾಯೆಯನ್ನು ತೆಗೆದುಕೊಂಡು ಮಂಡಲಾಕಾರದಿಂದ ರಚಿತನಾಗಿರುವನು.

೧೦೨. ರಾಹುವಿನ ತಮೋಮಯವೂ ಮಹಾಪರಿಮಾಣವುಳ್ಳದ್ದೂ ಆದ ತೃತೀಯಸ್ಥಾನವು ಪರ್ವಕಾಲಗಳಲ್ಲಿ ಆದಿತ್ಯನಿಂದ ಹೊರಟು ಚಂದ್ರಬಿಂಬವನ್ನು ಸೇರುತ್ತದೆ.

೧೦೩. ಮತ್ತೆ ಸೂರ್ಯನ ಪರ್ವಕಾಲಗಳಲ್ಲಿ ಚಂದ್ರನಿಂದ ಹೊರಟು ಸೂರ್ಯನ ಮಂಡಲವನ್ನು ಸೇರುತ್ತದೆ. ರಾಹುವು ತಮೋಮಯನಾದ್ದರಿಂದ ತನ್ನ ಕಾಂತಿಯಿಂದ ತಾಸಿದ್ದ ಸ್ವರ್ಲೋಕದ ಭಾಗ ಪ್ರಕಾಶವನ್ನು ಮರೆಮಾಡಿ ಈ ಸ್ವಃ= ಸ್ವರ್ಗವನ್ನೇ, ಭಾ = ಕಾಂತಿಯಿಂದ, ನು = ಪ್ರೇರಿಪಿಸುವುದು ಎಂಬ ಅಭಿಪ್ರಾಯದಿಂದ " ಸ್ವರ್ಭಾನು " ಎಂಬ ಸಂಜ್ಞೆಯನ್ನು ಹೊಂದಿರುತ್ತಾನೆ.

ಚಂದ್ರಸ್ಯ ಷೋಡಶೋ ಭಾಗೋ ಭಾರ್ಗವಸ್ತು ವಿಧೀಯತೇ ।
ವಿಷ್ಕಂಭಾನ್ಮಂಡಲಾಚ್ಚೈವ ಯೋಜನಾಗ್ರಾತ್ಪ್ರಮಾಣತಃ ॥ ೧೦೪ ॥

ಭಾರ್ಗವಾತ್ ಪಾದಹೀನಸ್ತು ವಿಜ್ಞೇಯೋ ವೈ ಬೃಹಸ್ಪತಿಃ ।
ಬೃಹಸ್ಪತೇಃ ಪಾದಹೀನೌ ಭೌಮಸೌರಾವುಭೌ ಸ್ಮೃತೌ ॥ ೧೦೫ ॥

ವಿಸ್ತಾರಾನ್ಮಂಡಲಾಚ್ಚೈವ ಪಾದಹೀನಸ್ತಯೋರ್ಬುಧಃ ।
ತಾರಾನಕ್ಷತ್ರರೂಪಾಣಿ ವಪುಷ್ಮಂತಿ ಚ ಯಾನಿ ವೈ ॥ ೧೦೬ ॥

ಬುಧೇನ ಸಮರೂಪಾಣಿ ವಿಸ್ತಾರಾನ್ಮಂಡಲಾಚ್ಚ ವೈ ।
ಪ್ರಾಯಶಶ್ಚಂದ್ರಯೋಗೀನಿ ವಿದ್ಯಾದೃಕ್ಷಾಣಿ ತತ್ತ್ವವಿತ್ ॥ ೧೦೭ ॥

ತಾರಾನಕ್ಷತ್ರರೂಪಾಣಿ ಹೀನಾನಿತು ಪರಸ್ಪರಾತ್ ।
ಶತಾನಿ ಪಂಚ ಚತ್ವಾರಿ ತ್ರೀಣಿ ದ್ವೇ ಚೈವ ಯೋಜನೇ ॥ ೧೦೮ ॥

---

೧೦೪. ಚಂದ್ರಬಿಂಬದ ವಿಷ್ಕಂಭ ಮತ್ತು ಸಂಪೂರ್ಣಪರಿಮಾಣದ ಯೋಜನ ಪ್ರಮಾಣದ ಸಂಖ್ಯೆಯಲ್ಲಿ ಶುಕ್ರ ಬಿಂಬವು ಹದಿನಾರನೆಯ ಒಂದು ಭಾಗವೆಂದು ಪ್ರಮಾಣವಚನಗಳಿಂದ ಹೇಳಲ್ಪಟ್ಟಿದೆ.

೧೦೫. ಬೃಹಸ್ಪತಿಯು ಶುಕ್ರನ ಪರಿಮಾಣದಲ್ಲಿ ಪಾದ (ಕಾಲು) ಅಂಶದಿಂದ ನ್ಯೂನವಾಗಿರುವನು. ಅಂಗಾರಕ ಮತ್ತು ಶನೈಶ್ಚರರಿಗೆ ಬೃಹಸ್ಪತಿ ಮಂಡಲದ ಪರಿಮಾಣದಲ್ಲಿ ಪಾದಾಂಶನ್ಯೂನವಾದ ಪರಿಮಾಣವು ಇರುವುದು.

೧೦೬-೧೦೭. ಬುಧನು ವಿಸ್ತಾರ ಮತ್ತು ಮಂಡಲಾಕೃತಿಯಿಂದ ಅಂಗಾರಕ, ಶನೈಶ್ಚರರಿಬ್ಬರಿಗಿಂತ ಪಾದಾಂಶ ಹೀನನಾಗಿರುವನು, ಸುಕೃತಿಗಳ ವಾಸಸ್ಥಾನವಾದ ಮಂಡಲಾಕಾರ ವಿಗ್ರಹರೂಪವುಳ್ಳ ತಾರಾ-ನಕ್ಷತ್ರಗಳು ಬುಧನ ಪರಿಮಾಣಕ್ಕೆ ಸಮಾನವಾದ ವಿಷ್ಕಂಭ—ಮತ್ತು ಮಂಡಲವಿಸ್ತಾರ ಪರಿಮಾಣಗಳನ್ನು ಹೊಂದಿವೆ. ಜ್ಯೋತಿಸ್ತತ್ತ್ವವನ್ನು ಅರಿತವನು ಎಲ್ಲ ನಕ್ಷತ್ರಗಳನ್ನು ಪ್ರಾಯಶಃ ಚಂದ್ರನ ಯೋಗವುಳ್ಳವುಗಳನ್ನಾಗಿ ತಿಳಿದಿರುವನು.

೧೦೮. ತಾರಾ ಮತ್ತು ನಕ್ಷತ್ರಗಳ ಗಣದಲ್ಲಿ ಪ್ರತಿಯೊಂದು ವ್ಯಕ್ತಿಯೂ ಪರಸ್ಪರ ತಾರತಮ್ಯವುಳ್ಳದ್ದಾಗಿ ಐದು, ನಾಲ್ಕು, ಮೂರು, ಮತ್ತು ಎರಡುನೂರು ಯೋಜನಗಳಷ್ಟು ವಿವಿಧ ಪರಿಮಾಣವುಳ್ಳದ್ದಾಗಿದೆ.

ಪೂರ್ವಾಪರನಿಕೃಷ್ಟಾನಿ ತಾರಕಾಮಂಡಲಾನಿ ಚ ।
ಯೋಜನಾದ್ಯರ್ಧಮಾತ್ರಾಣಿ ತೇಭ್ಯೋ ಹ್ರಸ್ವಂ ನ ವಿದ್ಯತೇ ॥ ೧೦೯ ॥

ಉಪರಿಷ್ಟಾತ್ತ್ರಯಸ್ತೇಷಾಂ ಗ್ರಹಾ ಯೇ ದೂರಸರ್ಪಿಣಃ ।
ಸೌರೋಽಂಗಿರಾಶ್ಚ ವಕ್ರಶ್ಚ ಜ್ಞೇಯಾ ಮಂದವಿಚಾರಿಣಃ ॥ ೧೧೦ ॥

ತೇಭ್ಯೋಽಧಸ್ತಾತ್ತು ಚತ್ವಾರಃ ಪುನರೇವ ಮಹಾಗ್ರಹಾಃ ।
ಸೂರ್ಯಸೋಮೌ ಬುಧಶ್ಚೈವ ಭಾರ್ಗವಶ್ಚೈವ ಶೀಘ್ರಗಾಃ ॥ ೧೧೧ ॥

ತಾವತ್ಯಸ್ತಾರಕಾಕೋಟ್ಯೋ ಯಾವದೃಕ್ಷಾಣಿ ಸರ್ವಶಃ ।
ವಿಧಿನಾ ನಿಯಮಾಚ್ಚೈಷಾಮೃಕ್ಷಚರ್ಯಾ ವ್ಯವಸ್ಥಿತಾ ॥ ೧೧೨ ॥

ಗತಿಸ್ತಾಸು ಚ ಸೂರ್ಯಸ್ಯ ನೀಚೋಚ್ಚೇ ತ್ವಯನಕ್ರಮಾತ್ ।
ಉತ್ತರಾಯಣಮಾರ್ಗಸ್ಥೋ ಯದಾ ಪರ್ವಸು ಚಂದ್ರಮಾಃ ॥ ೧೧೩ ॥

---

೧೦೯. ಒಂದಕ್ಕಿಂತ ಒಂದು ನಿಕೃಷ್ಟ ಪರಿಮಾಣವುಳ್ಳದ್ದಾಗಿ ತಾರಕೆಗಳ ಮಂಡಲಗಳು ಒಂದು ಯೋಜನ ಅಥವಾ ಅರ್ಧಮಾತ್ರ ಯೋಜನ ಪರಿಮಾಣವುಳ್ಳದ್ದಾಗಿದೆ. ಅದಕ್ಕಿಂತಲೂ ನ್ಯೂನವಾದ ಪರಿಮಾಣವುಳ್ಳ ನಕ್ಷತ್ರವಿಲ್ಲ.

೧೧೦. ಈ ಎಲ್ಲ ನಕ್ಷತ್ರಗಳ ಮೇಲುಭಾಗದಲ್ಲಿ ಬಲುದೂರದಲ್ಲಿ ಸಂಚರಿಸುವ ಶನಿ, ಗುರು, ಮತ್ತು ಅಂಗಾರಕರೆಂಬ ಗ್ರಹಗಳು ಬಹಳ ವಿಳಂಬವಾದ ಗಮನವುಳ್ಳವರಾಗಿರುವರು.

೧೧೧. ಅವುಗಳ ಕೆಳಭಾಗದಲ್ಲಿರುವ ಮಹಾಗ್ರಹ ರೂಪರಾದ ಸೂರ್ಯ, ಚಂದ್ರ, ಬುಧ ಮತ್ತು ಶುಕ್ರರು ಬಹುವೇಗವಾದ ಗಮನವುಳ್ಳವರಾಗಿರುವರು.

೧೧೨. ಸರ್ವಭಾಗಗಳಲ್ಲಿಯೂ ಎಷ್ಟು ಸಂಖ್ಯೆಯ ನಕ್ಷತ್ರಗಳು ಕಾಣುತ್ತವೆಯೋ ಅಷ್ಟು ಕೋಟಿ ತಾರಕೆಗಳು ಇರುತ್ತವೆ. ಬ್ರಹ್ಮನಿಂದ ನಿಯಮವಾಗಿರುವಂತೆ ಈ ನಕ್ಷತ್ರ ಸಂಚಾರವು ವ್ಯವಸ್ಥೆ ಮಾಡಲ್ಪಟ್ಟಿದೆ.

೧೧೩. ಆ ಗತಿಗಳಲ್ಲಿ ಸೂರ್ಯನಿಗೆ ದಕ್ಷಿಣಾಯನ, ಉತ್ತರಾಯಣಗಳ ವಿಭಾಗವನ್ನು ಅವಲಂಬಿಸಿ ನೀಚ ಮತ್ತು ಉಚ್ಚವಾದ ಗತಿಯು ಇರುವುದು. ಚಂದ್ರನು ತನ್ನ ಸಂಚಾರಕ್ರಮದಿಂದ ಕೆಲವು ಪರ್ವಗಳಲ್ಲಿ ಉತ್ತರಾಯಣ ಮಾರ್ಗದಲ್ಲಿರುವನು.

**ಉಚ್ಚತ್ವಾದ್ದೃಶ್ಯತೇ ಶೀಘ್ರಂ ನೀತಿವ್ಯಕ್ತೈರ್ಗಭಸ್ತಿಭಿಃ ।**
**ತದಾ ದಕ್ಷಿಣಮಾರ್ಗಸ್ಥೋ ನೀಚಾಂ ವೀಥೀಮುಪಾಶ್ರಿತಃ ॥ ೧೧೪ ॥**

**ಭೂಮಿಲೇಖಾವೃತಃ ಸೂರ್ಯಃ ಪೂರ್ಣಾಮಾವಾಸ್ಯಯೋಃ ಸದಾ ।**
**ನ ದೃಶ್ಯತೇ ಯಥಾಕಾಲಂ ಶೀಘ್ರಮಸ್ತಮುಪೈತಿ ಚ ॥ ೧೧೫ ॥**

**ತಸ್ಮಾದುತ್ತರಮಾರ್ಗಸ್ಥೋ ಹ್ಯಮಾವಾಸ್ಯಾಂ ನಿಶಾಕರಃ ।**
**ದೃಶ್ಯತೇ ದಕ್ಷಿಣೇ ಮಾರ್ಗೇ ನಿಯಮಾದ್ದೃಶ್ಯತೇ ನ ಚ ॥ ೧೧೬ ॥**

**ಜ್ಯೋತಿಷಾಂ ಗತಿಯೋಗೇನ ಸೂರ್ಯಾಚಂದ್ರಮಸಾವತಃ ।**
**ಸಮಾನಕಾಲಾಸ್ತಮಯೌ ವಿಷುವತ್ಸು ಸಮೋದಯೌ ॥ ೧೧೭ ॥**

**ಉತ್ತರಾಸು ಚ ವಿಥೀಷು ವ್ಯಂತರಾಸ್ತಮನೋದಯೌ ।**
**ಪೂರ್ಣಾಮಾವಾಸ್ಯಯೋರ್ಜ್ಞೇಯೌ ಜ್ಯೋತಿಶ್ಚಕ್ರಾನುವರ್ತಿನೌ ॥ ೧೧೮ ॥**

---

೧೧೪. ಆಗ ನಿಯಮದಿಂದ ವ್ಯಕ್ತವಾದ ಕಿರಣಗಳಿಂದ ಉಚ್ಚಭಾವದಿಂದಿರುವನು. ಆ ಸಮಯದಲ್ಲಿ ಸೂರ್ಯನು ದಕ್ಷಿಣಮಾರ್ಗದಲ್ಲಿ ನೀಚವಾದ ವೀಥಿಯನ್ನು ಅವಲಂಬಿಸಿರುವನು.

೧೧೫. ಆಗ ಪೂರ್ಣಿಮಾ ಅಮಾವಾಸ್ಯಾ ತಿಥಿಗಳಲ್ಲಿ ಸೂರ್ಯನು ಭೂಮಿಯ ವೃತ್ತರೇಖೆಯಿಂದ ಮುಚ್ಚಿಹೋದವನಾಗಿ ತನ್ನ ಉದಯಕಾಲಕ್ಕೆ ಸರಿಯಾಗಿ ಕಾಣಿಸಿಕೊಳ್ಳುವುದಿಲ್ಲ. ಮತ್ತು ಶೀಘ್ರವಾಗಿ ಅಸ್ತವನ್ನು ಹೊಂದುವನು.

೧೧೬. ಅನಂತರದಲ್ಲಿ ಉತ್ತರಮಾರ್ಗದಲ್ಲಿ ಸೂರ್ಯನು ಬಂದಾಗ ಅಮಾವಾಸ್ಯಾ ಕಾಲದಲ್ಲಿ ಚಂದ್ರನು ದಕ್ಷಿಣಮಾರ್ಗದಲ್ಲಿ ಕಾಣಿಸುವನು. ಆದರೆ ತನ್ನ ಸಂಚಾರಕಾಲದಲ್ಲಿ ನಿಯಮವಾಗಿ ಕಾಣಿಸುವುದಿಲ್ಲ.

೧೧೭. ಈ ರೀತಿಯಾಗಿ ಜ್ಯೋತಿರ್ಮಂಡಲದ ಗತಿಯಿಂದ ಕೂಡಿದ ಸೂರ್ಯಚಂದ್ರರು ವಿಷುವತ್ ಎಂಬ ಪುಣ್ಯಕಾಲಗಳಲ್ಲಿ ಒಂದೇ ಪರಿಮಾಣದಿಂದ ಕೂಡಿದ ಉದಯ, ಅಸ್ತಮಯಗಳುಳ್ಳವರಾಗಿದ್ದಾರೆ.

೧೧೮. ಉತ್ತರ ರೇಖೆಗಳಲ್ಲಿ ಸಂಚಾರಮಾಡುವ ಸಮಯದಲ್ಲಿ ಪೂರ್ಣಿಮಾ, ಅಮಾವಾಸ್ಯಾ ತಿಥಿಗಳಲ್ಲಿ ಜ್ಯೋತಿರ್ಮಂಡಲವನ್ನು ಅನುಸರಿಸಿ ವಿಲಕ್ಷಣವಾದ ಉದಯ-ಅಸ್ತಮಯಗಳುಳ್ಳವರಾಗುತ್ತಾರೆ.

ದಕ್ಷಿಣಾಯನಮಾರ್ಗಸ್ಥೋ ಯದಾ ಚರತಿ ರಶ್ಮಿಮಾನ್ ।
ತದಾ ಸರ್ವಗ್ರಹಾಣಾಂ ಚ ಸೂರ್ಯೋಽಧಸ್ತಾತ್ ಪ್ರಸರ್ಪತಿ ॥ ೧೧೯ ॥

ವಿಸ್ತೀರ್ಣಂ ಮಂಡಲಂ ಕೃತ್ವಾ ತಸ್ಯೋರ್ಧ್ವಂ ಚರತೇ ಶಶೀ ।
ನಕ್ಷತ್ರಮಂಡಲಂ ಕೃತ್ಸ್ನಂ ಸೋಮಾದೂರ್ಧ್ವಂ ಪ್ರಸರ್ಪತಿ ॥ ೧೨೦ ॥

ನಕ್ಷತ್ರೇಭ್ಯೋ ಬುಧಶ್ಚೋರ್ಧ್ವಂ ಬುಧಾದೂರ್ಧ್ವಂ ತು ಭಾರ್ಗವಃ ।
ವಕ್ರಸ್ತು ಭಾರ್ಗವಾದೂರ್ಧ್ವಂ ವಕ್ರಾದೂರ್ಧ್ವಂ ಬೃಹಸ್ಪತಿಃ ॥ ೧೨೧ ॥

ತಸ್ಮಾಚ್ಛನೈಶ್ಚರಶ್ಚೋರ್ಧ್ವಂ ತಸ್ಮಾತ್ ಸಪ್ತರ್ಷಿಮಂಡಲಮ್ ।
ಋಷೀಣಾಂ ಚಾಪಿ ಸಪ್ತಾನಾಂ ಧ್ರುವ ಊರ್ಧ್ವಂ ವ್ಯವಸ್ಥಿತಃ ॥೧೨೨॥

ದ್ವಿಗುಣೇಷು ಸಹಸ್ರೇಷು ಯೋಜನಾನಾಂ ಶತೇಷು ಚ ।
ತಾರಾಗ್ರಹಾಂತರಾಣಿ ಸ್ಯುರುಪರಿಷ್ಟಾದ್ಯಥಾಕ್ರಮಮ್ ॥ ೧೨೩ ॥

---

೧೧೯. ಸೂರ್ಯನು ದಕ್ಷಿಣಾಯನ ಮಾರ್ಗವನ್ನು ಅವಲಂಬಿಸಿ ಯಾವಾಗ ಸಂಚರಿಸುವನೋ, ಆಗ ಎಲ್ಲ ಗ್ರಹಗಳ ಅಧೋಭಾಗದಲ್ಲಿ ಸಂಚರಿಸುತ್ತಿರುವನು.

೧೨೦. ಚಂದ್ರನು ತನ್ನ ಮಂಡಲವನ್ನು ಅತಿಯಾಗಿ ವಿಸ್ತರಿಸಿಕೊಂಡು ಆ ಸೂರ್ಯಬಿಂಬದ ಮೇಲುಭಾಗದಲ್ಲಿ ಸಂಚರಿಸುವನು, ಸಕಲನಕ್ಷತ್ರಮಂಡಲವು ಚಂದ್ರಬಿಂಬಕ್ಕಿಂತಲೂ ಊರ್ಧ್ವಭಾಗದಲ್ಲಿ ಸಂಚರಿಸುವುದು.

೧೨೧. ನಕ್ಷತ್ರಗಳಿಗಿಂತಲೂ ಊರ್ಧ್ವಭಾಗದಲ್ಲಿ ಬುಧಗ್ರಹವು, ಬುಧಗ್ರಹಕ್ಕಿಂತ ಊರ್ಧ್ವಭಾಗದಲ್ಲಿ ಶುಕ್ರಗ್ರಹವು, ಶುಕ್ರಗ್ರಹಕ್ಕಿಂತ ಊರ್ಧ್ವಭಾಗದಲ್ಲಿ ಅಂಗಾರಕ ಗ್ರಹವು, ಅಂಗಾರಕ ಗ್ರಹಕ್ಕಿಂತ ಊರ್ಧ್ವಭಾಗದಲ್ಲಿ ಬೃಹಸ್ಪತಿಗ್ರಹ, ಈ ರೀತಿಯಲ್ಲಿ ಒಂದಕ್ಕಿಂತ ಮತ್ತೊಂದು ಊರ್ಧ್ವಭಾಗಗಳಲ್ಲಿ ಸಂಚರಿಸುವುವು.

೧೨೨. ಬೃಹಸ್ಪತಿ ಗ್ರಹಕ್ಕಿಂತ ಮೇಲುಭಾಗದಲ್ಲಿ ಶನೈಶ್ಚರನೂ, ಶನೈಶ್ಚರನಿಗಿಂತ ಮೇಲುಗಡೆಯಲ್ಲಿ ಸಪ್ತರ್ಷಿಮಂಡಲವೂ, ಅಂತಹಸಪ್ತರ್ಷಿಮಂಡಲದ ಮೇಲೆ ಧ್ರುವ ಮಂಡಲವೂ ಭ್ರಮಿಸುವುದು.

೧೨೩. ಹೀಗೆ ಒಂದಕ್ಕಿಂತ ಒಂದು ಮೇಲುಭಾಗದಲ್ಲಿರುವ ನಕ್ಷತ್ರಾದಿಮಂಡಲದ ಪರಸ್ಪರ ಅಂತರವು ಉತ್ತರೋತ್ತರ ದ್ವಿಗುಣಿತವಾದ ಅನೇಕ ಶತ, ಸಹಸ್ರಯೋಜನ ಪರಿಮಾಣದಿಂದ ಕೂಡಿದೆ.

ಗ್ರಹಾಶ್ಚ ಚಂದ್ರಸೂರ್ಯೌ ಚ ದಿವಿ ದಿವ್ಯೇನ ತೇಜಸಾ ।
ನಿತ್ಯಮೃಕ್ಷೇಷು ಯುಜ್ಯಂತೇ ಗಚ್ಛಂತೋ ನಿಯತಾಃ ಕ್ರಮಾತ್॥೧೨೪॥

ಗ್ರಹನಕ್ಷತ್ರಸೂರ್ಯಾಸ್ತು ನೀಚೋಚ್ಚಮೃಜವಸ್ತಥಾ ।
ಸಮಾಗಮೇ ಚ ಭೇದೇ ಪಶ್ಯಂತಿ ಯುಗಪತ್ ಪ್ರಜಾಃ ॥ ೧೨೫ ॥

ಪರಸ್ಪರಸ್ಥಿತಾ ಹ್ಯೇತೇ ಯುಜ್ಯಂತೇ ಚ ಪರಸ್ಪರಮ್ ।
ಅಸಂಕರೇಣ ವಿಜ್ಞೇಯಸ್ತೇಷಾಂ ಯೋಗಸ್ತು ವೈ ಬುಧಃ ॥ ೧೨೬ ॥

ಇತ್ಯೇವಂ ಸನ್ನಿವೇಶೋ ವೈ ಪೃಥಿವ್ಯಾ ಜ್ಯೋತಿಷಸ್ಯ ಚ ।
ದ್ವೀಪಾನಾಮುದಧೀನಾಂ ಚ ಪರ್ವತಾನಾಂ ತಥೈವ ಚ ॥ ೧೨೭ ॥

ವರ್ಷಾಣಾಂ ಚ ನದೀನಾಂ ಚ ಯೇ ಚ ತೇಷು ವಸಂತಿ ವೈ ।
ಏತೇಷ್ವೇವ ಗ್ರಹಾಃ ಸರ್ವೇ ನಕ್ಷತ್ರೇಷು ಸಮುತ್ಥಿತಾಃ ॥ ೧೨೮ ॥

---

೧೨೪. ಚಂದ್ರ ಸೂರ್ಯರು ಮತ್ತು ಇತರ ಗ್ರಹಗಳು ನಿಯತವಾದ ಕ್ರಮದಿಂದ ಆಕಾಶದಲ್ಲಿ ಸಂಚರಿಸುತ್ತ ತಮ್ಮ ದಿವ್ಯವಾದ ತೇಜಸ್ಸಿನಿಂದ ನಕ್ಷತ್ರಗಳ ಬಿಂಬಗಳನ್ನು ಸೇರುತ್ತಾರೆ.

೧೨೫. ಸೂರ್ಯ-ಚಂದ್ರ ಗ್ರಹಗಳು ನೀಚಭಾವ ಉಚ್ಚಭಾವ ಮತ್ತು ಋಜುಭಾವಗಳಿಂದ ಕೂಡಿ ಒಂದರೊಡನೆ ಮತ್ತೊಂದು ಗ್ರಹವು ಸೇರುವ ಸಮಾಗಮ ಕಾಲದಲ್ಲಿಯೂ ಮತ್ತು ಭೇದಕಾಲಗಳಲ್ಲಿಯೂ ಪ್ರಜೆಗಳನ್ನು ನಿರೀಕ್ಷಿಸುತ್ತಿರುವರು.

೧೨೬. ಈ ಗ್ರಹಗಳಲ್ಲಿ ಒಂದೊಂದು ಗ್ರಹವು ಪ್ರತ್ಯೇಕವಾಗಿರುವುದುಂಟು, ಅಥವಾ ಒಂದರೊಡನೆ ಮತ್ತೊಂದು ಸೇರಿರುವುದೂ ಉಂಟು. ಹಾಗೆ ಪರಸ್ಪರ ಯೋಗದಲ್ಲಿ ಕೂಡ ಎರಡೂ ಫಲ-ಅಫಲಗಳ ಸಾಂಕರ್ಯವನ್ನು ಹೊಂದುವುದಿಲ್ಲವೆಂದು ತಿಳಿಯಬೇಕು.

೧೨೭. ಈ ರೀತಿಯಾಗಿ ಪೃಥಿವೀ, ಜ್ಯೋತಿರ್ಮಂಡಲ, ದ್ವೀಪ, ಸಮುದ್ರ ಮತ್ತು ಪರ್ವತಗಳ ಸನ್ನಿವೇಶವು ಬಹು ವಿಚಿತ್ರವಾದುದು.

೧೨೮. ಮತ್ತು ಅನೇಕ ಖಂಡಗಳು, ನದಿಗಳು ಮತ್ತು ಆಯಾಯ ಸನ್ನಿವೇಶಗಳಲ್ಲಿ ವಾಸಮಾಡುವ ಪ್ರತಿಯೊಂದು ವ್ಯಕ್ತಿಯು ನಕ್ಷತ್ರಗಳಿಗೆ ಅಧೀನವಾಗಿ ವಿವಿಧ ಫಲಾಫಲಗಳನ್ನು ಹೊಂದುವುವು. ಸಕಲಗ್ರಹಗಳು ಈ ನಕ್ಷತ್ರಗಳಿಂದಲೇ ಹುಟ್ಟಿರುವುವು.

ವಿವಸ್ವಾನದಿತೇಃ ಪುತ್ರಃ ಸೂರ್ಯೋ ವೈ ಚಾಕ್ಷುಷೇಽಂತರೇ ।
ವಿಶಾಖಾಸು ಸಮುತ್ಪನ್ನೋ ಗ್ರಹಾಣಾಂ ಪ್ರಥಮೋ ಗ್ರಹಃ ॥ ೧೨೯ ॥

ತ್ವಿಷಿಮಾನ್ ಧರ್ಮಪುತ್ರಸ್ತು ಸೋಮೋ ದೇವೋ ವಸೋಃ ಸುತಃ ।
ಶೀತರಶ್ಮಿಃ ಸಮುತ್ಪನ್ನಃ ಕೃತ್ತಿಕಾಸು ನಿಶಾಕರಃ ॥ ೧೩೦ ॥

ಷೋಡಶಾರ್ಚಿರ್ಭೃಗೋಃ ಪುತ್ರಃ ಶುಕ್ರಃ ಸೂರ್ಯಾದನಂತರಮ್ ।
ತಾರಾಗ್ರಹಾಣಾಂ ಪ್ರವರಸ್ತಿಷ್ಯಋಕ್ಷೇ ಸಮುತ್ಥಿತಃ ॥ ೧೩೧ ॥

ಗ್ರಹಶ್ಚಾಂಗಿರಸಃ ಪುತ್ರೋ ದ್ವಾದಶಾರ್ಚಿರ್ಬೃಹಸ್ಪತಿಃ ।
ಫಾಲ್ಗುನೀಷು ಸಮುತ್ಪನ್ನಃ ಪೂರ್ವಾಸು ಚ ಜಗದ್ಗುರುಃ ॥ ೧೩೨ ॥

ನವಾರ್ಚಿರ್ಲೋಹಿತಾಂಗಶ್ಚ ಪ್ರಜಾಪತಿಸುತೋ ಗ್ರಹಃ ।
ಆಷಾಢಾಸ್ವಿಹ ಪೂರ್ವಾಸು ಸಮುತ್ಪನ್ನ ಇತಿ ಶ್ರುತಿಃ ॥ ೧೩೩ ॥

---

೧೨೯. ಚಾಕ್ಷುಷ ಮನ್ವಂತರದಲ್ಲಿ ಅದಿತಿಯ ಪುತ್ರನಾದ ವಿವಸ್ವಾನ್ ಎಂಬುವನು ಸೂರ್ಯನ ಅಧಿಕಾರದಲ್ಲಿರುವನು. ಈ ಸೂರ್ಯನು ವಿಶಾಖಾ ನಕ್ಷತ್ರದಲ್ಲಿ ಹುಟ್ಟಿದವನಾಗಿ ಸಕಲಗ್ರಹಗಳಿಗೆ ಆದಿಗ್ರಹ ರೂಪನಾಗಿರುವನು.

೧೩೦. ಧರ್ಮ ಅಥವ ವಸುವಿನ ಪುತ್ರನಾದ ತ್ವಿಷಿಮಾನ್ ಎಂಬುವನು ಸೋಮದೇವನ ಅಧಿಕಾರವನ್ನು ಹೊಂದಿರುವನು. ಈ ಶೀತಲವಾದ ಕಿರಣಗಳಿಂದ ಕೂಡಿದ ಚಂದ್ರನು ಕೃತ್ತಿಕಾನಕ್ಷತ್ರಗಳಲ್ಲಿ ಹುಟ್ಟಿದವನು.

೧೩೧. ಷೋಡಶಕಿರಣಗಳಿಂದ ಕೂಡಿದ ಭೃಗುಮುನಿಯ ಪುತ್ರನು ಶುಕ್ರಗ್ರಹವು. ಶುಕ್ರನು ಸೂರ್ಯನನ್ನು ವಿನಹ ಮಿಕ್ಕ ಎಲ್ಲ ತಾರಾಗ್ರಹಳಿಗೆ ಶ್ರೇಷ್ಠನೂ ಪುಷ್ಯನಕ್ಷತ್ರದಲ್ಲಿ ಜನಿಸಿದವನೂ ಆಗಿರುವನು.

೧೩೨. ದ್ವಾದಶಕಿರಣಗಳಿಂದ ಕೂಡಿದ ಅಂಗಿರೋಮುನಿಯ ಪುತ್ರನು ಬೃಹಸ್ಪತಿಸ್ಥಾನದಲ್ಲಿರುವನು, ಜಗತ್ತಿಗೆ ಗುರುವಾದ ಬೃಹಸ್ಪತಿಯು ಪೂರ್ವಫಲ್ಗುನೀ ಅಥವಾ ಹುಬ್ಬನಕ್ಷತ್ರದಲ್ಲಿ ಜನಿಸಿರುವನು.

೧೩೩. ಒಂಭತ್ತು ಕಿರಣಗಳಿಂದ ಪ್ರಜಾಪತಿಯ ಪುತ್ರನು ಅಂಗಾರಕ ಗ್ರಹರೂಪನಾಗಿರುವನು. ಈ ಗ್ರಹವು ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿರುವುದು.

ರೇವತೀಸ್ವೇವ ಸಪ್ತಾರ್ಚಿಸ್ತಥಾ ಸೌರಿಃ ಶನೈಶ್ಚರಃ ।
ಸೌಮ್ಯೋ ಬುಧೋ ಧನಿಷ್ಠಾಸು ಪಂಚಾರ್ಚಿರುದಿತೋ ಗ್ರಹಃ ॥ ೧೩೪ ॥

ತಮೋಮಯೋ ಮೃತ್ಯುಸುತಃ ಪ್ರಜಾಕ್ಷಯಕರಃ ಶಿಖೀ ।
ಆಶ್ಲೇಷಾಸು ಸಮುತ್ಪನ್ನಃ ಸರ್ವಹಾರೀ ಮಹಾಗ್ರಹಃ ॥ ೧೩೫ ॥

ತಥಾ ಸ್ವನಾಮಧೇಯೇಷು ದಾಕ್ಷಾಯಣ್ಯಃ ಸಮುಚ್ಛ್ರಿತಾಃ ।
ತಮೋವೀರ್ಯಮಯೋ ರಾಹುಃ ಪ್ರಕೃತ್ಯಾ ಕೃಷ್ಣಮಂಡಲಃ ॥೧೩೬॥

ಭರಣೀಷು ಸಮುತ್ಪನ್ನೋ ಗ್ರಹಶ್ಚಂದ್ರಾರ್ಕಮರ್ದನಃ ।
ಏತೇ ತಾರಾ ಗ್ರಹಾಶ್ಚಾಪಿ ಬೋದ್ಧವ್ಯಾ ಭಾರ್ಗವಾದಯಃ ॥ ೧೩೭ ॥

ಜನ್ಮನಕ್ಷತ್ರಪೀಡಾಸು ಯಾಂತಿ ವೈಗುಣ್ಯತಾಂ ಯತಃ ।
ಸ್ಪೃಶ್ಯಂತೇ ತೇನ ದೋಷೇಣ ತತಸ್ತದ್ಗ್ರಹಭಕ್ತಿತಃ ॥ ೧೩೮ ॥

---

೧೩೪. ಸೂರ್ಯಪುತ್ರನು ರೇವತೀನಕ್ಷತ್ರದಲ್ಲಿ ಜನ್ಮವನ್ನು ಹೊಂದಿ ಶನೈಶ್ಚರ ಗ್ರಹರೂಪನಾಗಿರುವನು. ಧನಿಷ್ಠಾ ನಕ್ಷತ್ರದಲ್ಲಿ ಹುಟ್ಟಿದ ಸೋಮಪುತ್ರನು ಪಂಚ ಕಿರಣಗಳಿಂದ ಕೂಡಿ ಬುಧಗ್ರಹಪದವನ್ನು ಹೊಂದಿರುವನು.

೧೩೫. ಮೃತ್ಯುಪುತ್ರನೂ, ಪ್ರಜೆಗಳ ನಾಶವನ್ನುಂಟುಮಾಡುವ ಶೀಲವುಳ್ಳವನೂ ಆದ ಶಿಖಿಯು ಕೇತುಗ್ರಹ ಸ್ಥಾನದಲ್ಲಿರುವನು. ಈ ಕೇತುಗ್ರಹವು ಆಶ್ಲೇಷಾನಕ್ಷತ್ರದಲ್ಲಿ ಹುಟ್ಟಿರುವುದೂ ಸರ್ವನಾಶಕವಾದ ಅನಿಷ್ಟಶೀಲವುಳ್ಳದ್ದೂ ಆಗಿರುವುದು.

೧೩೬. ಹಾಗೆ ದಕ್ಷಬ್ರಹ್ಮನ ಪುತ್ರಿಯರು ತಮ್ಮ ತಮ್ಮ ಹೆಸರಿನ ಅಶ್ವಿನೀ ಮುಂತಾದ ನಕ್ಷತ್ರಸ್ಥಾನದಲ್ಲಿ ಉತ್ಕೃಷ್ಟಪದವನ್ನು ಹೊಂದಿರುವರು. ತಮೋವೀರ್ಯದಿಂದ ಕೂಡಿರುವ ರಾಹುವು ನೈಸರ್ಗಿಕವಾಗಿ ಕೃಷ್ಣವರ್ಣದ ಮಂಡಲವುಳ್ಳವನಾಗಿರುವನು.

೧೩೭. ಈ ರಾಹುಗ್ರಹವು ಚಂದ್ರಸೂರ್ಯರನ್ನು ಗ್ರಹಣಕಾಲಗಳಲ್ಲಿ ಪೀಡಿಸುವ ಶೀಲವುಳ್ಳವನು. ಮತ್ತು ಭರಣೀನಕ್ಷತ್ರದಲ್ಲಿ ಜನಿಸಿರುವನು. ಈ ರೀತಿಯಾಗಿ ತಾರಕೆಗಳು ಮತ್ತು ಶುಕ್ರ ಮುಂತಾದ ಗ್ರಹವಿಶೇಷಗಳು ಹೇಳಲ್ಪಟ್ಟಿವೆ.

೧೩೮. ಈ ಗ್ರಹಗಳು ಜನ್ಮನಕ್ಷತ್ರದ ಯೋಗದಿಂದ ಪೀಡಿತಗಳಾಗಿ ತಮ್ಮ ಅಂಶಗಳಲ್ಲಿ ಸ್ವಲ್ಪ ವೈಗುಣ್ಯ (ನ್ಯೂನತೆ) ವನ್ನು ಹೊಂದುತ್ತಾರೆ. ಆದುದರಿಂದ

ಸರ್ವಗ್ರಹಾಣಾಮೇತೇಷಾಮಾದಿರಾದಿತ್ಯ ಉಚ್ಯತೇ ।
ತಾರಾಗ್ರಹಾಣಾಂ ಶುಕ್ರಸ್ತು ಕೇತೂನಾಮಪಿ ಧೂಮವಾನ್ ॥ ೧೩೯ ॥

ಧ್ರುವಃ ಕೀಲೋ ಗ್ರಹಾಣಾಂ ತು ವಿಭಕ್ತಾನಾಂ ಚತುರ್ದಿಶಮ್
ನಕ್ಷತ್ರಾಣಾಂ ಶ್ರವಿಷ್ಠಾ ಸ್ಯಾದಯನಾನಾಂ ತಥೋತ್ತರಮ್ ॥ ೧೪೦ ॥

ವರ್ಣಾಣಾಂ ಚಾಪಿ ಪಂಚಾನಾಮಾದ್ಯಃ ಸಂವತ್ಸರಃ ಸ್ಮೃತಃ ।
ಋತೂನಾಂ ಶಿಶಿರಶ್ಚಾಪಿ ಮಾಸಾನಾಂ ಮಾಘ ಏವ ಚ ॥ ೧೪೧ ॥

ಪಕ್ಷಾಣಾಂ ಶುಪಕ್ಷಶ್ಚ ತಿಥೀನಾಂ ಪ್ರತಿಪತ್ತಥಾ ।
ಅಹೋರಾತ್ರವಿಭಾಗಾನಾಮಹಶ್ಚಾಪಿ ಪ್ರಕೀರ್ತಿತಮ್ । ॥ ೧೪೨ ॥

ಮುಹೂರ್ತಾನಾಂ ತಥೈವಾದಿರ್ಮುಹೂರ್ತೋ ರುದ್ರದೈವತಃ ।
ಕ್ಷಣಶ್ಚಾಪಿ ನಿಮೇಷಾದಿಃ ಕಾಲಃ ಕಾಲವಿದಾಂ ವರಾಃ ॥ ೧೪೩ ॥

---

ಆ ಗ್ರಹದ ದೃಷ್ಟಿ ಮುಂತಾದ ಭಾಗಕ್ಕೆ ವಶರಾದ ಪ್ರಜೆಗಳು ಆ ದೋಷದಿಂದ ಮುಟ್ಟಲ್ಪಡುತ್ತಾರೆ.

೧೩೯. ಈ ಸಕಲಗ್ರಹಗಳಿಗೆ ಆದಿತ್ಯನು ಆದಿಭೂತನಾದ ಪೂಜ್ಯಗ್ರಹವು, ತಾರಾ ಸ್ವರೂಪರಾದ ಗ್ರಹಗಳಲ್ಲಿ ಶುಕ್ರನು ಉತ್ಕೃಷ್ಟನಾದವನು. ಕೇತುಗ್ರಹಗಳಲ್ಲಿ ಧೂಮವಾನ್ ಉತ್ತಮನಾದವನು.

೧೪೦. ಸಮಸ್ತ ಗ್ರಹಮಂಡಲಕ್ಕೆ ಧ್ರುವನು ಕೀಲಸ್ಥಾನದಲ್ಲಿದ್ದು ಆಧಾರ ಭೂತನಾಗಿರುವನು. ನಕ್ಷತ್ರಗಳಲ್ಲೆಲ್ಲ ಧನಿಷ್ಠಾನಕ್ಷತ್ರವು ಮುಖ್ಯವಾದುದು. ಅಯನ ಗಳಲ್ಲಿ ಉತ್ತರಾಯಣವು ಆದಿಯೂ ಉತ್ತಮವೂ ಆಗಿದೆ.

೧೪೧. ಪಂಚಸಂವತ್ಸರಗಳಲ್ಲಿ ಸಂವತ್ಸರವು ಎಲ್ಲದಕ್ಕೂ ಆದಿಯಾಗಿರುವುದು. ಋತುಗಳಲ್ಲಿ ಶಿಶಿರ ಋತುವು ಉತ್ತಮವಾದುದು. ಹಾಗೆಯೇ ಮಾಸಗಳಲ್ಲಿ ಮಾಘ ಮಾಸವು ಉತ್ಕೃಷ್ಟವಾಗಿದೆ.

೧೪೨. ಪಕ್ಷಗಳಲ್ಲಿ ಶುಕ್ಲಪಕ್ಷವೂ ತಿಥಿಗಳಲ್ಲಿ ಪ್ರತಿಪತ್‌ತಿಥಿಯೂ ಮತ್ತು ಅಹಸ್ಸು–ರಾತ್ರಿ ಎಂಬ ವಿಭಾಗಗಳಲ್ಲಿ ಅಹಸ್ಸಿನ ಭಾಗವೂ ಉತ್ಕೃಷ್ಟವಾಗಿದೆಯೆಂದು ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿದೆ.

೧೪೩. ಮುಹೂರ್ತಗಳಲ್ಲೆಲ್ಲ ರುದ್ರ ದೇವತೆಯ ಮುಹೂರ್ತವು ಆದಿಯು.

4

ಶ್ರವಣಾಂತಂ ಧನಿಷ್ಠಾದಿ ಯುಗಂ ಸ್ಯಾತ್ ಪಂಚವಾರ್ಷಿಕಮ್ ।
ಭಾನೋರ್ಗತಿವಿಶೇಷೇಣ ಚಕ್ರವತ್ ಪರಿವರ್ತತೇ ॥ ೧೪೪ ॥

ದಿವಾಕರಃ ಸ್ಮೃತಸ್ತಸ್ಮಾತ್ ಕಾಲಸ್ತದ್ವಿದ್ಭಿರೀಶ್ವರಃ ।
ಚತುರ್ವಿಧಾನಾಂ ಭೂತಾನಾಂ ಪ್ರವರ್ತಕನಿವರ್ತಕಃ ॥ ೧೪೫ ॥

ತಸ್ಯಾಽಪಿ ಭಗವಾನ್ ರುದ್ರಃ ಸಾಕ್ಷಾದ್ದೇವಃ ಪ್ರವರ್ತಕಃ ।
ಇತ್ಯೇಷ ಜ್ಯೋತಿಷಾಮೇವ ಸನ್ನಿವೇಶೋಽರ್ಥನಿಶ್ಚಯಾತ್ ॥ ೧೪೬ ॥

ಲೋಕಸಂವ್ಯವಹಾರಾರ್ಥಮೀಶ್ವರೇಣ ವಿನಿರ್ಮಿತಃ ।
ಉತ್ತರಾಶ್ರವಣೇನಾಸೌ ಸಂಕ್ಷಿಪ್ತಶ್ಚ ಧ್ರುವೇ ತಥಾ ॥ ೧೪೭ ॥

ಸರ್ವತಸ್ತೇಷು ವಿಸ್ತೀರ್ಣೋ ವೃತ್ತಾಕಾರ ಇವ ಸ್ಥಿತಃ ।
ಬುದ್ಧಿಪೂರ್ವಂ ಭಗವತಾ ಕಲ್ಪಾದೌ ಸಂಪ್ರವರ್ತಿತಃ ॥ ೧೪೮ ॥

---

ನಿಮೇಷಗಳಲ್ಲಿ ಕ್ಷಣವು ಆದಿರೂಪವು, ಮತ್ತು ಕಾಲಾಭಿಮಾನಿಗಳಲ್ಲಿ ಕಾಲವು ಉತ್ತಮವಾದುದು.

೧೪೪. ಧನಿಷ್ಠಾ ನಕ್ಷತ್ರ ಮೊದಲುಗೊಂಡು ಶ್ರವಣಾಂತವಾಗಿ ಬರುವ ಸಂವತ್ಸರ-ಪರಿವತ್ಸರಾದಿ ಪಂಚವರ್ಷಗಳ ಸಮೂಹವು ಒಂದು ಯುಗವೆಂದು ಗಣಿಸಲ್ಪಟ್ಟಿದೆ. ಇದು ಸೂರ್ಯನ ಗತಿವಿಶೇಷದಿಂದ ಚಕ್ರದಂತೆ ಸುತ್ತುತ್ತಲಿರುವುದು.

೧೪೫. ಆದುದರಿಂದ ಕಾಲಜ್ಞಾನಿಗಳು ಸೂರ್ಯನನ್ನು ಕಾಲರೂಪವನ್ನಾಗಿಯೂ ಸಕಲವಸ್ತುಗಳಿಗೂ ನಿಯಾಮಕನನ್ನಾಗಿಯೂ ಹೇಳುವರು. ಸೂರ್ಯನು ಜರಾಯುಜ ಮುಂತಾದ ನಾಲ್ಕು ವಿಧದ ಭೂತಗಳಿಗೆ ಪ್ರವೃತ್ತಿ ನಿವೃತ್ತಿಗಳನ್ನುಂಟು ಮಾಡುವನು.

೧೪೬. ಆ ಆದಿತ್ಯನಿಗೆ ಭಗವಂತನಾದ ರುದ್ರದೇವನು ಸಾಕ್ಷಾತ್ತಾಗಿ ಪ್ರವರ್ತಕನು. ಈ ರೀತಿಯಾಗಿ ಆಯಾಯ ಪ್ರಯೋಜನಗಳಿಗೆ ತಕ್ಕಂತೆ ಜ್ಯೋತಿರ್ಮಂಡಲವು ವಿಚಿತ್ರವಾದ ಸನ್ನಿವೇಶವನ್ನು ಹೊಂದಿರುವುದು.

೧೪೭. ಈ ಜ್ಯೋತಿರ್ವೃಂದವು ಲೋಕವ್ಯವಹಾರಕ್ಕೋಸ್ಕರವಾಗಿ ಜಗದೀಶ್ವರನಿಂದ ನಿರ್ಮಿತವಾಗಿರುವುದು. ಈ ಮಂಡಲವು ಉತ್ತರಾನಕ್ಷತ್ರ ಮತ್ತು ಶ್ರವಣನಕ್ಷತ್ರಗಳಿಂದ ಧ್ರುವಮಂಡಲದಲ್ಲಿ ಸಂಕ್ಷಿಪ್ತವಾಗಿ ಬದ್ಧವಾಗಿರುವುದು.

೧೪೮. ಈ ಜ್ಯೋತಿಶ್ಚಕ್ರವು ಗಗನ ಪ್ರದೇಶಗಳಲ್ಲಿ ವಿಸ್ತಾರವನ್ನು ಹೊಂದಿ

ಸಾಶ್ರಯಃ ಸೋಽಭಿಮಾನೀ ಚ ಸರ್ವಸ್ಯ ಜ್ಯೋತಿಷಾತ್ಮಕಃ ।
ವೈಶ್ವರೂಪಪ್ರಧಾನಸ್ಯ ಪರಿಣಾಮೋಽಯಮದ್ಭುತಃ ॥ ೧೪೯ ॥

ನೈತಚ್ಛಕ್ಯಂ ಪ್ರಸಂಖ್ಯಾತುಂ ಯಾಥಾತಥ್ಯೇನ ಕೇನ ಚಿತ್ ।
ಗತಾಗತಂ ಮನುಷ್ಯೇಣ ಜ್ಯೋತಿಷಾಂ ಮಾಂಸಚಕ್ಷುಷಾ ॥ ೧೫೦ ॥

ಆಗಮಾದನುಮಾನಾಚ್ಚ ಪ್ರತ್ಯಕ್ಷಾದುಪಪತ್ತಿತಃ ।
ಪರೀಕ್ಷ್ಯ ನಿಪುಣಂ ಬುದ್ಧ್ಯಾ ಶ್ರದ್ಧಾತವ್ಯಂ ವಿಪಶ್ಚಿತಾ ॥ ೧೫೧ ॥

ಚಕ್ಷುಃ ಶಾಸ್ತ್ರಂ ಜಲಂ ಲೇಖ್ಯಂ ಗಣಿತಂ ಬುದ್ಧಿಸತ್ತಮಾಃ ।
ಪಂಚೈತೇ ಹೇತವೋ ವಿಪ್ರಾ ಜ್ಯೋತಿರ್ಗಣವಿವೇಚನೇ ॥ ೧೫೨ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಚತುರ್ವಿಂಶತಿತಮೋಽಧ್ಯಾಯಃ ।

---

ಮಂಡಲವಾದ ಆಕಾರವನ್ನು ಹೊಂದಿರುವುದು. ಕಲ್ಪದ ಆದಿಯಲ್ಲಿ ಭಗವಂತನಿಂದ ಬುದ್ಧಿಪೂರ್ವಕವಾಗಿ ಇದು ರಚಿತವಾಗಿರುವುದು.

೧೪೯. ಈಶ್ವರನು ಎಲ್ಲ ಪ್ರಪಂಚಕ್ಕೂ ಆಶ್ರಯನೂ ಅಭಿಮಾನಿಯೂ ಆದಂತೆ ಜ್ಯೋತಿಮಂಡಲದಲ್ಲಿಯೂ ಇದ್ದು ಜ್ಯೋತಿಸ್ಸ್ವರೂಪನೂ ಆಗಿರುವನು. ಇದು ವಿಶ್ವ ರೂಪಗಳನ್ನು ಹೊಂದುವ ಪ್ರಧಾನದ ಅದ್ಭುತವಾದ ಪರಿಣಾಮವು.

೧೫೦. ಈ ತೇಜೋಮಂಡಲದ ಸ್ಥಿತಿಗತಿಗಳನ್ನು ಮನುಷ್ಯನು ಮಾಂಸ-ಚರ್ಮಮಯವಾದ ನೇತ್ರ ಇಂದ್ರಿಯದಿಂದ ಕಂಡು ತಾತ್ತ್ವಿಕ ಸ್ಥಿತಿಯನ್ನು ಅನುಸರಿಸಿ ಸಂಪೂರ್ಣವಾಗಿ ಎಣಿಸಿ ಹೇಳುವುದು ಶಕ್ಯವಾದುದಲ್ಲ.

೧೫೧. ಆದುದರಿಂದ ಇಂತಹ ವಿಷಯಗಳನ್ನು ಆಗಮ-ಅನುಮಾನ ಮತ್ತು ಪ್ರತ್ಯಕ್ಷ ಯುಕ್ತಿಗಳಿಂದ ಪರೀಕ್ಷಾಪೂರ್ವಕವಾಗಿ ಚೆನ್ನಾಗಿ ತಿಳಿದು ವಿದ್ವಾಂಸನು ನಂಬಬೇಕು.

೧೫೨. ಶ್ರೇಷ್ಠ ಜ್ಞಾನಿಗಳಾದ ವಿಪ್ರರೆ, ಜ್ಯೋತಿರ್ಮಂಡಲವನ್ನು ವಿವೇಚಿಸು ವುದರಲ್ಲಿ ಚಕ್ಷುರಿಂದ್ರಿಯ, ಶಾಸ್ತ್ರ, ಜಲಪಾತ, ಲೇಖನ, ಮತ್ತು ಗಣಿತಗಳೆಂಬುವು ಐದು ಮುಖ್ಯವಾದ ಸಾಧನಗಳು. ಇವುಗಳಿಂದ ತತ್ತ್ವವನ್ನು ಯಥಾವತ್ತಾಗಿ ಅರಿತು ನಂಬ ಬಹುದಾಗಿದೆ.

ಬ್ರಹ್ಮಾಂಡ ಪುರಾಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

## ಪಂಚವಿಂಶತಿತಮೋಽಧ್ಯಾಯಃ

---

**ಸೂತ ಉವಾಚ**

**ಏತದುಕ್ತ್ವಾ ಮಹಾಬುದ್ಧಿರ್ವಾಯುರ್ಲೋಕಹಿತೇ ರತಃ ।**
**ಜಜಾಪ ಜಪ್ಯಂ ಭಗವಾನ್ ಮಧ್ಯಂ ಪ್ರಾಪ್ತೇ ದಿವಾಕರೇ** ॥ ೧ ॥

**ಋಷಯಶ್ಚಾಪಿ ತೇ ಸರ್ವೇ ಯೇ ತತ್ರಾಸನ್ ಸಮಾಗತಾಃ ।**
**ತೇ ಸರ್ವೇ ನಿಯತಾತ್ಮಾನಸ್ತಸ್ಥುಃ ಪ್ರಾಂಜಲಯಸ್ತಥಾ** ॥ ೨ ॥

**ಯ ಇಜ್ಯೋ ನಿಯಮಸ್ಯಾಂತೇ ಪ್ರಾಣಿನಾಂ ಜೀವನಃ ಪ್ರಭುಃ ।**
**ನೀಲಕಂಠ ನಮಸ್ತೇಽಸ್ತು ಇತ್ಯುವಾಚ ಸದಾಗತಿಃ** ॥ ೩ ॥

**ಶ್ರುತ್ವಾ ತು ಭಾವಿತಾತ್ಮಾನೋ ಮುನಯಃ ಶಂಸಿತವ್ರತಾಃ ।**
**ವಾಲಖಿಲ್ಯೇತಿ ವಿಖ್ಯಾತಾಃ ಪತಂಗಸಹಚಾರಿಣಃ** ॥ ೪ ॥

---

ಸೂತ ಮುನಿಯು ಇಂತೆಂದನು :—

೧. ಲೋಕಕ್ಕೆ ಕಲ್ಯಾಣವನ್ನು ಸಂಪಾದಿಸುವುದರಲ್ಲಿ ಆಸಕ್ತನಾದ, ಮಹಾ ಪ್ರಜ್ಞಾಶಾಲಿಯಾದ ವಾಯು ಭಗವಂತನು ಈ ರೀತಿಯಾಗಿ ಹೇಳಿ ಸೂರ್ಯನು ಆ ಸಮಯದಲ್ಲಿ ದಿನ ಮಧ್ಯವನ್ನು ಹೊಂದಲು ಮಧ್ಯಾಹ್ನ ಕಾಲದಲ್ಲಿ ಜಪಿಸಬೇಕಾದ ಮಂತ್ರಗಳನ್ನು ಜಪಿಸಿದನು.

೨. ಆಗ ಆ ಸಮಯದಲ್ಲಿ ಅಲ್ಲಿ ಸೇರಿರುವ ಸಕಲ ಮುನಿಗಳು ಪವಿತ್ರವಾದ ಅಂತಃಕರಣವುಳ್ಳವರೂ ಮತ್ತು ಅಂಜಲಿಯನ್ನು ಕಟ್ಟಿಕೊಂಡವರೂ ಆಗಿದ್ದರು.

... ಪ್ರಾಣಿಗಳ ಜೀವನಾಧಾರನೂ ಪ್ರಭುವೂ ಮತ್ತು ಸದಾಗತಿ ಶೀಲನೂ ಆದ ವಾಯು ಭಗವಂತನು ಆಗ ತನ್ನ ನಿಯಮಾನುಷ್ಠಾನದ ಸಮಾಪ್ತಿಯಲ್ಲಿ ಯಾವ ನೀಲಕಂಠನು ಸರ್ವರಿಗೂ ಪೂಜಾರ್ಹನೋ, ಅಂತಹ ನೀಲಕಂಠನಿಗೆ ನಮಸ್ಕಾರವು ಎಂದು ಸ್ತುತಿಮಾಡಿದನು.

೪. ಆಗ ಸಂಸ್ಕೃತವಾದ ಅಂತಃಕರಣವುಳ್ಳವರೂ, ತೀಕ್ಷ್ಣವಾದ ವ್ರತ ನಿಯಮವುಳ್ಳವರೂ, ಮತ್ತು ಸೂರ್ಯನಿಗೆ ಸಹಚಾರಿಗಳೂ ಆದ ವಾಲಖಿಲ್ಯರೆಂಬ ಪ್ರಸಿದ್ಧಿಯುಳ್ಳ ಮುನಿಗಳು ನೀಲಕಂಠ ಸ್ತುತಿಯನ್ನು ಶ್ರವಣಮಾಡಿದರು.

ಅಷ್ಟಾಶೀತಿಸಹಸ್ರಾಣಿ ಋಷೀಣಾಮೂರ್ಧ್ವರೇತಸಾಮ್ ।
ತೇ ಸ್ಮ ಪೃಚ್ಛಂತಿ ವಾಯುಂ ಚ ವಾಯುಪರ್ಣಾಂಬುಭೋಜನಾಃ ॥ ೫ ॥

ನೀಲಕಂಠೇತಿ ಯತ್ಪ್ರೋಕ್ತಂ ತ್ವಯಾ ಪವನಸತ್ತಮ ।
ಏತದ್ಗುಹ್ಯಂ ಪವಿತ್ರಾಣಾಂ ಪುಣ್ಯಂ ಪುಣ್ಯವಿದಾಂ ವರ ॥ ೬ ॥

ತದ್ವಯಂ ಶ್ರೋತುಮಿಚ್ಛಾಮಸ್ತನ್ನೋ ನಿಗದ ಸತ್ತಮ ।
ತತ್ಸರ್ವಂ ಶ್ರೋತುವಿಚ್ಛಾಮಸ್ತ್ವತ್ಪ್ರಸಾದಾದ್ಧನಂಜಯ ॥ ೭ ॥

ನೀಲತಾ ಯೇನ ಕಂಠಸ್ಯ ಕಾರಣೇನಾಂಬಿಕಾಪತೇಃ ।
ಶ್ರೋತುಮಿಚ್ಛಾಮಹೇ ದೇವ ತವ ವಕ್ತ್ರಾದ್ವಿಶೇಷತಃ ॥ ೮ ॥

ಯಾವದ್ವಾಚಃ ಪ್ರವರ್ತಂತೇ ಸರ್ವಾಸ್ತಾಃ ಪ್ರೇರಿತಾಸ್ತ್ವಯಾ ।
ವರ್ಣಸ್ಥಾನಗತೇ ವಾಯೋ ವಾಗ್ವಿಧಿಃ ಸಂಪ್ರವರ್ತತೇ ॥ ೯ ॥

---

೫. ಆ ವಾಲಖಿಲ್ಯ ಮಹರ್ಷಿಗಳು ಎಂಭತ್ತ ಎಂಟುಸಾವಿರ ಸಂಖ್ಯೆಯುಳ್ಳವರೂ ವಾಯು, ಪರ್ಣ, ಜಲ ಮುಂತಾದ ಅಹಾರವನ್ನು ಮಾತ್ರ ಮಾಡಿ ತಪಸ್ವಿಗಳೂ ಮತ್ತು ಊರ್ಧ್ವರೇತಸ್ಸುಗಳೂ ಆಗಿರುವರು. ಅವರು ವಾಯುದೇವನನ್ನು ಕುರಿತು ಪ್ರಶ್ನಮಾಡಿದರು.

೬. ಪುಣ್ಯವಂತರಲ್ಲಿ ಶ್ರೇಷ್ಠನಾದ ಮತ್ತು ಜಗತ್ತನ್ನೆಲ್ಲ ಪಾವನಮಾಡುವ ಸಾಧು ಶ್ರೇಷ್ಠನಾದ ವಾಯುದೇವನೆ? ಪವಿತ್ರ ಮಂತ್ರಗಳಲ್ಲಿ ಅತಿ ಪವಿತ್ರವೂ ಗುಹ್ಯವೂ ಆದ ನೀಲಕಂಠ ಎಂಬ ನಾಮವನ್ನು ನೀನು ಪಠನಮಾಡಿದೆಯಷ್ಟೆ.

೭. ಆ ಪವಿತ್ರ ನಾಮ ವಿಷಯವನ್ನು ಸಾಧು ಶ್ರೇಷ್ಠನಾದ ನಿನ್ನಿಂದ ತಿಳಿಯಲು ಇಷ್ಟವುಳ್ಳವರಾಗಿದ್ದೇವೆ. ವಾಯುದೇವನೆ; ನಿನ್ನ ಅನುಗ್ರಹದಿಂದ ಆ ವಿಷಯವು ಸಮಗ್ರವಾಗಿ ನಮ್ಮಿಂದ ಶ್ರುತವಾಗಬೇಕೆಂದು ನಮ್ಮ ಕೋರಿಕೆಯಿದೆ.

೮. ವಾಯುದೇವನೆ? ಅಂಬಿಕಾಪತಿಯಾದ ಶಿವನ ಕಂಠಕ್ಕೆ ಯಾವ ಕಾರಣದಿಂದ ನೀಲವರ್ಣವು ಪ್ರಾಪ್ತವಾಯಿತೋ ಅದನ್ನು ನಿನ್ನ ಮುಖದಿಂದ ವಿಶೇಷವಾಗಿ ತಿಳಿಯಲು ಅಪೇಕ್ಷಿಸುತ್ತೇವೆ.

೯. ವಾಯುವೆ? ಲೋಕದಲ್ಲಿ ಪ್ರಾಣಿವರ್ಗದ ವಾಗುಚ್ಚಾರಣೆಯೆಂಬುದು ಎಷ್ಟಿರುವುದೊ, ಅವೆಲ್ಲವೂ ವರ್ಣಗಳ ಉತ್ಪತ್ತಿಸ್ಥಾನದಲ್ಲಿ ನೀನು ಇದ್ದು ವಾಕ್ಕುಗಳನ್ನು ಪ್ರೇರೇಪಿಸುವುದರಿಂದ ಆ ವರ್ಣೋಚ್ಚಾರಣ ವಿಧಿಯಿಂದ ಪ್ರವರ್ತಿಸುತ್ತದೆ.

ಜ್ಞಾನಪೂರ್ವಮಥೋತ್ಸಾಹಸ್ತ್ವತ್ತೋ ವಾಯೋ ಪ್ರವರ್ತತೇ ।
ತ್ವಯಿ ನಿಷ್ಪೂಯಮಾನೇ ತು ಶೇಷಾ ವರ್ಣಪ್ರವೃತ್ತಯಃ ॥ ೧೦ ॥

ಯತ್ರ ವಾಚೋ ನಿವರ್ತಂತೇ ದೇಹವರ್ಣಾಶ್ಚ ದುರ್ಲಭಾಃ ।
ತ್ವತ್ತೋ ಹಿ ವರ್ಣಸದ್ಭಾವಃ ಸರ್ವಗಸ್ತ್ವಂ ಸದಾಽನಿಲ ॥ ೧೧ ॥

ನಾನ್ಯಃ ಸರ್ವಗತೋ ದೇವಸ್ತ್ವದೃತೇಽಸ್ತಿ ಸಮೀರಣ ।
ಏಷ ವೈ ಜೀವಲೋಕಸ್ತೇ ಪ್ರತ್ಯಕ್ಷಃ ಸರ್ವತೋಽನಿಲ ॥ ೧೨ ॥

ವೇತ್ಥ ವಾಚಸ್ಪತಿಂ ದೇವಂ ಮನೋನಾಯಕಮೀಶ್ವರಮ್ ।
ಬ್ರೂಹಿ ತತ್ಕಂಠದೇಶೇ ತು ಕಿಂ ಕೃತ್ವಾ ರೂಪವಿಕ್ರಿಯಾ ॥ ೧೩ ॥

ವಚಃ ಶ್ರುತ್ವಾ ತತಸ್ತೇಷಾಂ ಮುನೀನಾಂ ಭಾವಿತಾತ್ಮನಾಮ್ ।
ಪ್ರತ್ಯುವಾಚ ಮಹಾತೇಜಾ ವಾಯುರ್ಲೋಕನಮಸ್ಕೃತಃ ॥ ೧೪ ॥

---

೧೦. ವಾಯುದೇವನೇ; ಜ್ಞಾನ ಪೂರ್ವಕವಾಗಿ ಪ್ರಾಣಿ ವರ್ಗಕ್ಕೆ ಉಂಟಾಗುವ ಉತ್ಸಾಹವು ನಿನ್ನಿಂದಾಗುವುದು. ನೀನು ಶುದ್ಧ ಸ್ಥಾನದಿಂದ ಪ್ರೇರೇಪಿಸಿದರೆ ಆಗ ಎಲ್ಲ ವರ್ಣಗಳ ಪ್ರವೃತ್ತಿಗಳು ಉಂಟಾಗುತ್ತವೆ.

೧೧. ಪ್ರತಿಯೊಂದು ಪ್ರಾಣಿಯಲ್ಲಿ ವಾಗುಚ್ಚಾರಣೆ, ದುರ್ಲಭವಾದ ದೇಹದ ವರ್ಣ ವಿಶೇಷಗಳು, ಮತ್ತು ವರ್ಣಗಳ ಅಸ್ತಿತ್ವ ಇವೆಲ್ಲವೂ ನಿನ್ನ ಅಧೀನವಾದುವುಗಳು. ವಾಯುದೇವನೆ? ನೀನು ಸರ್ವ ವ್ಯಾಪಿಯಾಗಿರುವೆ.

೧೨. ವಾಯುದೇವನೆ? ನಿನ್ನನ್ನು ಹೊರತಾಗಿ ಸರ್ವವ್ಯಾಪಿಯಾದ ದೇವನು ಮತ್ತೊಬ್ಬನಿಲ್ಲ. ಸಕಲ ಜೀವಲೋಕಕ್ಕೆ ನೀನು ಸರ್ವ ಪ್ರದೇಶಗಳಲ್ಲಿಯೂ ಇರುವ ಪ್ರತ್ಯಕ್ಷದೇವನಾಗಿರುತ್ತೀ.

೧೩. ವಾಕ್ಯಗಳಿಗೆ ಅಧಿಪತಿಯೂ ಮನಸ್ಸಿಗೆ ಪ್ರೇರೇಪಕನೂ ಆದ ಶಿವನನ್ನು ನೀನು ಚನ್ನಾಗಿ ತಿಳಿದಿರುವೆ. ಆದುದರಿಂದ ಅವನ ಕಂಠದಲ್ಲಿ ರೂಪದ ವಿಕಾರವು ಏತಕ್ಕೆ ಪ್ರಾಪ್ತವಾಯಿತೆಂಬುದನ್ನು ಹೇಳು.

೧೪. ಅನಂತರದಲ್ಲಿ ಉಪಾಸನೆಯಿಂದ ಪವಿತ್ರಾಂತಃಕರಣವುಳ್ಳ ಆ ಮುನಿಜನರ ವಚನವನ್ನು ಕೇಳಿ ಲೋಕಕ್ಕೆಲ್ಲ ವಂದ್ಯನಾದ ಮತ್ತು ಮಹಾತೇಜಸ್ವಿಯಾದ ವಾಯುವು ಪ್ರತ್ಯುತ್ತರ ವಿತ್ತನು.

ಪುರಾ ಕೃತಯುಗೇ ವಿಪ್ರೋ ವೇದನಿರ್ಣಯತತ್ಪರಃ ।
ವಸಿಷ್ಠೋ ನಾಮ ಧರ್ಮಾತ್ಮಾ ಮಾನಸೋ ವೈ ಪ್ರಜಾಪತಿಃ ॥ ೧೫ ॥

ಪಪ್ರಚ್ಛ ಕಾರ್ತಿಕೇಯಂ ವೈ ಮಯೂರವರವಾಹನಮ್ ।
ಮಹಿಷಾಸುರನಾರೀಣಾಂ ನಯನಾಂಜನತಸ್ಕರಮ್ ॥ ೧೬ ॥

ಮಹಾಸೇನಂ ಮಹಾತ್ಮಾನಂ ಮೇಘಸ್ತನಿತನಿಃಸ್ವನಮ್ ।
ಉಮಾಮನಃಪ್ರಹರ್ಷಾಣಾಂ ಬಾಲಕಚ್ಛದ್ಮರೂಪಿಣಮ್ ॥ ೧೭ ॥

ಕ್ರೌಂಚಜೀವಿತಹರ್ತಾರಂ ಗೌರೀಹೃದಯನಂದನಮ್ ।
ಯದೇತದ್ದೃಶ್ಯತೇ ವರ್ಯ ಶುಭ್ರಂ ಶುಭ್ರಾಂಜನೋಪಮಮ್ ॥೧೮॥

---

೧೫. ಪೂರ್ವಕಾಲದಲ್ಲಿ ಒಂದಾನೊಂದು ಕೃತಯುಗದಲ್ಲಿ ಧರ್ಮಗಳನ್ನು ನಿರ್ಣಯಿಸುವ ಪ್ರಜ್ಞಾವಂತನೂ ಪ್ರಜಾಪತಿಯ ಮಾನಸ ಪುತ್ರನೂ, ಮತ್ತು ಧಾರ್ಮಿಕ ಶೀಲವುಳ್ಳವನೂ ಆದ ವಸಿಷ್ಠ ಮುನಿಯೆಂಬ ವಿಪ್ರನು ಇದ್ದನು.

೧೬. ಆ ವಿಪ್ರನು ನವಿಲಿನ ವಾಹನವನ್ನು ಏರಿರುವ ಮತ್ತು ಮಹಿಷಾಸುರನನ್ನು ಸಂಹರಿಸಿ ಅವನ ನಾರಿಯರ ಸೌಭಾಗ್ಯವನ್ನು ಲೋಪಮಾಡಿ ನಯನಗಳಿಗೆ ಕಾಡಿಗೆಯ ಅಲಂಕಾರವನ್ನು ಲೋಪಗೊಳಿಸಿರುವ ಕೃತ್ತಿಕೆಯರ ಪುತ್ರನಾದ ಷಣ್ಮುಖಸ್ವಾಮಿಯನ್ನು ಪ್ರಶ್ನಿಸಿದನು.

೧೭. ಮತ್ತು ಆ ಷಣ್ಮುಖಸ್ವಾಮಿಯು ಅತಿಶಯವಾದ ಸೇನೆಯುಳ್ಳವನೂ, ಉದಾರವಾದ ಮನಸ್ಸುಳ್ಳವನೂ, ಮೇಘದ ಗಂಭೀರನಾದದಂತೆ ಗರ್ಜನೆಯುಳ್ಳವನೂ ಮತ್ತು ಪಾರ್ವತೀದೇವಿಯ ಮಾನಸ ಹರ್ಷ ಪರಂಪರೆಯು ಧರಿಸಿರುವ ಕುಮಾರ ಮೂರ್ತಿಯೋ ಎಂಬಂತೆಯೂ ಇದ್ದನು.

೧೮. ಕ್ರೌಂಚ ಪರ್ವತದ ಜೀವಿತವನ್ನು ಕೊನೆಗಾಣಿಸಿದ, ಮತ್ತು ಗೌರಿಯ ಹೃದಯಕ್ಕೆ ಆನಂದವನ್ನುಂಟುಮಾಡುವ ಕುಮಾರಸ್ವಾಮಿಯನ್ನು ಕುರಿತು, ಶ್ರೇಷ್ಠನೇ, ಶುದ್ಧವಾದ ಕಾಡಿಗೆಯಂತೆ ಇರುವ ನೀಲವರ್ಣವು ಬೆಳ್ಳಗಿರುವ ಈ ಕಂಠದಲ್ಲಿ ಕಾಣುತ್ತಿದೆಯಲ್ಲ, ಇದೇನು ? ಎಂದು ಪ್ರಶ್ನೆಮಾಡಿದನು.

**ತತ್ಕಿಮರ್ಥಂ ಸಮುತ್ಪನ್ನಂ ಕಂಠೇ ಕುಂದೇಂದುಸಪ್ರಭೇ ।**
**ಏತದ್ದೀಪ್ತಾಯ ದಾಂತಾಯ ಭಕ್ತಾಯ ಬ್ರೂಹಿ ಪೃಚ್ಛತೇ ॥ ೧೯ ॥**

**ಕಥಾಂ ಮಂಗಲಸಂಯುಕ್ತಾಂ ಪವಿತ್ರಾಂ ಪಾಪನಾಶಿನೀಮ್ ।**
**ಮತ್ಪ್ರಿಯಾರ್ಥಂ ಮಹಾಭಾಗ ವಕ್ತುಮರ್ಹಸ್ಯಶೇಷತಃ ॥ ೨೦ ॥**

**ಶ್ರುತ್ವಾ ವಾಕ್ಯಂ ತತಸ್ತಸ್ಯ ವಸಿಷ್ಠಸ್ಯ ಮಹಾತ್ಮನಃ ।**
**ಪ್ರತ್ಯುವಾಚ ಮಹಾತೇಜಾ ದೇವಾರಿಬಲಸೂದನಃ ॥ ೨೧ ॥**

**ಶೃಣುಷ್ವ ವದತಾಂ ಶ್ರೇಷ್ಠ ಕಥ್ಯಮಾನಂ ವಚೋ ಮಮ ।**
**ಉಮೋತ್ಸಂಗೋಪವಿಷ್ಟೇನ ಯಥಾಪೂರ್ವಂ ಮಯಾ ಶ್ರುತಮ್ ॥ ೨೨ ॥**

**ಪಾರ್ವತ್ಯಾ ಸಹ ಸಂವಾದಃ ಶರ್ವಸ್ಯ ಚ ಮಹಾತ್ಮನಃ ।**
**ತಮಹಂ ಸಂಪ್ರವಕ್ಷ್ಯಾಮಿ ತ್ವತ್ಪ್ರಿಯಾರ್ಥಂ ಮಹಾಮುನೇ ॥ ೨೩ ॥**

---

೧೯. ಮಲ್ಲಿಗೆ ಚಂದ್ರ ಇವುಗಳಿಗೆ ಸಮಾನವಾಗಿ ಶುಭ್ರವಾದ ಕಾಂತಿಯುಳ್ಳ ಈ ಕಂಠ ಸ್ಥಳದಲ್ಲಿ ಈ ನೀಲವರ್ಣವು ಏತಕ್ಕೆ ಬಂದಿತು? ಇದನ್ನು ಜ್ಞಾನಶಕ್ತಿಯೆಂಬ ದೀಪ್ತಿ, ಇಂದ್ರಿಯ ಜಯ, ಮತ್ತು ಗುರುಭಕ್ತಿ-ಈ ಶಿಷ್ಯಗುಣಗಳಿಂದ ಕೂಡಿ ಪ್ರಶ್ನಮಾಡುತ್ತಿದ್ದ ನನಗೆ ಉಪದೇಶಿಸು.

೨೦. ಮಹಾಮಹಿಮನೇ? ಅನೇಕ ಮಂಗಲಗಳಿಂದ ಕೂಡಿದ ಪವಿತ್ರವಾದ ಮತ್ತು ಪಾಪಗಳನ್ನು ನಾಶಮಾಡುವ ಈ ಕಥೆಯನ್ನು ನನ್ನಲ್ಲಿ ಪ್ರೀತಿಯಿಂದ ಸಮಗ್ರವಾಗಿ ಹೇಳಲು ಅರ್ಹನಾಗಿರುತ್ತೀ.

೨೧. ದೇವಶತ್ರುಗಳ ಸೇನೆಯನ್ನು ಧ್ವಂಸಮಾಡಿರುವ ಅತಿ ಪ್ರಭಾವ ಶಾಲಿಯಾದ ಕುಮಾರಸ್ವಾಮಿಯು ಮಹಾತ್ಮನಾದ ವಸಿಷ್ಠ ಮುನಿಯ ವಚನವನ್ನು ಕೇಳಿ ಪ್ರತ್ಯುತ್ತರವನ್ನು ನುಡಿದನು.

೨೨, ವಾಗ್ಮಿಶ್ರೇಷ್ಠನಾದ ವಸಿಷ್ಠ ಮುನಿಯೆ! ಪಾರ್ವತೀ ದೇವಿಯ ತೊಡೆಯ ಮೇಲೆ ಕುಳಿತುಕೊಂಡಿರುವಾಗ ಪೂರ್ವದಲ್ಲಿ ನಾನು ಕೇಳಿರುವುದನ್ನು ಅನುಸರಿಸಿ ಹೇಳುವ ನನ್ನ ವಚನವನ್ನು ಕೇಳು.

೨೩. ಮಹರ್ಷಿಯೇ? ಜನನಿಯಾದ ಪಾರ್ವತೀ ದೇವಿಗೂ ಮಹಾತ್ಮನಾದ ಶಿವನಿಗೂ ಒಂದು ಸಂವಾದವು ನಡೆದಿದೆ. ನಿನ್ನ ಮೇಲಿನ ಪ್ರೇಮದಿಂದ ಆ ಸಂವಾದ ಕಥೆಯನ್ನು ಹೇಳುವೆನು, ಕೇಳು.

**ಕೈಲಾಸಶಿಖರೇ ರಮ್ಯೇ ನಾನಾಧಾತುವಿಚಿತ್ರಿತೇ ।**
**ತರುಣಾದಿತ್ಯಸಂಕಾಶೇ ತಪ್ತಚಾಮೀಕರಪ್ರಭೇ ॥ ೨೪ ॥**

**ವಜ್ರಸ್ಫಟಿಕಸೋಪಾನೇ ಚಿತ್ರಪಾದಶಿಲಾತಲೇ ।**
**ಜಾಂಬೂನದಮಯೇ ದಿವ್ಯೇ ನಾನಾಧಾತುವಿಚಿತ್ರಿತೇ ॥ ೨೫ ॥**

**ನಾನಾದ್ರುಮಲತಾಕೀರ್ಣೇ ನಾನಾಪುಷ್ಪಫಲೋಪಗೇ ।**
**ಹಂಸಕಾರಂಡವಾಕೀರ್ಣೇ ಚಕ್ರವಾಕೋಪಶೋಭಿತೇ ॥ ೨೬ ॥**

**ಷಟ್ಪದೋದ್ಗೀತಬಹುಲೇ ಧಾರಾಸಂಪಾತನಾದಿತೇ ।**
**ಮತ್ತಕ್ರೌಂಚಮಯೂರಾಣಾಂ ನಾದೈರ್ವಿಕ್ರುಷ್ಟಕಂದರೇ ॥ ೨೭ ॥**

**ಅಪ್ಸರೋಗಣಸಂಕೀರ್ಣೇ ಕಿನ್ನರೈರುಪಶೋಭಿತೇ ।**
**ಜೀವಂಜೀವಕಜಾತೀನಾಂ ವಿರಾವೈರುಪಕೂಜಿತೇ ॥ ೨೮ ॥**

---

೨೪. ಒಂದಾನೊಂದು ಕಾಲದಲ್ಲಿ ಪಾರ್ವತೀ ಪರಮೇಶ್ವರರಿಗೆ ಕೈಲಾಸಪರ್ವತದ ಶಿಖರದಲ್ಲಿ ಈ ಸಂವಾದವು ನಡೆಯಿತು. ಕೈಲಾಸಪರ್ವತದ ಆ ಶಿಖರವು ಅನಿರ್ವಚನೀಯವಾದ ಸೌಂದರ್ಯ ರಾಶಿಯಿಂದ ಪೂರ್ಣವಾಗಿತ್ತು. ಅದು ಹೇಗೆ ಎಂದರೆ ;—ನಾನಾ ವಿಧವಾದ ಧಾತುಗಳಿಂದ ಚಿತ್ರವರ್ಣವಾಗಿಯೂ ಪ್ರೌಢನಾದ ಸೂರ್ಯನಿಗೆ ಸಮಾನವಾಗಿಯೂ ಪುಟಕ್ಕಿಟ್ಟಿರುವ ಸುವರ್ಣದಂತೆ ಪ್ರಭೆಯುಳ್ಳದ್ದೂ ಆಗಿತ್ತು.

೨೫. ವಜ್ರಗಳಿಂದ ರಚಿತವಾದ ಸೋಪಾನಗಳಿಂದಲೂ, ವಿಚಿತ್ರವಾದ ಉಪ ಪರ್ವತಗಳ ಶಿಲೆಗಳಿಂದಲೂ, ದಿವ್ಯವಾದ ಸುವರ್ಣದಿಂದಲೂ, ಮತ್ತು ವಿವಿಧವಾದ ಧಾತುಗಳಿಂದಲೂ ರಮಣೀಯವಾಗಿದ್ದಿತು.

೨೬. ಅನೇಕ ವೃಕ್ಷಲತೆಗಳಿಂದ ವ್ಯಾಪ್ತವಾಗಿಯೂ ಅನೇಕ ಫಲ-ಪುಷ್ಪಗಳಿಂದ ತುಂಬಿರುವುದಾಗಿಯೂ, ಹಂಸ, ಕಾರಂಡವ, ಚಕ್ರವಾಕ ಮುಂತಾದ ಮನೋಹರ ಪಕ್ಷಿಗಳಿಂದ ರಮ್ಯವಾಗಿಯೂ ಇದ್ದಿತು.

೨೭. ದುಂಬಿಗಳ ಝೇಂಕಾರ ಧ್ವನಿ, ಜಲಪಾತಗಳ ಧ್ವನಿ, ಮತ್ತು ಮದಿಸಿದ ಕ್ರೌಂಚ, ನವಿಲು ಮುಂತಾದ ಪಕ್ಷಿಗಳ ರಮ್ಯಧ್ವನಿ ಇವುಗಳಿಂದ ಆ ಶಿಖರದ ಗವಿಗಳು ಪ್ರತಿಧ್ವನಿಸ್ಸೈಯುವಂತಿದ್ದುವು.

೨೮. ಅಪ್ಸರಸ್ತ್ರೀಯರ ಗಣದಿಂದ ಪೂರ್ಣವೂ, ಕಿನ್ನರರಿಂದ ಶೋಭಿತವೂ ಮತ್ತು ಜೀವಂಜೀವಕವೆಂಬ ಪಕ್ಷಿಗಳ ರಮ್ಯಕೂಜಿತದಿಂದ ರಮಣೀಯವೂ ಆಗಿತ್ತು.

ಕೋಕಿಲಾರಾವಬಹುಲೇ ಸಿದ್ಧಚಾರಣಸೇವಿತೇ ।
ಸೌರಭೇಯನಿನಾದಾಢ್ಯೇ ಮೇಘಸ್ತನಿತನಿಃಸ್ವನೇ ॥ ೨೯ ॥

ವಿನಾಯಕಭಯೋದ್ವಿಗ್ನಕುಂಜರೈರ್ಮುಕ್ತಕಂದರೈಃ ।
ವೀಣಾವಾದಿತ್ರನಿರ್ಘೋಷೈಃ ಶ್ರೋತ್ರೇಂದ್ರಿಯಮನೋರಮೈಃ ॥ ೩೦ ॥

ದೋಲಾಲಂಬಿತಸಂಘಾತೇ ವನಿತಾಸಂಘಸೇವಿತೇ ।
ಧ್ವಜಾಲಂಬಿತದೋಲಾನಾಂ ಘಂಟಾನಾಂ ನಿನದಾಕುಲೇ ॥ ೩೧ ॥

ವಲ್ಲಕೀವೇಣುಬಹುಲೇ ತ್ರಿಂಶದ್ಬರ್ಹಿಣಸಂಕುಲೇ ।
ಮುಖಮರ್ದಲವಾದಿತ್ರೈರ್ವಲಿತಾಸ್ಫೋಟಿತೈಸ್ತಥಾ ॥ ೩೨ ॥

ಕ್ರೀಡಾವೇಗವಿವಾದಾನಾಂ ನಿರ್ಘೋಷೈಃ ಪೂರ್ಣಕಂದರೇ ।
ಹಂಸೈಃ ಪಾರಾವತೈಶ್ಚೈವ ಬಕರಾಜೈಃ ಸುಖಸ್ಥಿತೇ ॥ ೩೩ ॥

---

೨೯. ಅತಿಶಯವಾದ ಕೋಕಿಲಧ್ವನಿಯಿಂದ ಕೂಡಿರುವುದೂ, ಸಿದ್ಧ-ಚಾರಣರ ಸಂಚಾರವುಳ್ಳದ್ದೂ, ಮಹಿಷಗಳ ಕ್ರೂರಧ್ವನಿಯಿಂದ ಸೇವಿಸಲ್ಪಟ್ಟಿರ.ವುದೂ ಮತ್ತು ಮೇಘಗಳ ಗರ್ಜನದಿಂದ ಕೂಡಿರುವುದೂ ಆಗಿತ್ತು.

೩೦. ವಿನಾಯಕನ ಭಯದಿಂದ ಭೀತಗಳಾಗಿ ಅಲ್ಲಿಯ ಗವಿಗಳನ್ನು ಬಿಟ್ಟು ಓಡಿರುವ ಆನೆಗಳಿಂದಲೂ ಶ್ರವಣೇಂದ್ರಿಯಗಳಿಗೆ ಬಲು ಇಂಪಾಗಿ ಕೇಳುವ ವೀಣಾ ಮುಂತಾದ ವಾದ್ಯಘೋಷಗಳಿಂದಲೂ ಪರಿಪೂರ್ಣವಾಗಿದ್ದಿತು.

೩೧. ಅಲ್ಲಲ್ಲಿ ದೋಲಾವಿಹಾರ ಸೌಖ್ಯವನ್ನು ಅನುಭವಿಸುತ್ತಿದ್ದವರ ಸಂಘದಿಂದಲೂ, ವನಿತೆಯರ ಸಮೂಹದಿಂದಲೂ ಸೇವಿಸಲ್ಪಟ್ಟಿರುವುದೂ ಧ್ವಜಸ್ತಂಭಾಗ್ರಗಳಲ್ಲಿ ಉಯ್ಯಾಲೆಯಂತೆ ಚಲಿಸುತ್ತಿದ್ದ ಘಂಟೆಗಳ ಧ್ವನಿಯಿಂದ ಕೂಡಿರುವುದೂ ಆಗಿತ್ತು.

೩೨. ವೀಣಾ-ವೇಣುವಾದ್ಯಗಳಿಂದ ಪ್ರಚುರವೂ ಅನೇಕ ನವಿಲುಗಳಿಂದ ಸಂಕುಲವೂ, ಮತ್ತು ಮುಖದಿಂದ ನುಡಿಸುವ ವಾದ್ಯ, ವಲಿತ-ಆಸ್ಫೋಟಿತ ಮುಂತಾದ ತಾಲಧ್ವನಿ ವಿಶೇಷದಿಂದ ಕೂಡಿರುವುದೂ ಆಗಿತ್ತು.

೩೩. ವಿನೋದಭರದಿಂದ ಮಾಡುವ ಕೋಲಾಹಲ ಧ್ವನಿಯಿಂದ ಪರಿಪೂರ್ಣವಾದ ಗವಿಗಳು ಮತ್ತು ಹಂಸ, ಪಾರಿವಾಳ, ಬಕಪಕ್ಷಿ ಮುಂತಾದ ಸುಖವಾಗಿ ವಾಸಮಾಡುವ ಪಕ್ಷಿಗಳು ಅಲ್ಲಿ ಅನೇಕವಿದ್ದವು.

ದೇಹಬಂಧೈರ್ವಿಚಿತ್ರೈಶ್ಚ ಪ್ರಕ್ರೀಡಿತಗಣೇಶ್ವರೇ ।
ಸಿಹ್ಮವ್ಯಾಘ್ರಮುಖೈರ್ಘೋರೈರವಾಶಿತೈಶ್ಚಂಡವೇಗಿತೈಃ ॥ ೩೪ ॥

ಮೃಗಮೇಷಮುಖೈಶ್ಚಾನ್ಯೈರ್ಗಜವಾಜಿಮುಖೈಸ್ತಥಾ ।
ಬಿಡಾಲವಚನೈಶ್ಚೋಗ್ರೈಃ ಕ್ರೋಷ್ಟ್ರಕಾಕಾರಮೂರ್ತಿಭಿಃ ॥ ೩೫ ॥

ಹ್ರಸ್ವೈರ್ದೀರ್ಘೈಃ ಕೃಶೈರ್ಲಂಬೋದರಮಹೋದರೈಃ ।
ಹ್ರಸ್ವಜಂಘೈಃ ಪ್ರಲಂಬೋಷ್ಠೈಸ್ತಾಲಜಂಘೈಸ್ತಥಾಪರೈಃ ॥ ೩೬ ॥

ಗೋಕರ್ಣೈರೇಕಕರ್ಣೈಶ್ಚ ಮಹಾಕರ್ಣೈರಕರ್ಣಕೈಃ ।
ಬಹುಪಾದೈರ್ಮಹಾಪಾದೈರೇಕಪಾದೈರಪಾದಕೈಃ ॥ ೩೭ ॥

ಬಹುನೇತ್ರೈರ್ಮಹಾನೇತ್ರೈರೇಕನೇತ್ರೈರನೇತ್ರಕೈಃ ।
ಏಕದಂಷ್ಟ್ರೈರ್ಮಹಾದಂಷ್ಟ್ರೈರ್ಬಹುದಂಷ್ಟ್ರೈರದಂಷ್ಟ್ರಕೈಃ ॥ ೩೮ ॥

---

೩೪, ಅಲ್ಲಿ ಗಣೇಶನು ತನ್ನ ಅನೇಕ ವಿಧದ ದೇಹವಿನ್ಯಾಸಗಳಿಂದ ಕೂಡಿದ ವ್ಯಾಯಾಮಕ್ರಿಡಾ ವಿನೋದವನ್ನು ಅನುಭವಿಸುತ್ತಿದ್ದನು, ಅಲ್ಲಿ ಸಕಲ ಭೂತಗಣಕ್ಕೆ ಅಧಿಪತಿಯಾದ ರುದ್ರನು ಅನೇಕ ಪ್ರಮಥಗಣಪರಿವೃತನಾಗಿದ್ದನು. ಆ ಭೂತಗಳು ಪ್ರಚಂಡ ವೇಗದಿಂದ ಗರ್ಜಿಸುತ್ತ ಸಿಹ್ಮ-ವ್ಯಾಘ್ರ ಮುಂತಾದ ಜಂತುಗಳಂತೆ ಮುಖವುಳ್ಳವುಗಳಾಗಿದ್ದವು.

೩೫. ಮತ್ತು ಇನ್ನು ಕೆಲವು ಗಣಗಳು ಜಿಂಕೆ, ಅಥವ ಮೇಕೆಗಳಂತೆಯೂ ಆನೆ ಅಥವಾ ಕುದುರೆಗಳಂತೆಯೂ, ಬೆಕ್ಕಿನಂತೆಯೂ ಮುಖವುಳ್ಳವುಗಳಾಗಿಯೂ ಕೆಲವು ನರಿಯ ಆಕಾರದಂತೆ ದೇಹವುಳ್ಳವುಗಳಾಗಿಯೂ ಇದ್ದುವು.

೩೬. ಕೆಲವು ಅತಿ ಹ್ರಸ್ವ, ಅತಿ ದೀರ್ಘ, ಕೃಶ, ಲಂಬಿಸುವ ಉದರ, ಮಹಾ ಪರಿಮಾಣದ ಉದರ, ಹ್ರಸ್ವವಾದ ಮೊಣಕಾಲು, ತಾಲವೃಕ್ಷದಂತೆ ದೀರ್ಘವಾದ ಮೊಣಕಾಲು, ಮತ್ತು ಲಂಬಿಸುವ ಓಷ್ಠ ಮುಂತಾದ ವಿಲಕ್ಷಣವಾದ ದೇಹ ಸಂನಿವೇಶವುಳ್ಳವುಗಳಾಗಿದ್ದುವು.

೩೭. ಹಸುವಿನಂತೆ ಶ್ರೋತ್ರ, ಒಂದು ಶ್ರೋತ್ರ, ಮಹಾಪರಿಮಾಣದ ಶ್ರೋತ್ರ ಶ್ರೋತ್ರೇಂದ್ರಿಯದ ಶೂನ್ಯತೆ, ಅನೇಕ ಸಂಖ್ಯೆಯ ಪಾದ, ಮಹಾಪಾದ. ಏಕಪಾದ, ಪಾದ ಶೂನ್ಯತೆಯೆಂಬ, ಕಿವಿ ಕಾಲುಗಳಲ್ಲಿ ವೈಷಮ್ಯವನ್ನು ಕೆಲವು ಹೊಂದಿದ್ದುವು.

೩೮. ಹೀಗೆಯೆ ಅನೇಕ ನೇತ್ರ, ಮಹಾಪರಿಮಾಣದ ನೇತ್ರ, ಏಕ ಮಾತ್ರ

ಏಕಶೀರ್ಷೈರ್ಮಹಾಶೀರ್ಷೈರ್ಬಹುಶೀರ್ಷೈರಶೀರ್ಷಕೈಃ ।
ಏಕಜಿಹ್ವೈರ್ಮಹಾಜಿಹ್ವೈರ್ಬಹುಜಿಹ್ವೈರಜಿಹ್ವಕೈಃ ।
ಏವಂರೂಪೈರ್ಮಹಾಯೋಗೈರ್ಭೂತೈರ್ಭೂತಪತಿರ್ವೃತಃ ॥ ೩೯ ॥

ವಿಶುದ್ಧ ಮುಕ್ತಾಮಣಿರತ್ನಭೂಷಿತೇ ।
ಶಿಲಾತಲೇ ಸ್ವರ್ಣಮಯೇ ಸುರಮ್ಯಕೇ ।
ಸುಖೋಪವಿಷ್ಟಂ ಮದನಾಂಗನಾಶನಂ
ಪ್ರೋವಾಚ ವಾಕ್ಯಂ ಗಿರಿರಾಜಪುತ್ರೀ ॥ ೪೦ ॥

ಭಗವನ್ ಭೂತಭವ್ಯೇಶ ಗೋವೃಷಾಂಕಿತಶಾಸನ ।
ತವ ಕಂಠೇ ಮಹಾದೇವ ಭ್ರಾಜತೇಂಬುದಸನ್ನಿಭಮ್ ॥ ೪೧ ॥

---

ನೇತ್ರ, ನೇತ್ರ ಶೂನ್ಯತೆಯೆಂಬ ಕಣ್ಣಿನ ವಿಕೃತ ರೂಪದಿಂದಲೂ ಏಕ ದಂಷ್ಟ್ರ ಮಹತ್ತಾದ ದಂಷ್ಟ್ರ, ಬಹು ದಂಷ್ಟ್ರ, ದಂಷ್ಟ್ರಾರಾಹಿತ್ಯವೆಂಬ ಕೋರದಾಡೆಯ ವಿಕೃತರೂಪದಿಂದಲೂ ಕೂಡಿಕೊಂಡಿದ್ದವು.

೩೯. ಒಂದು ಶಿರಸ್ಸು, ಮಹಾಶಿರಸ್ಸು, ಬಹುಶಿರಸ್ಸು, ಅಥವಾ ಶಿರಸ್ಸಿನಿಂದ ಶೂನ್ಯತೆ, ಏಕಜಿಹ್ವೆ, ಮಹಾಜಿಹ್ವೆ, ಬಹುಜಿಹ್ವೆ, ಅಥವಾ ಜಿಹ್ವಾ ಶೂನ್ಯತೆ ಎಂಬ ಶಿರಸ್ಸು ಮತ್ತು ನಾಲಿಗೆಗಳ ವಿಲಕ್ಷಣರೂಪಗಳು ಕೆಲವು ಭೂತಗಳಲ್ಲಿದ್ದವು. ಇಂತಹ ಇನ್ನೂ ಅನೇಕ ಮಹಾ ವಿಲಕ್ಷಣ ರೂಪಗಳನ್ನು ಹೊಂದಿದ ಯೋಗೇಶ್ವರರಾದ ಭೂತಗಳಿಂದ ಪರಮೇಶ್ವರನು ಸುತ್ತುವರಿಯಲ್ಪಟ್ಟಿದ್ದನು.

೪೦. ಆಗ ಸ್ವಚ್ಛವಾದ ಮುತ್ತುಗಳಿಂದಲೂ ರತ್ನಗಳಿಂದಲೂ ಪ್ರಕಾಶಿಸುವ, ಮತ್ತು ಸುವರ್ಣ ನಿರ್ಮಿತವಾದ ರಮ್ಯ ಶಿಲಾಸನದಲ್ಲಿ ಸುಖವಾಗಿ ಕುಳಿತುಕೊಂಡಿರುವ. ಮದನನ ಶರೀರವನ್ನು ನಾಶಮಾಡಿರುವ ತನ್ನ ಪತಿಯನ್ನು ಕುರಿತು ಹಿಮಾಚಲನ ಪುತ್ರಿಯಾದ ಪಾರ್ವತಿಯು ಈ ಮಾತನ್ನು ಆಡಿದಳು.

೪೧. ಪೂಜ್ಯನೆ? ಭೂತ-ಭಾವಿ ಮುಂತಾದ ಸಕಲ ವಸ್ತುಗಳಿಗೆ ನಿಯಾಮಕನೇ, ವೃಷಭದಿಂದ ಗುರ್ತಿಸಲ್ಪಟ್ಟ ಶಾಸನದಂಡವುಳ್ಳವನೆ! ಮಹಾದೇವನಾದ ಪತಿಯೆ! ನಿನ್ನ ಕಂಠದಲ್ಲಿ ಮೇಘದಂತೆ ಕಪ್ಪಾದ ಒಂದು ಅಂಕವು ಪ್ರಕಾಶಿಸುತ್ತದೆ.

ನಾತ್ಯುಲ್ಬಣಂ ಶುಭಂ ಶುಭ್ರೇ ನೀಲಾಂಬುಜಚಯೋಪಮಮ್ ।
ಕಿಮಿದಂ ದೀಪ್ಯತೇ ದೇವ ಕಂಠೇ ಕಾಮಾಂಗನಾಶನ ॥ ೪೨ ॥

ಕೋ ಹೇತುಃ ಕಾರಣಂ ಕಿಂ ವಾ ಕಂಠೇ ನೀಲಸ್ತ್ವಮೀಶ್ವರ ।
ಏತತ್ಸರ್ವಂ ಯಥಾನ್ಯಾಯಂ ಬ್ರೂಹಿ ಕೌತೂಹಲಂ ಹಿ ಮೇ ॥ ೪೩ ॥

ಶ್ರುತ್ವಾ ವಾಕ್ಯಂ ತತಸ್ತಸ್ಯಾಃ ಪಾರ್ವತ್ಯಾಃ ಪಾರ್ವತೀಪ್ರಿಯಃ ।
ಕಥಾಂ ಮಂಗಲಸಂಯುಕ್ತಾಂ ಕಥಯಾಮಾಸ ಶಂಕರಃ ॥ ೪೪ ॥

ಮಹೇಶ್ವರ ಉವಾಚ :—

ಮಥ್ಯಮಾನೇಽಮೃತೇ ಪೂರ್ವಂ ಕ್ಷೀರೋದೇ ಸುರದಾನವೈಃ ।
ಅಗ್ರೇ ಸಮುತ್ಥಿತಂ ಘೋರಂ ವಿಷಂ ಕಾಲಾನಲಪ್ರಭಮ್ ॥ ೪೫ ॥

ತಂ ದೃಷ್ಟ್ವಾ ಸುರಸಂಘಾಶ್ಚ ದೈತ್ಯಾಶ್ಚೈವ ವರಾನನೇ ।
ವಿಷಣ್ಣವದನಾಃ ಸರ್ವೇ ಗತಾಸ್ತೇ ಬ್ರಹ್ಮಣೋಽಂತಿಕಮ್ ॥ ೪೬ ॥

---

೪೨. ಕಾಮನನ್ನು ನಿಗ್ರಹಮಾಡಿರುವ ಪತಿದೇವನೆ! ಶುಭ್ರವಾದ ನಿನ್ನ ಶರೀರದ ಕಂಠದಲ್ಲಿ ಅತ್ಯಂತ ಉಲ್ಬಣವಾದ ಆಕಾರವಿಲ್ಲದೆ ಮಂಗಳಕರವಾಗಿ ನೀಲಾಂಬುಜಗಳ ರಾಶಿಯಂತೆ ಪ್ರಕಾಶಿಸುವ ಕಲಂಕವು ಏನು ?

೪೩. ಈಶ್ವರನೆ! ನೀನು ಸರ್ವಾಂಗದಲ್ಲಿಯೂ ಶುಭ್ರವರ್ಣದಿಂದ ಕೂಡಿದ್ದು ಈ ಕಂಠದಲ್ಲಿ ಮಾತ್ರ ನೀಲ ವರ್ಣದಿಂದ ಕೂಡಿರುತ್ತೀಯೆ. ಇದಕ್ಕೆ ಕಾರಣವೇನು ? ಇದನ್ನೆಲ್ಲ ನನ್ನ ಮನಸ್ಸಿಗೊಪ್ಪುವಂತೆ ನ್ಯಾಯ ಗರ್ಭಿತವಾಗಿ ಹೇಳು. ಇದನ್ನು ಕೇಳುವುದರಲ್ಲಿ ನನಗೆ ಅತ್ಯಂತ ಕುತೂಹಲವಿದೆ.

೪೪. ಪಾರ್ವತಿಯಲ್ಲಿ ಪ್ರೇಮವುಳ್ಳ ಶಂಕರನು ಆ ಪಾರ್ವತಿಯ ವಚನವನ್ನು ಕೇಳಿ ಮಂಗಲಗಳಿಂದ ಕೂಡಿದ ಕಥೆಯನ್ನು ಹೇಳಿದನು.

೪೫. ಈಶ್ವರನು ಹೇಳಿದ್ದೇನೆಂದರೆ—ಹಿಂದೆ ದೇವ-ದಾನವರು ಸೇರಿ ಕ್ಷೀರ ಸಮುದ್ರವನ್ನು ಅಮೃತದ ಉತ್ಪತ್ತಿಗೋಸ್ಕರ ಮಥನ ಮಾಡುತ್ತಿರಲು ಪ್ರಲಯಾಗ್ನಿಯಂತೆ ತಪಿಸುವ ಘೋರವಾದ ವಿಷವು ಮೊದಲು ಉತ್ಪನ್ನವಾಯಿತು.

೪೬. ಸುಂದರವಾದ ಮುಖವುಳ್ಳ ಪಾರ್ವತಿಯೆ ; ಆಗ ದೇವತೆಗಳ ಮತ್ತು ರಾಕ್ಷಸರ ತಂಡವು ಆ ವಿಷವನ್ನು ಕಂಡು ವಿಷಾದದಿಂದ ಬೇಸತ್ತು ಹೋದ ಮುಖವುಳ್ಳವರಾಗಿ ಎಲ್ಲರೂ ಬ್ರಹ್ಮನ ಸಮೀಪಕ್ಕೆ ಹೋದರು.

ದೃಷ್ಟ್ವಾ ಸುರಗಣಾನ್ ಭೀತಾನ್ ಬ್ರಹ್ಮೋವಾಚ ಮಹಾದ್ಯುತಿಃ ।
ಕಿಮರ್ಥಂ ವೈ ಮಹಾಭಾಗಾ ಭೀತಾ ಉದ್ವಿಗ್ನಚೇತಸಾಃ ॥ ೪೭ ॥

ಮಯಾ ತ್ರಿಗುಣಮೈಶ್ವರ್ಯಂ ಭವತಾಂ ಸಂಪ್ರಕಲ್ಪಿತಮ್ ।
ತೇನ ವ್ಯಾವರ್ತಿತೈಶ್ವರ್ಯಾ ಯೂಯಂ ಭೋ ಸುರಸತ್ತಮಾಃ ॥ ೪೮ ॥

ತ್ರೈಲೋಕ್ಯಸ್ಯೇಶ್ವರಾ ಯೂಯಂ ಸರ್ವೇ ವೈ ವಿಗತಜ್ವರಾಃ ।
ಪ್ರಜಾಸರ್ಗೇ ನ ಸೋಸ್ತೀಹ ಯಶ್ಚಾಜ್ಞಾಂ ಮೇಽತಿವರ್ತಯೇತ್ ।

ವಿಮಾನಚಾರಿಣಃ ಸರ್ವೇ ಸರ್ವೇ ಸ್ವಚ್ಛಂದಗಾಮಿನಃ ।
ಅಧ್ಯಾತ್ಮಿಕೇ ಚಾಧಿಭೂತೇ ಅಧಿದೈವೇ ಚ ನಿತ್ಯಶಃ ॥ ೫೦ ॥

ಪ್ರಜಾಃ ಕರ್ಮವಿಪಾಕೇನ ಶಕ್ತಾ ಯೂಯಂ ಪ್ರವರ್ತಿತುಮ್ ।
ತತ್ಕಿಮರ್ಥಂ ಭಯೋದ್ವಿಗ್ನಾ ಮೃಗಾಃ ಸಿಹ್ಮಾರ್ದಿತಾ ಇವ ॥ ೫೧ ॥

---

೪೭. ಮಹಾಕಾಂತಿ ಪುಂಜವುಳ್ಳ ಬ್ರಹ್ಮನು ಭೀತರಾಗಿ ಬಂದಿರುವ ದೇವವೃಂದ ವನ್ನು ನೋಡಿ ಮಹಾಭಾಗರೆ! ನೀವು ಭೀತರೂ ಗಾಬರಿಗೊಂಡ ಮಾನಸವುಳ್ಳವರೂ ಆಗಿರಲು ಕಾರಣವೇನು ? ಎಂದು ಮೊದಲಾಗಿ ಪ್ರಶ್ನಿಸಿದನು.

೪೮. ಎಲೈ ದೇವತೆಗಳೆ! ನಾನು ಸತ್ತ್ವ-ರಜಸ್ಸು-ತಮೋಗುಣಗಳ ವಿಭಾಗ ದಿಂದ ನಿಮ್ಮೆಲ್ಲರಿಗೆ ಸೃಷ್ಟಿ ಮುಂತಾದ ವ್ಯಾಪಾರಗಳಲ್ಲಿ ಈಶ್ವರತ್ವವನ್ನು ಕಲ್ಪಿಸಿರು ವೆನು. ಅದರಿಂದ ನೀವು ನಿಮ್ಮ ಅಂಶದಲ್ಲಿ ಅಸಾಧಾರಣವಾದ ಈಶ್ವರತ್ವ ಶಕ್ತಿ ಯುಳ್ಳವರಾಗಿರುತ್ತೀರಿ.

೪೯. ನೀವೆಲ್ಲರೂ ಮಾನಸತಾಪ! ಸಂಪರ್ಕವಿಲ್ಲದೇ ತ್ರಿಲೋಕಗಳಿಗೆ ಈಶ್ವರ ರಾಗಿರುತ್ತೀರಿ. ಪ್ರಜೆಗಳ ಈ ಸೃಷ್ಟಿ ಪ್ರಪಂಚದಲ್ಲಿ ನನ್ನ ಆಜ್ಞೆಯನ್ನು ಅತಿಕ್ರಮಿಸಿ ನಡೆಯುವ ವ್ಯಕ್ತಿಯು ಇಲ್ಲ.

೫೦. ಮತ್ತು ನೀವೆಲ್ಲರೂ ವಿಮಾನ ಸಂಚಾರವುಳ್ಳವರೂ, ಸ್ವಚ್ಛಂದವಾದ ನಡತೆಯುಳ್ಳವರೂ ಆಗಿರುತ್ತೀರಿ, ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿ ದೈವಿಕ ವೆಂಬ ಪ್ರಜೆಗಳ ತಾಪತ್ರಯದ ಈಶ್ವರತ್ವವು ನಿಮಗೆ ಸೇರಿದೆ.

೫೧. ಆದುದರಿಂದ ಆ ತಾಪತ್ರಯವನ್ನು ಪ್ರಜೆಗಳ ಪೂರ್ವ ಕರ್ಮವನ್ನು ಅನುಸರಿಸಿ ಪ್ರಜೆಗಳಿಗೆ ಕೊಡಲು ಶಕ್ತರಾದ ನೀವು ಸಿಂಹದಿಂದ ಗಾಬರಿಗೊಂಡಿರುವ ಮೃಗಗಳಂತೆ ಭೀತರಾಗಿರುವುದಕ್ಕೆ ಕಾರಣವೇನು ?

ಕಿಂ ದುಃಖಂ ಕೋ ನು ಸಂತಾಪಃ ಕುತೋ ವಾ ಭಯಮಾಗತಮ್ ।
ಏತತ್ಸರ್ವಂ ಯಥಾನ್ಯಾಯಂ ಶೀಘ್ರಮಾಖ್ಯಾತುಮರ್ಹಥ || ೫೨ ||

ಶ್ರುತ್ವಾ ವಾಕ್ಯಂ ತತಸ್ತಸ್ಯ ಬ್ರಹ್ಮಣಃ ಪರಮಾತ್ಮನಃ ।
ಊಚುಸ್ತೇ ಋಷಿಭಿಃ ಸಾರ್ಧಂ ಸುರದೈತ್ಯೇಂದ್ರದಾನವಾಃ || ೫೩ ||

ಸುರಾಸುರೈರ್ಮಥ್ಯಮಾನೇ ಪಯೋಂಬೌ ಪಿತಾಮಹ ।
ಭುಜಂಗಭೃಂಗಸಂಕಾಶಂ ನೀಲಜೀಮೂತಸನ್ನಿಭಮ್ || ೫೪ ||

ಪ್ರಾದುರ್ಭೂತಂ ವಿಷಂ ಘೋರಂ ಸಂವರ್ತಾಗ್ನಿಸಮಪ್ರಭಮ್ ।
ಕಾಲಮೃತ್ಯುರಿವೋದ್ಭೂತಂ ಯುಗಾಂತಾದಿತ್ಯವರ್ಚಸಮ್ || ೫೫ ||

ತ್ರೈಲೋಕ್ಯೋತ್ಸಾದಸೂರ್ಯಾಭಂ ವಿಸ್ಫುರತ್ ತತ್ಸಮಂತತಃ ।
ವಿಷೇಣೋತ್ತಿಷ್ಠಮಾನೇನ ಕಾಲಾನಲಸಮತ್ವಿಷಾ || ೫೬ ||

---

೫೨. ನಿಮಗೆ ಉಂಟಾಗಿರುವ ದುಃಖವಾವುದು? ಮನಸ್ಸಿನ ತಾಪವೇನು? ಯಾವ ಕಾರಣದಿಂದ ಭಯವು ಒದಗಿರುವುದು? ಇದೆಲ್ಲವನ್ನೂ ನ್ಯಾಯಾನುಸಾರವಾಗಿ ನನಗೆ ಹೇಳಲು ನೀವು ಅರ್ಹರಾಗಿದ್ದೀರಿ. ಎಂದು ಬ್ರಹ್ಮನು ಪ್ರಶ್ನೆ ಮಾಡಿದನು.

೫೩. ಪರಮಾತ್ಮನಾದ ಬ್ರಹ್ಮನ ವಚನವನ್ನು ಕೇಳಿ ಮುನಿಗಳ ಸಂಗಡವಿದ್ದ ದೇವತೆಗಳು, ದೈತ್ಯರು, ಮತ್ತು ದಾನವರು ಅದಕ್ಕೆ ಪ್ರತಿವಚನವನ್ನು ಇತ್ತರು.

೫೪. ಪಿತಾಮಹನೇ: ದೇವತೆಗಳಿಂದಲೂ ರಾಕ್ಷಸರಿಂದಲೂ ಸೇರಿ ಕ್ಷೀರ ಸಮುದ್ರವು ಮಥನಮಾಡಲ್ಪಡಲಾಗಿ ಕೃಷ್ಣಸರ್ಪದಂತೆಯೂ ದುಂಬಿಗಳಂತೆಯೂ ನೀರುಂಡ ಮೇಘದಂತೆಯೂ ಅತಿಯಾಗಿ ಕಪ್ಪಾದ ವಿಷವು ಮೊದಲು ಜನಿಸಿತು.

೫೫. ಆ ವಿಷವು ಅತಿ ಘೋರವೂ, ಪ್ರಲಯಕಾಲದ ಅಗ್ನಿಯಂತೆ ತಪಿಸುವುದೂ, ಕಾಲಮೃತ್ಯುವಿನಂತೆ ಇರುವುದೂ ಮತ್ತು ಕಲ್ಪಾವಸಾನದ ಸೂರ್ಯನಂತೆ ವರ್ಚಸ್ಸು ಉಳ್ಳದ್ದೂ ಆಗಿ, ಅತಿ ಭಯಂಕರವಾಗಿ ಜನಿಸಿತು.

೫೬. ತ್ರಿಲೋಕಗಳನ್ನು ತಪಿಸಿ ನಾಶಮಾಡುವ ಸೂರ್ಯನಂತೆ ಆ ವಿಷವು ಸುತ್ತಲೂ ಸ್ಫುರಿಸುತ್ತಲಿತು. ಆ ರೀತಿಯಾಗಿ ಪ್ರಲಯಾಗ್ನಿ ಸಮಾನ ಕಾಂತಿಯುಳ್ಳ ವಿಷವು ಸಮುದ್ರದಿಂದ ಮೇಲಕ್ಕೆದ್ದಿತು.

ನಿರ್ದಗ್ಧೋ ರಕ್ತಗೌರಾಂಗಃ ಕೃತಃ ಕೃಷ್ಣೋ ಜನಾರ್ದನಃ ।
ತಂ ದೃಷ್ಟ್ವಾ ರಕ್ತಗೌರಾಂಗಂ ಕೃತಂ ಕೃಷ್ಣಂ ಜನಾರ್ದನಮ್ ॥ ೫೭ ॥

ತತಃ ಸರ್ವೇ ವಯಂ ಭೀತಾಸ್ತ್ವಾಮೇವ ಶರಣಂ ಗತಾಃ ।
ಸುರಾಣಾಮಸುರಾಣಾಂ ಚ ಶ್ರುತ್ವಾ ವಾಕ್ಯಂ ಭಯಾವಹಮ್ ॥ ೫೮ ॥

ಪ್ರತ್ಯುವಾಚ ಮಹಾತೇಜಾ ಬ್ರಹ್ಮಾ ಲೋಕಪಿತಾಮಹಃ ।
ಶೃಣ್ವಂತು ದೇವತಾಃ ಸರ್ವೇ ಋಷಯಶ್ಚ ತಪೋಧನಾಃ ॥ ೫೯ ॥

ಯತ್ತದಗ್ರೇ ಸಮುತ್ಪನ್ನಂ ಮಥ್ಯಮಾನೇ ಮಹೋದಧೌ ।
ವಿಷಂ ಕಾಲಾನಲಪ್ರಖ್ಯಂ ಕಾಲಕೂಟಮಿತಿ ಶ್ರುತಮ್ ॥ ೬೦ ॥

ಯೇನ ಪ್ರೋದ್ಭೂತಮಾತ್ರೇಣ ನ ವ್ಯರಾಜಂತ ದೇವತಾಃ ।
ತಸ್ಯ ವಿಷ್ಣುರಹಂ ನಾಪಿ ಸರ್ವೇ ವಾ ಸುರಪುಂಗವಾಃ ॥ ೬೧ ॥

---

೫೭. ಆಗ ಕೆಂಪು, ಬಿಳುಪು ಬಣ್ಣದ ಸುಂದರಗಾತ್ರವುಳ್ಳ ಜನಾರ್ದನನು ವಿಷ ಜ್ವಾಲೆಯಿಂದ ಸುಟ್ಟು ಕಪ್ಪಾಗಿ ಹೋದನು, ಹೀಗೆ ರಕ್ತ-ಗೌರವರ್ಣಗಳಿಂದ ರಮ್ಯನಾದ ಜನಾರ್ದನನು ಕಪ್ಪಾಗಿ ಹೋದುದನ್ನು ನಾವೆಲ್ಲರೂ ನೋಡಿದೆವು.

೫೮. ಆ ವಿಷದರ್ಶನದಿಂದ ನಾವೆಲ್ಲರೂ ಬಹಳ ಭೀತರಾಗಿ ಇಲ್ಲಿಗೆ ಬಂದು ನಿನ್ನನ್ನು ಶರಣಹೊಂದಿರುತ್ತೇವೆ, ಬ್ರಹ್ಮನು ಈ ರೀತಿಯಾಗಿ ದೇವತೆಗಳು, ಮತ್ತು ರಾಕ್ಷಸರು ಹೇಳಿರುವ ಭಯಕಾರಣವನ್ನು ಸೂಚಿಸುವ ವಚನವನ್ನು ಕೇಳಿದನು.

೫೯. ಮಹಾ ತೇಜಸ್ವಿಯೂ ಲೋಕಗಳಿಗೆಲ್ಲ ಪಿತಾಮಹನೂ ಆದ ಬ್ರಹ್ಮನು ಪ್ರತಿವಚನವನ್ನು ಹೇಳಿದನು, ಸಕಲ ದೇವತೆಗಳೆ! ಮತ್ತು ತಪಸ್ವಿಗಳಾದ ಮುನಿಗಳೆ! ನನ್ನ ವಚನವನ್ನು ಕೇಳಿರಿ.

೬೦. ಮಹೋದಧಿಯನ್ನು ಮಥಿಸುವಾಗ ಪ್ರಲಯಾಗ್ನಿಯಂತೆ ಜ್ವಲಿಸುತ್ತ ಆದಿಯಲ್ಲಿ ಯಾವುದು ಹುಟ್ಟಿರುವುದೋ ಅದು ಕಾಲಕೂಟ ವಿಷವೆಂದು ಪ್ರಸಿದ್ಧವಾಗಿರುವುದು.

೬೧. ಯಾವುದು ಹುಟ್ಟಿದ ಮಾತ್ರಕ್ಕೆ ದೇವತೆಗಳೆಲ್ಲರೂ ತೇಜೋಹೀನರಾಗಿ ಮೊದಲಿನಂತೆ ಪ್ರಕಾಶಿಸಲಿಲ್ಲವೊ, ಆ ವಿಷವನ್ನು ನಾನಾಗಲಿ, ಮನುಷ್ಯನಾಗಲಿ, ಅಥವಾ ಸಕಲ ದೇವತೆಗಳಾಗಲಿ ತಡೆಯಲಾರೆವು.

ನ ಶಕ್ನುವಂತಿ ವೈ ಸೋಢುಂ ವೇಗಮನ್ಯತ್ರ ಶಂಕರಾತ್ ।
ಇತ್ಯುಕ್ತ್ವಾ ಪದ್ಮಗರ್ಭಾಭಃ ಪದ್ಮಯೋನಿರಯೋನಿಜಃ ॥ ೬೨ ॥

ಓಂಕಾರಂ ಸಮನುಸ್ಮೃತ್ಯ ಧ್ಯಾಯನ್ ಜ್ಯೋತಿಃ ಸಮಂತತಃ ।
ತತಃ ಸ್ತೋತುಂ ಸಮಾರಬ್ಧೋ ಬ್ರಹ್ಮಾ ವೇದವಿದಾಂ ವರಃ ॥ ೬೩ ॥

ನಮಸ್ತುಭ್ಯಂ ವಿರೂಪಾಕ್ಷ ನಮಸ್ತೇ ದಿವ್ಯಚಕ್ಷುಷೇ ।
ನಮಃ ಪಿನಾಕಹಸ್ತಾಯ ವಜ್ರಹಸ್ತಾಯ ವೈ ನಮಃ ॥ ೬೪ ॥

ನಮಸ್ತ್ರೈಲೋಕ್ಯನಾಥಾಯ ಭೂತಾನಾಂ ಪತಯೇ ನಮಃ ।
ನಮಃ ಸುರಾರಿಹಂತ್ರೇ ಚ ಸೋಮಸೂರ್ಯಾಗ್ನಿ ಚಕ್ಷುಷೇ ॥ ೬೫ ॥

ಬ್ರಹ್ಮಣೇ ಚೈವ ರುದ್ರಾಯ ವಿಷ್ಣವೇ ಚೈವ ತೇ ನಮಃ ।
ಸಾಂಖ್ಯಾಯ ಚೈವ ಯೋಗಾಯ ಭೂತಗ್ರಾಮಾಯ ವೈ ನಮಃ॥೬೬॥

---

೬೨. ಶಂಕರನನ್ನು ಬಿಟ್ಟು ಮಿಕ್ಕ ಯಾವ ದೇವತೆಗಳಿಂದಲೂ ಅದರ ವೇಗವನ್ನು ಸಹಿಸಲಾಗುವುದಿಲ್ಲವೆಂದು ಹೇಳಿ ಆ ವಿಷಜ್ವಾಲೆಯ ಶಾಂತಿಗೋಸ್ಕರ ಪದ್ಮಗರ್ಭದಂತೆ ಕಾಂತಿಯುಳ್ಳ ಪದ್ಮಪುಷ್ಪದಲ್ಲಿ ಜನಿಸಿದ ಬ್ರಹ್ಮನು ಶಂಕರನನ್ನು ಸ್ಮರಿಸಿದನು.

೬೩. ಆದಿಯಲ್ಲಿ ಓಂಕಾರವನ್ನು ಸ್ಮರಿಸಿ ಸುತ್ತಲೂ ವ್ಯಾಪ್ತವಾದ ಚೈತನ್ಯ ಜ್ಯೋತಿಯನ್ನು ಧ್ಯಾನಿಸಿ ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ಬ್ರಹ್ಮನು ಸ್ತೋತ್ರ ಮಾಡಲು ಆರಂಭಿಸಿದನು.

೬೪. ಈಶ್ವರನ ಮಹಿಮೆಯನ್ನು ಸೂಚಿಸುವ ನಾಮಗಳನ್ನು ಪಠಿಸಿ ನಮಸ್ಕರಿಸಿದನು, ಶಂಕರನೆ! ವಿರೂಪವಾದ ಮೂರನೆಯ ಕಣ್ಣು ಉಳ್ಳ, ದಿವ್ಯಜ್ಯೋತಿರ್ಮಯವಾದ ನೇತ್ರವುಳ್ಳ, ಪಿನಾಕವನ್ನೂ ಮತ್ತು ವಜ್ರವನ್ನೂ ಹಸ್ತದಲ್ಲಿ ಧರಿಸಿರುವ ನಿನಗೆ ನಮಸ್ಕಾರವು.

೬೫. ತ್ರಿಲೋಕಗಳಿಗೆ ಅಧಿಪತಿಯೂ ಸಕಲ ಭೂತಗಳಿಗೆ ಪ್ರಭುವೂ, ಸುರಶತ್ರುಗಳನ್ನು ಸಂಹರಿಸುವವನೂ, ಮತ್ತು ಚಂದ್ರ-ಸೂರ್ಯ-ಅಗ್ನಿ ರೂಪವಾದ ನೇತ್ರತ್ರಯವುಳ್ಳವನೂ ಆದ ಶಂಕರನಿಗೆ ನಮಸ್ಕಾರವು.

೬೬. ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿ ಸ್ವರೂಪನೂ, ಜ್ಞಾನಯೋಗ

**ಮನ್ಮಥಾಂಗವಿನಾಶಾಯ ಕಾಲಪೃಷ್ಠಾಯ ವೈ ನಮಃ ।**
**ಸುರೇತಸೇಽಥ ರುದ್ರಾಯ ದೇವದೇವಾಯ ರಂಹಸೇ ॥ ೬೭ ॥**

**ಕಪರ್ದಿನೇ ಕರಾಲಾಯ ಶಂಕರಾಯ ಹರಾಯ ಚ ।**
**ಕಪಾಲಿನೇ ವಿರೂಪಾಯ ಶಿವಾಯ ವರದಾಯ ಚ ॥ ೬೮ ॥**

**ತ್ರಿಪುರಘ್ನಮಖಘ್ನಾಯ ಮಾತೄಣಾಂ ಪತಯೇ ನಮಃ ।**
**ವೃದ್ಧಾಯ ಚೈವ ಶುದ್ಧಾಯ ಮುಕ್ತಾಯೈವ ಬಲಾಯ ಚ ॥ ೬೯ ॥**

**ಲೋಕತ್ರಯೈಕವೀರಾಯ ಚಂದ್ರಾಯ ವರುಣಾಯ ಚ ।**
**ಅಗ್ರಾಯ ಚೈವ ಚೋಗ್ರಾಯ ವಿಪ್ರಾಯಾನೇಕಚಕ್ಷುಷೇ ॥ ೭೦ ॥**

---

ಕರ್ಮಯೋಗಗಳಿಂದ ಪ್ರಾಪ್ಯನೂ ನಿಖಿಲ ಭೂತಗಣಕ್ಕೆ ಅಧಿಪತಿಯೂ ಆದ ನಿನಗೆ ನಮಸ್ಕಾರವು.

೬೭. ಮನ್ಮಥನ ದೇಹವನ್ನು ಭಸ್ಮಮಾಡಿರುವ, ಕಾಲರೂಪವಾದ ಪೃಷ್ಠ ಭಾಗವುಳ್ಳ, ಅಮೋಘವಾದ ವೀರ್ಯವುಳ್ಳ, ಸಂಹಾರವ್ಯಾಪಾರದಲ್ಲಿ ಅತಿಯಾದ ವೇಗವುಳ್ಳ, ಮತ್ತು ದೇವೋತ್ತಮನಾದ ರುದ್ರನಿಗೆ ನಮಸ್ಕಾರವು.

೬೮. ಮತ್ತು ಜಟಾಜೂಟವನ್ನು ಧರಿಸಿದವನೂ ಭಯಂಕರ ಸ್ವರೂಪನೂ, ಸುಖಕರನೂ, ಸಕಲಾನರ್ಥಗಳನ್ನು ಅಪಹರಿಸುವವನೂ, ಕಪಾಲವನ್ನು ಹಸ್ತದಲ್ಲಿ ಧರಿಸಿದವನೂ, ವಿರೂಪವಾದ ಆಕೃತಿಯುಳ್ಳವನೂ, ಶಿವಸ್ವರೂಪನೂ ಮತ್ತು ಭಕ್ತರಿಗೆ ವರಗಳನ್ನು ಕೊಡುವವನೂ ಆದ ನಿನ್ನನ್ನು ನಮಸ್ಕರಿಸುವೆನು.

೬೯. ತ್ರಿಪುರಾಸುರರನ್ನು ನಿಗ್ರಹಿಸಿದವನೂ, ದಕ್ಷಯಜ್ಞವನ್ನು ಧ್ವಂಸಮಾಡಿದವನೂ, ಮಾತೃಗಣಕ್ಕೆ ಅಧಿಪತಿಯೂ, ಅತ್ಯಂತ ವೃದ್ಧಿ ಹೊಂದಿದ ಸ್ವರೂಪವುಳ್ಳವನೂ, ಶುದ್ಧನೂ, ಮುಕ್ತನೂ, ಮತ್ತು ಮಹಾ ಬಲಿಷ್ಠನೂ ಆದ ಈಶ್ವರನಿಗೆ ನಮಸ್ಕಾರವು.

೭೦. ಲೋಕತ್ರಯಕ್ಕೆ ಏಕವೀರನೂ ಚಂದ್ರ ವರುಣ ಮುಂತಾದ ದೇವತಾ ಸ್ವರೂಪನೂ, ಅಥವಾ ಚಂದ್ರನಂತೆ ಆಹ್ಲಾದವನ್ನು ಕೊಡುವವನೂ, ವರುಣನಂತೆ ದುಷ್ಟವಾರಕನೂ, ಅಗ್ರಗಾಮಿಯೂ, ಉಗ್ರಸ್ವರೂಪನೂ, ವಿಪ್ರವಿಗ್ರಹಧಾರಿಯೂ, ಮತ್ತು ವಿಶ್ವರೂಪವಾದ ನೇತ್ರಗಳುಳ್ಳವನೂ ಆದ ನಿನ್ನನ್ನು ನಮಸ್ಕರಿಸುವೆನು.

ರಜಸೇ ಚೈವ ಸತ್ತ್ವಾಯ ನಮಸ್ತೇಽವ್ಯಕ್ತಯೋನಯೇ ।
ನಿತ್ಯಾಯ ಚೈವಾನಿತ್ಯಾಯ ನಿತ್ಯಾನಿತ್ಯಾಯ ವೈ ನಮಃ ॥ ೭೦ ॥

ವ್ಯಕ್ತಾಯ ಚೈವಾವ್ಯಕ್ತಾಯ ವ್ಯಕ್ತಾವ್ಯಕ್ತಾಯ ವೈ ನಮಃ ।
ಚಿಂತ್ಯಾಯ ಚೈವಾಚಿಂತ್ಯಾಯ ಚಿಂತ್ಯಾಚಿಂತ್ಯಾಯ ವೈ ನಮಃ ॥ ೭೨ ॥

ಜಗತಾಮಾರ್ತಿನಾಶಾಯ ಪ್ರಿಯನಾರಾಯಣಾಯ ಚ ।
ಉಮಾಪ್ರಿಯಾಯ ಶರ್ವಾಯ ನಂದಿವಕ್ತ್ರಾಂಕಿತಾಯ ಚ ॥ ೭೩ ॥

ಪಕ್ಷಮಾಸಾರ್ಧಮಾಸಾಯ ಋತುಸಂವತ್ಸರಾಯ ಚ ।
ಬಹುರೂಪಾಯ ಮುಂಡಾಯ ದಂಡಿನೇ ಚ ವರೂಥಿನೇ ॥ ೭೪ ॥

---

೭೧. ರಜೋಗುಣ ಮತ್ತು ಸತ್ತ್ವಗುಣಗಳ ವ್ಯಷ್ಟಿರೂಪನೂ ಮತ್ತು ಗುಣ ತ್ರಯ ಸಂಘಾತರೂಪವಾದ ಅವ್ಯಕ್ತವೆಂಬ ಕಾರಣವುಳ್ಳವನೂ, ನಿತ್ಯ-ಅನಿತ್ಯ-ಸಕಲ ವಸ್ತುಗಳ ಸ್ವರೂಪನೂ, ಕಾರ್ಯರೂಪ, ಅನಾದಿರೂಪಗಳಿಂದ ನಿತ್ಯಾನಿತ್ಯವೆಂಬ ಉಭಯ ರೂಪನೂ ಆದ ಪರಮಾತ್ಮನಿಗೆ ನಮಸ್ಕಾರವು.

೭೨. ಅಭಿವ್ಯಕ್ತಿ ಹೊಂದಿದವನೂ, ಅಭಿವ್ಯಕ್ತಿಯಿಲ್ಲದವನೂ, ವ್ಯಕ್ತ-ಅವ್ಯಕ್ತ ಉಭಯರೂಪನೂ ಆಗಿರುವನು. ಅದರಂತೆ ಚಿಂತಾವಿಷಯನೂ, ಚಿಂತಾಕ್ಕೆ ವಿಷಯ ನಾಗದವನೂ, ಚಿಂತ್ಯ-ಅಚಿಂತ್ಯ ಉಭಯರೂಪನೂ ಆಗಿರುವನು. ವಿಶ್ವರೂಪನಾದ ಸ್ವಾಮಿಯು ವ್ಯಕ್ತ-ಚಿಂತ್ಯಗಳಾದ ಕಾರ್ಯಗಳ ಅಭೇದದಿಂದ ವ್ಯಕ್ತ-ಚಿಂತ್ಯರೂಪ ನಾಗುವನು. ಸ್ವರೂಪದಿಂದ ಅವ್ಯಕ್ತ-ಅಚಿಂತ್ಯನಾಗುವನು. ಹೀಗೆ ಲೋಕವಿಲಕ್ಷಣ ವಾದ ಅಂಶದ್ವಯಗಳಿಂದ ವ್ಯಕ-ಅವ್ಯಕ್ತ ಮತ್ತು ಚಿಂತ್ಯಾ-ಅಚಿಂತ್ಯವೆಂಬ ಉಭಯ ವಿಧದ ರೂಪವನ್ನು ಹೊಂದಿರುವನು.

೭೩. ಜಗತ್ತಿನ ಪೀಡೆಯನ್ನು ಕಳೆಯುವವನೂ, ನಾರಾಯಣನಿಗೆ ಪ್ರಿಯ ನಾದವನೂ, ಪಾರ್ವತೀ ಪ್ರೀಯನೂ, ಎದುರಿಗೆ ನಂದಿಯ ಮುಖದಿಂದ ಅಂಕಿತವಾದ ಧ್ವಜಮುಖವುಳ್ಳವನೂ ಆದ ಶರ್ವದೇವನಿಗೆ ನಮಸ್ಕಾರವು.

೭೪. ಪಕ್ಷ–ಮಾಸ--ಅರ್ಧಮಾಸ--ಋತು-ಸಂವತ್ಸರಗಳೆಂಬ ಕಾಲಾಂಶಸ್ವರೂ ಪನೂ, ದಂಡಧಾರಿಯೂ, ವರೂಥವೆಂಬ ಆಸನವಿಶೇಷವುಳ್ಳವನೂ ಆದ ಶಿವನಿಗೆ ನಮಸ್ಕಾರವು.

ನಮಃ ಕಪಾಲಹಸ್ತಾಯ ದಿಗ್ವಾಸಾಯ ಶಿಖಂಡಿನೇ ।
ಧನ್ವಿನೇ ರಥಿನೇ ಚೈವ ಯಮಿನೇ ಬ್ರಹ್ಮಚಾರಿಣೇ ॥ ೭೫ ॥

ಋಗ್ಯಜುಃಸಾಮವೇದಾಯ ಪುರುಷಾಯೇಶ್ವರಾಯ ಚ ।
ಇತ್ಯೇವಮಾದಿಚರಿತ್ರೈಃ ಸ್ತೋತ್ರೈಃ ಸ್ತುತ್ಯ ನಮೋಽಸ್ತು ತೇ ।
ಏವಂ ಸ್ತುತ್ವಾ ತತೋ ಬ್ರಹ್ಮಾ ಪ್ರಣಿಪತ್ಯ ವರಾನನೇ ॥ ೭೬ ॥

ಜ್ಞಾತ್ವಾ ತು ಭಕ್ತಿಂ ಮಮ ದೇವತಾನಾಂ ।
ಗಂಗಾಜಲಾಸ್ಫಾಲಿತಮುಕ್ತ ಕೇಶಃ ।
ಸೂಕ್ಷ್ಮೋಽಸಿ ಯೋಗಾತಿಶಯಾದಚಿಂತ್ಯೋ
ನ ಹಿ ಪ್ರಭೋ ವ್ಯಕ್ತಿಮುಪೈಷಿ ರುದ್ರ ॥ ೭೭ ॥

ಏವಂ ಭಗವತಾ ಪೂರ್ವಂ ಬ್ರಹ್ಮಣಾ ಲೋಕಕರ್ತೃಣಾ ।
ಸ್ತುತೋಽಹಂ ವಿವಿಧೈಃ ಸ್ತೋತ್ರೈರ್ವೇದವೇದಾಂಗಸಂಭವೈಃ ॥ ೭೮ ॥

---

೭೫. ಕಪಾಲವನ್ನು ಹಸ್ತದಿಂದ ಧರಿಸಿದವನೂ, ದಿಕ್ಕುಗಳೆಂಬ ವಸ್ತ್ರವನ್ನು ಧರಿಸಿದವನೂ, ಶಿಖಂಡವೆಂಬ ಕೇಶಗಳ ಸನ್ನಿವೇಶ ವಿಶೇಷವನ್ನು ಧರಿಸಿದವನೂ, ಧನುಸ್ಸನ್ನು ಧರಿಸಿದವನೂ, ರಥವನ್ನು ಏರಿದವನೂ, ಇಂದ್ರಿಯ ನಿಯಮವುಳ್ಳವನೂ, ಮತ್ತು ಬ್ರಹ್ಮಚಾರಿಯೂ ಆದ ಶಿವನಿಗೆ ನಮಸ್ಕಾರವು.

೭೬. ಋಗ್ವೇದ-ಯಜುರ್ವೇದ-ಮತ್ತು ಸಾಮವೇದಗಳ ಸ್ವರೂಪನೂ, ಪೂರ್ಣವಾದ ಆಕಾರವುಳ್ಳವನೂ, ಮತ್ತು ನಿಯಾಮಕನೂ ಆದ ಶಿವನಿಗೆ ನಮಸ್ಕಾರವು. ಈ ರೀತಿಯಾದ ಸ್ತುತಿ ಮಂತ್ರಗಳಿಂದ ಸ್ತುತಿ ಮಾಡಲು ಅರ್ಹನಾದವನೇ ನಿನಗೆ ನಮಸ್ಕಾರವು. ಸುಂದರವಾದ ಮುಖವುಳ್ಳ ಪಾರ್ವತಿಯೆ! ಈ ರೀತಿಯಾಗಿ ಬ್ರಹ್ಮನು ನನ್ನನ್ನು ಸ್ತೋತ್ರಮಾಡಿ ನಮಸ್ಕರಿಸಿದನು.

೭೭. ಮತ್ತು ಗಂಗಾಜಲದ ವೇಗದಿಂದ ಮುಕ್ತವಾದ ಕೇಶಗಳುಳ್ಳವನೂ, ಪರಮ ಸೂಕ್ಷ್ಮರೂಪನೂ, ಮತ್ತು ಯೋಗ ಮಹಿಮೆಯಿಂದ ಚಿಂತಿಸಲು ಅಶಕ್ಯನೂ ಆದ ಪ್ರಭುವೆ! ನೀನು ಸಾಮಾನ್ಯವಾಗಿ ಸರ್ವರಿಗೂ ವ್ಯಕ್ತನಾಗುವವನಲ್ಲ. ಆದರೆ ಈ ಶರಣಾಗತರಾಗಿರುವ ಸಕಲ ದೇವತೆಗಳ ಮತ್ತು ನನ್ನ ಭಕ್ತಿಯನ್ನು ತಿಳಿಯುವವನಾಗು.

೭೮. ಈ ರೀತಿಯಾಗಿ ಲೋಕಗಳನ್ನು ಸೃಷ್ಟಿಸುವ ಪೂಜ್ಯನಾದ ಬ್ರಹ್ಮನಿಂದ

ತತೋಽಹಂ ಮುಖ್ಯಯಾ ವಾಚಾ ಪಿತಾಮಹಮಥಾಬ್ರವಮ್ ।
ಭೂತಭವ್ಯ ಭವನ್ನಾಥ ಲೋಕನಾಥ ಜಗತ್ಪತೇ　　　　॥ ೭೯ ॥

ಕಿಂ ಕಾರ್ಯಂ ತೇ ಮಯಾ ಬ್ರಹ್ಮನ್ ಕರ್ತವ್ಯಂ ವದ ಸುವ್ರತ ।
ಶ್ರುತ್ವಾ ವಾಕ್ಯಂ ತತೋ ಬ್ರಹ್ಮಾ ಪ್ರತ್ಯುವಾಚಾಂಬುಜೇಕ್ಷಣಃ ॥ ೮೦ ॥

ಭೂತಭವ್ಯಭವನ್ನಾಥ ಶ್ರೂಯತಾಂ ಕಾರಣೇಶ್ವರ ।
ಸುರಾಸುರೈರ್ಮಥ್ಯಮಾನೇ ಪಯೋಧೌ ಪಂಕಜೇಕ್ಷಣ　　　　॥ ೮೧ ॥

ಭಗವನ್ಮೇಘಸಂಕಾಶಂ ನೀಲಜೀಮೂತಸನ್ನಿಭಮ್ ।
ಪ್ರಾದುರ್ಭೂತಂ ವಿಷಂ ಘೋರಂ ಸಂವರ್ತಾಗ್ನಿಸಮಪ್ರಭಮ್॥ ೮೨ ॥

---

ವೇದ-ವೇದಾಂಗಗಳಿಂದ ಪ್ರತಿಪಾದಿಸುವ ಅರ್ಥಗರ್ಭಿತವಾದ ಸ್ತುತಿಗಳಿಂದ ನಾನು ಸ್ತುತಿಸಲ್ಪಟ್ಟೆನು.

೭೯. ಅನಂತರದಲ್ಲಿ ನಾನು ಬ್ರಹ್ಮನನ್ನು ಕುರಿತು ಮುಖ್ಯವಾದ ಮಾತುಗಳನ್ನಾಡಿದೆನು. ಭೂತ, ಭಾವಿ, ವರ್ತಮಾನವೆಂಬ ಕಾಲತ್ರಯವಸ್ತುಗಳಿಗೆ ಪತಿಯಾದ ಪ್ರಪಂಚಕ್ಕೆ ರಕ್ಷಕನಾದ ಮತ್ತು ಲೋಕಗಳಿಗೆ ಪ್ರಭುವಾದ ಬ್ರಹ್ಮನೆ! ನಿನಗೆ ಏನು ಉಪಕಾರವಾಗಬೇಕಾಗಿದೆ ?

೮೦. ಉತ್ತಮವಾದ ವ್ರತಗಳಿಂದ ಕೂಡಿದ ಬ್ರಹ್ಮನೇ ! ನನ್ನಿಂದ ನಿನಗೆ ಆಗಬೇಕಾಗಿರುವ ಕಾರ್ಯವಾವುದು ? ಹೇಳು. ಎಂದು ಶಿವನು ಕೇಳಲಾಗಿ ಕಮಲದಂತೆ ಸುಂದರ ನೇತ್ರಗಳುಳ್ಳ ಬ್ರಹ್ಮನು ಇದನ್ನು ಕೇಳಿ ಪ್ರತ್ಯುತ್ತರವನ್ನು ಕೊಟ್ಟನು.

೮೧. ಸಕಲ ವಸ್ತುಕಾರಣನಾದ, ಭೂತ-ಭಾವಿ-ವರ್ತಮಾನವೆಂಬ ಕಾಲತ್ರಯವಸ್ತುಗಳ ಅಧಿಪತಿಯಾದ ಮತ್ತು ಕಮಲದಂತೆ ದಿವ್ಯಸುಂದರ ನಯನವುಳ್ಳ ಶಿವನೆ! ಕೇಳು ; ದೇವದಾನವರು ಸೇರಿ ಕ್ಷೀರಸಮುದ್ರವನ್ನು ಮಥನ ಮಾಡಲು ಉಪಕ್ರಮಿಸಿದರು.

೮೨. ಭಗವಂತನೆ ! ಆಗ ಕಪ್ಪಾದ ಮೇಘದಂತೆ ಇರುವ ಮತ್ತು ಪ್ರಲಯ ಕಾಲದ ಅಗ್ನಿಯಂತೆ ತಪಿಸುವ ಜ್ವಾಲೆಯುಳ್ಳ ಘೋರವಾದ ವಿಷವು ಉತ್ಪನ್ನವಾಯಿತು.

ತಂ ದೃಷ್ಟ್ವಾ ಚ ವಯಂ ಸರ್ವೇ ಭೀತಾಃ ಸಂಭ್ರಾಂತಚೇತಸಃ ।
ತತ್ಪಿಬಸ್ವ ಮಹಾದೇವ ಲೋಕಾನಾಂ ಹಿತಕಾಮ್ಯಯಾ ॥ ೮೩ ॥

ಭವಾಞ್ಭರ್ತ್ತಾಶ್ಚ ಭೋಕ್ತಾ ವೈ ಭವಾನ್ ದೇವವರಃ ಪ್ರಭೋ ।
ತ್ವದೃತೇಽನ್ಯೋ ಮಹಾದೇವ ವೇಗಂ ಸೋಢುಂ ನ ವಿದ್ಯತೇ ॥ ೮೪ ॥

ಏವಂ ತಸ್ಯ ವಚಃ ಶ್ರುತ್ವಾ ಬ್ರಹ್ಮಣಃ ಪರಮೇಷ್ಠಿನಃ ।
ಬಾಢಮಿತ್ಯೇವ ತದ್ವಾಕ್ಯಂ ಪ್ರತಿಗೃಹ್ಯ ವರಾನನೇ ॥ ೮೫ ॥

ತತೋಽಹಂ ಪಾತುಮಾರಬ್ಧೋ ವಿಷಮಂತಕಸನ್ನಿಭಮ್ ।
ಪಿಬತೋ ಮೇ ಮಹಾಘೋರಂ ವಿಷಂ ಸುರಭಯಪ್ರದಮ್ ॥ ೮೬ ॥

ಕಂಠಃ ಸಮಭವತ್ತೂರ್ಣಂ ಕೃಷ್ಣೋ ವೈ ವರವರ್ಣಿನಿ ।
ತಂ ದೃಷ್ಟ್ವೋತ್ಪಲಪತ್ರಾಭಂ ಕಂಠಸಕ್ತಮಿವೋತ್ಪಲಮ್ ॥ ೮೭ ॥

---

೮೩. ಅದನ್ನು ನೋಡಿ ನಾವು ಭಯಗೊಂಡವರೂ ಗಾಬರಿ ಹೊಂದಿದ ಮಾನಸವುಳ್ಳವರೂ ಆಗಿರುವೆವು. ಮಹಾದೇವನೆ! ಆ ವಿಷವನ್ನು ಪ್ರಪಂಚಕ್ಕೆ ಹಿತವನ್ನುಂಟುಮಾಡಬೇಕೆಂಬ ಕರುಣೆಯಿಂದ ನೀನು ಪಾನಮಾಡು.

೮೪. ಪ್ರಭುವೆ! ಮತ್ತು ಮಹಾದೇವನೆ! ಅಂತಹ ಘೋರ ವಿಷವನ್ನು ಪಾನಮಾಡಲು ದೇವರಲ್ಲಿ ದಕ್ಷನಾದ ನೀನು ಮಾತ್ರ ಶಕ್ತನು. ನಿನ್ನನ್ನು ಬಿಟ್ಟು ಇನ್ನಾರಿಂದಲೂ ಈ ಉಗ್ರ ವಿಷದ ವೇಗವನ್ನು ಸಹಿಸಲಾಗುವುದಿಲ್ಲ.

೮೫. ಸುಂದರ ಮುಖಿಯೆ! ಪರಮ ಪೂಜ್ಯಸ್ಥಾನದಲ್ಲಿದ್ದ ಬ್ರಹ್ಮನ ಈ ವಚನವನ್ನು ಕೇಳಿ ನಿಜವು; ಹಾಗೆಯೇ ಆಗಲೆಂದು ಅದನ್ನು ಒಪ್ಪಿಕೊಂಡೆನು.

೮೬. ಅನಂತರದಲ್ಲಿ ನಾನು ಮೃತ್ಯುವಿಗೆ ಸಮಾನವಾದ ಆ ವಿಷವನ್ನು ಪಾನಮಾಡಲು ಆರಂಭಿಸಿದೆನು. ಆಗ ಆ ಮಹಾಘೋರ ವಿಷವನ್ನು ನಾನುಪಾನ ಮಾಡುತ್ತಿರಲು ದೇವತೆಗಳಿಗೆಲ್ಲ ಭಯಂಕರವಾದ ಅವಸ್ಥೆಯುಂಟಾಯಿತು.

೮೭. ಪ್ರಶಸ್ತಳಾದ ಸ್ತ್ರೀರತ್ನವೆ! ಆಗ ನನ್ನ ಕಂಠವು ಬಲುಬೇಗ ಕಪ್ಪು ಬಣ್ಣವಾಯಿತು. ಆಗ ಬ್ರಹ್ಮನು ಕನ್ನೈದಿಲೆಯ ದಳದಂತೆ ಕಾಂತಿಯುಳ್ಳ, ಮತ್ತು ಕತ್ತನ್ನು ಸುತ್ತುಹಾಕಿಕೊಂಡಿರುವ ಕೃಷ್ಣ ಸರ್ಪದಂತೆ ಇರುವ ವಿಷವನ್ನು ನೋಡಿದನು.

ತಕ್ಷಕಂ ನಾಗರಾಜಾನಂ ಲೇಲಿಹಾನಮಿವೋತ್ಥಿತಮ್ ।
ಅಥೋವಾಚ ಮಹಾತೇಜಾ ಬ್ರಹ್ಮಾ ಲೋಕಪಿತಾಮಹಃ ॥ ೮೮ ॥

ಶೋಭಸೇ ತ್ವಂ ಮಹಾದೇವ ಕಂಠೇನಾನೇನ ಸುವ್ರತ ।
ತತಸ್ತಸ್ಯ ವಚಃ ಶ್ರುತ್ವಾ ಮಯಾ ಗಿರಿವರಾತ್ಮಜೇ ॥ ೮೯ ॥

ಕಂಠೇ ಧೃತಂ ವಿಷಂ ಘೋರಂ ನೀಲಕಂಠಸ್ತತೋಽಸ್ಮ್ಯಹಮ್ ।
ಪಶ್ಯತಾಂ ಸುರಸಂಘಾನಾಂ ದೈತ್ಯಾನಾಂ ಚ ವರಾನನೇ ॥
ಯಕ್ಷಗಂಧರ್ವಭೂತಾನಾಂ ಪಿಶಾಚೋರಗರಕ್ಷಸಾಮ್ ॥ ೯೦ ॥

ತತ್ಕಾಲಕೂಟಂ ವಿಷಮುಗ್ರವೇಗಂ
ಕಂಠೇ ಧೃತಂ ಪರ್ವತರಾಜಪುತ್ರಿ ।
ನಿವೇಶ್ಯಮಾನಂ ಸುರದೈತ್ಯಸಂಘೋ
ದೃಷ್ಟ್ವಾ ಪರಂ ವಿಸ್ಮಯಮಾಜಗಾಮ ॥ ೯೧ ॥

ತತಃ ಸುರಗಣಾಃ ಸರ್ವೇ ಸದೈತ್ಯೋರಗರಾಕ್ಷಸಾಃ ।
ಊಚುಃ ಪ್ರಾಂಜಲಯೋ ಭೂತ್ವಾ ಮತ್ತಮಾತಂಗಗಾಮಿನಿ ॥ ೯೨ ॥

---

೮೮. ಮತ್ತು ನಾಗರಾಜನಾದ ತಕ್ಷಕನು ಆಸ್ವಾದಿಸುತ್ತಿರುವನೋ ಎಂಬಂತೆ ಕಾಣುತ್ತಲಿರುವ ವಿಷವನ್ನು ನೋಡಿ ಮಹಾ ತೇಜಸ್ವಿಯೂ ಲೋಕಕ್ಕೆ ಪಿತಾಮಹನೂ ಆದ ಬ್ರಹ್ಮನು ಮಾತನಾಡಿದನು.

೮೯. ಮಹಾದೇವನೆ! ಸಾಧುವಾದ ವ್ರತವುಳ್ಳವನೆ! ಈ ನೀಲಕಂಠದಿಂದ ನೀನು ಶೋಭಿಸುತ್ತೀ. ಪರ್ವತರಾಜನ ಪುತ್ರಿಯೇ! ಈ ರೀತಿಯಾದ ಬ್ರಹ್ಮನ ವಚನವನ್ನು ನಾನು ಶ್ರವಣಮಾಡಿದೆನು.

೯೦. ಸುಂದರಿಯೆ! ದೇವತೆಗಳು, ದೈತ್ಯರು, ಯಕ್ಷರು, ಗಂಧರ್ವರು, ಭೂತಗಳು, ಪಿಶಾಚಗಳು, ಸರ್ಪಗಳು, ಮತ್ತು ರಾಕ್ಷಸರ ಸಂಘವು ನೋಡುತ್ತಿರುವ ಹಾಗೆಯೇ ಆ ಘೋರ ವಿಷವನ್ನು ಕಂಠದಲ್ಲಿ ಧರಿಸಿದೆನು.

೯೧. ಪರ್ವತರಾಜನ ಪುತ್ರಿಯೆ! ತೀಕ್ಷ್ಣವಾದ ವೇಗವುಳ್ಳ ಆ ಕಾಲಕೂಟವೆಂಬ ವಿಷವನ್ನು ಕಂಠದಲ್ಲಿ ಧರಿಸಿದೆನು. ದೇವದಾನವರ ಸಂಘವು ನನ್ನ ಕಂಠದಲ್ಲಿ ವಿಷವನ್ನು ಧರಿಸಿರುವುದನ್ನು ಕಂಡು ಅತಿಶಯವಾದ ವಿಸ್ಮಯವನ್ನು ಹೊಂದಿತು.

೯೨. ಮದಿಸಿದ ಗಜದಂತೆ ಗಮನವುಳ್ಳವಳೆ! ದೇವ, ದೈತ್ಯ, ಸರ್ಪ, ರಾಕ್ಷಸ

ಅಹೋ ಬಲಂ ವೀರ್ಯಪರಾಕ್ರಮಸ್ತೇ
ತ್ವಹೋ ವಪುರ್ಯೋಗಬಲಂ ತವೇಶ ॥ ೯೩ ॥

ಅಹೋ ಪ್ರಭುತ್ವಂ ತವ ದೇವದೇವ
ಮಹಾದ್ಭುತಂ ಮನ್ಮಥದೇಹನಾಶನ
ತ್ವಮೇವ ವಿಷ್ಣುಶ್ಚತುರಾನನಸ್ತ್ವಂ
ತ್ವಮೇವ ಮೃತ್ಯುರ್ವರದಸ್ತ್ವಮೇವ ॥ ೯೪ ॥

ತ್ವಮೇವ ಸೂರ್ಯೋ ರಜನೀಕರಶ್ಚ
ವ್ಯಕ್ತಿಸ್ತ್ವಮೇವಾಸ್ಯ ಚರಾಚರಸ್ಯ ।
ತ್ವಮೇವ ವಹ್ನಿಃ ಪವನಸ್ತ್ವಮೇವ
ತ್ವಮೇವ ಭೂಮಿಃ ಸಲಿಲಂ ತ್ವಮೇವ ॥ ೯೫ ॥

ತ್ವಮೇವ ಸರ್ವಸ್ಯ ಚರಾಚರಸ್ಯ
ಧಾತಾ ವಿಧಾತಾ ಪ್ರಲಯಸ್ತ್ವಮೇವ ।
ಇತ್ಯೇವಮುಕ್ತ್ವಾ ವಚನಂ ಸುರೇಂದ್ರಾಃ
ಪ್ರಗೃಹ್ಯ ಸೋಮಂ ಪ್ರಣಿಪತ್ಯ ಮೂರ್ಧ್ನಾ ।
ಗತಾ ವಿಮಾನೈರನಿಲೋಪವೇಗೈ—
ರ್ಮಹಾನಗಂ ಮೇರುಮುಪೇತ್ಯ ಸರ್ವೇ ॥ ೯೬ ॥

---

ಮುಂತಾದ ಸರ್ವ ಪ್ರಜಾವರ್ಗವು ಅಂಜಲಿ ಬಂಧದಿಂದ ವಿನಯವನ್ನು ಸೂಚಿಸುತ್ತ ಈ ರೀತಿಯಾಗಿ ಸ್ತುತಿಸಿದರು.

೯೩. ಈಶ್ವರನೆ! ನಿನ್ನ ಬಲ, ವೀರ್ಯ, ಪರಾಕ್ರಮ, ದೇಹ ಮತ್ತು ಯೋಗದ ಬಲ ಇವುಗಳು ಆಶ್ಚರ್ಯಕರವಾಗಿವೆ.

೯೪. ದೇವತೆಗಳಿಗೆಲ್ಲಾ ದೇವತೆಯೆ! ನಿನ್ನ ಪ್ರಭುತ್ವವು ಅತ್ಯಾಶ್ಚರ್ಯಕರವಾದುದು. ಮನ್ಮಥನ ದೇಹವನ್ನು ಭಸ್ಮಮಾಡಿದವನೇ, ನೀನು ವಿಷ್ಣುವು, ನೀನು ಚತುರ್ಮುಖನಾದ ಬ್ರಹ್ಮನು, ನೀನೇ ಮೃತ್ಯು ಸ್ವರೂಪನು ಮತ್ತು ವರದಾತನು ಆಗಿರುವೆ.

೯೫. ಸ್ವಾಮಿಯೇ! ನೀನೇ ಸೂರ್ಯ ಚಂದ್ರರು. ಈ ನಿಖಿಲ ಚರಾಚರದ ಅಭಿವ್ಯಕ್ತಿರೂಪನು ನೀನೇ. ಅಗ್ನಿ ಮತ್ತು ವಾಯು, ಪೃಥವೀ ಮತ್ತು ಜಲ ಮುಂತಾದ ಸಮಸ್ತ ವಸ್ತುವೂ ನೀನೇ ಆಗಿರುತ್ತಿ.

೯೬. ಸ್ವಾಮಿಯೇ! ಸಮಸ್ತ ಪ್ರಪಂಚಕ್ಕೂ ನೀನೇ ಸೃಷ್ಟಿಕರ್ತನೂ ಸ್ಥಿತಿ

ಇತ್ಯೇತತ್ಪರಮಂ ಗುಹ್ಯಂ ಪುಣ್ಯಾತ್ಪುಣ್ಯತಮಂ ಮಹತ್ ॥ ೯೭ ॥

ನೀಲಕಂಠ ಇತಿ ಪ್ರೋಕ್ತಂ ತ್ರಿಷು ಲೋಕೇಷು ವಿಶ್ರುತಮ್ ।
ಸ್ವಯಂಭುವಾ ಸ್ವಯಂ ಪ್ರೋಕ್ತಾ ಕಥಾ ಪಾಪಪ್ರಣಾಶಿನೀ ॥ ೯೮ ॥

ಯಸ್ತು ಧಾರಯತೇ ನಿತ್ಯಂ ಬ್ರಹ್ಮೋದ್ಗೀತಾಮಿಮಾಂ ಶುಭಾಮ್ ।
ತಸ್ಯಾಹಂ ಸಂಪ್ರವಕ್ಷ್ಯಾಮಿ ಫಲಂ ಸುವಿಪುಲಂ ಮಹತ್ ॥ ೯೯ ॥

ವಿಷಂ ತಸ್ಯ ವರಾರೋಹೇ ಸ್ಥಾವರಂ ಜಂಗಮಂ ತಥಾ ।
ಗಾತ್ರಂ ಪ್ರಾಪ್ಯ ತು ಸುಶ್ರೋಣಿ ಕ್ಷಿಪ್ರಂ ತತ್ಪ್ರತಿಹನ್ಯತೇ ॥ ೧೦೦ ॥

ಶಮಯತ್ಯಶುಭಂ ಘೋರಂ ದುಃಸ್ವಪ್ನಂ ಚಾಪಕರ್ಷತಿ ।
ಸ್ತ್ರೀಷು ವಲ್ಲಭತಾಂ ಯಾತಿ ಸಭಾಯಾಂ ಪಾರ್ಥಿವಸ್ಯ ಚ ॥ ೧೦೧ ॥

---

ಕರನೂ ಮತ್ತು ಸಂಹಾರಕಾರಿಯೂ ಆಗಿರುತ್ತೀ. ದೇವೇಂದ್ರರು ಈ ರೀತಿಯಾಗಿ ಹೇಳಿ ಚರಣಗಳಲ್ಲಿ ನಮಸ್ಕರಿಸಿ ವಾಯುವೇಗದಿಂದ ಹೋಗುವ ವಿಮಾನಗಳಲ್ಲಿ ಆರೂಢರಾಗಿ ಪರ್ವತರಾಜನಾದ ಮೇರು ಪರ್ವತಕ್ಕೆ ಹೋದರು.

೯೭. ಈ ರೀತಿಯಾಗಿ ಈ ನೀಲಕಂಠ ಮಹಿಮೆಯನ್ನು ಪ್ರತಿಪಾದಿಸುವ ಸ್ತೋತ್ರವು ಅತ್ಯಂತ ಪವಿತ್ರವಾದುದು.

೯೮. ನೀಲಕಂಠ ಎಂಬ ಪವಿತ್ರನಾಮವು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದುದು. ಸ್ವಯಂಭುವಾದ ಬ್ರಹ್ಮನು ಪಾಪಭಂಜಕವಾದ ಈ ಕಥೆಯನ್ನು ಉಪದೇಶಿಸಿರುವನು.

೯೯. ಬ್ರಹ್ಮಗೀತಾ ರೂಪವಾದ ಮಂಗಲಕರವಾದ ಈ ಕಥೆಯನ್ನು ಯಾವ ಭಕ್ತನು ಪ್ರತಿ ನಿತ್ಯವೂ ಸ್ಮರಿಸಿ ಧರಿಸುವನೋ ಅವನಿಗುಂಟಾಗುವ ವಿಸ್ತಾರವಾದ ಫಲ ಸಮೃದ್ಧಿಯನ್ನು ಹೇಳುವೆನು.

೧೦೦. ಸತೀಮಣಿಯೇ! ಮತ್ತು ಸುಂದರಿಯೇ! ಆ ಭಕ್ತನಿಗೆ ಸ್ಥಾವರ ಮತ್ತು ಜಂಗಮವೆಂಬ ಯಾವುದೊಂದರ ವಿಷವೂ ಬಾಧಿಸದೆ ಅವನ ದೇಹದ ಸಂಬಂಧದಿಂದ ಬೇಗ ನಾಶವಾಗುವುದು.

೧೦೧. ಮತ್ತು ಅಮಂಗಳಗಳನ್ನು ನಾಶಮಾಡುತ್ತದೆ. ಭಯಂಕರವಾದ ದುಸ್ವಪ್ನಗಳನ್ನು ಪರಿಹರಿಸುತ್ತದೆ. ಮತ್ತು ಸ್ತ್ರೀಯರಲ್ಲಿ ಪ್ರಿಯನಾಗಿರುವನು. ರಾಜನ ಆಸ್ಥಾನದಲ್ಲಿ ರಾಜನಿಗೆ ಪ್ರಿಯನಾಗುವನು.

ವಿವಾದೇ ಜಯಮಾಪ್ನೋತಿ ಯುದ್ಧೇ ವಿಜಯಮೇವ ಚ ।
ಗಚ್ಛತಿ ಕ್ಷೇಮಮಧ್ವಾನಂ ಗೃಹೇಭ್ಯೋ ನಿತ್ಯಸಂಪದಾ ॥ ೧೦೨ ॥

ಶರೀರಸ್ಯೇಹ ವಕ್ಷ್ಯಾಮಿ ಗತಿಂ ತಸ್ಯ ವರಾನನೇ ।
ಹರಿಶ್ಮಶ್ರುರ್ನೀಲಕಂಠಃ ಶಶಾಂಕಾಂಕಿತಮೂರ್ಧಜಃ ॥ ೧೦೩ ॥

ತ್ರ್ಯಕ್ಷಸ್ತ್ರಿಶೂಲಪಾಣಿಶ್ಚ ವೃಷಯಾನಃ ಪಿನಾಕಧೃಕ್ ।
ನಂದಿತುಲ್ಯಬಲಃ ಶ್ರೀಮಾನ್ ನಂದಿತುಲ್ಯಪರಾಕ್ರಮಃ ॥ ೧೦೪ ॥

ವಿಚರತ್ಯಖಿಲಾನ್ ಲೋಕಾನ್ ಸಪ್ತಲೋಕಾನ್ ಮಮಾಜ್ಞಯಾ ।
ನ ಹನ್ಯತೇ ಗತಿಸ್ತಸ್ಯ ಅನಿಲಸ್ಯ ಯಥಾಂಬರೇ ॥ ೧೦೫ ॥

ಮಮ ತುಲ್ಯಬಲೋ ಭೂತ್ವಾ ತಿಷ್ಠತ್ಯಾಭೂತಸಂಪ್ಲವಾತ್ ।
ಮಮ ಭಕ್ತ್ಯಾ ವರಾರೋಹೇ ಯೇ ಚ ಶೃಣ್ವಂತಿ ಮಾನವಾಃ ॥೧೦೬॥

---

೧೦೨. ಮತ್ತು ವಾದದಲ್ಲಿ ಜಯವನ್ನು ಹೊಂದುವನು ಯುದ್ಧದಲ್ಲಿ ಜಯಶಾಲಿಯಾಗುತ್ತಾನೆ. ಪ್ರಯಾಣ ಸಂದರ್ಭದಲ್ಲಿ ಮಾರ್ಗದಲ್ಲಿ ಕ್ಷೇಮವನ್ನು ಹೊಂದುತ್ತಾನೆ. ಮತ್ತು ಮನೆಯಲ್ಲಿ ನಿತ್ಯವಾದ ಸಂಪತ್ಸಮೃದ್ಧಿಗಳನ್ನು ಹೊಂದುತ್ತಾನೆ.

೧೦೩. ಸುಂದರಿಯಾದ ಪಾರ್ವತಿಯೇ! ಈಗ ಆ ಭಕ್ತನು ಹೊಂದುವ ಶರೀರದ ಸ್ವರೂಪವನ್ನು ವರ್ಣಿಸುತ್ತೇನೆ. ನೀಲವರ್ಣದಶ್ಮಶ್ರುವುಳ್ಳವನೂ ನೀಲವಾದ ಕಂಠವುಳ್ಳವನೂ ಮತ್ತು ಚಂದ್ರನಿಂದ ಅಲಂಕರಿಸಲ್ಪಟ್ಟ ಜಟಾಜೂಟವುಳ್ಳವನೂ ಆಗಿರುವನು.

೧೦೪. ಮತ್ತು ಮೂರು ನಯನ, ತ್ರಿಶೂಲದಿಂದ ಶೋಭಿಸುವ ಪಾಣಿ, ವೃಷವಾಹನ, ಪಿನಾಕವೆಂಬ ಬಿಲ್ಲು, ನಂದೀಶ್ವರನಿಗೆ ಸಮಾನವಾದ ಬಲ, ಮತ್ತು ಆ ಪರಿವಾರಕ್ಕೆ ತಕ್ಕ ಅತಿಶಯವಾದ ಪರಾಕ್ರಮ ಮುಂತಾದ ಉಪಕರಣಗಳಿಂದ ಶೋಭಿಸುತ್ತಿರುವನು.

೧೦೫. ಅಂತಹ ಭಕ್ತನು ನನ್ನ ಆಜ್ಞೆಯಿಂದ ಭೂರಾದಿ ಸಕಲ ಲೋಕಗಳನ್ನು ಸಂಚರಿಸುವನು. ಆಕಾಶದಲ್ಲಿ ವಾಯುಗತಿಗೆ ತಡೆಯಿಲ್ಲದಿರುವಂತೆ ಆ ಭಕ್ತ ಶಿರೋಮಣಿಯ ಸಂಚಾರಕ್ಕೆ ಎಲ್ಲೆಲ್ಲಿಯೂ ತಡೆಯಿಲ್ಲವು.

೧೦೬. ಮತ್ತು ನನಗೆ ಸಮಾನವಾದ ಬಲದಿಂದ ಪ್ರಕಾಶಿಸುವನಾಗಿ ಪ್ರಳಯ

**ತೇಷಾಂ ಗತಿಂ ಪ್ರವಕ್ಷ್ಯಾಮಿ ತ್ವಿಹ ಲೋಕೇ ಪರತ್ರ ಚ ।**
**ಬ್ರಾಹ್ಮಣೋ ವೇದ ಮಾಪ್ನೋತಿ ಕ್ಷತ್ರಿಯೋ ವಿಂದತೇ ಮಹೀಮ್ ॥ ೧೦೭ ॥**

**ವೈಶ್ಯಸ್ತು ಲಭತೇ ಲಾಭಂ ಶೂದ್ರಃ ಸುಖಮವಾಪ್ನುಯಾತ್ ।**
**ವ್ಯಾಧಿತೋ ಮುಚ್ಯತೇ ರೋಗಾತ್ ಬದ್ಧೋ ಮುಚ್ಯೇತ ಬಂಧನಾತ್ ॥ ೧೦೮ ॥**

**ಗುರ್ವಿಣೀ ಲಭತೇ ಪುತ್ರಂ ಕನ್ಯಾ ವಿಂದತಿ ಸತ್ಪತಿಮ್ ।**
**ನಷ್ಟಂ ಚ ಲಭತೇ ದ್ರವ್ಯಮಿಹ ಲೋಕೇ ಪರತ್ರ ಚ ॥ ೧೦೯ ॥**

**ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಮ್ ।**
**ತತ್ಫಲಂ ಲಭತೇ ಮರ್ತ್ಯಃ ಶ್ರುತ್ವಾ ದಿವ್ಯಾಮಿಮಾಂ ಕಥಾಮ್॥೧೧೦॥**

**ಪಾದಂ ವಾಪ್ಯರ್ಧಪಾದಂ ವಾ ಶ್ಲೋಕಂ ಶ್ಲೋಕಾರ್ಧಮೇವ ವಾ ।**
**ಯಸ್ತು ಧಾರಯತೇ ನಿತ್ಯಂ ರುದ್ರಲೋಕಂ ಸ ಗಚ್ಛತಿ ॥ ೧೧೧ ॥**

---

ಕಾಲದವರೆಗೂ ಶಾಶ್ವತನಾಗಿರುವನು. ಸಾಧ್ವಿ ಮಣಿಯೇ! ನನ್ನ ಸ್ತುತಿಯನ್ನು ಭಕ್ತಿಯಿಂದ ಶ್ರವಣಮಾಡಿದ ಮಾನವರು ಅನೇಕ ಫಲಗಳನ್ನು ಹೊಂದುವರು.

೧೦೭. ಅವರು ಹೊಂದುವ ಐಹಿಕ ಮತ್ತು ಆಮುಷ್ಮಿಕವಾದ ವಿವಿಧ ಫಲ ರಾಶಿಯನ್ನು ಹೇಳುತ್ತೇನೆ.—ಬ್ರಾಹ್ಮಣನು ವೇದ ಪಾರಂಗತನಾಗುವನು. ಕ್ಷತ್ರಿಯನು ಜಯಶಾಲಿಯಾಗಿ ಸಮಸ್ತ ಭೂಮಂಡಲಕ್ಕೆ ಅಧಿಪತಿಯಾಗುವನು.

೧೦೮. ವೈಶ್ಯನು ಅಧಿಕ ಲಾಭವನ್ನು ಸಂಪಾದಿಸುವನು. ಶೂದ್ರನು ಉತ್ತಮ ಸುಖವನ್ನನುಭವಿಸುವನು. ರೋಗಿಯು ರೋಗದಿಂದ ಮುಕ್ತನಾಗುವನು ಮತ್ತು ಬಂಧನಕ್ಕೆ ಸಿಕ್ಕಿದವನು ಬಂಧನದಿಂದ ಬಿಡುಗಡೆಯಾಗುವನು.

೧೦೯. ಇದನ್ನು ಭಕ್ತಿಯಿಂದ ಶ್ರವಣಮಾಡಿದ ಗರ್ಭಿಣಿ ನಾರಿಯು ಪುತ್ರನನ್ನು ಹೊಂದುವಳು. ಕನ್ಯೆಯು ಉತ್ತಮ ವರನನ್ನು ಹೊಂದುವಳು. ಮತ್ತು ಇಹಪರ ಲೋಕಗಳಲ್ಲಿ ನಷ್ಟವಾದ ವಸ್ತುವನ್ನು ಹೊಂದುವನು.

೧೧೦. ದಾನ ವಿಧಿಪೂರ್ವಕವಾಗಿ ಶತ, ಸಹಸ್ರ ಗೋದಾನಗಳನ್ನು ಮಾಡಿ ಹೊಂದುವ ಫಲವನ್ನು ಮಾನವನು ಈ ದಿವ್ಯ ಕಥೆಯನ್ನು ಶ್ರವಣಮಾಡಿದ್ದರಿಂದ ಹೊಂದುವನು.

೧೧೧. ಈ ಕಥೆಯ ಒಂದು ಪಾದ ಅಥವಾ ಅರ್ಧಪಾದ, ಒಂದು ಶ್ಲೋಕ

ಅಥವಾ ಸರ್ವಮೇವೇದಂ ದೇವಬ್ರಾಹ್ಮಣಸನ್ನಿಧೌ ।
ಯಃ ಪಠೇನ್ಮಾನವೋ ನಿತ್ಯಂ ಮದ್ಗತೇನಾಂತರಾತ್ಮನಾ ॥ ೧೧೨ ॥

ಶ್ರದ್ದಧಾನಃ ಸದಾ ಭಕ್ತೋ ರುದ್ರಲೋಕಂ ಸ ಗಚ್ಛತಿ ।
ಪಠೇಚ್ಚ ದೇವಿ ಭಕ್ತ್ಯಾ ಚ ಪಾಠಯೇಚ್ಚ ನರಃ ಸದಾ ॥ ೧೧೩ ॥

ಅತಃ ಪರತರಂ ಸ್ತೋತ್ರಂ ನ ಭೂತಂ ನ ಭವಿಷ್ಯತಿ ।
ನಾಪಿ ಯಕ್ಷಾಃ ಪಿಶಾಚಾ ವಾ ನ ಭೂತಾ ನ ವಿನಾಯಕಾಃ ।
ಕುರ್ಯುರ್ವಿಘ್ನಂ ಗೃಹೇ ತಸ್ಯ ಯತ್ರಾಯಂ ತಿಷ್ಠತಿ ಸ್ತವಃ॥ ೧೧೪ ॥

ಮಯಾ ನು ತುಷ್ಟೇನ ತನಾಂಬುಜೇಕ್ಷಣೇ
ಸ್ತವಸ್ಯ ಮಾಹಾತ್ಮ್ಯಮಘೌಘನಾಶನಮ್ ।
ನಿವೇದಿತಂ ಪುಣ್ಯಫಲಾದಿಯುಕ್ತಂ
ಸ್ವಯಂ ಚ ಗೀತಂ ಚತುರಾನನೇನ ॥ ೧೧೫ ॥

---

ಅಥವಾ ಅರ್ಧ ಶ್ಲೋಕವನ್ನಾದರೂ ನಿತ್ಯವೂ ಪಠಿಸಿದ ಮಾನವನು ಅದರ ಮಹಿಮೆಯಿಂದ ರುದ್ರಲೋಕಕ್ಕೆ ಹೋಗುವನು.

೧೧೨. ಅಥವಾ ಈ ಸಂಪೂರ್ಣ ಕಥೆಯನ್ನು ದೇವತಾ ಬ್ರಾಹ್ಮಣರ ಸನ್ನಿಧಿಯಲ್ಲಿ ನನ್ನಲ್ಲಿ ಸ್ಥಿರವಾದ ಭಕ್ತಿಯನ್ನಿಟ್ಟು ನಿತ್ಯವೂ ಪಠಿಸಬೇಕು.

೧೧೩. ಶ್ರದ್ಧಾಭಕ್ತಿಗಳಿಂದ ಈ ಸ್ತೋತ್ರ ಪಾರಾಯಣವನ್ನು ಮಾಡುವುದರಿಂದ ರುದ್ರಲೋಕವನ್ನ ಹೊಂದುತ್ತಾನೆ. ಆದ್ದರಿಂದ ಮಾನವನು ಸರ್ವ ಕಾಲದಲ್ಲಿಯೂ ಈ ಕಥೆಯನ್ನು ಪಠಿಸಬೇಕು. ಮತ್ತು ಪಾಠಮಾಡಿಸಬೇಕು.

೧೧೪. ಈ ಸ್ತೋತ್ರಕ್ಕಿಂತಲೂ ಉತ್ತಮವಾದ ಸ್ತೋತ್ರವು ಹಿಂದೆ ಯಾವ ಕಾಲದಲ್ಲಿಯೂ ಇರಲಿಲ್ಲ. ಮುಂದೆ ಯಾವ ಕಾಲದಲ್ಲೂ ಇರುವುದಿಲ್ಲ. ಮತ್ತು ಯಾವ ಮನುಜನ ಮನೆಯಲ್ಲಿ ಈ ಸ್ತೋತ್ರಪಾಠವು ನಡೆಯುತ್ತಿರುವುದೋ ಅಲ್ಲಿ ಯಕ್ಷ, ಪಿಶಾಚ, ಭೂತ, ವಿನಾಯಕ, ಇವುಗಳಿಂದ ವಿಘ್ನವು ಸಂಭವಿಸುವುದಿಲ್ಲ.

೧೧೫. ಕಮಲದಂತೆ ನಯನವುಳ್ಳ ಸತಿಯೇ ! ನಿನ್ನಲ್ಲಿ ಪ್ರೇಮದಿಂದ ಸಕಲ ಪಾಪಗಳನ್ನು ದೂರಮಾಡುವ ಮತ್ತು ಅನೇಕ ಪುಣ್ಯ ಫಲಗಳನ್ನು ಕೊಡುವ ಬ್ರಹ್ಮದೇವನು ತಾನಾಗಿ ಗಾನ ರೂಪವಾಗಿ ಇತರರಿಗೆ ಉಪದೇಶಿಸಿದ ಈ ಸ್ತೋತ್ರದ ಮಹಿಮೆಯನ್ನು ನಿನಗೆ ಹೇಳಿರುವೆನು.

ಕಥಾಮಿಮಾಂ ಪುಣ್ಯಫಲಾದಿಯುಕ್ತಾಂ
ನಿವೇದ್ಯ ದೇವ್ಯೈ ಶಶಿಬದ್ಧಮೌರ್ಧಜಃ ।
ವೃಷಸ್ಯ ಪೃಷ್ಠೇನ ಸಹೋಮಯಾ ಪ್ರಭು—
ರ್ಜಗಾಮ ಕೈಲಾಸಗುಹಾಂ ಗುಹಪ್ರಿಯಃ　　॥ ೧೧೬ ॥

ಶ್ರುತಂ ಮಯಾ ಪಾಪಹರಂ ತದಂತಿಕೇ
ನಿವೇದಿತಂ ತೇಽಥ ಮಯಾ ಪ್ರಜಾಪತೇಃ ।
ಅಧೀತ್ಯ ಸರ್ವಂ ತ್ವಖಿಲಂ ಸಲಕ್ಷಣಂ
ಪ್ರಯಾತಿ ಚಾದಿತ್ಯಪದಂ ದ್ವಿಜೋತ್ತಮಃ　　॥ ೧೧೭ ॥

॥ ಇತಿ ಶ್ರೀ ಬ್ರಹ್ಮಾಂಡಪುರಾಣೇ ಪಂಚವಿಂಶತಿತಮೋಽಧ್ಯಾಯಃ ॥

---

೧೧೬. ಚಂದ್ರಕಲೆಯಿಂದ ಅಲಂಕರಿಸಲ್ಪಟ್ಟ ಜಟೆಯುಳ್ಳ ಷಣ್ಮುಖಸ್ವಾಮಿಯಲ್ಲಿ ವತ್ಸಲನಾದ ಶಂಭುವು ಪುಣ್ಯಫಲಪ್ರದಾನ ಮುಂತಾದ ಮಹಿಮೆಯಿಂದ ಕೂಡಿದ ಈ ಕಥೆಯನ್ನು ಪಾರ್ವತಿ ದೇವಿಗೆ ಹೇಳಿ ಆ ಪಾರ್ವತಿಯೊಡನೆ ನಂದಿ ವಾಹನದಲ್ಲಿ ಕುಳಿತುಕೊಂಡು ಕೈಲಾಸಪರ್ವತದ ಗುಹೆಗೆ ಪ್ರಯಾಣಮಾಡಿದನು.

೧೧೭. ಆಗ ಸಮೀಪದಲ್ಲಿ ಇದ್ದ ನಾನು ಪಾಪಹರವಾದ ಈ ಕಥಾನಕವನ್ನು ಶ್ರವಣಮಾಡಿ ಪ್ರಜಾಪತಿಗೆ ಉಪದೇಶಮಾಡಿದೆನು. ದ್ವಿಜ ಶ್ರೇಷ್ಠನು ಸಂಪೂರ್ಣ ಕಥೆಯನ್ನು ಸಲಕ್ಷಣವಾಗಿ ಪಠಿಸಿ ಸೂರ್ಯ ಲೋಕವನ್ನು ಹೊಂದುವನು.

ಬ್ರಹ್ಮಾಂಡಪುರಾಣದಲ್ಲಿ ಇಪ್ಪತ್ತೈದನೇ ಅಧ್ಯಾಯವು ಮುಗಿದುದು.

---

## ಷಡ್ವಿಂಶತಿತಮೋಽಧ್ಯಾಯಃ

**ಋಷಯ ಊಚುಃ**
**ಮಹಾದೇವಸ್ಯ ಮಾಹಾತ್ಮ್ಯಂ ಪ್ರಭುತ್ವಂ ಚ ಮಹಾತ್ಮನಃ ।**
**ಶ್ರೋತುಮಿಚ್ಛಾಮಹೇ ಸಮ್ಯಗೈಶ್ವರ್ಯಗುಣವಿಸ್ತರಮ್ ॥ ೧ ॥**
**ಸೂತ ಉವಾಚ :—**
**ಪೂರ್ವಂ ತ್ರೈಲೋಕ್ಯವಿಜಯೇ ವಿಷ್ಣುನಾ ಸಮುದಾಹೃತಮ್ ।**
**ಬಲಿಂ ಬದ್ಧ್ವಾ ಮಹಾವೀರ್ಯಂ ತ್ರೈಲೋಕ್ಯಾಧಿಪತಿಂ ಪುರಾ ॥ ೨ ॥**

**ಪ್ರಣಷ್ಟೇಷು ತು ದೈತ್ಯೇಷು ಪ್ರಹೃಷ್ಟೇ ತು ಶಚೀಪತೌ ॥**
**ಅಥಾಜಗ್ಮುಃ ಪ್ರಭುಂ ದ್ರಷ್ಟುಂ ಸರ್ವೇ ದೇವಾಃ ಸನಾತನಮ್ ॥ ೩ ॥**

**ಯತ್ರಾಸ್ತೇ ವಿಶ್ವರೂಪಾತ್ಮಾ ಕ್ಷೀರೋದಸ್ಯ ಸಮೀಪತಃ ।**
**ಸಿದ್ಧಾ ಬ್ರಹ್ಮರ್ಷಯೋ ಯಕ್ಷಾ ಗಂಧರ್ವಾಪ್ಸರಸಾಂ ಗಣಾಃ ॥ ೪ ॥**

---

೧. ಋಷಿಗಳು ಮುಂದೆ ಈ ರೀತಿಯಾಗಿ ಪ್ರಶ್ನಿಸಿದರು :—ಸೂತಮುನಿಯೇ ಮಹಾತ್ಮನೂ ಮಹಾದೇವನೂ ಆದ ಶಿವನ ಮಾಹಾತ್ಮ್ಯ ಮತ್ತು ಪ್ರಭುತ್ವಗಳನ್ನು ಅವನ ಐಶ್ವರ್ಯ ವಿಸ್ತಾರಸಹಿತವಾಗಿ ಚನ್ನಾಗಿ ತಿಳಿಯಲು ಅಪೇಕ್ಷಿಸುತ್ತೇವೆ.

೨. ಆಗ ಸೂತಮುನಿಯು ಪ್ರತ್ಯುತ್ತರವಿತ್ತನು :—ಪೂರ್ವಕಾಲದಲ್ಲಿ ಮಹಾವಿಷ್ಣುವು ತ್ರಿಲೋಕಗಳ ಅಧಿಪತಿಯೂ ಮಹಾವೀರ್ಯಶಾಲಿಯೂ ಆದ ಬಲಿಚಕ್ರವರ್ತಿಯನ್ನು ಬಂಧಿಸಿ ತ್ರೈಲೋಕ್ಯದ ವಿಜಯವನ್ನು ಹೊಂದಿದ ತರುವಾಯ ಶಿವನ ಮಾಹಾತ್ಮ್ಯವನ್ನು ಕೀರ್ತನಮಾಡಿರುವನು.

೩. ಮಹಾವಿಷ್ಣುವಿನ ವಿಜಯದಿಂದ ದೈತ್ಯರು ನಾಶಹೊಂದಿ ದೇವೇಂದ್ರನಾದ ಶಚೀದೇವಿಯ ಪತಿಯು ಹರ್ಷದಿಂದ ಇರಲು ಸಕಲ ದೇವತೆಗಳೂ ಅನಾದಿಯಾದ ಜಗದೀಶ್ವರನನ್ನು ನೋಡಲು ಬಂದರು.

೪. ವಿಶ್ವರೂಪಿಯಾದ ಮಹಾವಿಷ್ಣುವು ಕ್ಷೀರಸಮುದ್ರದ ಸಮೀಪದಲ್ಲಿ ವಾಸಮಾಡುತ್ತಿರುವ ಸಂದರ್ಭದಲ್ಲಿ ಸಿದ್ಧರೂ, ಬ್ರಹ್ಮರ್ಷಿಗಳೂ, ಯಕ್ಷರೂ, ಗಂಧರ್ವರೂ ಅಪ್ಸರಃ ಸ್ತ್ರೀಯರೂ ವಿಷ್ಣುಸನ್ನಿಧಿಗೆ ಬಂದರು.

ನಾಗಾ ದೇವರ್ಷಯಶ್ಚೈವ ನದ್ಯಃ ಸರ್ವೇ ಚ ಪರ್ವತಾಃ ।
ಅಭಿಗಮ್ಯ ಮಹಾತ್ಮಾನಂ ಸ್ತುವಂತಿ ಪುರುಷಂ ಹರಿಮ್ ॥ ೫ ॥

ತ್ವಂ ಧಾತಾ ತ್ವಂ ಚ ಕರ್ತಾಸಿ ತ್ವಂ ಲೋಕಾನ್ ಸೃಜಸಿ ಪ್ರಭೋ ।
ತ್ವತ್ಪ್ರಸಾದಾಚ್ಚ ಕಲ್ಯಾಣಂ ಪ್ರಾಪ್ತಂ ತ್ರೈಲೋಕ್ಯಮವ್ಯಯಮ್ ॥ ೬ ॥

ಅಸುರಾಶ್ಚ ಜಿತಾಃ ಸರ್ವೇ ಬಲಿರ್ಬದ್ಧಶ್ಚ ವೈ ತ್ವಯಾ ।
ಏವಮುಕ್ತಃ ಸುರೈರ್ವಿಷ್ಣುಃ ಸಿದ್ಧೈಶ್ಚ ಪರಮರ್ಷಿಭಿಃ ॥ ೭ ॥

ಪ್ರತ್ಯುವಾಚ ತದಾ ದೇವಾನ್ ಸರ್ವಾಂಸ್ತಾನ್ ಪುರುಷೋತ್ತಮಃ ।
ಶ್ರೂಯತಾಮಭಿಧಾಸ್ಯಾಮಿ ಕಾರಣಂ ಸುರಸತ್ತಮಾಃ ॥ ೮ ॥

ಯಃ ಸ್ರಷ್ಟಾ ಸರ್ವಭೂತಾನಾಂ ಕಾಲಃ ಕಾಲಕರಃ ಪ್ರಭುಃ ।
ಯೇನಾಹಂ ಬ್ರಹ್ಮಣಾ ಸಾರ್ಧಂ ಸೃಷ್ಟಾ ಲೋಕಾಶ್ಚ ಮಾಯಯಾ ॥ ೯ ॥

---

೫. ಮತ್ತು ಸರ್ಪಗಳೂ ದೇವರ್ಷಿಗಳೂ ಸಕಲ ನದೀ ಮತ್ತು ಪರ್ವತಗಳೂ ಬಂದು ಸರ್ವರೂ ವಿಷ್ಣುಸನ್ನಿಧಿಯಲ್ಲಿ ಸೇರಿ ಮಹಾತ್ಮನೂ ಪೂರ್ಣನೂ ಆದ ಹರಿಯನ್ನು ಸ್ತುತಿಮಾಡಿದರು.

೬. ಸ್ವಾಮಿಯೆ, ನೀನೇ ಸಕಲ ಪ್ರಪಂಚಧಾರಕನು, ನೀನು ಕರ್ತೃವು, ನೀನು ಸಕಲವನ್ನು ಸೃಷ್ಟಿಸುವವನು. ನಿನ್ನ ಅನುಗ್ರಹದಿಂದ ಲೋಕತ್ರಯವು ಶಾಶ್ವತವಾದ ಕಲ್ಯಾಣವನ್ನು ಹೊಂದಿದೆ.

೭. ನಿನ್ನಿಂದ ಸಕಲ ಅಸುರರೂ ಜಿತರಾಗಿರುವರು, ಮತ್ತು ಬಲಿಚಕ್ರವರ್ತಿಯು ಬಂಧಿಸಲ್ಪಟ್ಟನು. ಎಂಬುದಾಗಿ ದೇವತೆಗಳಿಂದಲೂ ಸಿದ್ಧರಿಂದಲೂ ಮಹರ್ಷಿಗಳಿಂದಲೂ ಸ್ತುತಿಸಲ್ಪಟ್ಟನು.

೮. ಆಗ ಪುರುಷೋತ್ತಮನಾದ ಮಹಾವಿಷ್ಣುವು ಆ ಸಕಲದೇವತೆಗಳನ್ನು ಸಂಬೋಧಿಸಿ ಪ್ರತ್ಯುತ್ತರಪಿತ್ತನು. ಉತ್ತಮರಾದ ದೇವತೆಗಳೆ! ಲೋಕಕಲ್ಯಾಣ ಪ್ರಾಪ್ತಿಗೆ ತಾತ್ತ್ವಿಕ ಕಾರಣವನ್ನು ಹೇಳುತ್ತೇನೆ ಕೇಳಿರಿ.

೯. ಸಕಲ ಭೂತಗಳಿಗೆ ಸೃಷ್ಟಿಕರ್ತನಾಗಿಯೂ ಕಾಲಾಂಶಗಳನ್ನು ನಿರ್ಮಿಸುವವನೂ ಸ್ವಯಂಕಾಲಸ್ವರೂಪನೂ ಆಧ ಪ್ರಭುವನ್ನು ಕುರಿತು ಮಾಹಾತ್ಮ್ಯವನ್ನು

ತಸ್ಯೈವ ಚ ಪ್ರಸಾದೇನ ಆದೌ ಸಿದ್ಧತ್ವಮಾಗತಃ ।
ಪುರಾ ತಮಸಿ ಚಾವ್ಯಕ್ತೇ ತ್ರೈಲೋಕ್ಯೇ ಗ್ರಸಿತೇ ಮಯಾ ॥ ೧೦ ॥

ಉದರಸ್ಥೇಷು ಭೂತೇಷು ತ್ವೇಕೋಽಹಂ ಶಯಿತಸ್ತದಾ ।
ಸಹಸ್ರಶೀರ್ಷಾ ಭೂತ್ವಾ ಚ ಸಹಸ್ರಾಕ್ಷಃ ಸಹಸ್ರಪಾತ್ ॥ ೧೧ ॥

ಶಂಖಚಕ್ರಗದಾಪಾಣಿಃ ಶಯಿತೋ ವಿಮಲೇಽಂಭಸಿ ।
ಏತಸ್ಮಿನ್ನಂತರೇ ದೂರಾತ್ ಪಶ್ಯಾಮಿ ಹ್ಯಮಿತಪ್ರಭಮ್ ॥ ೧೨ ॥

ಶತಸೂರ್ಯ ಪ್ರತೀಕಾಶಂ ಜ್ವಲಂತಂ ಸ್ವೇನ ತೇಜಸಾ ।
ಚತುರ್ವಕ್ತ್ರಂ ಮಹಾಯೋಗಂ ಪುರುಷಂ ಕಾಂಚನಪ್ರಭಮ್ ॥ ೧೩ ॥

---

ಹೇಳುತ್ತೇನೆ. ಯಾವ ಪ್ರಭುವಿನಿಂದ ನಾನು, ಬ್ರಹ್ಮನು, ಮತ್ತು ಸಕಲ ಲೋಕಗಳು ಮಾಯೆಯಿಂದ ಸೃಷ್ಟಿಸಲ್ಪಟ್ಟಿರುವೆವೋ.

೧೦. ಆ ಪ್ರಭುವಿನ, ಪ್ರಸಾದದಿಂದ ಆದಿಯಲ್ಲಿ ನಾನು ಸಿದ್ಧಿಯನ್ನು ಹೊಂದಿ ಅವ್ಯಕ್ತವೆಂಬ ತಪೋಮಯವಾದ ಮೂಲತತ್ತ್ವದಲ್ಲಿ ತ್ರಿಲೋಕಗಳನ್ನು ನಾಶಮಾಡಿರುವೆನು.

೧೧. ಆ ಪ್ರಲಯಕಾಲದಲ್ಲಿ ಸಮಸ್ತ ಭೂತಗಳನ್ನು ನನ್ನ ಉದರದಲ್ಲಿ ಧರಿಸಿಕೊಂಡು ನಾನು ಮಾತ್ರ ಸಹಸ್ರ ಸಂಖ್ಯೆಯ ಶಿರಸ್ಸು, ನೇತ್ರ ಮತ್ತು ಪಾದಗಳಿಂದ ಕೂಡಿದವನಾಗಿ ಸಮುದ್ರದಲ್ಲಿ ಶಯನಮಾಡಿದೆನು.

೧೨. ಬಾಹುಗಳಲ್ಲಿ ಶಂಖ ಚಕ್ರ-ಗದೆಗಳನ್ನು ಧರಿಸಿ ನಿರ್ಮಲವಾದ ಜಲರಾಶಿಯಲ್ಲಿ ಶಯನಮಾಡಿದೆನು. ಆಗ ಆ ಸಂದರ್ಭದಲ್ಲಿ ದೂರದಿಂದ ಅಪರಿಮಿತವಾದ ಪ್ರಭಾಪುಂಜವನ್ನು ನಾನು ಸಾಕ್ಷಾತ್ಕರಿಸಿದೆನು.

೧೩. ಆ ಪ್ರಭಾಪುಂಜದಿಂದ ಅಂಕಿತವಾದ ಪುರುಷವ್ಯಕ್ತಿಯು ನೂರು ಸೂರ್ಯ ಬಿಂಬಗಳಿಗೆ ಸಮಾನನೂ ಸ್ವತಂತ್ರವಾದ ತೇಜಸ್ಸಿನಿಂದ ಜ್ವಲಿಸುತ್ತಿರುವವನೂ ನಾಲ್ಕು ಮುಖಗಳಿಂದ ಕೂಡಿದವನೂ, ಮಹಾಯೋಗಶಾಲಿಯೂ ಮತ್ತು ಸುವರ್ಣದಂತೆ ಪ್ರಭೆಯುಳ್ಳವನೂ ಆಗಿದ್ದನು.

ಕೃಷ್ಣಾಜಿನಧರಂ ದೇವಂ ಕಮಂಡಲುವಿಭೂಷಿತಮ್ ।
ನಿಮೇಷಾಂತರಮಾತ್ರೇಣ ಪ್ರಾಪ್ತೋಽಸೌ ಪುರುಷೋತ್ತಮಃ ॥ ೧೪ ॥

ತತೋ ಮಾಮಬ್ರವೀದ್ಬ್ರಹ್ಮಾ ಸರ್ವಲೋಕನಮಸ್ಕೃತಃ ।
ಕಸ್ತ್ವಂ ಕುತೋ ವಾ ಕಿಂ ಚೇಹ ತಿಷ್ಠಸೇ ವದ ಮೇ ವಿಭೋ ॥ ೧೫ ॥

ಅಹಂ ಕರ್ತಾಸ್ಮಿ ಲೋಕಾನಾಂ ಸ್ವಯಂಭೂರ್ವಿಶ್ವತೋಮುಖಃ ।
ಏವಮುಕ್ತಸ್ತದಾ ತೇನ ಬ್ರಹ್ಮಣಾಹಮುವಾಚ ತಮ್ ॥ ೧೬ ॥

ಅಹಂ ಕರ್ತಾ ಹಿ ಲೋಕಾನಾಂ ಸಂಹರ್ತಾ ಚ ಪುನಃ ಪುನಃ ।
ಏವಂ ಸಂಭಾಷಮಾಣೌ ತು ಪರಸ್ಪರಜಯೈಷಿಣೌ ॥ ೧೭ ॥

ಉತ್ತರಾಂ ದಿಶಮಾಸ್ಥಾಯ ಜ್ವಾಲಾಮದ್ರಾಕ್ಷ್ವ ವಿಷ್ಠಿತಾಮ್ ।
ಜ್ವಾಲಾಂ ತತಸ್ತಾಮಾಲೋಕ್ಯ ವಿಸ್ಮಿತೌ ಚ ತದಾನಘಾಃ ॥ ೧೮ ॥

---

೧೪. ಮತ್ತು ಕೃಷ್ಣಾಜಿನವನ್ನು ಧರಿಸಿರುವ ಮತ್ತು ಕಮಂಡಲುವಿನಿಂದ ಅಲಂಕರಿಸಲ್ಪಟ್ಟ ಪುರುಷೋತ್ತಮನಾದ ದೇವನು ದೃಷ್ಟಿಗೋಚರನಾದಕೂಡಲೆ ಒಂದು ನಿಮಿಷಮಾತ್ರಕ್ಕೆ ನಮ್ಮ ಹತ್ತಿರಕ್ಕೆ ಬಂದನು.

೧೫. ತರುವಾಯ ಸರ್ವಲೋಕಗಳಿಗೆ ವಂದ್ಯನಾದ ಬ್ರಹ್ಮನು ಈ ರೀತಿಯಾಗಿ ನನ್ನನ್ನು ಕುರಿತು ಹೇಳಿದನು:—ಪ್ರಭುವೇ! ನೀನು ಯಾರು? ಎಲ್ಲಿಂದ ಬಂದೆ? ಇಲ್ಲಿ ಏತಕ್ಕೆ ನಿಂತಿರುತ್ತೀ?

೧೬. ನಾನು ಸರ್ವ ದೇಶಗಳಲ್ಲಿಯೂ ವ್ಯಾಪಿಸಿದ ಮುಖವುಳ್ಳ ಮತ್ತು ಸಕಲ ಲೋಕಗಳನ್ನು ಸೃಷ್ಟಿಮಾಡುವ ಬ್ರಹ್ಮನಾಗಿರುವೆನು. ಈ ರೀತಿಯಾಗಿ ಬ್ರಹ್ಮದೇವನಿಂದ ಹೇಳಲ್ಪಟ್ಟ ನಾನು ಪ್ರತ್ಯುತ್ತರವನ್ನು ಹೇಳಿದೆನು.

೧೭. ಬ್ರಹ್ಮನೇ! ಸಕಲ ಲೋಕಗಳನ್ನು ಸೃಷ್ಟಿಸುವವನೂ, ಮತ್ತೆ ಮತ್ತೆ ಸಂಹರಿಸುವವನೂ ನಾನಾಗಿರುವೆನು. ಈ ರೀತಿಯಾಗಿ ಲೋಕ ಸೃಷ್ಟ್ಯಾದಿ ಅಧಿಕಾರದ ಸ್ವಾತಂತ್ರ್ಯದಲ್ಲಿ ಪರಸ್ಪರ ಜಯಿಸಬೇಕೆಂಬ ಇಚ್ಛೆಯಿಂದ ವಾದ ಮಾಡಿದರು.

೧೮. ನಿಷ್ಕಲಂಕರಾದ ಮುನಿಗಳೇ! ಹೀಗೆ ವಾದ ಮಾಡುವ ಸಂದರ್ಭದಲ್ಲಿ ವಾದ ಮಾಡುತ್ತ ಉತ್ತರದಿಕ್ಕನ್ನು ನೋಡಲಾಗಿ ವಿಶೇಷವಾಗಿ ಜ್ವಲಿಸುತ್ತಿದ್ದ ಒಂದು ಜ್ವಾಲೆಯನ್ನು ನೋಡಿ ವಿಸ್ಮಯವನ್ನು ಹೊಂದಿದರು.

**ತೇಜಸಾ ಚ ಬಲೇನಾಥ ಶಾರ್ವಂ ಜ್ಯೋತಿಃ ಕೃತಾಂಜಲೀ ।**
**ವರ್ಧಮಾನಾಂ ತದಾ ಜ್ವಾಲಾಮತ್ಯಂತಪರಮಾದ್ಭುತಾಮ್ ॥ ೧೯ ॥**

**ಅಭಿದುದ್ರಾವ ತಾಂ ಜ್ವಾಲಾಂ ಬ್ರಹ್ಮಾ ಚಾಹಂ ಚ ಸತ್ವರೌ ।**
**ದಿವಂ ಭೂಮಿಂ ಚ ನಿರ್ಭಿದ್ಯ ತಿಷ್ಠಂತಂ ಜ್ವಾಲಮಂಡಲಮ್ ॥ ೨೦ ॥**

**ತಸ್ಯ ಜ್ವಾಲಸ್ಯ ಮಧ್ಯೇ ತು ಪಶ್ಯಾವೋ ವಿಪುಲಪ್ರಭಮ್ ।**
**ಪ್ರಾದೇಶಮಾತ್ರಮವ್ಯಕ್ತಂ ಲಿಂಗಂ ಪರಮದೀಪ್ತಿಮತ್ ॥ ೨೧ ॥**

**ನ ಚ ತತ್ಕಾಂಚನಂ ಮಧ್ಯೇ ನ ಶೈಲಂ ನ ಚ ರಾಜತಮ್ ।**
**ಅನಿರ್ದೇಶ್ಯಮಚಿಂತ್ಯಂ ಚ ಲಕ್ಷ್ಯಾಲಕ್ಷ್ಯಂ ಪುನಃ ಪುನಃ ॥ ೨೨ ॥**

**ಜ್ವಾಲಾಮಾಲಾ ಸಹಸ್ರಾಢ್ಯಂ ವಿಸ್ಮಯಂ ಪರಮದ್ಭುತಮ್ ।**
**ಮಹತಾ ತೇಜಸಾ ಯುಕ್ತಂ ವರ್ಧಮಾನಂ ಭೃಶಂ ತಥಾ ॥ ೨೩ ॥**

---

೧೯. ಆಗ ತೇಜಸ್ಸು ಮತ್ತು ಬಲಗಳಿಂದ ವೃದ್ಧಿಹೊಂದುತ್ತಿರುವ ಈಶ್ವರನ ಜ್ಯೋತಿರೂಪವಾದ ಮತ್ತು ಅತಿಶಯವಾಗಿ ಅದ್ಭುತವಂತೆ ಇರುವ ಜ್ವಾಲೆಯನ್ನು ನೋಡಿದರು.

೨೦. ದ್ಯಾವಾ ಭೂಮಿಗಳನ್ನು ಭೇದಿಸುತ್ತಿರುವಂತೆ ವ್ಯಾಪ್ತಿಯಿಂದ ಇರುವ ಆ ಜ್ವಾಲಾಮಂಡಲಸಮುದಾಯದ ಸಮೀಪಕ್ಕೆ ಧಾವಿಸಿಹೋದರು.

೨೧. ಆ ಜ್ವಾಲಾಮಂಡಲದ ಮಧ್ಯದಲ್ಲಿ ವಿಪುಲವಾದ ಪ್ರಭೆಯಿಂದ ಕೂಡಿರುವುದೂ ಪ್ರಾದೇಶಮಾತ್ರಪರಿಮಾಣವಿರುವುದೂ ವಾಙ್ಮನಸ್ಸುಗಳಿಗೆ ಅಗೋಚರವೂ ಅತಿಶಯವಾದ ದೀಪ್ತಿಯಿಂದ ಕೂಡಿರುವುದೂ ಆದ ಲಿಂಗವನ್ನು ನೋಡಿದೆವು.

೨೨. ಆ ಲಿಂಗವು ಸುವರ್ಣಮಯವಾದುದು ಅಲ್ಲ. ಶಿಲಾಮಯವೂ ಅಲ್ಲ. ಮತ್ತು ರಜತಮಯವೂ ಅಲ್ಲ. ಅದನ್ನು ಹೀಗೆಂದು ನಿರ್ದೇಶಿಸುವುದಕ್ಕೂ ಮನಸ್ಸಿನಲ್ಲಿ ಚಿಂತಿಸುವುದಕ್ಕೂ ಸಾಧ್ಯವಿಲ್ಲ. ಅತಿಸೂಕ್ಷ್ಮವಾದುದರಿಂದ ಲಕ್ಷ್ಯ ಮತ್ತು ಅಲಕ್ಷ್ಯ ರೂಪದಿಂದಿತ್ತು.

೨೩. ಮತ್ತು ಸಾವಿರಾರು ಜ್ವಾಲೆಗಳ ಪಂಕ್ತಿಯಿಂದ ದೀಪ್ತವಾಗಿಯೂ ಅತಿಶಯವಾಗಿ ಅದ್ಭುತ ಆಶ್ಚರ್ಯಗಳನ್ನು ಉಂಟುಮಾಡುವುದಾಗಿಯೂ ಮಹಾ ತೇಜಸ್ಸಿನಿಂದ ಕೂಡಿ ಆದಿ-ಅಂತ್ಯಗಳಿಲ್ಲದಂತೆ ಹೆಚ್ಚಾಗಿ ಬೆಳೆಯುವುದಾಗಿಯೂ ಇತ್ತು.

ಜ್ವಾಲಾಮಾಲಾತತಂ ನ್ಯಸ್ತಂ ಸರ್ವಭೂತಭಯಂಕರಮ್ ।
ಘೋರರೂಪಿಣಮತ್ಯರ್ಥಂ ಭಿಂದಂತಮಿವ ರೋದಸೀ ॥ ೨೪ ॥

ತತೋ ಮಾಮಬ್ರವೀದ್ಬ್ರಹ್ಮಾ ಅಧೋ ಗಚ್ಛ ತ್ವಮಾಶು ವೈ ।
ಅಂತಮಸ್ಯ ವಿಜಾನೀವೋ ಲಿಂಗಸ್ಯ ತು ಮಹಾತ್ಮನಃ ॥ ೨೫ ॥

ಅಹಮೂರ್ಧ್ವಂ ಗಮಿಷ್ಯಾಮಿ ಯಾವದಂತೋಽಸ್ಯ ದೃಶ್ಯತೇ ।
ತದಾ ತು ಸಮಯಂ ಕೃತ್ವಾ ಗತ ಊರ್ಧ್ವಮಧಶ್ಚ ಹ ॥ ೨೬ ॥

ತತೋ ವರ್ಷಸಹಸ್ರಂ ತು ಹ್ಯಹಂ ಪುನರಧೋಗತಃ ।
ನ ಪಶ್ಯಾಮಿ ಚ ತಸ್ಯಾಂತಂ ಭೀತಶ್ಚಾಹಂ ತತೋಽಭವಮ್ ॥ ೨೭ ॥

ತಥೈವ ಬ್ರಹ್ಮಾ ಹ್ಯೂರ್ಧ್ವಂ ಚ ನ ಚಾಂತಂ ತಸ್ಯ ಲಬ್ಧವಾನ್ ।
ಸಮಾಗತೋ ಮಯಾ ಸಾರ್ಧಂ ತತ್ರೈವ ಚ ಮಹಾಂಭಸಿ ॥ ೨೮ ॥

---

೨೪. ಹಾಗು ಅನೇಕ ಜ್ವಾಲೆಗಳ ಸಾಲಿನಿಂದ ಸುತ್ತಲ್ಪಟ್ಟದ್ದೂ ಸರ್ವ ಪ್ರಾಣಿಗಳಿಗೆ ಭಯಂಕರವೂ ದ್ಯಾವಾಪೃಥಿವಿಗಳನ್ನು ಭೇದಿಸುವಂತೆ ಘೋರರೂಪವನ್ನು ಧರಿಸಿರುವುದೂ ಆಗಿತ್ತು.

೨೫. ತರುವಾಯ ಬ್ರಹ್ಮನು ನನ್ನನ್ನು ಕುರಿತು ನೀನು ಬೇಗ ಅಧೋ ಭಾಗಕ್ಕೆ ಇಳಿದು ಹೋಗು, ಈ ಮಹಾತ್ಮನಾದ ಲಿಂಗಮೂರ್ತಿಯ ಕೊನೆಯನ್ನು ನೋಡೋಣ.

೨೬. ನಾನು ಈ ಲಿಂಗದ ಅಗ್ರವು ಕಾಣಿಸಿರುವವರೆಗೂ ಊರ್ಧ್ವಭಾಗಕ್ಕೆ ಹೋಗುತ್ತೇನೆ. ಹೀಗೆಂದು ಇಬ್ಬರು ಊರ್ಧ್ವಅಧೋಭಾಗಗಳಿಗೆ ಹೋಗಲು ಸಂಕೇತವನ್ನು ಮಾಡಿಕೊಂಡರು.

೨೭. ಅನಂತರ ಒಂದು ಸಹಸ್ರವರ್ಷಕಾಲ ನಾನು ಕೆಳಭಾಗಕ್ಕೆ ಹೋದರೂ ಆ ಲಿಂಗದ ಮೂಲವನ್ನು ನೋಡಲಿಲ್ಲ. ಆಗ ನಾನು ಹೆಚ್ಚಾಗಿ ಭಯಗ್ರಸ್ತನಾದೆನು.

೨೮. ಹಾಗೆಯೇ ಬ್ರಹ್ಮನು ಊರ್ಧ್ವಭಾಗಕ್ಕೆ ಹೋಗುತ್ತ ಆ ಲಿಂಗದ ಅಗ್ರವನ್ನು ಕಾಣಲಿಲ್ಲ. ಆಗ ಆ ಮಹಾಜಲರಾಶಿಗೆ ಹಿಂದಿರುಗಿ ಬಂದು ನನ್ನೊಡನೆ ಸೇರಿದನು.

ತತೋ ವಿಸ್ಮಯಮಾಪನ್ನೌ ಭೀತೌ ತಸ್ಯ ಮಹಾತ್ಮನಃ ।
ಮಾಯಯಾ ಮೋಹಿತೌ ತೇನ ನಷ್ಟಸಂಜ್ಞೌ ಬಭೂವತುಃ ॥ ೨೯ ॥

ತತೋ ಧ್ಯಾನರತಾಸ್ತತ್ರ ಚೇಶ್ವರಂ ಸರ್ವತೋಮುಖಮ್ ।
ಪ್ರಭವಂ ನಿಧನಂ ಚೈವ ಲೋಕಾನಾಂ ಪ್ರಭುಮವ್ಯಯಮ್ ॥ ೩೦ ॥

ಪ್ರಹ್ವಾಂಜಲಿಪುಟೌಭೂತ್ವಾ ತಸ್ಮೈ ಶರ್ವಾಯ ಶೂಲಿನೇ ।
ಮಹಾಭೈರವನಾದಾಯ ಭೀಮರೂಪಾಯ ದಂಷ್ಟ್ರಿಣೇ
ಅವ್ಯಕ್ತಾಯಾಥ ಮಹತೇ ನಮಸ್ಕಾರಂ ಪ್ರಕುರ್ವಹೇ । ॥ ೩೧ ॥

ನಮೋಽಸ್ತು ತೇ ಲೋಕಸುರೇಶ ದೇವ
ನಮೋಽಸ್ತು ತೇ ಭೂತಪತೇ ಮಹಾತ್ಮನ್
ನಮೋಽಸ್ತು ತೇ ಶಾಶ್ವತಸಿದ್ಧಯೋಗಿನೇ
ನಮೋಽಸ್ತು ತೇ ಸರ್ವಜಗತ್ಪ್ರತಿಷ್ಠಿತ ॥ ೩೨ ॥

---

೨೯. ತರುವಾಯ ವಿಸ್ಮಯದಿಂದ ಚಕಿತರಾದ ಅವರಿಬ್ಬರು ಹರಿಬ್ರಹ್ಮರು ಭಯಗೊಂಡವರಾಗಿ ಆ ಮಹಾತ್ಮನಾದ ಶಂಕರನ ಮಾಯೆಯಿಂದ ಮೋಹಿತರಾಗಿ ಪ್ರಜ್ಞೆ ಇಲ್ಲದವರು ಆದರು.

೩೦. ಅನಂತರದಲ್ಲಿ ವಿಶ್ವತೋಮುಖನೂ ಪ್ರಪಂಚದ ಉತ್ಪತ್ತಿ ಸ್ಥಿತಿ ಲಯ ಗಳಿಗೆ ಕಾರಣನೂ ನಿಯಾಮಕನೂ ಮತ್ತು ನಾಶರಹಿತನೂ ಆದ ಈಶ್ವರನನ್ನು ಧ್ಯಾನ ಮಾಡುವುದರಲ್ಲಿ ಆಸಕ್ತರಾದರು.

೩೧. ಮತ್ತು ಈ ಕೆಳಗಿನ ಸ್ತುತಿವಚನಗಳಿಂದ ವಿನೀತರಾಗಿ ಕೈಮುಗಿದು ನಮಸ್ಕರಿಸಿದರು :—ಸುಖಕರನೂ ತ್ರಿಶೂಲಧಾರಿಯೂ ಭಯಂಕರವಾದ ನಾದವುಳ್ಳ ವನೂ ಭೀಮರೂಪವುಳ್ಳವನೂ ವಿಶಾಲವಾದ ಕೋರೆದಾಡೆಯುಳ್ಳವನೂ ಅತೀಂದ್ರಿ ಯನೂ ಮತ್ತು ಮಹಾತ್ಮನೂ ಆದ ರುದ್ರನಿಗೆ ನಮಸ್ಕಾರ ಮಾಡುತ್ತೇವೆ.

೩೨. ಸಕಲ ಪ್ರಪಂಚಕ್ಕೆ ಸುಖಕರನಾದ ಶಿವನೇ ನಿನಗೆ ನಮಸ್ಕಾರವು. ಮಹಾತ್ಮನೂ ಭೂತಗಣಕ್ಕೆ ಪ್ರಭುವೂ ಆದ ನಿನಗೆ ನಮಸ್ಕಾರವು. ಶಾಶ್ವತವಾದ ಸಿದ್ಧಿಯುಳ್ಳ ಮಹಾಯೋಗಿಯೇ, ನಿನಗೆ ನಮಸ್ಕಾರವು. ಸರ್ವ ಜಗತ್ತಿಗೆ ಆಧಾರ ನಾದ ಸ್ವಾಮಿಯೇ, ನಿನ್ನನ್ನು ವಂದಿಸುವೆವು.

ಪರಮೇಷ್ಠೀ ಪರಂ ಬ್ರಹ್ಮ ತ್ವಕ್ಷರಂ ಪರಮಂ ಪದಮ್ ॥ ೩೩ ॥

ಜ್ಯೇಷ್ಠಸ್ತ್ವಂ ವಾಮದೇವಶ್ಚ ರುದ್ರಃ ಸ್ಕಂದಃ ಶಿವಃ ಪ್ರಭುಃ ।
ತ್ವಂ ಯಜ್ಞಸ್ತ್ವಂ ವಷಟ್ಕಾರ ಸ್ತ್ವಮೋಙ್ಕಾರಃ ಪರಂ ತಪಃ ॥ ೩೪ ॥

ಸ್ವಾಹಾಕಾರೋ ನಮಸ್ಕಾರಃ ಸಂಸ್ಕಾರಃ ಸರ್ವಕರ್ಮಣಾಮ್ ।
ಸ್ವಧಾಕಾರಶ್ಚ ಯಜ್ಞಶ್ಚ ವ್ರತಾನಿ ನಿಯಮಾಸ್ತಥಾ ॥ ೩೫ ॥

ವೇದಾ ಲೋಕಾ ಶ್ಚ ದೇವಾಶ್ಚ ಭಗವಾನೇವ ಸರ್ವಶಃ ।
ಆಕಾಶಸ್ಯ ಚ ಶಬ್ದಸ್ತ್ವಂ ಭೂತಾನಾಂ ಪ್ರಭವಾಪ್ಯಯಃ ॥ ೩೬ ॥

ಭೂಮೌ ಗಂಧೋ ರಸಶ್ಚಾಪ್ಸು ತೇಜೋರೂಪಂ ಮಹೇಶ್ವರಃ ।
ವಾಯೋಃ ಸ್ಪರ್ಶಶ್ಚ ದೇವೇಶ ವಪುಶ್ಚಂದ್ರಮಸಸ್ತಥಾ ॥ ೩೭ ॥

---

೩೩. ಸ್ವಾಮಿಯೇ ಪರಮಸ್ಥಾನದಲ್ಲಿರುವ ಬ್ರಹ್ಮ, ನಿರ್ಗುಣವಾದ ಪರಬ್ರಹ್ಮ ವಸ್ತು, ಅಕ್ಷರ, ಪರಮಪದ, ಇವೆಲ್ಲವೂ ನಿನ್ನ ಸ್ವರೂಪಗಳು. ಮತ್ತು ಜ್ಯೇಷ್ಠ, ವಾಮದೇವ, ರುದ್ರ, ಸ್ಕಂದ, ಶಿವ, ಪ್ರಭು ಮುಂತಾದ ಪವಿತ್ರ ನಾಮಗಳಿಂದ ವೇದ್ಯನು ನೀನೆ ಆಗಿರುತ್ತಿ.

೩೪. ಶತ್ರುಗಳನ್ನು ನಿಗ್ರಹಿಸುವ ನೀನು ಯಜ್ಞರೂಪ, ವಷಟ್ಕಾರ, ಓಂಕಾರ, ಸ್ವಾಹಾಕಾರ, ನಮಸ್ಕಾರ, ಮತ್ತು ಸರ್ವ ಪುಣ್ಯಕರ್ಮಗಳಿಂದಾಗುವ ಸಂಸ್ಕಾರ ಮುಂತಾದುವುಗಳ ಸ್ವರೂಪನು.

೩೫. ಸ್ವಧಾಕಾರ ಯಜ್ಞ, ವ್ರತ, ಉಪವಾಸ, ನಿಯಮ, ವೇದ, ಲೋಕ, ದೇವ, ಮುಂತಾದ ವಿಶ್ವರೂಪವು ಭಗವಂತನಾದ ನಿನ್ನ ಅಂಶವಾಗಿರುವುದು.

೩೬. ಮಹೇಶ್ವರನಾದ ನೀನು ಆಕಾಶದ ತತ್ವವಾದ ಶಬ್ದರೂಪನೂ ಪ್ರಾಣಿಗಳ ಉತ್ಪತ್ತಿ ಲಯಗಳಿಗೆ ಕಾರಣನೂ ಪೃಥಿವಿ ಜಲ ತೇಜಸ್ಸುಗಳ ತತ್ವಗಳಾದ ಗಂಧ, ರಸ, ರೂಪಗಳ ಆಕಾರವುಳ್ಳವನೂ ಆಗಿರುತ್ತಿ.

೩೭-೩೮. ದೇವತೆಗಳಿಗೆ ನಿಯಾಮಕನಾದ ಶಿವನೇ! ವಾಯುವಿನ ತತ್ವವಾದ

**ಬುದ್ಧೌ ಜ್ಞಾನಂ ಚ ದೇವೇಶ ಪ್ರಕೃತೇರ್ಬೀಜಮೇವ ಚ ।**
**ಸಂಹರ್ತಾ ಸರ್ವಲೋಕಾನಾಂ ಕಾಲೋ ಮೃತ್ಯುಮಯೋಽಂತಕಃ ॥ ೩೮ ॥**

**ತ್ವಂ ಧಾರಯಸಿ ಲೋಕಾಂಸ್ತ್ರೀಂಸ್ತ್ವಮೇವ ಸೃಜಸಿ ಪ್ರಭೋ ।**
**ಪೂರ್ವೇಣ ವದನೇನ ತ್ವಮಿಂದ್ರತ್ವಂ ಪ್ರಕರೋಷಿ ವೈ ॥ ೩೯ ॥**

**ದಕ್ಷಿಣೇನ ತು ವಕ್ತ್ರೇಣ ಲೋಕಾನ್ ಸಂಕ್ಷಿಪಸೇ ಪುನಃ ।**
**ಪಶ್ಚಿಮೇನ ತು ವಕ್ತ್ರೇಣ ವರುಣಸ್ಥೋ ನ ಸಂಶಯಃ । ॥ ೪೦ ॥**

**ಉತ್ತರೇಣ ತು ವಕ್ತ್ರೇಣ ಸೋಮಸ್ತ್ವಂ ದೇವಸತ್ತಮಃ ।**
**ಏಕಧಾ ಬಹುಧಾ ದೇವ ಲೋಕಾನಾಂ ಪ್ರಭವಾಪ್ಯಯಃ ॥ ೪೧ ॥**

**ಆದಿತ್ಯಾ ವಸವೋ ರುದ್ರಾ ಮರುತಶ್ಚ ಸಹಾಶ್ವಿನಃ ।**
**ಸಾಧ್ಯಾ ವಿದ್ಯಾಧರಾ ನಾಗಾಶ್ಚಾರಣಾಶ್ಚ ತಪೋಧನಾಃ ॥ ೪೨ ॥**

---

ಸ್ಪರ್ಶಗುಣಸ್ವರೂಪನೂ ಚಂದ್ರನ ಸ್ವರೂಪನೂ ಆಗಿರುತ್ತಿ. ಹಾಗೂ ದೇವೇಶ್ವರನೇ ಬುದ್ಧಿಯಲ್ಲಿ ಇರುವ ಜ್ಞಾನಶಕ್ತಿಸ್ವರೂಪನೂ ಪ್ರಕೃತಿಗೆ ಬೀಜಸ್ವರೂಪನೂ ಆಗಿದ್ದೀ.

೩೯. ನೀನು ಸರ್ವಲೋಕಗಳನ್ನು ಸಂಹರಿಸುವ ಕಾಲಸ್ವರೂಪನೂ ಮೃತ್ಯುವನ್ನುಂಟುಮಾಡುವ ಯಮನೂ ಆಗಿರುತ್ತೀ. ಮತ್ತು ನೀನು ಮೂರು ಲೋಕಗಳನ್ನೂ ಧರಿಸಿರುತ್ತೀಯೆ. ಪ್ರಭುವೇ, ನೀನೇ ಎಲ್ಲವನ್ನು ಸೃಷ್ಟಿಸುತ್ತೀಯೆ.

೪೦. ನೀನು ನಿನ್ನ ಪೂರ್ವದಿಕ್ಕಿನ ಮುಖದಿಂದ ಇಂದ್ರನ ಅಧಿಕಾರವನ್ನು ಮಾಡುತ್ತೀಯೆ. ಹಾಗೂ ದಕ್ಷಿಣದಿಕ್ಕಿನ ಮುಖದಿಂದ ಮತ್ತೆ ಲೋಕಗಳನ್ನು ಸಂಹರಿಸುತ್ತಿ.

೪೧. ಪಶ್ಚಿಮದಿಕ್ಕಿನ ಮುಖದಿಂದ ವರುಣನ ಅಧಿಕಾರದಲ್ಲಿಯೂ, ಉತ್ತರದಿಕ್ಕಿನ ಮುಖದಿಂದ ಕುಬೇರನ ಅಧಿಕಾರದಲ್ಲಿಯೂ ಇರುತ್ತೀ. ಹೀಗೆ ದೇವಶ್ರೇಷ್ಠನಾದ ನೀನು ನಾಲ್ಕು ಮುಖಗಳಿಂದ ನಾಲ್ಕು ಲೋಕಪಾಲಕರ ಅಧಿಕಾರವನ್ನು ನೆರವೇರಿಸುತ್ತೀ.

೪೨. ನೀನು ಒಂದೇರೂಪದಿಂದಲೂ ಅನೇಕವಿಧರೂಪಗಳಿಂದಲೂ ಲೋಕದ ಸೃಷ್ಟಿಪ್ರಳಯಗಳಿಗೆ ಕಾರಣನು. ಮತ್ತು ಆದಿತ್ಯ, ವಸು, ರುದ್ರ, ಮರುತ್, ಅಶ್ವಿ, ಮುಂತಾದ ದೇವಗಣವು ನಿನ್ನಿಂದ ಜನಿಸಿರುವುದು.

ವಾಲಖಿಲ್ಯಾ ಮಹಾತ್ಮಾನಸ್ತಪಃಸಿದ್ಧಾಶ್ಚ ಸುವ್ರತಾಃ ।
ತ್ವತ್ತಃ ಪ್ರಸೂತಾ ದೇವೇಶ ಯೇ ಚಾನ್ಯೇ ನಿಯತವ್ರತಾಃ ॥ ೪೩ ॥

ಉಮಾ ಸೀತಾ ಸಿನೀವಾಲೀ ಕುಹೂರ್ಗಾಯತ್ರ್ಯ ಏವ ಚ ।
ಲಕ್ಷ್ಮೀಃ ಕೀರ್ತಿರ್ಧೃತಿರ್ಮೇಧಾ ಲಜ್ಜಾ ಕಾಂತಿರ್ವಪುಃ ಸ್ವಧಾ ॥ ೪೪ ॥

ತುಷ್ಟಿಃ ಪುಷ್ಟಿಃ ಕ್ರಿಯಾ ಚೈವ ವಾಚಾಂ ದೇವೀ ಸರಸ್ವತೀ ।
ತ್ವತ್ತಃ ಪ್ರಸೂತಾ ದೇವೇಶ ಸಂಧ್ಯಾ ರಾತ್ರಿಸ್ತಥೈವ ಚ ॥ ೪೫ ॥

ಸೂರ್ಯಾಯುತಾನಾಮಯುತಪ್ರಭಾವ ।
ನಮೋಽಸ್ತು ತೇ ಚಂದ್ರಸಹಸ್ರಗೌರ ॥
ನಮೋಽಸ್ತು ತೇ ವಜ್ರಪಿನಾಕಧಾರಿಣೇ ।
ನಮೋಽಸ್ತು ತೇ ಸಾಯಕಚಾಪಪಾಣಯೇ ॥ ೪೬ ॥

ನಮೋಽಸ್ತು ತೇ ಭಸ್ಮವಿಭೂಷಿತಾಂಗ ।
ನಮೋಽಸ್ತು ತೇ ಕಾಮಶರೀರನಾಶನ ॥
ನಮೋಽಸ್ತು ತೇ ದೇವ ಹಿರಣ್ಯಗರ್ಭ ।
ನಮೋಽಸ್ತು ತೇ ದೇವ ಹಿರಣ್ಯವಾಸಸೇ ॥ ೪೭ ॥

---

೪೩. ಸಾಧ್ಯರು, ವಿದ್ಯಾಧರರು, ಸರ್ಪ, ಚಾರಣ, ತಪಸ್ವಿಮುನಿ, ವಾಲಖಿಲ್ಯ, ಮುಂತಾದ ದೇವಯೋನಿವಿಶೇಷರೂ, ತಪೋನಿಯಮಗಳಿಂದ ಕೂಡಿದ ಮಹಾತ್ಮರಾದ ಋಷಿಗಳೂ, ನಿನ್ನಿಂದ ಹುಟ್ಟಿರುವರು.

೪೪-೪೫. ದೇವತೆಗಳ ಪ್ರಭುವಾದ ಶಂಕರನೇ! ನಿಯತವಾದ ವ್ರತದಿಂದ ಕೂಡಿದ ಬೇರೆಯವರೂ ಕೂಡ ನಿನ್ನಿಂದಲೇ ಉತ್ಪನ್ನರಾಗಿರುವರು. ಉಮಾ, ಸೀತೆ, ಸಿನೀವಾಲೀ, ಕುಹೂ, ಗಾಯತ್ರೀ, ಲಕ್ಷ್ಮೀ, ಕೀರ್ತಿ, ಧೃತಿ, ಮೇಧಾ, ಲಜ್ಜಾ, ಕಾಂತಿ, ಸ್ವಧಾ, ತುಷ್ಟಿ, ಪುಷ್ಟಿ, ಕ್ರಿಯಾ, ವಾಗ್ದೇವಿಯಾದ ಸರಸ್ವತಿ ಮುಂತಾದ ಜಗತ್ತನ್ನು ವ್ಯಾಪಿಸಿದ ಶಕ್ತಿರೂಪರಾದ ದೇವಿಯರೂ ಸಂಧ್ಯಾರಾತ್ರಿಗಳೂ, ನಿನ್ನಿಂದ ಹುಟ್ಟಿರುವರು.

೪೬. ಲಕ್ಷಸೂರ್ಯರಂತೆ ಅಪರಿಮಿತವಾದ ಪ್ರಭಾವವುಳ್ಳದೇವನೇ! ಸಹಸ್ರ ಚಂದ್ರರಂತೆ ಶುಭ್ರವರ್ಣದಿಂದ ಶೋಭಿಸುವವನೇ! ವಜ್ರ ಮತ್ತು ಪಿನಾಕಧನುಸ್ಸನ್ನು ಧರಿಸಿರುವವನೇ! ಕೈಗಳಿಂದ ಬಿಲ್ಲುಬಾಣಗಳನ್ನು ಧರಿಸಿರುವವನೇ, ನಿನಗೆ ನಮಸ್ಕಾರವು, ನಿನ್ನನ್ನು ವಂದಿಸುವೆನು.

೪೭. ಸ್ವಾಮಿಯೇ! ಭಸ್ಮದಿಂದ ಅಲಂಕರಿಸಲ್ಪಟ್ಟಮೂರ್ತಿಯುಳ್ಳ ನಿನಗೆ

ನಮೋಽಸ್ತು ತೇ ದೇವ ಹಿರಣ್ಯಯೋನೇ ।
ನಮೋಽಸ್ತು ತೇ ದೇವ ಹಿರಣ್ಯನಾಭ ॥
ನಮೋಽಸ್ತು ತೇ ದೇವ ಹಿರಣ್ಯರೇತಸೇ ।
ನಮೋಽಸ್ತು ತೇ ನೇತ್ರಸಹಸ್ರಚಿತ್ರ ॥ ೪೮ ॥

ನಮೋಽಸ್ತು ತೇ ದೇವ ಹಿರಣ್ಯವರ್ಣ
ನಮೋಽಸ್ತು ತೇ ದೇವ ಹಿರಣ್ಯಕೇಶ ।
ನಮೋಽಸ್ತು ತೇ ದೇವ ಹಿರಣ್ಯವೀರ
ನಮೋಽಸ್ತು ತೇ ದೇವ ಹಿರಣ್ಯದಾಯಿನೇ ॥ ೪೯ ॥

ನಮೋಽಸ್ತು ತೇ ದೇವ ಹಿರಣ್ಯನಾಥ
ನಮೋಽಸ್ತು ತೇ ದೇವ ಹಿರಣ್ಯನಾದ ।
ನಮೋಽಸ್ತು ತೇ ದೇವ ಪಿನಾಕಪಾಣೇ
ನಮೋಽಸ್ತು ತೇ ಶಂಕರ ನೀಲಕಂಠ ॥ ೫೦ ॥

---

ನಮಸ್ಕಾರವು. ಮನ್ಮಥನ ದೇಹವನ್ನು ಭಸ್ಮಮಾಡಿದವನೇ, ನಿನ್ನನ್ನು ವಂದಿಸುವೆನು. ಹಿರಣ್ಯವನ್ನು ಗರ್ಭದಲ್ಲಿಧರಿಸಿದ ದೇವನೇ! ನಿನಗೆ ನಮಸ್ಕಾರವು. ಹಿರಣ್ಯದಂತೆ ಉಜ್ವಲವಾದ ವಸ್ತ್ರವನ್ನು ಧರಿಸಿದವನೇ ನಿನಗೆ ನಮಸ್ಕಾರವು.

೪೮. ಸುವರ್ಣಕ್ಕೆ ಕಾರಣನಾದ ದೇವನೇ! ನಿನ್ನನ್ನು ನಮಸ್ಕರಿಸುವೆನು. ಹಿರಣ್ಯವನ್ನು ನಾಭಿಯಲ್ಲಿ ಧರಿಸುವ ದೇವನೇ, ನಿನಗೆ ನಮಸ್ಕಾರವು. ಸುವರ್ಣದಂತೆ ಉಜ್ವಲವಾದ ವೀರ್ಯದಿಂದ ಶೋಭಿಸುವವನೇ! ನಿನಗೆ ನಮಸ್ಕಾರವು. ಸಾವಿರಾರು ನೇತ್ರಗಳಿಂದ ವಿಚಿತ್ರಸ್ವರೂಪನೇ! ನಿನಗೆ ನಮಸ್ಕಾರವು.

೪೯. ಚಿನ್ನದಂತೆ ಥಳಥಳಿಸುವ ವರ್ಣವುಳ್ಳಸ್ವಾಮಿಯೇ, ಹಿರಣ್ಯದಂತೆ ಶೋಭಿಸುವ ಕೇಶವುಳ್ಳವನೇ, ಹಿರಣ್ಯದಂತೆ ಪ್ರಸಿದ್ಧವಾದ ವೀರತ್ವವುಳ್ಳವನೇ, ಭಕ್ತರಿಗೆ ಹಿರಣ್ಯವನ್ನು ಅನುಗ್ರಹಿಸುವವನೇ, ನಿನಗೆ ನಮಸ್ಕಾರವು

೫೦. ಹಿರಣ್ಯಪ್ರಭುವಾದಸ್ವಾಮಿಯೇ! ನಿನಗೆ ವಂದನೆಯು. ಹಿರಣ್ಯದಂತೆನಾದಮಯನಾದ ಸ್ವಾಮಿಯೇ ನಿನಗೆ ನಮಸ್ಕಾರವು. ಪಿನಾಕವೆಂಬ ಬಿಲ್ಲನ್ನು ಪಾಣಿಯಲ್ಲಿ ಧರಿಸಿದ ದೇವನೇ ನಿನ್ನನ್ನುನಮಸ್ಕರಿಸುವೆನು. ಕಪ್ಪಾದ ಕಂಠದಿಂದ ರಾಜಿಸುವ ಶಂಕರನೇ, ನಿನ್ನನ್ನು ವಂದಿಸುವೆನು.

ಏವಂ ಸಂಸ್ತೂಯಮಾನಸ್ತು ವ್ಯಕ್ತೋ ಭೂತ್ವಾ ಮಹಾಮತಿಃ ।
ದೇವದೇವೋ ಜಗದ್ಯೋನಿಃ ಸೂರ್ಯಕೋಟಿಸಮಪ್ರಭಃ ॥ ೫೧ ॥

ಆಬಭಾಷೇ ಕೃಪಾವಿಷ್ಟೋ ಮಹಾದೇವೋ ಮಹಾದ್ಯುತಿಃ ।
ವಕ್ತ್ರಕೋಟಿಸಹಸ್ರೇಣ ಗ್ರಸಮಾನ ಇವಾಂಬರಮ್ ॥ ೫೨ ॥

ಕಂಬುಗ್ರೀವಃ ಸುಜಠರೋ ನಾನಾಭೂಷಣಭೂಷಿತಃ ।
ನಾನಾರತ್ನವಿಚಿತ್ರಾಂಗೋ ನಾನಾಮಾಲ್ಯಾನುಲೇಪನಃ ॥ ೫೩ ॥

ಪಿನಾಕಪಾಣಿರ್ಭಗವಾನ್ ಸುರಪೂಜ್ಯಸ್ತ್ರಿಶೂಲಧೃಕ್ ।
ವ್ಯಾಲಯಜ್ಞೋಪವೀತೀ ಚ ಸುರಾಣಾಮಭಯಂಕರಃ ॥ ೫೪ ॥

ದುಂದುಭಿಸ್ವರನಿರ್ಘೋಷಃ ಪರ್ಜನ್ಯನಿನದೋಪಮಃ ।
ಮುಕ್ತೋ ಹಾಸಸ್ತದಾ ತೇನ ಸರ್ವಮಾಪೂರಯನ್ ಜಗತ್ ॥ ೫೫ ॥

---

೫೧ ಮಹಾಜ್ಞಾನಿಯೂ, ದೇವಾಧಿದೇವನೂ, ಜಗತ್ತಿಗೆಕಾರಣನೂ, ಕೋಟಿ ಸೂರ್ಯರಿಗೆ ಸಮಾನವಾದಕಾಂತಿಯುಳ್ಳವನೂ ಆದ ಪರಮಶಿವನು ಈರೀತಿಯಾಗಿ ಸ್ತುತಿಸಲ್ಪಟ್ಟವನಾಗಿ ಪ್ರಾದುರ್ಭವಿಸಿದನು.

೫೨. ಮಹಾಪ್ರಕಾಶಮಯನಾದ ಮಹಾದೇವನು ಕೃಪಾವಿಷ್ಟನಾಗಿ ತನ್ನ ಕೋಟಿ ಸಹಸ್ರಮುಖಗಳಿಂದ ಆಕಾಶವನ್ನು ನುಂಗುವವನಂತೆ ಮಾತನಾಡಿದನು.

೫೩. ಆಗ ಆವಿರ್ಭಾವಹೊಂದಿದ ಮಹಾದೇವನ ಮೂರ್ತಿಯು ಶಂಖದಂತೆ ಕಂಠವುಳ್ಳವನೂ, ಲಕ್ಷಣವತ್ತಾದ ಉದರವುಳ್ಳವನೂ ನಾನಾ ಆಭರಣಗಳಿಂದ ಅಲಂ ಕರಿಸಲ್ಪಟ್ಟವನೂ, ನಾನಾವಿಧವಾದ ರತ್ನಗಳಿಂದಲೂ ಬಗೆಬಗೆಯಾದ ಮಾಲ್ಯ-ಅನು ಲೇಪನಗಳಿಂದಲೂ ವಿಚಿತ್ರವಾದ ಅಂಗವುಳ್ಳವನೂ ಆಗಿದ್ದನು.

೫೪. ಪಾಣಿಯಲ್ಲಿ ಪಿನಾಕವೆಂಬ ಬಿಲ್ಲನ್ನುಧರಿಸಿದವನೂ, ದೇವತೆಗಳಿಗೆ ಪೂಜ್ಯನೂ, ತ್ರಿಶೂಲಾಯುಧವನ್ನುಧರಿಸಿದನೂ, ಸರ್ಪವನ್ನು ಯಜ್ಞೋಪವೀತವಾಗಿ ಧರಿಸಿದವನೂ ದೇವತೆಗಳಿಗೆ ಅಭಯವನ್ನು ಕೊಡುವವನೂ ಆಗಿದ್ದನು

೫೫. ಆ ಮೂರ್ತಿಯು ದುಂದುಭಿಸ್ವರದಂತೆಯೂ ಮೇಘದಗರ್ಜನೆಯಂ ತೆಯೂ ಗಂಭೀರವಾದ ಧ್ವನಿಯುಳ್ಳ ಅಟ್ಟಹಾಸವನ್ನು ಮಾಡಿ ಆ ಅಟ್ಟಹಾಸದ ಧ್ವನಿ ಯಿಂದ ಜಗತ್ತನ್ನು ತುಂಬಿಸಿದನು.

ತೇನ ಶಬ್ದೇನ ಮಹತಾ ಚಾವಾಂ ಭೀತೌ ಮಹಾತ್ಮನಃ ।
ಅಥೋವಾಚ ಮಹಾದೇವಃ ಪ್ರೀತೋಽಹಂ ಸುರಸತ್ತಮೌ ॥ ೫೬ ॥

ಪಶ್ಯತಾಂ ಚ ಮಹಾಯೋಗಂ ಭಯಂ ಸರ್ವಂ ಪ್ರಮುಚ್ಯತಾಮ್ ।
ಯುವಾಂ ಪ್ರಸೂತೌ ಗಾತ್ರೇಭ್ಯೋ ಮಮ ಪೂರ್ವಂ ಸನಾತನೌ ॥ ೫೭ ॥

ಅಯಂ ಮೇ ದಕ್ಷಿಣೋ ಬಾಹುರ್ಬ್ರಹ್ಮಾ ಲೋಕಪಿತಾಮಹಃ ।
ವಾಮೋ ಬಾಹುಶ್ಚ ಮೇ ವಿಷ್ಣುರ್ನಿತ್ಯಂ ಯುದ್ಧೇಷ್ವನಿರ್ಜಿತಃ ॥ ೫೮ ॥

ಪ್ರೀತೋಽಹಂ ಯುವಯೋಃ ಸಮ್ಯಗ್ವರಂ ದದ್ಮಿ ಯಥೇಪ್ಸಿತಮ್ ।
ತತಃ ಪ್ರಹೃಷ್ಟಮನಸೌ ಪ್ರಣತೌ ಪಾದಯೋಃ ಪ್ರಭೋಃ ॥ ೫೯ ॥

ಅಬ್ರೂತಾಂ ಚ ಮಹಾದೇವಂ ಪ್ರಸಾದಾಭಿಮುಖಂ ಸ್ಥಿತಮ್ ।
ಯದಿ ಪ್ರೀತಿಃ ಸಮುತ್ಪನ್ನಾ ಯದಿ ದೇಯೋ ವರಶ್ಚ ತೇ

ಭಕ್ತಿರ್ಭವತು ನೌ ನಿತ್ಯಂ ತ್ವಯಿ ದೇವ ಸುರೇಶ್ವರ । ॥ ೬೦ ॥

---

೫೬. ಆ ಮಹತ್ತಾದ ಶಬ್ದದ ಶ್ರವಣದಿಂದ ನಾವಿಬ್ಬರೂ ಭಯಗ್ರಸ್ತರಾದೆವು. ಆಗ ಮಹಾದೇವನು ಹೀಗೆ ಹೇಳಿದನು:—ದೇವಶ್ರೇಷ್ಠರೇ! ನಾನು ನಿಮಗೆ ಪ್ರೀತನಾಗಿರುವೆನು.

೫೭. ನನ್ನ ಮಹಾಯೋಗಶಕ್ತಿಯನ್ನು ನೋಡಿರಿ, ನಿಮಗೆ ಉಂಟಾಗಿರುವ ಭಯವನ್ನು ಸಂಪೂರ್ಣವಾಗಿ ತ್ಯಜಿಸಿ, ನೀವು ಪೂರ್ವದಲ್ಲಿ ನನ್ನ ಅವಯವಗಳಿಂದ ಹುಟ್ಟಿ ಬಹುಪುರಾಣರಾಗಿರುವಿರಿ.

೫೮. ಈ ನನ್ನ ದಕ್ಷಿಣಬಾಹುವು ಲೋಕಕ್ಕೆ ಪಿತಾಮಹನೆನಿಸಿರುವ ಬ್ರಹ್ಮನು, ಮತ್ತು ನನ್ನ ಎಡಭಾಗದ ಬಾಹುವು ಯಾವಾಗಲೂ ದಾನವಯುದ್ಧದಲ್ಲಿ ಪರಾಜಯ ಹೊಂದದಿರುವ ವಿಷ್ಣುವು. ಈ ರೀತಿಯಾಗಿ ನೀವು ನನ್ನ ಶರೀರದಿಂದ ಹುಟ್ಟಿರುವಿರಿ.

೫೯. ಈಗ ನಾನು ನಿಮ್ಮಲ್ಲಿ ಚೆನ್ನಾಗಿ ಪ್ರೀತನಾಗಿರುವೆನು. ನಿಮಗೆ ಇಷ್ಟವಾದ ವರವನ್ನು ಕೊಡುವೆನು. ಹೀಗೆ ಹೇಳಿದ ತರುವಾಯ ಸಂತುಷ್ಟವಾದ ಮಾನಸವುಳ್ಳವರಾಗಿ ನಾವು ಪ್ರಭುವಿನ ಪಾದಗಳಲ್ಲಿ ನಮಸ್ಕಾರಮಾಡಿದೆವು.

೬೦. ಮತ್ತು ಅನುಗ್ರಹ ಮಾಡುವುದರಲ್ಲಿ ಉನ್ಮುಖನಾಗಿರುವ ಮಹಾದೇವನನ್ನು ಕುರಿತು ಈ ರೀತಿಯಾಗಿ ಕೇಳಿಕೊಂಡೆವು. ದೇವತೆಗಳ ಪ್ರಭುವೇ! ನೀನು

ದೇವದೇವ ಉವಾಚ :—

ಏವಮಸ್ತು ಮಹಾಭಾಗೌ ಸೃಜತಾಂ ವಿಪುಲಾಃ ಪ್ರಜಾಃ ।
ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರಧಾದ್ವಿಭುಃ ॥ ೬೧ ॥

ಏಷ ಏವ ಮಯೋಕ್ತೋ ವಃ ಪ್ರಭಾವಸ್ತಸ್ಯ ಧೀಮತಃ ।
ಏತದ್ಧಿ ಪರಮಂ ಜ್ಞಾನಮವ್ಯಕ್ತಂ ಶಿವಸಂಜ್ಞಿತಮ್ ॥ ೬೨ ॥

ಏತತ್ಸೂಕ್ಷ್ಮಮಚಿಂತ್ಯಂ ಚ ಪಶ್ಯಂತಿ ಜ್ಞಾನಚಕ್ಷುಷಃ ।
ತಸ್ಮೈ ದೇವಾಧಿದೇವಾಯ ನಮಸ್ಕಾರಂ ಪ್ರಕುರ್ಮಹೇ ।
ಮಹಾದೇವ ನಮಸ್ತೇಽಸ್ತು ಮಹೇಶ್ವರ ನಮೋಽಸ್ತುತೇ ॥ ೬೩ ॥

ಸೂತ ಉವಾಚ :—

ಏತಚ್ಛ್ರುತ್ವಾ ಗತಾಃ ಸರ್ವೇ ಸುರಾಃ ಸ್ವಂ ಸ್ವಂ ನಿವೇಶನಮ್ ।
ನಮಸ್ಕಾರಂ ಪ್ರಕುರ್ವಾಣಾಃ ಶಂಕರಾಯ ಮಹಾತ್ಮನೇ ॥ ೬೪ ॥

---

ನಮ್ಮಲ್ಲಿ ಸುಪ್ರೀತನಾಗಿ ವರವನ್ನು ಕೊಡುವುದಾದರೆ ನಿನ್ನಲ್ಲಿ ಅಚಂಚಲವೂ ಮತ್ತು ಅಕೃತ್ರಿಮವೂ ಆದ ಭಕ್ತಿಯು ನಮಗೆ ಉಂಟಾಗುವಂತೆ ವರವನ್ನು ಕೊಡು.

೬೧. ದೇವತೆಗಳಿಗೆ ದೇವತಾರೂಪನಾದ ಶಿವನು ಈ ರೀತಿಯಾಗಿ ಹೇಳಿದನು. ಮಹಾತ್ಮರೆ! ಹಾಗೆಯೇ ಆಗಲಿ, ನೀವು ವಿಸ್ತಾರವಾಗಿ ಪ್ರಜೆಗಳನ್ನು ಸೃಷ್ಟಿಮಾಡಿರಿ. ಆ ಸರ್ವವ್ಯಾಪಕನೂ ಭಗವಂತನೂ ಆದ ಶಿವನು ಈ ರೀತಿಯಾಗಿ ಹೇಳಿ ಅಲ್ಲಿ ಅಂತರ್ಧಾನಹೊಂದಿದನು.

೬೨. ಈ ರೀತಿಯಾಗಿ ಸರ್ವಜ್ಞನಾದ ಶಂಕರನ ಮಹಿಮೆಯು ನಿಮಗೆ ನನ್ನಿಂದ ಹೇಳಲ್ಪಟ್ಟಿದೆ. ಶಿವನೆಂಬ ಹೆಸರುಳ್ಳ ಈ ಪರಬ್ರಹ್ಮವಸ್ತುವು ಅತೀಂದ್ರಿಯವಾದ ಪರಮ ತತ್ತ್ವಜ್ಞಾನಸ್ವರೂಪವಾಗಿದೆ.

೬೩. ಸೂಕ್ಷ್ಮವೂ ಮತ್ತು ಮನಸ್ಸಿನಲ್ಲಿ ಚಿಂತಿಸಲು ಅಶಕ್ಯವೂ ಆದ ಪರತತ್ತ್ವವನ್ನು ಜ್ಞಾನದೃಷ್ಟಿಯಿಂದ ಜ್ಞಾನಿಗಳು ತಿಳಿಯುತ್ತಾರೆ. ಅಂತಹ ದೇವಾಧಿದೇವನಾದ ಪರಮಾತ್ಮನಿಗೆ ನಮಸ್ಕಾರವನ್ನು ಮಾಡುತ್ತೇವೆ. ಮಹಾದೇವನೆ! ನಿನಗೆ ನಮಸ್ಕಾರವು. ಮಹೇಶ್ವರನೆ! ನಿನ್ನನ್ನು ನಮಸ್ಕರಿಸುವೆವು.

೬೪. ಸೂತಮುನಿಯು ಇಂತೆಂದನು :—ದೇವತೆಗಳು ಎಲ್ಲರೂ ಈ ಮಾತನ್ನು

ಇಮಂ ಸ್ತವಂ ಪಠೇದ್ಯಸ್ತು ಚೇಶ್ವರಸ್ಯ ಮಹಾತ್ಮನಃ ।
ಕಾಮಾಂಶ್ಚ ಲಭತೇ ಸರ್ವಾನ್ ಪಾಪೇಭ್ಯಶ್ಚ ಪ್ರಮುಚ್ಯತೇ ॥ ೬೫ ॥

ಏತತ್ಸರ್ವಂ ತದಾ ತೇನ ವಿಷ್ಣುನಾ ಪ್ರಭವಿಷ್ಣುನಾ ।
ಮಹಾದೇವಪ್ರಸಾದೇನ ಹ್ಯುಕ್ತಂ ಬ್ರಹ್ಮ ಸನಾತನಮ್ ।
ಏತದ್ವಃ ಸರ್ವಮಾಖ್ಯಾತಂ ಮಯಾ ಮಾಹೇಶ್ವರಂ ಬಲಮ್ ॥ ೬೬ ॥

॥ ಇತಿ ಶ್ರೀ ಬ್ರಹ್ಮಾಂಡಪುರಾಣೇ ಷಡ್ವಿಂಶತಿತಮೋಽಧ್ಯಾಯಃ ॥

---

ಕೇಳಿ ಪರಮಾತ್ಮನಾದ ಶಂಕರನಿಗೆ ನಮಸ್ಕಾರವನ್ನು ಮಾಡುತ್ತ ತಮ್ಮ ತಮ್ಮ ಸ್ಥಾನಕ್ಕೆ ಬಂದರು.

೬೫. ಮಹಾತ್ಮನಾದ ಪರಮೇಶ್ವರನ ಈ ಸ್ತೋತ್ರವನ್ನು ಯಾವ ಮನುಜನು ಪಠಿಸುವನೋ, ಅವನು ತನ್ನ ಸಕಲ ಇಷ್ಟಾರ್ಥಗಳನ್ನು ಹೊಂದುವನು.

೬೬. ಮತ್ತು ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಸರ್ವ ಶಕ್ತನಾದ ಮಹಾವಿಷ್ಣುವು ಮಹಾದೇವನ ಪ್ರಸಾದದಿಂದ ತತ್ತ್ವಾರ್ಥವನ್ನು ತಿಳಿದು ಈ ಸಮಸ್ತ ವಿಷಯಗಳನ್ನೂ ಪ್ರತಿಪಾದಿಸಿ ಸನಾತನವಾದ ಬ್ರಹ್ಮವಸ್ತುವನ್ನು ಉಪದೇಶಿಸಿದನು. ಅಂತಹ ಮಹೇಶ್ವರನ ಸಮಸ್ತ ಪ್ರಭಾವವನ್ನು ನಾನು ನಿಮಗೆ ಹೇಳಿರುವೆನು.

ಬ್ರಹ್ಮಾಂಡಪುರಾಣದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

---

# ಸಪ್ತವಿಂಶತಿತಮೋಽಧ್ಯಾಯಃ

**ಋಷಯ ಊಚುಃ :—**
**ಭೂಯಃ ಸೂತ ಮಹಾಬುದ್ಧೇ ಕಥಯಸ್ವ ಮಹಾತ್ಮನಃ ।**
**ಮಹಾದೇವಸ್ಯ ಮಾಹಾತ್ಮ್ಯಂ ಶ್ರೋತುಂ ಕೌತೂಹಲಂ ಚ ನಃ ॥ ೧ ॥**

**ಕಥಂ ದಾರುವಣೇ ದೇವ ಋಷಿಸಂಘನಿಷೇವಿತೇ ।**
**ಚಕಾರ ವೇಷಂ ವಿಕೃತಂ ಯೇನ ಬುದ್ಧಾ ಮಹರ್ಷಯಃ ॥ ೨ ॥**

**ಜ್ಞಾತ್ವಾ ಚ ತೇ ಮಹಾದೇವಂ ತತೋ ಭ್ರಾಂತಾ ಹ್ಯಚೇತಸಃ ।**
**ಆರಾಧಯನ್ ಪ್ರಸಾದಾರ್ಥಂ ನೈಷಾಂ ತುಷ್ಟಃ ಪುನರ್ಭವಃ ॥ ೩ ॥**

**ಏತತ್ಸರ್ವಂ ಯಥಾವೃತ್ತಂ ದೇವದೇವೇನ ಚೇಷ್ಟಿತಮ್ ।**
**ತತ್ಸರ್ವಂ ಕಥಯಸ್ವೇಹ ತ್ವಂ ನೋ ಬುದ್ಧಿಮತಾಂ ವರಃ ॥ ೪ ॥**

---

ಮತ್ತೆ ಮುನಿಗಳು ಪ್ರಶ್ನಿಸಿದರು :—

೧. ಮಹಾ ಪ್ರಜ್ಞಾಶಾಲಿಯಾದ ಸೂತಮುನಿಯೆ! ಮಹಾತ್ಮನಾದ ಮಹಾದೇವನ ಮಾಹಾತ್ಮ್ಯವನ್ನು ಮತ್ತೆ ಹೇಳು. ಅದನ್ನು ಕೇಳಲು ನಾವು ಅತಿಯಾದ ಕುತೂಹಲದಿಂದ ಇರುತ್ತೇವೆ.

೨. ಮಹಾದೇವನು ದೇವತೆಗಳ ಮತ್ತು ಮುನಿಗಳ ಸಂಘದಿಂದ ವ್ಯಾಪ್ತವಾದ ದಾರುವನದಲ್ಲಿ ಪರಿಣಾಮದಲ್ಲಿ ಮುನಿಗಳು ಜ್ಞಾನಿಗಳಾಗಲು ಸಾಧನವಾದ ವಿಕಾರವಾದ ರೂಪವನ್ನು ಹೇಗೆ ತೆಗೆದುಕೊಂಡನು ?

೩. ಭ್ರಾಂತರೂ ಮತ್ತು ಜ್ಞಾನಹೀನರೂ ಆದ ಮುನಿಗಳು ಮಹಾದೇವನೆಂದು ತಿಳಿದ ತರುವಾಯ ಅವನ ಅನುಗ್ರಹ ಪ್ರಾಪ್ತಿಗೋಸ್ಕರ ಆರಾಧಿಸಿದರು. ಆದರೆ ಈಶ್ವರನು ಅವರಲ್ಲಿ ಸಂತುಷ್ಟನಾಗಲಿಲ್ಲ.

೪. ಮಹಾದೇವನ ಲೋಕೋತ್ತರವಾದ ಈ ಎಲ್ಲ ವ್ಯಾಪಾರಗಳನ್ನು ಯಥಾವತ್ತಾಗಿ ಉಪದೇಶಿಸು. ಸೂತಮುನಿಯೆ! ನೀನು ಜ್ಞಾನಿಗಳಲ್ಲಿ ಉತ್ತಮನಾಗಿ ಇದನ್ನು ಉಪದೇಶಮಾಡುವುದರಲ್ಲಿ ದಕ್ಷನಾಗಿರುತ್ತೀ.

**ಸೂತ ಉವಾಚ :—**
**ಶ್ರೂಯತಾಮಭಿಧಾಸ್ಯಾಮಿ ಧರ್ಮಮೇತದತಂದ್ರಿತಾಃ !**
**ನಿರ್ಮಿತಂ ದೇವದೇವೇನ ಭಕ್ತಾನಾಮನುಕಂಪಯಾ ॥ ೫ ॥**

**ಪುರಾ ಕೃತಯುಗೇ ವಿಪ್ರಾಃ ಶೃಂಗೇ ಹಿಮವತಃ ಶುಭೇ ।**
**ದೇವದಾರುವನಂ ರಮ್ಯಂ ನಾನಾದ್ರುಮಲತಾಕುಲಮ್ ॥ ೬ ॥**

**ಬಹವೋ ಮುನಯಸ್ತತ್ರ ತಪಸ್ಯಂತೋ ಮುನಿವ್ರತಾಃ ।**
**ಶೈವಾಲಭೋಜನಾಃ ಕೇಚಿತ್ ಕೇಚಿದಂತರ್ಜಲೇಶಯಾಃ ॥ ೭ ॥**

**ಕೇಚಿದಭ್ರಾವಕಾಶಾಸ್ತು ಪಾದಾಂಗುಷ್ಠಾಗ್ರಧಿಷ್ಠಿತಾಃ ।**
**ದಂತೋಲೂಖಲಿನಶ್ಚಾನ್ಯೇ ತ್ವಶ್ಮಕುಟ್ಟಾಸ್ತಥಾಪರೇ ॥ ೮ ॥**

---

೫. ಸೂತಮುನಿಯು ಪ್ರತಿವಚನವನ್ನು ಕೊಟ್ಟನು :—ಭಕ್ತರನ್ನು ಅನುಗ್ರಹಿಸಬೇಕೆಂಬ ಕರುಣೆಯಿಂದ ದೇವದೇವನಿಂದ ನಿರ್ಮಿಸಲ್ಪಟ್ಟ, ಮಹಿಮೆಯಿಂದ ಕೂಡಿದ ಚರಿತ್ರರೂಪವಾದ ಧರ್ಮವನ್ನು ಹೇಳುವೆನು, ಆಲಸ್ಯವಿಲ್ಲದಂತೆ ಕೇಳಿರಿ.

೬. ವಿಪ್ರರೆ! ಪೂರ್ವಕಾಲದಲ್ಲಿ ಒಂದಾನೊಂದು ಕೃತಯುಗದಲ್ಲಿ ಹಿಮವತ್ಪರ್ವತದ ಮಂಗಲಕರವಾದ ಶಿಖರದಲ್ಲಿ ಅನೇಕ ವೃಕ್ಷಗಳಿಂದಲೂ ಲತೆಗಳಿಂದಲೂ ರಮಣೀಯವಾದ ದೇವದಾರು ವನವು ಇತ್ತು.

೭. ಆ ವನದಲ್ಲಿ ಮುನಿಗಳ ವ್ರತೋಪವಾಸಾದಿ ನಿಯಮಗಳಿಂದ ಕೂಡಿ, ಅನೇಕ ಮುನಿಗಳು ತಪಸ್ಸನ್ನು ಆಚರಿಸುತ್ತಲಿದ್ದರು. ಕೆಲವರು ನೀರಿನಲ್ಲಿ ಹುಟ್ಟಿದ ಪಾಚಿಯನ್ನು ಮಾತ್ರ ಆಹಾರವಾಗಿ ಉಪಯೋಗಿಸುತ್ತಲಿದ್ದರು. ಮತ್ತೆ ಕೆಲವರು ನೀರಿನಲ್ಲಿ ಮಲಗಿಕೊಳ್ಳುತ್ತಲಿದ್ದರು.

೮. ಇನ್ನು ಕೆಲವರು ಪಾದದ ಅಂಗುಷ್ಠಾಗ್ರದಿಂದ ಭೂಮಿಯಲ್ಲಿ ನಿಂತು ಮಿಕ್ಕ ಅವಯವಗಳಿಂದ ಆಕಾಶವನ್ನು ಆಶ್ರಯಿಸಿಕೊಂಡವರಂತೆ ಇದ್ದರು. ಇತರರು ದಂತಗಳಿಂದ ಧಾನ್ಯವನ್ನು ಕುಟ್ಟಿ ಅದನ್ನು ಭುಂಜಿಸುತ್ತ ಮತ್ತು ಕಲ್ಲಿನಿಂದ ಕುಟ್ಟಿ ಅದನ್ನು ಭುಂಜಿಸುತ್ತ ಇರುವುದರಿಂದ ದಂತಗಳನ್ನು ಮತ್ತು ಕಲ್ಲನ್ನು ಒರಳುಕಲ್ಲು ಒನಿಕೆಗಳಂತೆ ಉಪಯೋಗಿಸಿದುದರಿಂದ ದಂತೋಲೂಖಲಿ ಅಥವಾ ಅಶ್ಮಕುಟ್ಟರೆಂದು ಕರೆಯಲ್ಪಡುತ್ತಿದ್ದರು.

ಸ್ಥಾನವೀರಾಸನಾಶ್ಚಾನ್ಯೇ ಮೃಗಚರ್ಯಾರತಾಸ್ತಥಾ ।
ಕಾಲಂ ನಯಂತಿ ತಪಸಾ ತೀವ್ರೇಣ ಚ ಮಹಾಧಿಯಃ ॥ ೯ ॥

ತತಸ್ತೇಷಾಂ ಪ್ರಸಾದಾರ್ಥಂ ದೇವಸ್ತದ್ವನಮಾಗತಃ ।
ಭಸ್ಮಪಾಂಡುರದಿಗ್ಧಾಂಗೋ ನಗ್ನೋ ವಿಕೃತಲಕ್ಷಣಃ ॥ ೧೦ ॥

ವಿಕೃತಸ್ರಸ್ತಕೇಶಶ್ಚ ಕರಾಲದಶನಸ್ತಥಾ ।
ಉಲ್ಮುಕವ್ಯಗ್ರಹಸ್ತಶ್ಚ ರಕ್ತಪಿಂಗಲಲೋಚನಃ ॥ ೧೧॥

ಶಿಶ್ನಂ ಸವೃಷಣಂ ತಸ್ಯ ರಕ್ತಗೈರಿಕಸನ್ನಿಭಮ್ ।
ಮುಖಮಂಗಾರವರ್ಣೇನ ಶುಕ್ಲೇನ ಚ ವಿಭೂಷಿತಮ್ ॥ ೧೨ ॥

ಕ್ವಚಿತ್ಸ ಹಸತೇ ರೌದ್ರಂ ಕ್ವಚಿದ್ಗಾಯತಿ ವಿಸ್ಮಿತಃ ।
ಕ್ವಚಿನ್ನೃತ್ಯತಿ ಶೃಂಗಾರೀ ಕ್ವಚಿದ್ರೌತಿ ಮುಹುರ್ಮುಹುಃ ॥ ೧೩ ॥

---

೯. ಕೆಲವರು ಒಂದು ಸ್ಥಾನವಿಶೇಷದಲ್ಲಿ ವೀರಾಸನದಲ್ಲಿ ಕುಳಿತುಕೊಳ್ಳುತ್ತಿದ್ದರು. ಮತ್ತೆ ಕೆಲವರು ಮೃಗದಂತೆ ಯದೃಚ್ಛಾಲಾಭದಿಂದ ತೃಪ್ತರಾಗುತ್ತಿದ್ದರು. ಹೀಗೆ ಮಹಾ ಜ್ಞಾನಿಗಳು ನಾನಾವಿಧದ ನಿಯಮಗಳಿಂದ ಶರೀರಾಯಾಸವನ್ನು ಗಣನೆ ಮಾಡದೇ ತೀವ್ರವಾದ ತಪಸ್ಸನ್ನು ಮಾಡಿ ಕಾಲವನ್ನು ಕಳೆಯುತ್ತಿದ್ದರು.

೧೦. ಅನಂತರದಲ್ಲಿ ಅವರನ್ನು ಅನುಗ್ರಹಿಸಲು ಮಹಾದೇವನು ಭಸ್ಮಲೇಪನದಿಂದ ಶುಭ್ರವಾದ ದೇಹವುಳ್ಳವನಾಗಿಯೂ ನಗ್ನನಾಗಿಯೂ ವಿಕಾರವಾದ ಲಕ್ಷಣವುಳ್ಳವನಾಗಿಯೂ ಆ ವನಕ್ಕೆ ಬಂದನು.

೧೧. ಶಿವನ ಆ ವಿಕಾರವಾದ ಮೂರ್ತಿಯು ವಿಕಾರವಾಗಿ ಬಿಚ್ಚಿಹೋಗಿದ್ದ ಜಟೆಯುಳ್ಳದ್ದೂ ಭಯಂಕರವಾದ ದಂತಪಂಕ್ತಿಯುಳ್ಳದ್ದೂ ಪಾಣಿಯಲ್ಲಿ ಬೆಂಕಿಯ ಕೊಳ್ಳಿಯನ್ನು ಧರಿಸಿದುದೂ ಮತ್ತು ಕೆಂಪು-ಹೊಂಬಣ್ಣಗಳಿಂದ ವಿಕಾರವಾದ ನೇತ್ರವುಳ್ಳದ್ದೂ ಆಗಿತ್ತು.

೧೨. ಅವನ ವೃಷಣ ಮತ್ತು ಶಿಶ್ನೇಂದ್ರಿಯವು ಕೆಂಪು ಗೈರಿಕ ಧಾತುವಿನ ಗುಂಡಿನಂತೆ ಇತ್ತು. ಮುಖವು ಶುಭ್ರವೂ ಬೆಂಕಿಯ ಕೆಂಡದಂತೆ ಹೊಳೆಯುವುದೂ ಆಗಿತ್ತು.

೧೩. ಅವನು ವನಕ್ಕೆ ಪ್ರವೇಶಿಸುತ್ತ ಕೆಲವೆಡೆಗಳಲ್ಲಿ ಭಯಂಕರವಾಗಿ ಹಾಸ್ಯ

ನೃತ್ಯಂತಂ ರುರುದುಸ್ತೂರ್ಣಂ ಪತ್ನ್ಯಸ್ತೇಷಾಂ ವಿಮೋಹಿತಾಃ ।
ಆಶ್ರಮೇಽಭ್ಯಾಗತೋಽಭೀಕ್ಷ್ಣಂ ಯಾಚತೇ ಚ ಪುನಃ ಪುನಃ ॥ ೧೪ ॥

ಭಾರ್ಯಾ ಕೃತಾ ತಥಾರೂಪಾ ತೃಣಾಭರಣಭೂಷಿತಾ ।
ವೃಷನಾದಂ ಪ್ರಗರ್ಜನ್ ವೈ ಖರನಾದಂ ನನಾದ ಚ ॥ ೧೫ ॥

ತಥಾ ವಂಚಿತುಮಾರಬ್ಧೋ ಹಾಸಯನ್ ಸರ್ವದೇಹಿನಃ ।
ತತಸ್ತೇ ಮುನಯಃ ಕ್ರುದ್ಧಾಃ ಕ್ರೋಧೇನ ಕಲುಷೀಕೃತಾಃ ॥ ೧೬ ॥

ಮೋಹಿತಾ ಮಾಯಯಾ ಸರ್ವೇ ಶಪಿತುಂ ಸಮುಪಸ್ಥಿತಾಃ ।
ಖರವದ್ಗಾಯಸೇ ಯಸ್ಮಾತ್ ಖರಸ್ತಸ್ಮಾದ್ಭವಿಷ್ಯಸಿ ॥ ೧೭ ॥

ರಾಕ್ಷಸೋ ವಾ ಪಿಶಾಚೋ ವಾ ದಾನವೋ ವಾಥವಾ ತಥಾ ।
ಯಥಾ ಪ್ರೈಷ್ಯಂಸ್ತಥಾ ಸರ್ವೇ ಕ್ರುದ್ಧಾಸ್ತೇ ಮುನಯಃ ಸಮಮ್ ॥ ೧೮ ॥

---

ಮಾಡುತ್ತಾನೆ, ಮತ್ತೆ ಕೆಲವುಕಡೆಗಳಲ್ಲಿ ಆಶ್ಚರ್ಯಚಕಿತನಾಗಿ ಗಾನಮಾಡುತ್ತಾನೆ. ಇನ್ನು ಕೆಲವುಕಡೆಗಳಲ್ಲಿ ಶೃಂಗಾರಿಯಾಗಿ ನರ್ತನ ಮಾಡುತ್ತಾನೆ. ಕೆಲಕೆಲವೆಡೆಗಳಲ್ಲಿ ಮತ್ತೆ ಮತ್ತೆ ಶಬ್ದಮಾಡುತ್ತಾನೆ.

೧೪. ಇಂತಹ ರೂಪವುಳ್ಳ ಶಿವನು ಆಶ್ರಮಗಳಿಗೆ ಅಭ್ಯಾಗತನಾಗಿ ಬಂದು ಬಹುವಾಗಿ ಯಾಚಿಸುವನು. ಹೀಗೆ ನರ್ತನ ಮಾಡುತ್ತಲಿದ್ದ ಶಿವನನ್ನು ಕಂಡು ಮೋಹಗೊಂಡು ಮುನಿಪತ್ನಿಯರು ಬೇಗ ಅವನನ್ನು ಸುತ್ತಿ ತಡೆಗಟ್ಟಿದರು.

೧೫. ಆಗ ಮಹಾದೇವನು ತನ್ನ ಪತ್ನಿಯನ್ನು ಹುಲ್ಲು-ಸೊಪ್ಪುಗಳ ಆಭರಣಗಳನ್ನು ಧರಿಸಿದ ಅಂತಹ ವಿರೂಪ ಆಕೃತಿಯುಳ್ಳವಳನ್ನಾಗಿ ಮಾಡಿದನು. ಎತ್ತಿನಂತೆಯೂ ಕತ್ತೆಯಂತೆಯೂ ಪ್ರತಿ ಕ್ಷಣದಲ್ಲಿ ಗರ್ಜಿಸುತ್ತಲಿದ್ದನು.

೧೬. ಹೀಗೆ ಸರ್ವ ಪ್ರಾಣಿಗಳನ್ನು ನಗುವಂತೆ ವಿಕಾರವನ್ನು ನಟಿಸಿ ಲೋಕವನ್ನು ವಂಚಿಸಲು ಆರಂಭಿಸಿದನು. ಆಗ ಮುನಿಗಳು ಕೋಪಗೊಂಡು ಆ ಅತಿಶಯವಾದ ಕೋಪದಿಂದ ಆವಿಷ್ಟರಾಗಿ ಪರವಶರಾದರು.

೧೭. ಮತ್ತು ಶಿವನ ಮಾಯೆಗೆ ಅಧೀನರಾಗಿ ಅವಿವೇಕದಿಂದ ಶಿವನನ್ನು ಶಪಿಸಲು ಉದ್ಯುಕ್ತರಾದರು. ನೀನು ಯಾವ ಕಾರಣದಿಂದ ಕತ್ತೆಯಂತೆ ಗಾನಮಾಡುತ್ತೀಯೋ, ಅದರಿಂದ ನೀನು ಕತ್ತೆಯಾಗು.

೧೮. ರಾಕ್ಷಸನೋ, ಪಿಶಾಚವೋ, ದಾನವನೋ, ಏನಾದರೂ ಆಗು,

ಶೇಪುಃ ಶಾಪೈಸ್ತು ವಿವಿಧೈಸ್ತಂ ದೇವಂ ಭುವನೇಶ್ವರಮ್ ।
ತಪಾಂಸಿ ತೇಷಾಂ ಸರ್ವೇಷಾಂ ಪ್ರತ್ಯಾಹನ್ಯಂತ ಶಂಕರೇ ॥ ೧೯ ॥

ಯಥಾದಿತ್ಯಪ್ರಕಾಶೇನ ತಾರಕಾ ನಭಸಿ ಸ್ಥಿತಾಃ ।
ನ ದ್ಯೋತಂತೇ ಪ್ರಕಾಶೇನ ತದ್ವತ್ತೇಜಾಂಸಿ ಶಂಕರೇ ॥ ೨೦ ॥

ಶ್ರೂಯತೇ ಋಷಿಶಾಪೇನ ಬ್ರಹ್ಮಣಃ ಸುಮಹಾತ್ಮನಃ ।
ಸಮೃದ್ಧಃ ಶ್ರೇಯಸಾಂ ಯೋನಿರ್ಯಜ್ಞೋ ವೈ ನಾಶಮಾಪ್ತವಾನ್
॥ ೨೧ ॥

ಭೃಗೋರಪಿ ಚ ಶಾಪೇನ ವಿಷ್ಣುಃ ಪರಮವೀರ್ಯವಾನ್ ।
ಪ್ರಾದುರ್ಭಾವಾನ್ ದಶ ಪ್ರಾಪ್ತೋ ದುಃಖಿತಶ್ಚ ಸದಾ ಕೃತಃ ॥ ೨೨ ॥

ಇಂದ್ರಸ್ಯಾಪಿ ಹಿ ಧರ್ಮಜ್ಞಾಃ ಶಿಶ್ನಂ ಸವೃಷಣಂ ಪುರಾ ।
ಋಷಿಣಾ ಗೌತಮೇನೋರ್ವ್ಯಾಂ ಕ್ರುದ್ಧೇನ ವಿನಿಪಾತಿತಮ್ ॥ ೨೩ ॥

---

ಹೀಗೆಂದು ಕುಪಿತರಾದ ಮಹರ್ಷಿಗಳು ಗುಂಪಾಗಿ ಸೇರಿ ತಮ್ಮ ಮನಸ್ಸಿಗೆ ಬಂದಂತೆ ಶಪಿಸಿದರು.

೧೯. ಲೋಕಗಳಿಗೆ ಅಧಿಪತಿಯಾದ ಶಿವನನ್ನು ಮುನಿಗಳು ಅವಾಚ್ಯವಾದ ವಿವಿಧ ಶಾಪಗಳಿಂದ ಶಪಿಸಿದರು. ಆದರೆ ಆ ತಪಸ್ವಿಗಳ ತಪಶ್ಶಕ್ತಿಯು ಶಂಕರನಲ್ಲಿ ಕುಂಠಿತವಾಗಿ ಎಲ್ಲರ ಶಾಪವು ಫಲಿಸದೇ ಹೋಯಿತು.

೨೦. ಆಕಾಶದಲ್ಲಿ ಸೂರ್ಯನ ಪ್ರಕಾಶದ ಮುಂದೆ ತಾರಕೆಗಳು ಹೇಗೆ ಕಾಣಿಸಲಾರವೋ ಅದರಂತೆ ತಪಸ್ವಿಗಳ ತಪೋಜ್ವಾಲೆಗಳು ಶಂಕರನ ಚೈತನ್ಯ ಜ್ಯೋತಿಯ ಮುಂದೆ ಕಾಣಿಸಲಿಲ್ಲ.

೨೧. ಮಹಾತ್ಮನಾದ ಬ್ರಹ್ಮನು ಕೈಗೊಂಡಿರುವ ಯಜ್ಞವು ವಿವಿಧವಾದ ಶ್ರೇಯಸ್ಸಮೃದ್ಧಿಗಳಿಗೆ ಬೀಜವಾಗಿದ್ದರೂ ಋಷಿ ಶಾಪದಿಂದ ನಷ್ಟವಾಯಿತೆಂದು ಹಿಂದೆ ಕೇಳಿರುತ್ತೇವೆ.

೨೨. ಮಹಾವಿಷ್ಣುವು ಪರಮ ವೀರ್ಯಸಂಪನ್ನನಾದರೂ ಭೃಗುಮುನಿಯ ಶಾಪದಿಂದ ಹತ್ತು ಅವತಾರಗಳಲ್ಲಿ ವಿವಿಧ ಯೋನಿಗಳಲ್ಲಿ ಜನ್ಮವನ್ನೆತ್ತಿ ಅನೇಕ ದುಃಖಗಳನ್ನು ಅನುಭವಿಸಿದನು.

೨೩. ಧರ್ಮಜ್ಞರೆ! ಗೌತಮನೆಂಬ ತಪಸ್ವಿಮುನಿಯು ಕುಪಿತನಾಗಿ ಇಂದ್ರನ

ಗರ್ಭವಾಸೋ ವಸೂನಾಂ ಚ ಶಾಪೇನ ವಿಹಿತಸ್ತಥಾ ।
ಋಷೀಣಾಂ ಚೈವ ಶಾಪೇನ ನಹುಷಃ ಸರ್ಪತಾಂ ಗತಃ ॥ ೨೪ ॥

ಕ್ಷೀರೋದಶ್ಚ ಸಮುದ್ರಶ್ಚ ಹ್ಯಪೇಯೋ ಬ್ರಾಹ್ಮಣೈಃ ಕೃತಃ ।
ಧರ್ಮಶ್ಚಾತ್ರ ಪ್ರಶಪ್ತೋ ವೈ ಮಾಂಡವ್ಯೇನ ಮಹಾತ್ಮನಾ ॥ ೨೫ ॥

ಏತೇ ಚಾನ್ಯೇ ಚ ಬಹವೋ ಯಾತನಾಂ ಚ ಸಮಾಗತಾಃ ।
ವರ್ಜಯಿತ್ವಾ ವಿರೂಪಾಕ್ಷಂ ದೇವದೇವಂ ಮಹೇಶ್ವರಮ್ ॥ ೨೬ ॥

ಏವಂ ಹಿ ಮೋಹಿತಾಸ್ತೇನ ನ ಚಾಬುಧ್ಯಂತ ಶಂಕರಮ್ ।
ತತಸ್ತೇ ಋಷಯಃ ಸರ್ವೇ ಪರಸ್ಪರಮಥಾಬ್ರುವನ್ ॥ ೨೭ ॥

ನ ಚಾಯಂ ವಿಧಿರಸ್ಮಾಕಂ ಗೃಹಸ್ಥಾನಾಂ ವಿಧೀಯತೇ ।
ಬ್ರಹ್ಮಚರ್ಯರತಾನಾಂ ಚ ವನೇ ವಾ ವನವಾಸಿನಾಮ್ ॥ ೨೮ ॥

---

ವೃಷಣ ಶಿಶ್ನಗಳನ್ನು ಪೂರ್ವದಲ್ಲಿ ಶಾಪಬಲದಿಂದ ಭೂಮಿಯಲ್ಲಿ ಬೀಳುವಂತೆ ಮಾಡಿದನು.

೨೪. ಹಾಗೆಯೆ ಮಹರ್ಷಿಗಳ ಶಾಪದಿಂದ ವಸುಗಳಿಗೆ ಗರ್ಭವಾಸ ದುಃಖವು ಪ್ರಾಪ್ತವಾಯಿತು. ಮತ್ತು ಮುನಿ ಶಾಪದಿಂದಲೆ ನಹುಷರಾಜನು ಸರ್ಪರೂಪವನ್ನು ಹೊಂದಿದನು.

೨೫. ಕ್ಷೀರಸಮುದ್ರವು ಬ್ರಾಹ್ಮಣರ ಶಾಪಕ್ಕೆ ಪಾತ್ರವಾಗಿ ಲವಣಸಮುದ್ರ ರೂಪವಾಗಿ ಪಾನಮಾಡಲು ಅನರ್ಹವಾಯಿತು. ಯಮಧರ್ಮರಾಜನು ಮಹಾತ್ಮನಾದ ಮಾಂಡವ್ಯ ಮುನಿಯಿಂದ ಶಪಿಸಲ್ಪಟ್ಟನು.

೨೬. ವಿರೂಪಾಕ್ಷನೂ, ದೇವತೆಗಳಿಗೆ ದೇವತಾ ಸ್ವರೂಪನೂ ಆದ ಮಹೇಶ್ವರನನ್ನು ಬಿಟ್ಟು ಮಿಕ್ಕ ಈ ವ್ಯಕ್ತಿಗಳೂ ಮತ್ತು ಇತರರನೇಕರೂ ಮುನಿಶಾಪಬಲದಿಂದ ಅನೇಕ ಯಾತನೆಯನ್ನು ಅನುಭವಿಸಿರುವರು.

೨೭. ಈ ರೀತಿಯಾಗಿ ಶಿವನ ಮಾಯೆಯಿಂದ ಮೋಹಿತರಾಗಿ ಮುನಿಗಳು ಶಿವನನ್ನು ಪೂಜ್ಯನಾದ ಶಂಕರನೆಂದು ಅರಿಯಲಿಲ್ಲ. ಅನಂತರ ಆ ಸಂಘದಲ್ಲಿ ಋಷಿಗಳೆಲ್ಲರೂ ಪರಸ್ಪರವಾಗಿ ಮಾತನಾಡಿಕೊಂಡರು.

೨೮. ಗೃಹಸ್ಥರಾದ ನಮಗೆ ಉನ್ಮತ್ತನಾಗಿ ನೀನು ಆಚರಿಸುತ್ತಲಿರುವ ಈ

**ಯತೀನಾಂ ವಾ ತಥಾ ಧರ್ಮೋ ನಾಯಂ ದೃಷ್ಟಃ ಕಥಂ ಚನ ।**
**ಅನಯಸ್ತು ಮಹಾಸೇಷ ಯೇನಾಯಂ ಮೋಹಿತೋ ದ್ವಿಜಾಃ ॥ ೨೯ ॥**

**ಲಿಂಗಂ ಪ್ರಪಾತಯಸ್ವೈತನ್ನಾಯಂ ಧರ್ಮಸ್ತಪಸ್ವಿನಾಮ್ ।**
**ವದಸ್ವ ವಾಚಾ ಮಧುರಂ ವಸ್ತ್ರಮೇಕಂ ಸಮಾಶ್ರಯ ॥ ೩೦ ॥**

**ತ್ಯಾಜಿತೇ ಚ ತ್ವಯಾ ಲಿಂಗೇ ತತಃ ಪೂಜಾಮವಾಪ್ಸ್ಯಸಿ ।**
**ಋಷೀಣಾಂ ತದ್ವಚಃ ಶ್ರುತ್ವಾ ಭಗವಾನ್ ಭಗನ್ನೇತ್ರಹಾ ॥ ೩೧ ॥**

**ಉವಾಚ ಶ್ಲಕ್ಷ್ಣಯಾ ವಾಚಾ ಪ್ರಹಸನ್ನಿವ ಶಂಕರಃ ।**
**ನ ಶಕ್ಯಮಿದಮಸ್ಮಾಕಂ ಲಿಂಗಂ ಪಾತಯಿತುಂ ಬಲಾತ್ ॥ ೩೨ ॥**

---

ಧರ್ಮವು ಕರ್ತವ್ಯವೆಂದು ವಿಧಿಸಲ್ಪಟ್ಟಿಲ್ಲ. ಬ್ರಹ್ಮಚರ್ಯದಲ್ಲಿ ಆಸಕ್ತರಾದ ಬ್ರಹ್ಮಚಾರಿಗಳ ಧರ್ಮವು ಇದಲ್ಲ. ವನವಾಸ ನಿಯಮವುಳ್ಳ ವಾನಪ್ರಸ್ಥಾಶ್ರಮಿಗಳ ಧರ್ಮವು ಇದಲ್ಲ.

೨೯. ಅಥವಾ ಯತಿಗಳು ಕೂಡ ಈ ಧರ್ಮವನ್ನು ಆಚರಿಸುವುದನ್ನು ಕಂಡಿಲ್ಲ. ಮೋಹಗೊಂಡವನಾಗಿ ಮತ್ತು ಉನ್ಮತ್ತನಾಗಿ ಇಂತಹ ಅಧರ್ಮವನ್ನು ಆಶ್ರಯಿಸಿರುತ್ತೀ, ಈ ನಿನ್ನ ಚರ್ಯೆಯು ಯಾವ ಧರ್ಮಕ್ಕೂ ಸೇರಿಲ್ಲ. ಇದರಿಂದ ನಮ್ಮ ಧರ್ಮಲೋಪವಾಗುವ ಪ್ರಸಂಗವು ಒದಗಿರುವುದು.

೩೦. ಆದುದರಿಂದ ನಿನ್ನ ಲಿಂಗವನ್ನು ಕೆಳಕ್ಕೆ ಹಾಕು. ಇದು ತಪಸ್ವಿಗಳ ಧರ್ಮಕ್ಕೆ ವಿರುದ್ಧವು. ಮಧುರವಾದ ವಚನವನ್ನು ಹೇಳು, ಮತ್ತು ಒಂದು ವಸ್ತ್ರವನ್ನು ಧರಿಸು.

೩೧. ನೀನು ನಾವು ಹೇಳಿದಂತೆ ಲಿಂಗವನ್ನು ಕಳೆದುಕೊಂಡರೆ ನಮ್ಮೆಲ್ಲರಿಗೆ ನೀನು ಪೂಜ್ಯನಾಗುತ್ತಿ, ನಾವು ನಿನ್ನನ್ನು ಸತ್ಕರಿಸುವೆವು. ಎಂಬುದಾಗಿ ಮುನಿಗಳು ಹೇಳಿರುವ ವಚನವನ್ನು ಭಗಾಸುರನ ನೇತ್ರವನ್ನು ಅಪಹರಿಸಿದ ಶಿವನು ಕೇಳಿದನು.

೩೨. ಶಂಕರನು ಮುನಿವಚನವನ್ನು ಕೇಳಿ ನಗುನಗುತ್ತ ಮಧುರವಾದ ಮಾತಿನಿಂದ ಪ್ರತ್ಯುತ್ತರವನ್ನು ಹೇಳಿದನು. ನನ್ನ ಈ ಲಿಂಗವನ್ನು ಬಲಾತ್ಕಾರದಿಂದ ಕೆಡವಲು ಸಾಧ್ಯವಿಲ್ಲ.

ಬ್ರಹ್ಮಾದಿ ದೈವತೈಃ ಸರ್ವೈಃ ಕಿಮುತಾನ್ಯೈಸ್ತಪೋಧನೈಃ ।
ಪಾತಯೇಯಮಹಂ ಚೈತಲ್ಲಿಂಗಂ ಭೋ ದ್ವಿಜಸತ್ತಮಾಃ ॥ ೩೩ ॥

ಆಶ್ರಮೇ ತಿಷ್ಠ ವಾ ಗಚ್ಛ ವಾಕ್ಯಮಿತ್ಯೇವ ತೇಽಬ್ರುವನ್ ।
ಏವಮುಕ್ತೋ ಮಹಾದೇವಃ ಪ್ರಹೃಷ್ಟೇಂದ್ರಿಯಚೇಷ್ಟಿತಃ ॥ ೩೪ ॥

ಸರ್ವೇಷಾಂ ಪಶ್ಯತಾಮೇವ ತತ್ರೈವಾಂತರ್ದಧೇ ಪ್ರಭುಃ ।
ಅಂತರ್ಹಿತೇ ಭಗವತಿ ತಥಾಽಲಿಂಗೇ ಕೃತೇ ಭವೇ ॥ ೩೫ ॥

ತ್ರೈಲೋಕ್ಯೇ ಸರ್ವಭೂತಾನಾಂ ಪ್ರಾದುರ್ಭಾವೋ ನ ಜಾಯತೇ ।
ವ್ಯಾಕುಲಂ ಚ ತದಾ ಸರ್ವಂ ನ ಪ್ರಕಾಶೇತ ಕಿಂಚನ ॥ ೩೬ ॥

ತಪತೇ ಚೈವ ನಾದಿತ್ಯೋ ನಿಷ್ಪ್ರಭಃ ಪಾವಕಸ್ತಥಾ ।
ನಕ್ಷತ್ರಾಣಿ ಗ್ರಹಾಶ್ಚೈವ ವಿಪರೀತಾ ವಿಜಜ್ಞಿರೇ ॥ ೩೭ ॥

---

೩೩. ಬ್ರಹ್ಮಾದಿ ದೇವತೆಗಳು ಯತ್ನಿಸುವುದಾದರೂ ಕೂಡ ಲಿಂಗವನ್ನು ಬಲಾತ್ಕಾರದಿಂದ ಕೆಡವಲು ಸಾಧ್ಯವಿಲ್ಲದಿರುವಾಗ ಇತರ ತಪಸ್ವಿಗಳ ಪಾಡೇನು? ಆಗ ಮುನಿಗಳು ದ್ವಿಜೋತ್ತಮರೆ! ನಾವೆಲ್ಲರೂ ಸೇರಿ ಬಲಾತ್ಕಾರದಿಂದ ಇದನ್ನೆ ಕೆಡವೋಣವೆಂದು ಬಲಾತ್ಕರಿಸಿದರು.

೩೪. ಮತ್ತು ನಿರೀಂದ್ರಿಯನಾಗಿ ನೀನು ಈ ಆಶ್ರಮದಲ್ಲಿ ಇದ್ದರೆ ಇರು. ಇಲ್ಲದಿದ್ದರೆ ಹೊರಡು ಎಂದು ಹೇಳಿದರು. ಮಹಾದೇವನು ಈ ರೀತಿಯಾಗಿ ಮುನಿಗಳು ಹೇಳುತ್ತಲೆ ಸಂತೋಷ ಹೊಂದಿದ ಇಂದ್ರಿಯ ವೃತ್ತಿಯುಳ್ಳವನಾದನು.

೩೫. ಆಗ ಎಲ್ಲರೂ ನೋಡುತ್ತಿರುವಹಾಗೆ ಪ್ರಭುವಾದ ಶಂಕರನು ಅದೃಶ್ಯನಾದನು. ಭಗವಂತನು ಶಿಶ್ನ-ವೃಷಣ ವರ್ಜಿತನಾಗಿ ಮಾಡಲ್ಪಟ್ಟು ಅಂತರ್ಧಾನ ಹೊಂದಿದನು.

೩೬. ಆ ದುರವಸ್ಥೆಯಲ್ಲಿ ತ್ರಿಲೋಕದಲ್ಲಿ ಸರ್ವ ಪ್ರಾಣಿಗಳ ಉತ್ಪತ್ತಿಯು ನಿಂತುಹೋಯಿತು. ಪ್ರಪಂಚವೆಲ್ಲವೂ ವ್ಯಾಕುಲವಾಗಿ ಯಾವುದೊಂದು ವಸ್ತುವೂ ಪ್ರಕಾಶಿಸಲಿಲ್ಲ.

೩೭. ಸೂರ್ಯನು ಮೊದಲಿನಂತೆ ತಪಿಸಲಿಲ್ಲ. ಅಗ್ನಿಯು ತನ್ನ ಪ್ರಭಾಶೂನ್ಯನಾಗಿ ಜ್ವಲಿಸಲಿಲ್ಲ. ನಕ್ಷತ್ರಗಳು ಮತ್ತು ಇತರ ಗ್ರಹಗಳು ತಮ್ಮ ಜ್ಯೋತಿರೂಪಕ್ಕೆ ವಿರುದ್ಧವಾಗಿ ತಮೋಮಯವಾದುವು.

**ಸಂತಾನಾರ್ಥಂ ಪ್ರವೃತ್ತಾನಾಂ ಋಷೀಣಾಂ ವಿಭವಾತ್ಮನಾಮ್ ।**
**ಕ್ರತವೋ ನ ವ್ಯವರ್ತಂತ ಹ್ಯೃತುಕಾಲಾಭಿಗಾಮಿನಾಮ್ ॥ ೩೮ ॥**

**ತೇ ಚರಂತಿ ಪುನರ್ಧರ್ಮಂ ನಿರ್ಮಮಾ ನಿರಹಂಕೃತಾಃ ।**
**ನಷ್ಟಪ್ರಭಾವವೀರ್ಯಾಶ್ಚ ನಷ್ಟತೇಜಸ ಏವ ಚ ॥ ೩೯ ॥**

**ಧರ್ಮ್ಯೇ ಚೈವ ಮತಿಸ್ತೇಷಾಂ ತದಾ ನ ವ್ಯವತಿಷ್ಠತೇ ।**
**ತೇ ತು ಸರ್ವೇ ಸಮಾಗಮ್ಯ ಬ್ರಹ್ಮಲೋಕಮುಪಾಗತಾಃ ॥ ೪೦ ॥**

**ಬ್ರಹ್ಮಣೋ ಭುವನಂ ಗತ್ವಾ ದೃಷ್ಟ್ವಾ ಪುಷ್ಕರಸಂಭವಮ್ ।**
**ಪಾದಯೋಃ ಪತಿತಾಃ ಸರ್ವೇ ಶಿವವೃತ್ತಾಂತಮೂಚಿರೇ ॥ ೪೧ ॥**

**ವಿಕಟಃ ಸ್ತಬ್ಧಕೇಶಶ್ಚ ಕರಾಲದಶನಸ್ತಥಾ ।**
**ಉಲೂಕವ್ಯಗ್ರಹಸ್ತಶ್ಚ ರಕ್ತಪಿಂಗಲಲೋಚನಃ ॥ ೪೨ ॥**

---

೩೮. ಸಂತಾನಪ್ರಾಪ್ತಿಗೋಸ್ಕರ ಧರ್ಮಾಚರಣೆಯಲ್ಲಿ ನಿರತರಾದ ಮುನಿಗಳು ಋತುಕಾಲದಲ್ಲಿ ಪತ್ನೀಸಂಗವನ್ನು ಮಾಡುತ್ತ ಮಹಾ ವಿಭವದಿಂದ ಮಾಡಿದ ಯಜ್ಞ ಕರ್ಮಗಳು ನಿಷ್ಫಲವಾದುವು.

೩೯. ಆ ಮಹರ್ಷಿಗಳು ಮಮತ್ವ-ಅಹಂಕಾರಗಳನ್ನು ದೂರಮಾಡಿ ಅತಿ ಕ್ಲೇಶ ದಿಂದ ಧರ್ಮವನ್ನು ಆಚರಿಸುತ್ತಾರೆ. ಆದರೆ ತಮ್ಮ ತಪಸ್ಸಿನ ಪ್ರಭಾವ-ವೀರ್ಯ-ತೇಜಸ್ಸುಗಳನ್ನು ಕಳೆದುಕೊಂಡವರಾದ್ದರಿಂದ ಆ ಧರ್ಮಾಚರಣೆಯು ಸಾರ್ಥಕವಾಗ ಲಿಲ್ಲ.

೪೦. ಎಲ್ಲದಕ್ಕೂ ಆದಿಯಲ್ಲಿ ಅವರಿಗೆ ಧರ್ಮದಲ್ಲಿ ಬುದ್ಧಿಯು ಶಾಶ್ವತವಾಗಿ ನಿಲ್ಲಲಾರದೆ ಹೋಯಿತು. ಆಗ ಅವರೆಲ್ಲರೂ ಸೇರಿ ಬ್ರಹ್ಮಲೋಕಕ್ಕೆ ಹೋದರು.

೪೧. ಆಗ ಎಲ್ಲರೂ ಬ್ರಹ್ಮಲೋಕಕ್ಕೆ ಹೋಗಿ ಪದ್ಮಪುಷ್ಪ ಗರ್ಭದಲ್ಲಿ ಜನಿಸಿದ ಬ್ರಹ್ಮನನ್ನು ಕಂಡು ಅವನ ಚರಣಗಳಿಗೆ ನಮಸ್ಕರಿಸಿ ಶಿವನ ವೃತ್ತಾಂತವನ್ನು ವಿಜ್ಞಾಪಿಸಿಕೊಂಡರು.

೪೨. ಶಿವನು ವಿಕಾರಸ್ವರೂಪಿಯೂ ಬಿಚ್ಚಿಕೊಂಡಿರುವ ಕೇಶವುಳ್ಳವನೂ, ಭಯಂಕರವಾದ ದಂತಪಂಕ್ತಿಯುಳ್ಳವನೂ, ಕೈಯಲ್ಲಿ ಕೊಳ್ಳಿಯನ್ನು ಧರಿಸಿದವನೂ,

ಶಿಶ್ನಂ ಸವೃಷಣಂ ತಸ್ಯ ರಕ್ತಂ ಗೈರಿಕಮಂಡಿತಮ್ ।
ಸ್ನುಷಾಣಾಂ ದುಹಿತೄಣಾಂ ಚ ಪುತ್ರೀಣಾಂ ಚ ವಿಶೇಷತಃ ॥ ೪೩ ॥

ವರ್ತಮಾನಸ್ತತಃ ಪಾರ್ಶ್ವೇ ವಿಪರೀತಾಭಿಲಾಷತಃ ।
ಉನ್ಮತ್ತ ಇತಿ ವಿಜ್ಞಾಯ ಸೋಽಸ್ಮಾಭಿರವಮಾನಿತಃ ॥ ೪೪ ॥

ಆಕ್ರುಷ್ಟಸ್ತಾಡಿತಶ್ಚಾಪಿ ಲಿಂಗಂ ಚಾಪ್ಯಸ್ಯ ಚೋದ್ಧೃತಮ್ ।
ತಸ್ಯ ಕ್ರೋಧಪ್ರಸಾದಾರ್ಥಂ ವಯಂ ತೇ ಶರಣಂ ಗತಾಃ ॥ ೪೫ ॥

ಏತತ್ಕಾರ್ಯಂ ನ ಜಾನೀಮಸ್ತನ್ನೋ ಬ್ರೂಹಿ ಪಿತಾಮಹ ।
ಋಷೀಣಾಂ ತದ್ವಚಃ ಶ್ರುತ್ವಾ ಧ್ಯಾನಾದ್ವಿಜ್ಞಾಯ ಚೇಶ್ವರಮ್॥ ೪೬ ॥

---

ಕೆಂಪು ಮತ್ತು ಹೊಂಬಣ್ಣದ ವಿಕಾರನೇತ್ರವುಳ್ಳವನೂ ಆಗಿ ದೇವದಾರು ವನಕ್ಕೆ ಬಂದಿರುವನು.

೪೩. ಅವನ ವೃಷಣ-ಶಿಶ್ನೇಂದ್ರಿಯಗಳು ಕೆಂಪು ಗೈರಿಕ ಧಾತುವಿನ ಗುಂಡಿನಂತೆ ಇತ್ತು. ಅವನು ನಮ್ಮ ಹೆಣ್ಣುಮಕ್ಕಳು, ಸೊಸೆಯರು ಮುಂತಾದ ಪ್ರೌಢಾಂಗನೆಯರಿಗೆ ಗೋಚರನಾದನು.

೪೪. ಮತ್ತು ವಿಶೇಷವಾಗಿ ಆ ಅಂಗನೆಯರ ಪಾರ್ಶ್ವದಲ್ಲಿ ನಿಂತು ವಿರುದ್ಧವಾದ ಅಭಿಲಾಷವನ್ನು ಸೂಚಿಸುವವನಾದನು. ಆಗ ಅವನನ್ನು ಉನ್ಮತ್ತನೆಂದು ತಿಳಿದು ಅವನಿಗೆ ಮಾನಭಂಗವನ್ನು ಮಾಡಿದೆವು.

೪೫. ಅವನನ್ನು ನಿಂದಿಸಿದೆವು. ಮತ್ತು ಹೊಡೆದೆವು. ಅವನ ಲಿಂಗವನ್ನು ಕಿತ್ತುಹಾಕಿದೆವು. ಇದರಿಂದ ಅವನಿಗೆ ಕೋಪವುಂಟಾಗಿರುವುದು. ಅದನ್ನು ಶಾಂತಿ ಮಾಡಲು ನಿನ್ನನ್ನು ಶರಣುಹೊಂದಿರುತ್ತೇವೆ.

೪೬. ಪಿತಾಮಹನೆ! ಇದಕ್ಕೋಸ್ಕರ ಮುಂದೆ ಮಾಡಬೇಕಾದ ಕರ್ತವ್ಯವನ್ನು ನಾವು ತಿಳಿಯಲಾರೆವು. ಅದನ್ನು ನೀನು ತೋರಿಸಬೇಕು, ಎಂದು ಮುನಿಗಳು ಹೇಳಿದ ವಚನವನ್ನು ಕೇಳಿ ಅನಂತರ ಧ್ಯಾನದೃಷ್ಟಿಯಿಂದ ಆ ವೃತ್ತಾಂತವನ್ನು ನಡೆಸಿದವನು ಸಾಕ್ಷಾತ್ತಾಗಿ ಪರಮಶಿವನೆಂದು ತಿಳಿದನು.

ಪ್ರತ್ಯುವಾಚ ತತೋ ಬ್ರಹ್ಮಾ ವಾಕ್ಯಂ ಜ ಸುಸಮಾಹಿತಃ ।
ಏಷ ದೇವೋ ಮಹಾದೇವೋ ವಿಜ್ಞೇಯಸ್ತು ಮಹೇಶ್ವರಃ ॥ ೪೭ ॥

ನ ತಸ್ಯ ಪರಮಂ ಕಿಂಚಿತ್ ಪದಂ ಸಮಧಿಗಮ್ಯತೇ ।
ದೇವಾನಾಂ ಚ ಋಷೀಣಾಂ ಚ ಪಿತೃಣಾಂ ಚೈವ ಸ ಪ್ರಭುಃ ॥ ೪೮ ॥

ಸಹಸ್ರಯುಗಪರ್ಯಂತೇ ಪ್ರಲಯೇ ಸರ್ವದೇಹಿನಾಮ್ ।
ಸಂಹರತ್ಯೇಷ ಭಗವಾನ್ ಕಾಲೋ ಭೂತ್ವಾ ಮಹೇಶ್ವರಃ ॥ ೪೯ ॥

ಏಷ ಚೈವ ಪ್ರಜಾಃ ಸರ್ವಾಃ ಸೃಜತ್ಯೇಕಃ ಸ್ವತೇಜಸಾ ।
ಏಷ ಚಕ್ರೇ ಚ ವಕ್ಷೋಜಶ್ರೀವತ್ಸಕೃತಲಕ್ಷಣಃ ॥ ೫೦ ॥

ಯೋಗೀ ಕೃತಯುಗೇ ಚೈವ ತ್ರೇತಾಯಾಂ ಕ್ರತುರುಚ್ಯತೇ ।
ದ್ವಾಪರೇ ಚೈವ ಕಾಲಾಗ್ನಿರ್ಧರ್ಮಕೇತುಃ ಕಲೌ ಸ್ಮೃತಃ ॥ ೫೧ ॥

---

೪೭. ಆಗ ಬ್ರಹ್ಮನು ಸಮಾಧಾನದೃಷ್ಟಿಯಿಂದ ಈ ರೀತಿಯಾಗಿ ಪ್ರತ್ಯುತ್ತರವನ್ನು ಹೇಳಿದನು. ಆಗ ಉನ್ನತ್ತರೂಪದಿಂದ ನಿಮಗೆ ಕಾಣಿಸಿರುವವನು ದೇವತೆಗಳಿಗೆ ಪ್ರಭುವಾದ ಮಹಾದೇವನೆಂದು ತಿಳಿಯಿರಿ.

೪೮. ಅವನ ಉತ್ತಮವಾದ ಯಾವದೊಂದು ಸ್ಥಾನವನ್ನು ತಿಳಿಯಲಾಗುವುದಿಲ್ಲ, ಅದು ಅತಿ ಸೂಕ್ಷ್ಮವಾದ ದಜ್ಞೇಯಸ್ವರೂಪವಾದುದು. ಆ ಶಿವನು ದೇವತೆಗಳಿಗೂ ಋಷಿಗಳಿಗೂ ಮತ್ತು ಪಿತೃಗಳಿಗೂ ಪ್ರಭುವಾಗಿರುವನು.

೪೯. ಸಹಸ್ರಯುಗಗಳ ಅಂತದಲ್ಲಿ ಪ್ರಲಯಕಾಲವು ಪ್ರಾಪ್ತವಾಗಲು ಭಗವಂತನಾದ ಮಹೇಶ್ವರನು ಕಾಲರೂಪಿಯಾಗಿ ಸಕಲ ಪ್ರಾಣಿಗಳ ಸಂಹಾರವನ್ನು ಮಾಡುವನು.

೫೦. ಇವನು ಸೃಷ್ಟಿಸಮಯದಲ್ಲಿ ತನ್ನ ತೇಜಸ್ಸಿನಿಂಧ ಅಸಹಾಯನಾಗಿ ಸಕಲ ಪ್ರಜೆಗಳನ್ನು ಸೃಷ್ಟಿಸುವನು. ಮತ್ತು ಹೃದಯದಲ್ಲಿ ಶ್ರೀವತ್ಸವೆಂಬ ಲಾಂಛನದಿಂದ ಕೂಡಿದ ಕೃಷ್ಣನು ಇವನು.

೫೧. ಇವನು ಕೃತಯುಗದಲ್ಲಿ ಮಹಾ ಯೋಗಿ ಸ್ವರೂಪನು, ತ್ರೇತಾಯುಗದಲ್ಲಿ ಯಜ್ಞಸ್ವರೂಪಿಯು, ದ್ವಾಪರಯುಗದಲ್ಲಿ ಕಾಲಾಗ್ನಿರೂಪನು, ಮತ್ತು ಕಲಿಯುಗದಲ್ಲಿ ಧರ್ಮಕೇತುಸ್ವರೂಪನೆಂದು ಹೇಳಲ್ಪಟ್ಟಿರುವನು. ಇವು ಯುಗಭೇದದಿಂದ ಆಗುವ ಸ್ವರೂಪ ಭೇದಗಳು.

ರುದ್ರಸ್ಯ ಮೂರ್ತಯಸ್ತಿಸ್ರೋ ವಿಜ್ಞೇಯಾಶ್ಚಾಪಿ ಪಂಡಿತೈಃ ।
ತಮೋಽಹ್ಯಗ್ನೀ ರಜೋ ಬ್ರಹ್ಮಾ ಸತ್ತ್ವಂ ವಿಷ್ಣುಃ ಪ್ರಕಾಶಕಃ ॥ ೫೨ ॥

ಮೂರ್ತಿರೇಕಾ ಸ್ಮೃತಾ ಯಸ್ಯ ದಿಗ್ವಾಸಾಶ್ಚ ಶಿವಾಹ್ವಯಾ ।
ಯತ್ರ ತಿಷ್ಠಂತಿ ತದ್ಬ್ರಹ್ಮ ಯೋಗೇನ ತು ಸಮನ್ವಿತಮ್ ॥ ೫೩ ॥

ತಸ್ಮಾದ್ದೇವಂ ದೇವದೇವಮೀಶಾನಂ ಪ್ರಭುಮವ್ಯಯಮ್ ।
ಆರಾಧಯತ ವಿಪ್ರೇಂದ್ರಾ ಜಿತಕ್ರೋಧಾ ಜಿತೇಂದ್ರಿಯಾಃ ॥ ೫೪ ॥

ದೃಷ್ಟಂ ವೈ ಯಾದೃಶಂ ತಸ್ಯ ಲಿಂಗಮಾಸೀನ್ಮಹಾತ್ಮನಃ ।
ತಾದೃಕ್ ಪ್ರತಿಕೃತಿಂ ಕೃತ್ವಾ ಶೂಲಪಾಣಿಂ ಪ್ರಪದ್ಯತ ॥ ೫೫ ॥

ತತೋ ದ್ರಕ್ಷ್ಯಥ ದೇವೇಶಂ ದುರ್ದರ್ಶಮಕೃತಾತ್ಮಭಿಃ ।
ಯಂ ದೃಷ್ಟ್ವಾ ಸರ್ವಮಜ್ಞಾನಮಧರ್ಮಶ್ಚ ಪ್ರಣಶ್ಯತಿ ॥ ೫೬ ॥

---

೫೨. ಪಂಡಿತರು ಈ ರುದ್ರನಿಗೆ ಮೂರು ಮೂರ್ತಿಗಳಿವೆಯೆಂದು ಭಾವಿಸಬೇಕು. ಅವು ವಿಲಕ್ಷಣವಾದ ವ್ಯಾಪಾರಗಳಿಗೆ ಸಾಧನಗಳಾಗಿವೆ. ತಮೋಗುಣವು ಕಾಲಾಗ್ನಿ ಸ್ವರೂಪವೂ, ರಜೋಗುಣವು ಬ್ರಹ್ಮಸ್ವರೂಪವೂ, ಸತ್ತ್ವಗುಣವು ಪ್ರಕಾಶಮಯನಾದ ವಿಷ್ಣುಸ್ವರೂಪವೂ ಆಗಿದೆ. ಗುಣಭೇದದಿಂದ ಮೂರ್ತಿಭೇದವುಂಟಾಗಿರುವುದು.

೫೩. ಆ ಮಹಾದೇವನಿಗೆ ದಿಗಂಬರವಾದ ಶಿವ ಎಂಬ ಹೆಸರುಳ್ಳ ಒಂದು ಮೂರ್ತಿಯು ಇರುವುದು. ಅದನ್ನು ಯೋಗಿಗಳು ತತ್ಪರತೆಯಿಂದ ಧ್ಯಾನಿಸುವರು. ಅದು ಸಾಕ್ಷಾತ್ ಬ್ರಹ್ಮಸ್ವರೂಪದಿಂದ ಕೂಡಿರುವುದಾಗಿದೆ.

೫೪. ವಿಪ್ರೇಂದ್ರರೆ! ಆದುದರಿಂದ ನೀವು ಕ್ರೋಧರಹಿತರೂ, ಜಿತೇಂದ್ರಿಯರೂ ಆಗಿ ದೇವತೆಗಳ ದೇವನೂ, ಈಶ್ವರನೂ, ಪ್ರಭುವೂ, ನಾಶವಿಲ್ಲದವನೂ ಆದ ಶಂಕರನನ್ನು ಆರಾಧಿಸಿ.

೫೫. ಆ ಮಹಾತ್ಮನಾದ ಶಿವನ ಯಾವ ಆಕೃತಿಯ ಲಿಂಗವನ್ನು ನೀವು ನೋಡಿರುವಿರೋ, ಆ ಆಕಾರದ ಒಂದು ಪ್ರಕೃತಿಯನ್ನು ಮಾಡಿ ಶಿವನನ್ನು ಆರಾಧಿಸಿ ಶರಣಾಗತರಾಗಬೇಕು.

೫೬. ಆದರಿಂದ ಅಪರಿಶುದ್ಧವಾದ ಮಾನಸವುಳ್ಳವರಿಗೆ ಸಾಕ್ಷಾತ್ಕಾರಕ್ಕೆ ದುರ್ಲಭನಾದ ದೇವೇಶ್ವರನನ್ನು ನೀವು ಸಾಕ್ಷಾತ್ಕರಿಸುತ್ತೀರಿ. ಆ ಪರಮಾತ್ಮನ ಸಾಕ್ಷಾತ್ಕಾರವು ಅಜ್ಞಾನವನ್ನೂ ಸಮಸ್ತ ಅಧರ್ಮವನ್ನೂ ನಾಶಮಾಡುವುದು.

ತತಃ ಪ್ರದಕ್ಷಿಣಂ ಕೃತ್ವಾ ಬ್ರಹ್ಮಾಣಮಮಿತೌಜಸಮ್ ।
ಪ್ರಸ್ಥಿತಾ ವೀತಶೋಕಾಸ್ತೇ ದೇವದಾರುವನೇ ತತ। ॥ ೫೭ ॥

ಆರಾಧಯಿತುಮಾರಬ್ಧಾ ಬ್ರಹ್ಮಣಾ ಕಥಿತಂ ಯಥಾ ।
ಸ್ಥಂಡಿಲೇಷು ವಿಚಿತ್ರೇಷು ಪರ್ವತೇಷು ಗುಹಾಸು ಚ ॥ ೫೮ ॥

ನದೀನಾಂ ಚ ವಿಚಿತ್ರೇಷು ಪುಲಿನೇಷು ಶುಭೇಷು ಚ ।
ಏವಂ ಸಂವತ್ಸರೇ ಪೂರ್ಣೇ ವಸಂತೇ ಸಮುಪಸ್ಥಿತೇ ॥
ತದೇವ ರೂಪಮಾಸ್ಥಾಯ ದೇವಸ್ತದ್ವನಮಾಗತಃ ॥ ೫೯ ॥

ಕುಸುಮಿತ ಬಹುಪಾದಪಾಲತಾಕಂ ।
ಭ್ರಮರಗಣೈರುಪಗೀಯಮಾನಖಂಡಮ್ ॥
ಪರಭೃತಪರಿಪೂರ್ಣಚಾರುಶಬ್ದಂ ।
ಪ್ರವಿಶತಿ ತದ್ವನಮಾಶ್ರಮಂ ಮಹೇಶಃ ॥ ೬೦ ॥

ತತಸ್ತಂ ಮುನಯಃ ಸರ್ವೇ ತುಷ್ಟುವುಃ ಸುಸಮಾಹಿತಾಃ ॥ ೬೧ ॥

---

೫೭. ಅನಂತರದಲ್ಲಿ ಅಪಾರಮಹಿಮೆಯಿಂದ ಕೂಡಿದ ಬ್ರಹ್ಮದೇವನನ್ನು ಪ್ರದಕ್ಷಿಣಾನಮಸ್ಕಾರ ಮಾಡಿ ಶೋಕರಹಿತರಾಗಿ ದೇವದಾರುವನಕ್ಕೆ ಹಿಂತಿರುಗಿ ಬಂದರು.

೫೮. ಬ್ರಹ್ಮನು ಉಪದೇಶಿಸಿರುವಂತೆ ವಿಚಿತ್ರವಾದ ಸ್ಥಂಡಿಲಗಳಲ್ಲಿಯೂ ಪರ್ವತಗಳಲ್ಲಿಯೂ, ಮತ್ತು ಗುಹೆಗಳಲ್ಲಿಯೂ ಕೂಡ ಶಿವಲಿಂಗವನ್ನು ಪೂಜಿಸಲು ಉಪಕ್ರಮಿಸಿದರು.

೫೯. ನದಿಗಳ ವಿಚಿತ್ರವಾದ ಮಳಲುದಿಣ್ಣೆಗಳಲ್ಲಿಯೂ ಶುಭಕರವಾದ ಪ್ರದೇಶಗಳಲ್ಲಿಯೂ ಪೂಜೆ ಮಾಡುತ್ತಿರಲು ಒಂದು ವರ್ಷವು ಸಂಪೂರ್ಣವಾಗಿ ಕಳೆದು ವಸಂತಮಾಸವು ಪ್ರಾಪ್ತವಾಗಲು ಮಹಾದೇವನು ಆ ರೂಪವನ್ನೇ ಧರಿಸಿ ಮತ್ತೆ ಆ ದೇವದಾರು ವನಕ್ಕೆ ಬಂದನು.

೬೦ ಮನೋಹರವಾಗಿ ಹೂ ಬಿಟ್ಟಿರುವ ಅನೇಕ ವೃಕ್ಷ-ಲತೆಗಳಿಂದ ಕೂಡಿಕೊಂಡಿರುವ, ಭ್ರಮರ ಪಂಕ್ತಿಯ ಗಾನಧ್ವನಿಯಿಂದ ಕೂಡಿದ ಅನೇಕ ಭಾಗಗಳುಳ್ಳ, ಮತ್ತು ಕೋಗಿಲೆಗಳ ಮಧುರ ಧ್ವನಿಯಿಂದ ರಮ್ಯವಾದ, ಆಶ್ರಮಗಳಿಂದ ಪೂರ್ಣವಾದ ಆ ವನವನ್ನು ಮಹೇಶ್ವರನು ಪ್ರವೇಶಿಸಿದನು.

ಅದ್ಭಿರ್ವಿವಿಧಮಾಲ್ಯೈಶ್ಚ ಧೂಪಗಂಧೈಸ್ತಥೈವ ಚ ।
ಸಪತ್ನೀಕಾಮಹಾಭಾಗಾಃ ಸಪುತ್ರಾಃ ಸಪರಿಚ್ಛದಾಃ ॥ ೬೨ ॥

ಮೃದುಭಿಸ್ತೇ ತದಾ ವಾಗ್ಭಿ ಗಿರೀಶಮಿದಮಬ್ರುವನ್ ।
ಅಜ್ಞಾನಾದ್ದೇವದೇವಸ್ಯ ಯದಸ್ಮಾಭಿರನುಷ್ಠಿತಮ್ ॥ ೬೩ ॥

ಕರ್ಮಣಾ ಮನಸಾ ವಾಚಾ ತತ್ ಸರ್ವಂ ಕ್ಷಂತುಮರ್ಹಸಿ ।
ಚರಿತಾನಿ ವಿಚಿತ್ರಾಣಿ ಗುಹ್ಯಾನಿ ಗಹನಾನಿ ಚ ॥ ೬೪ ॥

ಬ್ರಹ್ಮಾದೀನಾಂ ಚ ದೇವಾನಾಂ ದುರ್ವಿಜ್ಞೇಯಾನಿ ಶಂಕರ ।
ಸ್ವಾಗತಂ ತೇ ನ ಜಾನೀಮೋ ಗತಿಂ ನೈವ ಚ ನೈವ ಚ ॥ ೬೫ ॥

ವಿಶ್ವೇಶ್ವರ ಮಹಾದೇವ ಯೋಽಸಿ ಸೋಽಸಿ ನಮೋಽಸ್ತುತೇ ।
ಸ್ತುವಂತಿ ತ್ವಾಂ ಮಹಾತ್ಮಾನೋ ದೇವದೇವಂ ಮಹೇಶ್ವರಮ್ ॥೬೬॥

---

೬೨. ಆಗ ವನವನ್ನು ದಿವ್ಯಮೂರ್ತಿಧರನಾಗಿ ಪ್ರವೇಶಿಸಿದ ಕೂಡಲೆ ಮುನಿಗಳು ಅವನನ್ನು ನೋಡಿ ಸ್ತುತಿ ಮಾಡಿದರು.

೬೩. ಮತ್ತು ಶುದ್ಧೋದಕಗಳಿಂದಲೂ ನಾನಾವಿಧವಾದ ಪುಷ್ಪ-ಮಾಲ್ಯಗಳಿಂದಲೂ ಧೂಪ-ದೀಪ-ಗಂಧಾದಿ ಸಕಲೋಪಚಾರಗಳಿಂದಲೂ ಪತ್ನೀಪುತ್ರಾದಿ ಸಕಲ ಪರಿವಾರದಿಂದ ಕೂಡಿದ ಮುನಿಗಳು ಅರ್ಚನ ಮಾಡಿದರು.

೬೪. ದೇವೋತ್ತಮನಾದ ನಿನಗೆ ಅಜ್ಞಾನದಿಂದ ಶರೀರ-ವಾಕ್-ಮನಸ್ಸುಗಳಿಂದ ನಾವು ಮಾಡಿರುವ ಸರ್ವವಿಧವಾದ ಅಪಚಾರವನ್ನು ಕ್ಷಮಿಸುವವನಾಗು, ಹೀಗೆಂದು ವಿನಯದಿಂದ ಪ್ರಾರ್ಥಿಸಿದರು.

೬೫ ಶಂಕರನೆ! ನಿನ್ನ ಮಹಿಮೆಯಿಂದ ಕೂಡಿದ ನಾನಾವಿಧದ ಚರಿತ್ರಗಳು ವಿಚಿತ್ರವೂ, ರಹಸ್ಯವೂ, ಮತ್ತು ಅತ್ಯಂತ ಗಹನವೂ ಆಗಿರುವುದರಿಂದ ಬ್ರಹ್ಮಾದಿ ಸಕಲ ದೇವತಾ ಸಂಘಕ್ಕೆ ತಿಳಿಯಲು ಅಶಕ್ಯವಾದವುಗಳಾಗಿವೆ.

೬೬. ಪ್ರಪಂಚಕ್ಕೆ ಈಶ್ವರನೆ! ಮಹಾದೇವನೆ! ನೀನು ಯಾವ ರೂಪದಿಂದ ಇರುವೆಯೋ ಆ ರೂಪಕ್ಕೆ ನಾವು ವಂದಿಸುವೆವು ನಿನ್ನ ತತ್ತ್ವರೂಪವನ್ನು ಹೀಗೆಂದು ನಿರ್ಧರಿಸಲು ಶಕ್ಯವಲ್ಲ. ಮಹಾತ್ಮರು ದೇವೋತ್ತಮನೂ ಮಹೇಶ್ವರನೂ ಆದ ನಿನ್ನನ್ನು ನಾನಾ ಬಗೆಯಿಂದ ಸ್ತುತಿಸುವರು.

ನಮೋ ಭವಾಯ ಭವ್ಯಾಯ ಭಾವನಾಯೋದ್ಭವಾಯ ಚ ।
ಅನಂತಬಲವೀರ್ಯಾಯ ಭೂತಾನಾಂ ಪತಯೇ ನಮಃ ॥ ೬೭ ॥

ಸಂಹರ್ತ್ರೇ ಕಪಿಶಾಂಗಾಯ ಅವ್ಯಯಾಯ ವ್ಯಯಾಯ ಚ ।
ಗಂಗಾಸಲಿಲಧಾರಾಯ ಚಾಧಾರಾಯ ಗುಣಾತ್ಮನೇ ॥ ೬೮ ॥

ತ್ರ್ಯಂಬಕಾಯ ತ್ರಿಣೇತ್ರಾಯ ತ್ರಿಶೂಲವರಧಾರಿಣೇ ।
ಕಂದರ್ಪಾಯ ನಮಸ್ತುಭ್ಯಂ ನಮೋಽಸ್ತು ಪರಮಾತ್ಮನೇ ॥ ೬೯ ॥

ಶಂಕರಾಯ ವೃಷಾಂಕಾಯ ಗಣಾನಾಂ ಪತಯೇ ನಮಃ ।
ದಂಡಹಸ್ತಾಯ ಕಾಲಾಯ ಪಾಶಹಸ್ತಾಯ ವೈ ನಮಃ ॥ ೭೦ ॥

ವೇದಮಂತ್ರಪ್ರಧಾನಾಯ ಶತಜಿಹ್ವಾಯ ತೇ ನಮಃ ।
ಭೂತಂ ಭವ್ಯಂ ಭವಿಷ್ಯಚ್ಚ ಸ್ಥಾವರಂ ಜಂಗಮಂ ಚ ಯತ್ ॥ ೭೧ ॥

---

೬೭. ಸಮಸ್ತ ಜಗತ್ತಿಗೆ ಉತ್ಪತ್ತಿಕಾರಣನೂ, ಮಂಗಲಕರನೂ, ಸ್ಥಿತಿಕಾರಣನೂ ನಾನಾ ವಿಧವಾಗಿ ಆವಿರ್ಭವಿಸಿದವನೂ, ಅನಂತವಾದ ಶಾರೀರ ಶಕ್ತಿ-ತೇಜಸ್ಸುಗಳಿಂದ ಕೂಡಿದವನೂ, ಮತ್ತು ಸರ್ವ ಭೂತಗಳಿಗೆ ರಕ್ಷಕನೂ ಆದ ನಿನ್ನನ್ನು ನಮಸ್ಕರಿಸುವೆವು.

೬೮. ಸಕಲ ಪ್ರಪಂಚವನ್ನು ಸಂಹರಿಸುವ ಶಕ್ತಿಯುಳ್ಳವನೂ. ಹೊಂಬಣ್ಣದ ಗಾತ್ರವುಳ್ಳವನೂ, ಸ್ವರೂಪದಿಂದ ನಾಶವಿಲ್ಲದವನೂ, ಕಾರ್ಯರೂಪದಿಂದ ನಾಶವುಳ್ಳವನೂ, ಗಂಗಾನದಿಯ ಪ್ರವಾಹವನ್ನು ಧರಿಸಿದವನೂ, ಸಕಲ ವಸ್ತುಗಳ ಆಧಾರನೂ ಮತ್ತು ಸತ್ತ್ವ-ರಜ-ತಮೋಗುಣ ಸ್ವರೂಪನೂ ಆದ ನಿನಗೆ ನಮಸ್ಕಾರವು.

೬೯. ಮೂರು ಪುರೋಡಾಶ ಹವಿಸ್ಸುಳ್ಳ ಸತ್ಕರ್ಮದಿಂದ ಯಾಗ ಮಾಡಲ್ಪಡುವವನೂ, ಮೂರು ಕಣ್ಣು, ಉತ್ತಮವಾದ ತ್ರಿಶೂಲಗಳನ್ನು ಧರಿಸಿರುವವನೂ ಮನ್ಮಥನಂತೆ ದಿವ್ಯಸುಂದರನೂ ಆದ ಪರಮಾತ್ಮನಿಗೆ ನಮಸ್ಕಾರವು.

೭೦. ಸುಖವನ್ನು ಕೊಡುವವನೂ, ನಂದಿಯ ಚಿಹ್ನದ ಧ್ವಜದಿಂದ ಕೂಡಿದವನೂ ಪ್ರಮಥ ಗಣಗಳಿಗೆ ಅಧಿಪತಿಯೂ, ಪ್ರಪಂಚವನ್ನು ಪರಿವರ್ತಿಸುತ್ತಿರುವ ಕಾಲಸ್ವರೂಪನೂ ಮತ್ತು ದಂಡ-ಪಾಶಗಳನ್ನು ಹಸ್ತದಲ್ಲಿ ಧರಿಸಿದವನೂ ಆದ ನಿನ್ನನ್ನು ವಂದಿಸುವೆವು.

೭೧. ವೇದ ಮಂತ್ರಗಳಿಂದ ಪ್ರಧಾನವಾಗಿ ಸ್ತುತಿಸಲ್ಪಡುವವನೂ, ವಿಶ್ವರೂಪ

ತವ ದೇಹಾತ್ ಸಮುತ್ಪನ್ನಂ ದೇವ ಸರ್ವಮಿದಂ ಜಗತ್ ।
ಶಂಭೋ ಪಾಹಿ ಚ ಭದ್ರಂ ತೇ ಪ್ರಸೀದ ಭಗವಂಸ್ತತಃ ॥ ೭೨ ॥

ಅಜ್ಞಾನಾದ್ಯದಿ ವಾ ಜ್ಞಾನಾದ್ಯತ್ಕಿಂಚಿತ್ಕುರುತೇ ನರಃ ।
ತತ್ಸರ್ವಂ ಭಗವಾನೇವ ಕುರುತೇ ಯೋಗಮಾಯಯಾ ॥ ೭೩ ॥

ಏವಂ ಸ್ತುತ್ವಾ ತು ಮುನಯಃ ಪ್ರಹೃಷ್ಟೇನಾಂತರಾತ್ಮನಾ ।
ಯಾಚಂತೇ ತಪಸಾ ಯುಕ್ತಾಃ ಪಶ್ಯಾಮಸ್ತ್ವಾಂ ಯಥಾ ಪುರಾ ॥೭೪॥

ಪ್ರಕೃತಿಸ್ಥಂ ಚ ತೇ ಲಿಂಗಂ ತಥೈವಾಸ್ತು ಯಥಾ ಪುರಾ ।
ನಮೋ ದಿಗ್ವಾಸಸೇ ನಿತ್ಯಂ ಕಿಂಕಿಣೀ ಜಾಲಮಾಲಿನೇ ॥ ೭೫ ॥

---

ಆಕಾರದಿಂದ ನೂರಾರು ನಾಲಿಗೆಗಳಿಂದ ಕೂಡಿದವನೂ, ಮತ್ತು ಭೂತ-ಭವಿಷ್ಯ-ವರ್ತಮಾನವೆಂಬ ತ್ರಿಕಾಲ ವಸ್ತುಸ್ವರೂಪನೂ ಆದ ನಿನಗೆ ನಮಸ್ಕಾರವು.

೭೨. ತ್ರಿಕಾಲಸಂಬಂಧವುಳ್ಳ ಪ್ರತಿಯೊಂದು ವಸ್ತುವು ನಿನ್ನ ಶರೀರದಿಂದ ಹುಟ್ಟಿರುವುದು. ನಿಖಿಲ ಜಗತ್ತು ನಿನ್ನಿಂದ ಆವಿರ್ಭಾವ ಹೊಂದಿರುವುದು. ಶಂಭು ದೇವನೆ, ನಮ್ಮನ್ನು ರಕ್ಷಿಸು. ನಿನಗೆ ಕಲ್ಯಾಣವಾಗಲಿ, ಭಗವಂತನೆ, ನಮ್ಮಲ್ಲಿ ಪ್ರಸನ್ನನಾಗು.

೭೩. ಮಾನವನು ಅಜ್ಞಾನ ಅಥವಾ ಜ್ಞಾನದಿಂದ ಯಾವ ಕರ್ಮವನ್ನು ಆಚರಿಸಿದರೂ ಅದೆಲ್ಲವನ್ನೂ ಯೋಗ ಮಾಯೆಯಿಂದ ಮಾನವನನ್ನು ವಶಪಡಿಸಿಕೊಂಡು ನೀನೇ ಮಾಡಿಸುತ್ತ ನೀನೇ ನಿಯಾಮಕನಾಗಿರುತ್ತೀ.

೭೪. ಈ ರೀತಿಯಾಗಿ ತಪಸ್ವಿಗಳಾದ ಮುನಿಜನರು ಸಂತುಷ್ಟವಾದ ಚಿತ್ತದಿಂದ ಸ್ತುತಿಮಾಡಿ ಕಡೆಯಲ್ಲಿ ಸ್ವಾಮಿಯೆ, ನಿನ್ನನ್ನು ಮೊದಲಿನಂತೆ ಮತ್ತೆ ನೋಡುವೆವು. ಹಾಗೆ ನೀನು ಅನುಗ್ರಹಿಸು ಎಂದು ಬೇಡಿಕೊಂಡರು.

೭೫. ನಿನ್ನ ಲಿಂಗವು ಮೊದಲಿನಂತೆ ಪ್ರಕೃತಿಸಿದ್ಧವಾದ ರೂಪವನ್ನು ಹೊಂದಿ ನಿನ್ನಲ್ಲಿ ಸೇರಲಿ. ದಿಗಂಬರನೂ ಮತ್ತು ಚಿಕ್ಕ ಘಂಟೆಗಳ ಪಂಕ್ತಿಯನ್ನು ಧರಿಸಿದವನೂ ಆದ ನಿನ್ನನ್ನು ನಮಸ್ಕರಿಸುವೆವು

ವಿಕಟಾಯ ಕರಾಲಾಯ ಕರಾಲವದನಾಯ ಚ ।
ಅರೂಪಾಯ ಸುರೂಪಾಯ ವಿಶ್ವರೂಪಾಯ ತೇ ನಮಃ ॥ ೭೬ ॥

ಕಟಂಕಟಾಯ ರುದ್ರಾಯ ಸ್ವಾಹಾಕಾರಾಯ ವೈ ನಮಃ ।
ಸರ್ವಪ್ರಾಣಾತ್ಮನೇ ತುಭ್ಯಂ ಗುಣದೇಹಾಯ ವೈ ನಮಃ ॥ ೭೭ ॥

ದುರ್ಗಂಧಾಯ ಸುಗಂಧಾಯ ಶೂಲಹಸ್ತಾಯ ವೈ ನಮಃ ।
ಸ್ವಯಂ ನೀಲಶಿಖಂಡಾಯ ಶ್ರೀಕಂಠಾಯ ನಮೋ ನಮಃ ॥
ನೀಲಕಂಠಾಯ ದೇವಾಯ ಚಿತಾಭಸ್ಮಾಂಗರಾಗಿಣೇ ॥ ೭೮ ॥

ಗುಣತ್ರಯಾತ್ಮನೇ ತುಭ್ಯಂ ನಮೋ ವಿಶ್ವಾಯ ವೇಧಸೇ ।
ಶ್ಮಶಾನವಾಸಿನೇ ನಿತ್ಯಂ ಪ್ರೇತರೂಪಾಯ ವೈ ನಮಃ ॥ ೭೯ ॥

---

೭೬. ವಿಕಾರರೂಪವುಳ್ಳವನೂ, ಭಯಂಕರನೂ, ಕರಾಲವಾದ ಮುಖವುಳ್ಳವನೂ, ರೂಪರಹಿತನೂ, ಭಕ್ತರನ್ನು ಅನುಗ್ರಹಿಸಲು ಸುಂದರರೂಪಧಾರಿಯೂ, ವಿಶ್ವರೂಪವನ್ನು ಧರಿಸಿದವನೂ ಆದ ಪ್ರಭುವನ್ನು ನಮಸ್ಕಾರ ಮಾಡುವೆವು.

೭೭. ಸಂಹಾರಕರ್ಮದಲ್ಲಿ ಕರಾಲರೂಪಧಾರಿಯೂ, ರೌದ್ರರೂಪವುಳ್ಳವನೂ, ಯಜ್ಞದಲ್ಲಿ ಉಚ್ಚರಿಸುವ ಸ್ವಾಹಾಕಾರಸ್ವರೂಪನೂ, ಸರ್ವರ ಪ್ರಾಣಸ್ವರೂಪನೂ, ಮತ್ತು ಗುಣತ್ರಯರೂಪವಾದ ದೇಹವುಳ್ಳವನೂ ಆದ ನಿನಗೆ ವಂದಿಸುವೆವು.

೭೮. ದುರ್ಗಂಧ ಮತ್ತು ಸುಗಂಧಸ್ವರೂಪನೂ, ಪಾಣಿಯಲ್ಲಿ ಶೂಲವನ್ನು ಧರಿಸಿದವನೂ, ಕಪ್ಪಾದ ಕೇಶಗಳನ್ನು ಧರಿಸಿದವನೂ, ಕಂಠದಲ್ಲಿ ಕಾಲಕೂಟವನ್ನು ಇರಿಸಿಕೊಂಡವನೂ, ಕಪ್ಪಾದ ಕಂಠವುಳ್ಳವನೂ, ಮತ್ತು ಚಿತೆಯ ಭಸ್ಮವನ್ನು ಅಂಗರಾಗರೂಪದಿಂದ ಲೇಪಿಸಿಕೊಂಡಿರುವವನೂ ಆದ ಸ್ವಾಮಿಗೆ ನಾವು ಪ್ರಣತರಾಗಿರುವೆವು.

೭೯. ಗುಣತ್ರಯಸ್ವರೂಪನೂ, ಗುಣತ್ರಯ ಕಾರ್ಯವಾದ ಪ್ರಪಂಚರೂಪನೂ, ಬ್ರಹ್ಮದೇವನೂ, ಯಾವಾಗಲೂ ಶ್ಮಶಾನದಲ್ಲಿ ವಾಸಿಸುವವನೂ, ಮತ್ತು ಪ್ರೇತರೂಪವನ್ನು ಧರಿಸಿದವನೂ ಆದ ಸ್ವಾಮಿಗೆ ನಮಸ್ಕಾರವು.

ತ್ವಂ ಬ್ರಹ್ಮಾ ಸರ್ವದೇವಾನಾಂ ರುದ್ರಾಣಾಂ ನೀಲಲೋಹಿತಃ ।
ಆತ್ಮಾ ಚ ಸರ್ವಭೂತಾನಾಂ ಸಾಂಖ್ಯೈಃ ಪುರುಷ ಉಚ್ಯತೇ ॥ ೮೦ ॥

ಪರ್ವತಾನಾಂ ಮಹಾಮೇರುರ್ನಕ್ಷತ್ರಾಣಾಂ ಚ ಚಂದ್ರಮಾಃ ।
ಋಷೀಣಾಂ ಚ ವಸಿಷ್ಠಸ್ತ್ವಂ ದೇವಾನಾಂ ವಾಸವಸ್ತಥಾ ॥ ೮೧ ॥

ಓಂಕಾರಃ ಸರ್ವವೇದಾನಾಂ ಜ್ಯೇಷ್ಠಸಾಮ ಚಸಾಮಸು ।
ಆರಣ್ಯಾನಾಂ ಚ ಸರ್ವೇಷಾಂ ಸಿಹ್ಮಸ್ತ್ವಂ ಪರಮೇಶ್ವರಃ ॥ ೮೨ ॥

ಗ್ರಾಮ್ಯಾಣಾಮ್ಋಷಭಶ್ಚಾಪಿ ಭಗವಾಂಲ್ಲೋಕಪೂಜಿತಃ ।
ಸರ್ವಥಾ ವರ್ತಮಾನೋಽಪಿ ಯೋ ಯೋ ಭಾವೋ ಭವಿಷ್ಯತಿ॥ ೮೩ ॥

ತ್ವಾಮೇವ ತತ್ರ ಪಶ್ಯಾಮೋ ಬ್ರಹ್ಮಣಾ ಕಥಿತಂ ಯಥಾ ।
ಕಾಮಃ ಕ್ರೋಧಶ್ಚ ಲೋಭಶ್ಚ ವಿಷಾದೋ ಮದ ಏವ ಚ ॥ ೮೪ ॥

---

೮೦. ಸಕಲ ದೇವಗಣಕ್ಕೆ ನೀನು ಬ್ರಹ್ಮಸ್ವರೂಪನು, ಅನೇಕ ರುದ್ರಮೂರ್ತಿಗಳಲ್ಲಿ ನೀಲಲೋಹಿತನೆಂಬ ರುದ್ರನು, ಸರ್ವ ಪ್ರಾಣಿಗಳಿಗೆ ಚೈತನ್ಯಮಯನಾದ ಆತ್ಮನು, ನಿನ್ನನ್ನು ಸಾಂಖ್ಯ ಜ್ಞಾನಿಗಳು ಪ್ರಕೃತಿಯಿಂದ ವಿಂಗಡಿಸಲ್ಪಟ್ಟ ಪುರುಷ ತತ್ತ್ವವನ್ನಾಗಿ ಹೇಳುವರು.

೮೧. ನೀನು ಪರ್ವತಗಳಲ್ಲಿ ಮಹಾಮೇರು ಪರ್ವತ ಸ್ವರೂಪನೂ, ನಕ್ಷತ್ರ ರಾಶಿಯಲ್ಲಿ ಚಂದ್ರಸ್ವರೂಪನೂ, ಋಷಿಗಣದಲ್ಲಿ ವಸಿಷ್ಠನೂ, ಮತ್ತು ದೇವತಾ ವರ್ಗದಲ್ಲಿ ಇಂದ್ರನೂ ಆಗಿರುತ್ತಿ.

೮೨. ಸಕಲ ವೇದರಾಶಿಯಲ್ಲಿ ಓಂಕಾರ ಸ್ವರೂಪನೂ, ವಿವಿಧ ಸಾಮುಗಳಲ್ಲಿ ಜ್ಯೇಷ್ಠ ಸಾಮುಸ್ವರೂಪನೂ, ನಾನಾವಿಧವಾದ ಅರಣ್ಯ ಪ್ರಾಣಿಗಳಿಗೆ ಅಧಿಪತಿಯಾದ ಸಿಂಹರೂಪನೂ ಆಗಿರುತ್ತಿ.

೮೩. ಲೋಕದಲ್ಲಿ ಸತ್ಕರಿಸಲ್ಪಟ್ಟಿರುವ ಭಗವಂತನಾದ ನೀನು ಗ್ರಾಮ್ಯಜಾತಿಯ ಪಶುಗಳಲ್ಲಿ ವೃಷಭ ರೂಪಿಯೂ ಆಗಿರುತ್ತಿ. ನೀನು ಯಾವ ಸ್ವರೂಪದಿಂದ ಇದ್ದರೂ ಸಕಲ ವಸ್ತುಗಳ ಭಾವ (ಅಸ್ತಿತ್ವ) ಸ್ವರೂಪನು ನೀನೇ ಆಗಿರುತ್ತಿ.

೮೪. ನಮಗೆ ಬ್ರಹ್ಮದೇವನು ಉಪದೇಶ ಮಾಡಿರುವಂತೆ ಸಕಲ ವಸ್ತುಗಳಲ್ಲಿ ಅವುಗಳ ಭಾವರೂಪದಿಂದ ನೀನೇ ಇರುತ್ತೀಯೆಂದು ನಾವು ಸಾಕ್ಷಾತ್ಕರಿಸುತ್ತೇವೆ.

ಏತದಿಚ್ಛಾಮ ವೈ ರೋದ್ಧುಂ ಪ್ರಸೀದ ಪರಮೇಶ್ವರ ।
ಮಹಾಸಂಹರಣೇ ಪ್ರಾಪ್ತೇ ತ್ವಯಾ ದೇವ ಕೃತಾತ್ಮನಾ ॥ ೮೫ ॥

ಕರಂ ಲಲಾಟೇ ಸಂಪೀಡ್ಯ ವಹ್ನಿರುತ್ಪಾದಿತಸ್ತ್ವಯಾ ।
ತೇನಾಗ್ನಿನಾ ತದಾ ಲೋಕಾ ಅರ್ಚಿರ್ಭಿಃ ಸರ್ವತೋ ವೃತಾಃ ॥ ೮೬ ॥

ತಸ್ಮಾದಗ್ನಿಸಮಾ ಹ್ಯೇತೇ ಬಹವೋ ವಿಕೃತಾಗ್ನಯಃ ।
ಯಾನಿ ಚಾನ್ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥ ೮೭ ॥

ದಹ್ಯಂತೇ ಪ್ರಾಣಿನಸ್ತೇ ತು ತ್ವತ್ಸಮುತ್ಥೇನ ವಹ್ನಿನಾ ।
ಅಸ್ಮಾಕಂ ದಹ್ಯಮಾನಾನಾಂ ತ್ರಾತಾ ಭವ ಸುರೇಶ್ವರ ॥ ೮೮ ॥

ತ್ವಂ ಚ ಲೋಕಹಿತಾರ್ಥಾಯ ಭೂತಾನಿ ಪರಿಷಿಂಚಸಿ ।
ಮಹೇಶ್ವರ ಮಹಾಭಾಗ ಪ್ರಭೋ ಶುಭನಿರೀಕ್ಷಕ ॥ ೮೯ ॥

---

ನಮ್ಮಲ್ಲಿ ತಾಮಸವಾದ ಕಾಮ, ಕ್ರೋಧ, ಲೋಭ, ವಿಷಾದ, ಮತ್ತು ಮದವೆಂಬ ವಿಕಾರಗಳು ವಾಸಮಾಡುತ್ತಲಿದ್ದು ಪೀಡಿಸುತ್ತಿವೆ.

೮೫. ಪರಮೇಶ್ವರನೆ! ಆ ಮಾನಸವಾದ ಅರಿಗಳನ್ನು ನೀನು ಪರಿಹರಿಸಬೇಕೆಂದು ಅಪೇಕ್ಷಿಸುತ್ತೇವೆ. ದೇವನೆ! ಆತ್ಮರೂಪದಿಂದ ಸರ್ವಕಾಲದಲ್ಲಿಯೂ ಇರುವ ನೀನು ಪ್ರಲಯ ಕಾಲದಲ್ಲಿ ಮಹಾಸಂಹಾರವನ್ನು ನೆರವೇರಿಸುತ್ತಿ.

೮೬. ಆಗ ನೀನು ನಿನ್ನ ಕೈಯಿಂದ ಹಣೆಯನ್ನು ಒತ್ತಿಕೊಂಡು ಲಲಾಟಾಗ್ನಿಯನ್ನು ಸೃಷ್ಟಿಸಿ ಆ ಅಗ್ನಿಯಿಂದ ಸಕಲ ಲೋಕಗಳನ್ನು ಜ್ವಾಲಾಮಂಡಲಗಳಿಂದ ಉರಿಸಿ ಭಸ್ಮಮಾಡುತ್ತಿ.

೮೭. ನಿನ್ನ ಲಲಾಟಾಗ್ನಿಯ ವಿಕಾರಗಳಾಗಿ ಈಗ ಭೌತಿಕಾಗ್ನಿಗಳು ಅಲ್ಪ ಸ್ವಲ್ಪ ದಹನಶಕ್ತಿಯಿಂದ ಸಾಮ್ಯವನ್ನು ಹೊಂದಿಕೊಂಡಿವೆ. ಸ್ಥಾವರ ಜಂಗಮ ಮುಂತಾದ ಇತರ ಸಕಲ ವಸ್ತುಗಳು ಅಗ್ನಿಗೆ ಅಧೀನವಾಗುವುವು.

೮೮. ಸಕಲ ಪ್ರಾಣಿಗಳೂ ಆ ನಿನ್ನ ಲಲಾಟಾಗ್ನಿಯಿಂದ ಸುಟ್ಟು ಬೂದಿಯಾಗುವುವು. ನಿಖಿಲ ದೇವತಾಧಿಪತಿಯೇ ಆ ಅಗ್ನಿಯಿಂದ ಸುಡಲ್ಪಡುತ್ತಿದ್ದ ನಮ್ಮನ್ನು ನೀನು ರಕ್ಷಿಸು.

೮೯. ಮಹೇಶ್ವರನೆ! ಮಹಾಮಹಿಮೆಯುಳ್ಳವನೆ! ಮತ್ತು ಲೋಕಗಳ

ಆಜ್ಞಾಪಯ ವಯಂ ನಾಥ ಕರ್ತಾರೋ ವಚನಂ ತವ ।
ರೂಪಕೋಟಿಸಹಸ್ರೇಷು ರೂಪಕೋಟಿಶತೇಷು ಚ ॥ ೯೦ ॥

ಅಂತಂ ಗಂತುಂ ನ ಶಕ್ತಾಃ ಸ್ಮ ತವ ದೇವ ನಮೋಽಸ್ತು ತೇ ।
ತತಸ್ತು ಭಗವಾನೀಶ ಇದಂ ವಚನಮಬ್ರವೀತ್ ॥ ೯೧ ॥

ಯೇ ಹಿ ಮೇ ಭಸ್ಮನಿರತಾ ಭಸ್ಮನಾ ದಗ್ಧಕಿಲ್ಬಿಷಾಃ ।
ಯಥೋಕ್ತಕಾರಿಣೋ ದಾಂತಾ ವಿಪ್ರಾ ಧ್ಯಾನಪರಾಯಣಾಃ ॥ ೯೨ ॥

ನ ತಾನ್ ಪರಿವದೇದ್ವಿದ್ವಾನ್ ನ ಚ ತಾನತಿಲಂಘಯೇತ್ ।
ನ ಚೈಷಾಮಪ್ರಿಯಂ ಬ್ರೂಯಾ ದಮುತ್ರೇಹ ಹಿತಾರ್ಥವಾನ್॥ ೯೩ ॥

---

ಕಲ್ಯಾಣವನ್ನು ನಿರೀಕ್ಷಿಸುವವನೆ! ಲೋಕದ ಹಿತಕ್ಕೋಸ್ಕರ ಸಕಲ ಭೂತಗಳನ್ನು ವೃಷ್ಟಿಯಿಂದ ನೆನೆಸುವವನು ನೀನು;

೯೦. ಪ್ರಭುವೆ! ನಮ್ಮ ಕರ್ತವ್ಯವನ್ನು ನಮಗೆ ಆಜ್ಞಾಪಿಸು. ನಾವು ನಿನ್ನ ವಚನವನ್ನು ನೆರವೇರಿಸುವೆವು. ನಿನಗೆ ಶತ ಸಹಸ್ರ ಕೋಟಿ ಸಂಖ್ಯೆಯಾಗಿ ಅಪರಿಮಿತವಾದ ರೂಪಗಳು ಇರುತ್ತದೆ.

೯೧. ಆದರೆ ಆ ನಿಖಿಲ ರೂಪಗಳ ಅಂತವನ್ನು ನಾವು ಕಾಣಲು ಸಮರ್ಥರಾಗಿಲ್ಲ. ದೇವನೆ! ನಿನ್ನನ್ನು ವಂದಿಸುವೆವು. ಎಂದು ದೇವತೆಗಳು ಸ್ತುತಿಸಿದರು. ಆಗ ಭಗವಂತನಾದ ಪರಮಶಿವನು ಈ ವಚನವನ್ನು ಹೇಳಿದನು.

೯೨. ಯಾರು ನನಗೆ ಪ್ರಿಯವಾದ ಭಸ್ಮಧಾರಣದಲ್ಲಿ ಅಭಿರುಚಿಯುಳ್ಳವರೂ ಭಸ್ಮದಿಂದ ಪಪಾವನ್ನು ಕಳೆದುಕೊಂಡಿರುವವರೂ, ನನ್ನ ಆದೇಶ ರೂಪವಾದ ಸತ್ಕರ್ಮಗಳನ್ನು ಆಚರಿಸುವವರೂ, ಜಿತೇಂದ್ರಿಯರೂ ಮತ್ತು ಧ್ಯಾನಯೋಗಾಸಕ್ತರೂ ಆಗಿರುವರೋ ಅಂತಹ ವಿಪ್ರರು ನನಗೆ ಪ್ರಿಯರು.

೯೩. ಅಂತಹವರನ್ನು ಜ್ಞಾನಿಯು ನಿಂದಿಸಬಾರದು ಮತ್ತು ಅವರನ್ನು ಅತಿಕ್ರಮಿಸಬಾರದು. ಮತ್ತು ಇಂತಹವರ ವಿಷಯದಲ್ಲಿ ಅಪ್ರಿಯ ವಚವನ್ನು ಆಡಬಾರದು. ಹೀಗೆ ಈ ನಿಷಿದ್ಧ ಕರ್ಮಗಳ ತ್ಯಾಗದಿಂದ ಐಹಿಕ ಮತ್ತು ಆಮುಷ್ಮಿಕವಾದ ಫಲಗಳನ್ನು ಹೊಂದುವನು.

ಯಸ್ಮಾತ್ತಾನ್ನಿಂದತಿ ಮೂಢಾತ್ಮಾ ಮಹಾದೇವಂ ಸ ನಿಂದತಿ ।
ಯಸ್ತ್ವೇತಾನ್ ಪೂಜಯೇನ್ನಿತ್ಯಂ ಸ ಪೂಜಯತಿ ಶಂಕರಮ್ ॥
ಏವಂ ಚರಥ ಭದ್ರಂ ವೋ ಮತ್ತಃ ಸಿದ್ಧಿಮವಾಪ್ಸ್ಯಥ ॥ ೯೪ ॥

ಅತುಲಮಿಹ ಮಹಾತಮಃ ಪ್ರಣಾಶಂ ।
ಶಿವಕಥಿತಂ ಪರಮಂ ವಿಧಿಂ ವಿದಿತ್ವಾ ॥
ಅಪಗತಭಯಲೋಭಮೋಹಚಿಂತಾಃ ।
ಸಹ ಪತಿತಾಃ ಸಹಸಾ ಶಿರೋಭಿರೂಹುಃ ॥ ೯೫ ॥

ತತಸ್ತೇ ಮುದಿತಾ ವಿಪ್ರಾಃ ಪ್ರಕೃತಿಸ್ಥೇ ಮಹೇಶ್ವರೇ ।
ಗಂಧೋದಕೈಃ ಸುಶುದ್ಧೈಶ್ಚ ಕುಶಪುಷ್ಪವಿಮಿಶ್ರಿತೈಃ ॥ ೯೬ ॥

ಸ್ನಾಪಯಂತಿ ಮಹಾಕುಂಭೈರದ್ಭಿರ್ದೇವಂ ಮಹೇಶ್ವರಮ್ ।
ಗಾಯಂತಿ ವಿವಿಧೈರ್ಗುಹ್ಯೈರ್ಹುಂಕಾರೈಶ್ಚಾಪಿ ಸುಸ್ವರೈಃ ॥ ೯೭ ॥

---

೯೪, ಯಾರು ಆ ನನ್ನ ಭಕ್ತರನ್ನು ಮೂಢಾಂತಃ ಕರಣದಿಂದ ನಿಂದಿಸುವನೋ ಅವನು ನನ್ನನ್ನು ನಿಂದೆ ಮಾಡಿದಂತೆ ಅನಿಷ್ಟ ಫಲವನ್ನು ಹೊಂದುವನು. ಯಾವ ಮಾನವನು ನನ್ನ ಭಕ್ತರನ್ನು ಪೂಜಿಸುವನೋ ಅವನು ನನ್ನನ್ನು ಪೂಜಿಸಿದಂತೆ ಮಹಾ ಪುಣ್ಯವಂತನಾಗುವನು. ನೀವು ಈ ವಿಧಿ ನಿಷೇಧಗಳನ್ನು ಅನುಸರಿಸಿ ನನ್ನನ್ನು ಸೇವಿಸಿ ನನ್ನಿಂದ ತಪಃ ಸಿದ್ಧಿಯನ್ನು ಹೊಂದಿರಿ .

೯೫. ಅನಂತರದಲ್ಲಿ ಆ ಮುನಿಗಳು ಮಹಾತಮಸ್ಸನ್ನು ನಾಶಮಾಡುವುದರಲ್ಲಿ ನಿರುಪಮವಾದ, ಶಿವನಿಂದ ಉಪದಿಷ್ಟವಾದ ಪರಮ ವಿಧಾನವನ್ನು ತಿಳಿದು ಭಯ, ಲೋಭ, ಮೋಹ, ಚಿಂತಾ ಮುಂತಾದ ಮಾನಸ ಶತ್ರುಗಳಿಂದ ವಿಮುಕ್ತರಾಗಿ ಎಲ್ಲರೂ ತಲೆಬಾಗಿಸಿ ಶಿವನ ಚರಣಗಳಿಗೆ ಬಿದ್ದು ನಮಸ್ಕಾರಮಾಡಿದರು.

೯೬. ತರುವಾಯ ಶಿವನು ಕೋಪವನ್ನು ಬಿಟ್ಟು ಪ್ರಸನ್ನನಾದ ಮೇಲೆ ಸಕಲ ವಿಪ್ರರು ಶುದ್ಧವಾದ, ಮತ್ತು ದರ್ಭ–ಪುಷ್ಪಗಳಿಂದ ಕೂಡಿರುವ ಗಂಧೋದಕದಿಂದ ಶಿವನನ್ನು ಅಭಿಷೇಕಮಾಡಿದರು.

೯೭. ಅಂತಹ ಪವಿತ್ರವೂ ಸಂಸ್ಕೃತವೂ ಆದ ಜಲವನ್ನು ಕುಂಭಗಳಿಂದ ತುಂಬಿಕೊಂಡು ಬಂದು ಈಶ್ವರನಿಗೆ ಅಭಿಷೇಕಮಾಡಿದರು. ಮತ್ತು ವಿವಿಧವಾದ,

ನಮೋ ದಿಗ್ವಾಸಸೇ ದೇವ ಕಿಂಕಿಣೀಧ್ರಾಯ ವೈ ನಮಃ ।
ಅರ್ಧನಾರೀಶರೀರಾಯ ಸಾಂಖ್ಯಯೋಗಪ್ರವರ್ತಿನೇ ॥ ೯೮ ॥

ಘನವಾಹನಕೃಷ್ಣಾಯ ಗಜಚರ್ಮನಿವಾಸಿನೇ ।
ಕೃಷ್ಣಾಜಿನೋತ್ತರೀಯಾಯ ವ್ಯಾಲಯಜ್ಞೋಪವೀತಿನೇ ॥ ೯೯ ॥

ಸುರಚಿತಚಿತ್ರವಿಚಿತ್ರಕುಂಡಲಾಯ
ಸುರಚಿತಮಾಲ್ಯವಿಭೂಷಣಾಯ ತುಭ್ಯಮ್ ।
ಮೃಗಪತಿವರಚರ್ಮವಾಸಸೇ ತೇ
ಪೃಥುಪರಶೋ ಚ ನಮೋಽಸ್ತು ಶಂಕರಾಯ ॥ ೧೦೦ ॥

ಭೂಯಶ್ಚ ಸ್ಥಾಪಿತೇ ಲಿಂಗೇ ಲೋಕಾನಾಂ ಹಿತಕಾಮ್ಯಯಾ ।
ವರ್ಣಧರ್ಮಪರಾಶ್ಚೈವ ಚೇರುಸ್ತೇ ಮುನಿಸತ್ತಮಾಃ ॥ ೧೦೧ ॥

---

ಮತ್ತು ಸಾಧುವಾದ ಸ್ವರದಿಂದ ಕೂಡಿದ ಹುಂ ಎಂಬ ಗುಹ್ಯ ಮಂತ್ರಗಳನ್ನು ಗಾನ ಮಾಡಿ ದೇವನನ್ನು ಆರಾಧಿಸಿದರು.

೯೮. ಅನೇಕ ಪವಿತ್ರ ನಾಮಾವಳಿಯನ್ನು ಕೀರ್ತನೆ ಮಾಡಿ ಸ್ತುತಿಸಿದರು: ದಿಕ್ಕುಗಳೇ ವಸ್ತ್ರವಾಗಿ ಉಳ್ಳವನೂ, ಚಿಕ್ಕ ಗೆಜ್ಜೆಗಳನ್ನು ಧರಿಸಿದವನೂ, ಅರ್ಧ ನಾರೀಶ್ವರ ಮೂರ್ತಿಯನ್ನು ಧರಿಸಿದವನೂ ಜ್ಞಾನ ಕರ್ಮಯೋಗ ಮಾರ್ಗಗಳನ್ನು ಪ್ರವರ್ತಿಸಿದವನೂ ಆದ ಸ್ವಾಮಿಗೆ ನಮಸ್ಕಾರವು.

೯೯. ಮದಮತ್ತನಾದ ಮೇಘವಾಹನನಾದ ಇಂದ್ರನನ್ನು ಸೆಳೆಯುವವನೂ ಗಜ ಚರ್ಮವನ್ನು ಉಟ್ಟುಕೊಂಡವನೂ, ಕೃಷ್ಣಾಜಿನವನ್ನು ಉತ್ತರೀಯವಾಗಿ ಧರಿಸಿದವನೂ, ಮತ್ತು ಸರ್ಪವನ್ನು ಯಜ್ಞೋಪವೀತವಾಗಿ ಸುತ್ತಿಕೊಂಡಿರುವವನೂ ಆದ ನಿನಗೆ ನಮಸ್ಕಾರವು.

೧೦೦. ಚಿತ್ರ ವಿಚಿತ್ರವಾದ ಕುಂಡಲಗಳನ್ನು ಉತ್ತಮವಾಗಿ ರಚಿಸಿಕೊಂಡಿರುವವನೂ, ಮಾಲ್ಯ-ಭೂಷಣಗಳನ್ನು ಸುಂದರ ರೀತಿಯಲ್ಲಿ ಧರಿಸಿದವನೂ ವ್ಯಾಘ್ರ ಚರ್ಮರೂಪವಾದ ವಸ್ತ್ರವನ್ನು ಧರಿಸಿರುವವನೂ, ಮತ್ತು ವಿಶಾಲವಾದ ಕೊಡಲಿಯನ್ನು ಧರಿಸಿದವನೂ ಆದ ಪ್ರಭುವೇ, ನಿನ್ನನ್ನು ವಂದಿಸುವೆವು.

೧೦೧. ಈ ರೀತಿಯಾಗಿ ಸ್ತುತಿಸಿ ಮತ್ತೆ ಲೋಕಗಳ ಹಿತಕ್ಕೋಸ್ಕರ ಕೆಳಕ್ಕೆ

ತತಸ್ತಾನ್ ಸ ಮುನೀನ್ ಪ್ರೀತಃ ಪ್ರತ್ಯುವಾಚ ಮಹೇಶ್ವರಃ ।
ಪ್ರೀತೋಽಸ್ಮಿ ಯುಷ್ಮತ್ತಪಸಾ ವರಂ ವೃಣುತ ಸುವ್ರತಾಃ ॥ ೧೦೨ ॥

ತತಸ್ತೇ ಮುನಯಃ ಸರ್ವೇ ಪ್ರಣಿಪತ್ಯ ಮಹೇಶ್ವರಮ್ ।
ಭೃಗ್ವಂಗಿರಾ ವಸಿಷ್ಠಶ್ಚ ವಿಶ್ವಾಮಿತ್ರಸ್ತಥೈವ ಚ ॥ ೧೦೩ ॥

ಗೌತಮೋಽತ್ರಿಃ ಸುಕೇಶಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।
ಮರೀಚಿಃ ಕಶ್ಯಪಶ್ಚಾಪಿ ಸಂವರ್ತಶ್ಚ ಮಹಾತಪಾಃ ॥ ೧೦೪ ॥

ತೇ ಪ್ರಣಮ್ಯ ಮಹಾದೇವಮಿದಂ ವಚನಮಬ್ರುವನ್ ।
ಭಸ್ಮಸ್ನಾನಂ ಚ ನಗ್ನತ್ವಂ ವಾಮತ್ವಂ ಪ್ರತಿಲೋಮತಾ ।
ಸೇವ್ಯಾಸೇವ್ಯತ್ವಂ ತು ವಿಭೋ ಏತದಿಚ್ಛಾಮ ವೇದಿತುಮ್ ॥ ೧೦೫ ॥

---

ಕೆಡವಿರುವ ಲಿಂಗವನ್ನು ಹಾಗೆಯೇ ಇರಿಸಲಾಗಿ ಮುನಿಶ್ರೇಷ್ಠರು ಸರ್ವರೂ ಸಂಸ್ಕೃತವಾದ ಮನಸ್ಸಿನಿಂದ ವರ್ಣಧರ್ಮಗಳನ್ನು ಆಚರಿಸಿದರು.

೧೦೨. ತರುವಾಯ ಆ ಸತ್ಕರ್ಮಗಳಿಂದ ಪ್ರೀತನಾದ ಪರಮೇಶ್ವರನು ಮುನಿಗಳನ್ನು ಕುರಿತು ನೀವು ಮಾಡಿದ ತಪಸ್ಸಿಗೆ ನಾನು ಮೆಚ್ಚಿರುವೆನು. ನಿಮಗೆ ಇಷ್ಟವಾದ ವರಗಳನ್ನು ಕೇಳಿರಿ ಎಂಬುದಾಗಿ ಪ್ರತಿವಚನವನ್ನು ಆಡಿದನು.

೧೦೩. ಅನಂತರದಲ್ಲಿ ಮಹರ್ಷಿಗಳು ಸಂತೋಷದಿಂದ ಶಿವನನ್ನು ನಮಸ್ಕರಿಸಿದರು. ಆ ಮುನಿಗಣದಲ್ಲಿ ಈ ಕೆಳಗೆ ಹೇಳಿರುವಂತೆ ಮಹಾಮಹಿಮೆಯಿಂದ ಕೂಡಿದ ಭೃಗು, ಅಂಗಿರ, ವಸಿಷ್ಠ, ವಿಶ್ವಾಮಿತ್ರ ಎಂಬ ಮಹರ್ಷಿಗಳು ಸೇರಿದ್ದರು.

೧೦೪. ಮತ್ತು ಗೌತಮ, ಅತ್ರಿ, ಸುಕೇಶ, ಪುಲಸ್ತ್ಯ, ಪುಲಹ, ಕ್ರತು, ಮರೀಚಿ, ಕಶ್ಯಪ, ಸಂವರ್ತ, ಮಹಾತಪ ಮುಂತಾದ ಇನ್ನೂ ಇತರ ಅನೇಕ ಗಣ್ಯ ಮಹರ್ಷಿಗಳು ಆ ಸಂಘದಲ್ಲಿ ಸೇರಿದ್ದರು.

೧೦೫. ಆಗ ಅವರು ಮಹಾ ದೇವನನ್ನು ನಮಸ್ಕರಿಸಿ ವಿಭುವೆ! ಭಸ್ಮಸ್ನಾನ, ದಿಗಂಬರತ್ವ, ವಾಮಾಚಾರ, ಪ್ರತಿಕೂಲಾಚರಣೆ ಮುಂತಾದವುಗಳಲ್ಲಿ ಸೇವ್ಯವಾದುದು ಯಾವುದು, ಅಸೇವ್ಯವಾದುದು ಯಾವುದೆಂಬ ವಿಭಾಗವನ್ನು ತಿಳಿಯಬೇಕೆಂದು ಅಪೇಕ್ಷೆಯುಳ್ಳವರಾಗಿದ್ದೆವೆ. ಎಂಬುದಾಗಿ ವಿಜ್ಞಾಪಿಸಿಕೊಂಡರು.

**ಭಗವಾನುವಾಚ :—**
**ಏತದ್ವಃ ಸಂಪ್ರವಕ್ಷ್ಯಾಮಿ ಕಥಾಸರ್ವಸ್ವಮದ್ಯ ವೈ ।**
**ಅಗ್ನಿರ್ಹ್ಯಹಂ ಸೋಮಯುತಃ ಸೋಮಶ್ಚಾಗ್ನಿಮುಪಾಶ್ರಿತಃ ॥ ೧೦೬ ॥**

**ಕೃತಾಕೃತಂ ವದಂತ್ಯಗ್ನಿಂ ಭೂಯೋ ಲೋಕಾಃ ಸಮಾಶ್ರಿತಾಃ ।**
**ಅಸಕೃಚ್ಚಾಗ್ನಿನಾ ದಗ್ಧಂ ಜಗತ್ ಸ್ಥಾವರಜಂಗಮಮ್ ॥ ೧೦೭ ॥**

**ಭಸ್ಮಸಾಧ್ಯಂ ಹಿ ತತ್ ಸರ್ವಂ ಪವಿತ್ರಮಿದಮುತ್ತಮಮ್ ।**
**ಭಸ್ಮನಾ ವೀರ್ಯಮಾಸ್ಥಾಯ ಭೂತಾನಿ ಪರಿಷಿಂಚತಿ ॥ ೧೦೮ ॥**

**ಅಗ್ನಿಕಾರ್ಯಂ ಚ ಯತ್ ಕೃತ್ವಾ ಕರಿಷ್ಯತಿ ಚ ತ್ರ್ಯಾಯುಷಮ್ ।**
**ಭಸ್ಮನಾ ಮಮ ವೀರ್ಯೇಣ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೦೯ ॥**

---

೧೦೬. ಇದಕ್ಕೆ ಭಗವಂತನು ಈ ರೀತಿಯಾಗಿ ಪ್ರತ್ಯುತ್ತರವನ್ನಿತ್ತನು. ಈ ವಿಷಯಗಳಲ್ಲಿ ಕಥೆಗಳ ಸರ್ವಸ್ವವನ್ನು ನಿಮಗೆ ಹೇಳುತ್ತೇನೆ. ಕೇಳಿರಿ. ಸೋಮನಿಂದ ಕೂಡಿದ ಅಗ್ನಿಯು ನಾನಾಗಿರುವೆನು. ಸೋಮನು ಅಗ್ನಿಯನ್ನು ಆಶ್ರಯಿಸಿ ಕೊಂಡಿರುವನು.

೧೦೭. ಪ್ರಾಜ್ಞರು ಅಗ್ನಿಯನ್ನು ಪಾರಮಾರ್ಥಿಕ-ಕಲ್ಪಿತ ತತ್ತ್ವಗಳ ರೂಪದಿಂದ ಕೃತ-ಮತ್ತು ಅಕೃತ ರೂಪದಿಂದ ವರ್ಣಿಸುತ್ತಾರೆ. ಇಂತಹ ಅಗ್ನಿಯನ್ನು ಸರ್ವಲೋಕಗಳು ಆಶ್ರಯಿಸಿವೆ. ಸ್ಥಾವರ-ಜಂಗಮ ರೂಪವಾದ ಪ್ರಪಂಚವು ಅನೇಕಾವರ್ತಿ ಅಗ್ನಿಯಿಂದ ದಹಿಸಲ್ಪಟ್ಟಿರುತ್ತದೆ.

೧೦೮. ಉತ್ತಮವಾದ ಪವಿತ್ರ ವಸ್ತುಗಳ ಪವಿತ್ರತೆಯು ಭಸ್ಮದಿಂದ ಸಾಧ್ಯವಾಗಿರುವುದು, ಅಗ್ನಿಯು ತನ್ನ ಭಸ್ಮರೂಪದಿಂದ ವೀರ್ಯವನ್ನು ಸಂಪಾದಿಸಿ ಸಕಲ ಭೂತಗಳನ್ನು ಲೇಪಿಸುವನು.

೧೦೯. ಬ್ರಹ್ಮಚಾರಿಗಳು ಅಗ್ನಿಕಾರ್ಯಕರ್ಮವನ್ನು ಆಚರಿಸಿ ಕಡೆಯಲ್ಲಿ "ತ್ರ್ಯಾಯುಷಂ" ಮುಂತಾದ ಮಂತ್ರಗಳಿಂದ ಭಸ್ಮವನ್ನು ಧರಿಸಿ ಶಿವನ ಭಸ್ಮರೂಪವಾದ ವೀರ್ಯದಿಂದ ಸಕಲ ಪಾಪಗಳಿಂದ ನಿರ್ಮುಕ್ತರಾಗುತ್ತಾರೆ.

ಭಾಸಯತ್ಯೇವ ಯದ್ಭಸ್ಮ ಶುಭಂ ವಾಸಯತೇ ಚ ಯತ್ ।
ತತ್ಕ್ಷಣಾತ್ ಸರ್ವಪಾಪಾನಾಂ ಭಸ್ಮೇತಿ ಪರಿಕೀರ್ತ್ಯತೇ ॥ ೧೧೦ ॥

ಊಷ್ಮಪಾಃ ಪಿತರೋ ಜ್ಞೇಯಾ ದೇವಾ ವೈ ಸೋಮಸಂಭವಾಃ ।
ಅಗ್ನೀಷೋಮಾತ್ಮಕಂ ಸರ್ವಂ ಜಗತ್ ಸ್ಥಾವರಜಂಗಮಮ್ ॥ ೧೧೧ ॥

ಅಹಮಗ್ನಿರ್ಮಹಾತೇಜಾಃ ಸೋಮಶ್ಚೈಷಾ ಮಮಾಂಬಿಕಾ ।
ಅಹಮಗ್ನಿಶ್ಚ ಸೋಮಶ್ಚ ಪ್ರಕೃತ್ಯಾ ಪುರುಷಃ ಸ್ವಯಮ್ ॥ ೧೧೨ ॥

ತಸ್ಮಾದ್ಭಸ್ಮ ಮಹಾಭಾಗಾ ಮದ್ವೀರ್ಯಮಿತಿ ಚೋಚ್ಯತೇ ।
ಸ್ವವೀರ್ಯಂ ವಪುಷಾ ಚೈವ ಧಾರಯಾಮೀತಿ ವೈ ಸ್ಥಿತಿಃ ॥ ೧೧೩ ॥

ತದಾಪ್ರಭೃತಿ ಲೋಕೇಷು ರಕ್ಷಾರ್ಥಮಶುಭೇಷು ಚ ।
ಭಸ್ಮನಾ ಕ್ರಿಯತೇ ರಕ್ಷಾ ಸೂತಿಕಾನಾಂ ಗೃಹೇಷು ಚ ॥ ೧೧೪ ॥

---

೧೧೦. ಭಸ್ಮ ಶಬ್ದದ ಅವಯವಾರ್ಥಗಳನ್ನು ಪರೀಕ್ಷೆಮಾಡಿದರೆ. "ಶುಭಂ ವಾಸಯತೇ" ಶುಭವನ್ನು ಪ್ರಕಾಶಪಡಿಸುತ್ತದೆ. "ಪಾಪಾನಿ, ವಾಸಯತೇ" ಪಾಪಗಳನ್ನು ಓಡಿಸುತ್ತದೆ, ಎಂಬ ಅರ್ಥವನ್ನು ಸೂಚಿಸುವ ಅವಯವಗಳಿಂದ ಗರ್ಭಿತವಾದಂತೆ ತೋರುತ್ತದೆ.

೧೧೧. ಅಗ್ನಿಯ ಉಷ್ಣಗುಣವನ್ನು ಸೇವಿಸುವ ಪಿತೃಗಳು ಅಗ್ನಿಯಿಂದ ಜನ್ಯರಾದವರು. ದೇವತೆಗಳು ಸೋಮದಿಂದ ಹುಟ್ಟಿದವರು. ಹೀಗೆ ಸ್ಥಾವರ ಜಂಗಮರೂಪವಾದ ಸಕಲ ಪ್ರಪಂಚವು ಅಗ್ನೀಷೋಮಸ್ವರೂಪವಾದುದು.

೧೧೨. ಈ ಅಗ್ನೀಷೋಮರಲ್ಲಿ ಮಹಾ ತೇಜಸ್ಸಿನಿಂದ ಕೂಡಿದ ಅಗ್ನಿಯು ನನ್ನ ಸ್ವರೂಪವು. ಸೋಮವು ನನ್ನ ಶಕ್ತಿರೂಪಳಾದ ಅಂಬಿಕೆಯ ರೂಪವು. ಈ ರೀತಿಯಾಗಿ ಅಗ್ನಿ ಸೋಮರ ಯುಗ್ಮವನ್ನು ಪ್ರಕೃತಿ ಪುರುಷರ ಯುಗ್ಮವೆಂದು ಭಾವಿಸಬೇಕು.

೧೧೩. ಮಹಾತ್ಮರೆ! ಈ ಅಗ್ನಿ ಸಂಬಂಧದಿಂದ ಉಂಟಾದ ಭಸ್ಮವನ್ನು ನನ್ನ ವೀರ್ಯ ರೂಪವನ್ನಾಗಿ ಪ್ರಾಜ್ಞರು ಹೇಳುವರು. ನಾನು ನನ್ನ ವೀರ್ಯ ರೂಪವಾದ ಭಸ್ಮವನ್ನು ನನ್ನ ಶರೀರದಲ್ಲಿ ಧರಿಸಿರುವೆನು. ಎಂಬುದು ವಸ್ತುಸ್ಥಿತಿಯು.

೧೧೪. ಈ ಭಸ್ಮದ ಪ್ರಾಶಸ್ತ್ಯವನ್ನು ಅರಿತ ತರುವಾಯ ಲೋಕಗಳಲ್ಲಿ

ಭಸ್ಮಸ್ನಾನವಿಶುದ್ಧಾತ್ಮಾ ಜಿತಕ್ರೋಧೋ ಜಿತೇಂದ್ರಿಯಃ ।
ಮತ್ಸಮೀಪಮುಪಾಗಮ್ಯ ನ ಭೂಯೋ ವಿನಿವರ್ತತೇ ॥ ೧೧೫ ॥

ವ್ರತಂ ಪಾಶುಪತಂ ಯೋಗಂ ಕಾಪಾಲಂ ಯೋಗನಿರ್ಮಿತಮ್ ।
ಪೂರ್ವಂ ಪಾಶುಪತಂ ಹ್ಯೇತನ್ನಿರ್ಮಿತಂ ತದನುತ್ತಮಮ್ ॥ ೧೧೬ ॥

ಶೇಷಾಶ್ಚಾಶ್ರಮಿಣಃ ಸರ್ವೇ ಪಶ್ಚಾತ್ ಸೃಷ್ಟಾಃ ಸ್ವಯಂಭುವಾ ।
ಸೃಷ್ಟಿರೇಷಾ ಮಯಾ ಸೃಷ್ಟಾ ಲಜ್ಜಾಮೋಹಭಯಾತ್ಮಿಕಾ ॥ ೧೧೭ ॥

ನಗ್ನಾ ಏವ ಹಿ ಜಾಯಂತೇ ದೇವತಾ ಮುನಯಸ್ತಥಾ ।
ಯೇ ಚಾನ್ಯೇ ಮಾನವಾ ಲೋಕೇ ಸರ್ವೇ ಜಾಯಂತ್ಯವಾಸಸಃ॥೧೧೮॥

---

ಅಶುಭ ಸನ್ನಿವೇಶಗಳು ಒದಗುವಾಗಲೂ ಹೆರಿಗೆಯ ಗೃಹಗಳಲ್ಲಿಯೂ ರಕ್ಷಣಕ್ಕೋಸ್ಕರ ಭಸ್ಮದಿಂದ ರಕ್ಷೆಯು ಆಚರಿಸಲ್ಪಡುವುದು.

೧೧೫. ಇಂತಹ ಭಸ್ಮದ ಸ್ನಾನದಿಂದ ವಿಶುದ್ಧವಾದ ದೇಹೇಂದ್ರಿಯಗಳುಳ್ಳವನಾಗಿ ಕ್ರೋಧ-ಇಂದ್ರಿಯಗಳನ್ನು ಜಯಿಸಿ ನನ್ನ ಸಾಮೀಪ್ಯ ಮುಕ್ತಿಯನ್ನು ಹೊಂದಿದವನು ಮತ್ತೆ ಸಂಸಾರ ದುಃಖಕ್ಕೆ ಹಿಂತಿರುಗುವುದಿಲ್ಲ.

೧೧೬. ನನಗೆ ಪ್ರಿಯವಾದ ಈ ಭಸ್ಮಧಾರಣ ವ್ರತದಿಂದ ಕೂಡಿದ ಪಾಶುಪತ ಯೋಗ-ಮತ್ತು ಕಾಪಾಲ ಯೋಗವೆಂಬ ಎರಡು ಪಂಥಗಳಿವೆ. ಅವುಗಳಲ್ಲಿ ಪೂರ್ವದಲ್ಲಿ ಪಾಶುಪತಯೋಗವು ಉತ್ತಮವಾಗಿ ನಿರ್ಮಾಣಮಾಡಲ್ಪಟ್ಟಿತು. ಶಿವನನ್ನು ಪ್ರೀತಿಗೊಳಿಸುವ ಧರ್ಮಗಳಿಂದ ಕೂಡಿದ ಅನೇಕ ಮತಗಳು ಶೈವವೆಂದು ಕರೆಯಲ್ಪಡುತ್ತವೆ. ಅವುಗಳಲ್ಲಿ ಪಾಶುಪತ, ಕಾಪಾಲವೆಂದು ಎರಡು ಬಗೆಗಳಿವೆ. ಭಸ್ಮ ಲೇಪನಾದಿಗಳು ಸಮಾನವಾದರೂ ಕಪಾಲದಲ್ಲಿ ಭಿಕ್ಷಯನ್ನೆತ್ತಿ ಅದನ್ನು ಭುಂಜಿಸುವದು ಕಾಪಾಲಮತದಲ್ಲಿ ವಿಶೇಷವು. ಇದು ಇಲ್ಲಿ ಸೂಚಿಸಲ್ಪಟ್ಟಿದೆ.

೧೧೭. ಈ ಎರಡು ವ್ರತಗಳ ಸೃಷ್ಟಿಯಾದ ತರುವಾಯ ಬ್ರಹ್ಮನಿಂದ ಮಿಕ್ಕ ಆಶ್ರಮ ಧರ್ಮ ತತ್ಪರರು ಸೃಷ್ಟಿಸಲ್ಪಟ್ಟಿರುವರು. ಲಜ್ಜಾ, ಮೋಹ, ಭಯಗಳಿಂದ ಕೂಡಿದ ಈ ಸೃಷ್ಟಿಯು ನನ್ನಿಂದ ಸೃಷ್ಟಿಸಲ್ಪಟ್ಟಿರುತ್ತದೆ.

೧೧೮. ಲೋಕದಲ್ಲಿ ದೇವತೆಗಳು, ಮುನಿಗಳು, ಹಾಗೆಯೇ ಇತರ ಮಾನವರು ಎಲ್ಲರೂ ಕೂಡ ಹುಟ್ಟುವಾಗ ನಗ್ನ (ಬತ್ತಲೆ) ರಾಗಿಯೇ ಹುಟುತ್ತಾರೆ. ಹುಟ್ಟುವ ವಸ್ತುವೆಲ್ಲವೂ ವಸ್ತ್ರಾವರಣವಿಲ್ಲದೆ ಹುಟ್ಟುತ್ತದೆ.

ಇಂದ್ರಿಯೈರಜಿತೈರ್ನಗ್ನಾ ದುಕೂಲೇನಾಪಿ ಸಂವೃತಾಃ ।
ತೈರೇವ ಸಂವೃತೋ ಗುಪ್ತೋ ನ ವಸ್ತ್ರಂ ಕಾರಣಂ ಸ್ಮೃತಮ್॥ ೧೧೯ ॥

ಕ್ಷಮಾ ಧೃತಿರಹಿಂಸಾ ಚ ವೈರಾಗ್ಯಂ ಚೈವ ಸರ್ವಶಃ ।
ತುಲ್ಯೌ ಮಾನಾಪಮಾನೌ ಚ ತತ್ ಪ್ರಾವರಣಮುತ್ತಮಮ್ ॥ ೧೨೦ ॥

ಭಸ್ಮಪಾಂಡುರದಿಗ್ಧಾಂಗೋ ಧ್ಯಾಯತೇ ಮನಸಾ ಭವಮ್ ।
ಯದ್ಯಕಾರ್ಯಸಹಸ್ರಾಣಿ ಕೃತ್ವಾ ಸ್ನಾಯತಿ ಭಸ್ಮನಾ ॥ ೧೨೧ ॥

ತತ್ಸರ್ವಂ ದಹತೇ ಭಸ್ಮ ಯಥಾಗ್ನಿಸ್ತೇಜಸಾ ವನಮ್ ।
ತಸ್ಮಾದ್ಯತ್ನಪರೋ ದೇವಂ ಭೂತ್ವಾ ತ್ರಿಕಾಲಮಪಿ ಯಃ ಸದಾ॥ ೧೨೨ ॥

ಭಸ್ಮನಾ ಕುರುತೇ ಸ್ನಾನಂ ಗಾಣಪತ್ಯಂ ಸ ಗಚ್ಛತಿ ।
ಸಂಹೃತ್ಯ ಚ ಕ್ರತೂನ್ ಸರ್ವಾನ್ ಗೃಹೀತ್ವಾ ವ್ರತಮುತ್ತಮಮ್॥೧೨೩॥

---

೧೧೯. ಯಾವ ಮಾನವನಾಗಲಿ ಪಟ್ಟೆ ವಸ್ತ್ರಗಳನ್ನು ಉಟ್ಟುಕೊಂಡಿದ್ದರೂ ಇಂದ್ರಿಯಗಳನ್ನು ನಿಗ್ರಹಿಸದೆ ಅವುಗಳಿಗೆ ಅಧೀನನಾದರೆ ನಗ್ನನು. ಅಂತಹ ಇಂದ್ರಿಯ ಗಳನ್ನು ಜಯಿಸಿದವನು ನಗ್ನನಲ್ಲ. ನಗ್ನನಾಗುವುದಕ್ಕೂ ನಗ್ನನಲ್ಲದಿರುವುದಕ್ಕೂ ವಸ್ತ್ರವು ಕಾರಣವಲ್ಲ.

೧೨೦, ಮಾನವನಿಗೆ ಕ್ಷಮೆ, ಧೈರ್ಯ, ಅಹಿಂಸೆ, ಸರ್ವ ವಸ್ತುಗಳಲ್ಲಿ ವೈರಾಗ್ಯ, ಮಾನ ಅಪಮಾನಗಳಲ್ಲಿ ತುಲ್ಯತೆ ಇವುಗಳು ಉತ್ತಮವಾದ ಆವರಣವು.

೧೨೧. ಭಸ್ಮ ಲೇಪನದಿಂದ ಶುಭ್ರವಾದ ಅಂಗವುಳ್ಳವನಾಗಿ ಮನಸ್ಸಿನಲ್ಲಿ ಶಿವ ನನ್ನು ಧ್ಯಾನಿಸುತ್ತಿರುವವನು ಅಕಾರ್ಯ ಸಹಸ್ರವನ್ನು ಆಚರಿಸಿದರೂ ಭಸ್ಮಸ್ನಾನ ಮಾಹಾತ್ಮ್ಯದಿಂದ ಅವುಗಳಿಂದ ಮುಕ್ತನಾಗಿ ಪವಿತ್ರನಾಗುವನು.

೧೨೨. ಅವನು ಭಸ್ಮಸ್ನಾನವನ್ನು ಮಾಡಿದ್ದರಿಂದ.ಆ ಭಸ್ಮವು ಸಕಲ ಅಕಾ ರ್ಯಗಳನ್ನು ಅಗ್ನಿಯು ಅರಣ್ಯವನ್ನು ಸುಟ್ಟು ಬೂದಿಮಾಡಿದಂತೆ ನಾಶಮಾಡು ವುದು. ಆದುದರಿಂದ ಮಾನವನು ಯಾವಾಗಲೂ ತ್ರಿಕಾಲದಲ್ಲಿಯೂ ಭಸ್ಮಧಾರಣದಲ್ಲಿ ಯತ್ನಪರನಾಗಬೇಕು.

೧೨೩. ಮತ್ತು ಸಕಲ ಯಾಗಾದಿ ಕರ್ಮಗಳನ್ನು ಸಮಾಪ್ತಿಗೊಳಿಸಿ ಅಮೃತ ರೂಪವಾದ ಭಸ್ಮವನ್ನು ಸ್ವೀಕರಿಸಿ ಭಸ್ಮದ ಅನುಲೇಪನರೂಪವಾದ ಸ್ನಾನವನ್ನು ಮಾಡುವುದರಿಂದ ಗಣಾಧಿಪತಿ ಪದವಿಯನ್ನು ಹೊಂದುವನು.

ಧ್ಯಾಯಂತಿ ಯೇ ಮಹಾದೇವಂ ಲೀನಾಸ್ತದ್ಭಾವಭಾವಿತಾಃ ।
ಉತ್ತರೇಣಾಥ ಪಂಥಾನಂ ತೇಽಮೃತತ್ವಮವಾಪ್ನುಯುಃ ॥ ೧೨೪ ॥

ದಕ್ಷಿಣೇನಾಥ ಪಂಥಾನಂ ಯೇ ಶ್ಮಶಾನಾನಿ ಭೇಜಿರೇ ।
ಅಣಿಮಾ ಮಹಿಮಾ ಚೈವ ಲಘಿಮಾ ಪ್ರಾಪ್ತಿರೇವ ಚ ॥ ೧೨೫ ॥

ಗರಿಮಾ ಪಂಚಮಿಾ ಚೈವ ಷಷ್ಠಂ ಪ್ರಾಕಾಮ್ಯಮೇವ ಚ ।
ಈಶಿತ್ವಂ ಚ ವಶಿತ್ವಂ ಚ ಹ್ಯಮರತ್ವಂ ಚ ತೇ ಗತಾಃ ॥ ೧೨೬ ॥

ಇಂದ್ರಾದಯಸ್ತಥಾ ದೇವಾಃ ಕಾಮಿಕಂ ವ್ರತಮಾಸ್ಥಿತಾಃ ।
ಐಶ್ವರ್ಯಂಪರಮಂ ಪ್ರಾಪ್ಯ ಸರ್ವೇ ಪ್ರಥಿತತೇಜಸಃ ॥ ೧೨೭ ॥

---

೧೨೪. ಯಾವ ಸುಕೃತಿಗಳು ಮಹಾದೇವನನ್ನು ಸರ್ವಕಾಲದಲ್ಲಿಯೂ ಮಹಾದೇವ ಭಾವನೆಯನ್ನು ಇಟ್ಟುಕೊಂಡು ಧ್ಯಾನಿಸುವರೋ ಅಂತಹ ಧ್ಯಾನಯೋಗಾರೂಢರು ಉತ್ತರ ಮಾರ್ಗವನ್ನು ಅವಲಂಬಿಸಿ ಮೋಕ್ಷವನ್ನು ಹೊಂದುತ್ತಾರೆ.

೧೨೫. ಯಾರು ನಿಷೇಕ ಮೊದಲುಗೊಂಡು ಶ್ಮಶಾನಾಂತ ಕರ್ಮಗಳನ್ನು ಆಚರಿಸಿ ಕಾಲವನ್ನು ಕಳೆದಿರುವರೋ ಅವರು ದಕ್ಷಿಣ ಮಾರ್ಗಮೂಲಕವಾಗಿ ಪುಣ್ಯಲೋಕಕ್ಕೆ ಹೋಗುವರು. ಮತ್ತು ಅಷ್ಟೈಶ್ವರ್ಯಸಿದ್ಧಿಯನ್ನು ಹೊಂದುವರು. ಅಣಿಮಾ, ಮಹಿಮಾ ಲಘಿಮಾ ಮತ್ತು ಪ್ರಾಪ್ತಿ ಎಂಬುವು ಮೊದಲನೆಯ ನಾಲ್ಕು ಸಿದ್ಧಿಗಳು.

೧೨೬. ಮತ್ತು ಗರಿಮಾ, ಪ್ರಾಕಾಮ್ಯ, ಈಶಿತ್ವ, ಮತ್ತು ವಶಿತ್ವವೆಂಬುವು ಮತ್ತೆ ನಾಲ್ಕು ಸಿದ್ಧಿಗಳು. ಅಣುಪರಿಮಾಣ, ಮಹಾಪರಿಮಾಣ, ಹಗುರವಾಗುವುದು, ನಕ್ಷತ್ರಾದಿಗಳನ್ನು ಸ್ಪರ್ಶಿಸುವುದು. ಭಾರವಾಗುವುದು, ಸ್ವಚ್ಛಂದಗತಿ, ನಿಯಾಮಕತ್ವ, ಸಕಲ ವಶೀಕರಣವೆಂಬುವು ಅಷ್ಟ ಸಿದ್ಧಿಗಳಾಗಿವೆ.

೧೨೭. ಇಂದ್ರಾದಿ ದೇವತೆಗಳೆಲ್ಲರೂ ಈ ಕಾಮ್ಯ ವ್ರತವನ್ನು ಅನುಷ್ಠಾನ ಮಾಡಿ ಅದರ ಫಲರೂಪವಾಗಿ ಪರಮೈಶ್ವರ್ಯವನ್ನು ಹೊಂದಿ ಪ್ರಸಿದ್ಧವಾದ ತೇಜೋವಿಶೇಷವುಳ್ಳವರಾಗಿರುವರು.

ವ್ಯಪಗತಮದಮೋಹಮುಕ್ತರಾಗಾ—
ಸ್ತಮರಜದೋಷವಿವರ್ಜಿತಸ್ವಭಾವಾಃ ।
ಪರಿಭವಮಿದಮುತ್ತಮಂ ವಿದಿತ್ವಾ ॥
ಪಶುಪತಿದಯಿತಮಿದಂ ವ್ರತಂ ಚರಧ್ವಮ್ ॥ ೧೨೮ ॥

ಯಃ ಪಠೇದ್ವೈ ಶುಚಿರ್ಭೂತ್ವಾ ಶ್ರದ್ದಧಾನೋ ಜಿತೇಂದ್ರಿಯಃ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕಂ ಸ ಗಚ್ಛತಿ ॥ ೧೨೯ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಸಪ್ತವಿಂಶತಿತಮೋಽಧ್ಯಾಯಃ

---

೧೨೮. ಆದುದರಿಂದ ನೀವು ಮದ, ಮೋಹ, ರಾಗಗಳನ್ನು ಬಿಟ್ಟು ತಮೋ ದೋಷ, ರಜೋಗುಣಗಳಿಂದ ಮುಕ್ತರಾಗಿ ಸಾಧು ಸ್ವಭಾವವುಳ್ಳವರಾಗಿ ಈ ಉತ್ತಮ ವಾದ ಮಾರ್ಗವನ್ನು ತಿಳಿದು ಪಶುಪತಿಗೆ ಪ್ರಿಯವಾದ ವ್ರತವನ್ನು ಆಚರಿಸಿರಿ. ಈಗ ನಿಮಗೆ ಉಂಟಾಗಿರುವ ತಿರಸ್ಕಾರವು ಈ ವ್ರತೋಪದೇಶ ಲಾಭದಿಂದ ಉತ್ತಮ ಪರಿಣಾಮವನ್ನುಂಟು ಮಾಡಿರುವುದು.

೧೨೯. ಈ ದಾರುವನ ವೃಂತವನ್ನು ಪವಿತ್ರನಾಗಿಯೂ ಜಿತೇಂದ್ರಿಯನಾಗಿಯೂ ಪಠಿಸಿದವನು ಸಕಲ ಪಾಪಮುಕ್ತನಾಗಿ ಅಂತದಲ್ಲಿ ರುದ್ರಲೋಕವನ್ನು ಹೊಂದುತ್ತಾನೆ.

ಬ್ರಹ್ಮಾಂಡ ಪುರಾಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಅಷ್ಟಾವಿಂಶತಿತಮೋಽಧ್ಯಾಯಃ

**ಋಷಿರುವಾಚ :—**

**ಅಗಾತ್ ಕಥಮಮಾವಾಸ್ಯಾಂ ಮಾಸಿ ಮಾಸಿ ದಿವಂ ನೃಪಃ ।**
**ಐಲಃ ಪುರೂರವಾಃ ಸೂತ ಕಥಂ ವಾತರ್ಪಯತ್ ಪಿತೄನ್ ॥ ೧ ॥**

**ಸೂತ ಉವಾಚ .—**

**ತಸ್ಯ ತೇಽಹಂ ಪ್ರವಕ್ಷ್ಯಾಮಿ ಪ್ರಭಾವಂ ಶಾಂಶಪಾಯನೇ ।**
**ಐಲಸ್ಯಾದಿತ್ಯಸಂಯೋಗಂ ಸೋಮಸ್ಯ ಚ ಮಹಾತ್ಮನಃ ॥ ೨ ॥**

**ಅಂತಸ್ಸಾರಮಯಸ್ಯೇಂದೋಃ ಪಕ್ಷಯೋಃ ಶುಕ್ಲಕೃಷ್ಣಯೋಃ ।**
**ಹ್ರಾಸವೃದ್ಧೀ ಪಿತೃಮತಃ ಪಿತ್ರ್ಯಸ್ಯ ಚ ವಿನಿರ್ಣಯಮ್ ॥ ೩ ॥**

**ಸೋಮಾಚ್ಚೈವಾಮೃತಪ್ರಾಪ್ತಿಂ ಪಿತೄಣಾಂ ತರ್ಪಣಂ ತಥಾ ।**
**ಕಾವ್ಯಾಗ್ನಿಷ್ವಾತ್ತಸೌಮ್ಯಾನಾಂ ಪಿತೄಣಾಂ ಚೈವ ದರ್ಶನಮ್ ॥ ೪ ॥**

---

೧. ಋಷಿಯು ಮುಂದುವರಿಸಿ ಕೇಳಿದನು :—ಇಲಾ ಪುತ್ರನಾದ ಪುರೂರವ ರಾಜನು ಪ್ರತಿಯೊಂದು ಮಾಸದಲ್ಲಿ ಅಮಾವಾಸ್ಯಾ ತಿಥಿಯಲ್ಲಿ ಸ್ವರ್ಗಕ್ಕೆ ಹೇಗೆ ಹೋಗುತ್ತಲಿದ್ದನು ? ಮತ್ತು ತನ್ನ ಪಿತೃಗಳಿಗೆ ಯಾವ ವಿಧಾನದಿಂದ ತರ್ಪಣವನ್ನು ಕೊಡುತ್ತಲಿದ್ದನು.

೨. ಸೂತ ಮುನಿಯು ಇಂತೆಂದನು :—ಶಾಂಶಪಾಯನಿ ಮುನಿಯೆ ! ಐಲ ಪುರೂರವ ರಾಜನ ಪ್ರತಿಮಾಸದಲ್ಲಿ ಆದಿತ್ಯ ಮತ್ತು ಸೋಮನ ಸಂಗಡ ಸೇರುವ ಚರಿತ್ರೆಯಿಂದ ಕೂಡಿದ ಆ ರಾಜನ ಪ್ರಭಾವವನ್ನು ನಾನು ನಿನಗೆ ಹೇಳುತ್ತೇನೆ. ಕೇಳು.

೩. ಮತ್ತು ಅಮೃತಸಾರದಿಂದ ಗರ್ಭಿತನಾದ ಚಂದ್ರನಿಗೆ ಶುಕ್ಲಪಕ್ಷ ಕೃಷ್ಣಪಕ್ಷ ಗಳಲ್ಲಿ ಆಗುವ ವೃದ್ಧಿಕ್ಷಯಗಳನ್ನೂ ಪ್ರಶಸ್ತ ಪಿತೃ ದೇವತಾಭಕ್ತನು ಆಚರಿಸಬೇಕಾದ ಪಿತೃ ಕರ್ಮದ ನಿರ್ಣಯವನ್ನೂ ಕೇಳು.

೪. ಚಂದ್ರನಿಂದ ಪಿತೃಗಳಿಗೆ ಆಗುವ ಅಮೃತ ಪ್ರಾಪ್ತಿಯನ್ನು ಪಿತೃತರ್ಪಣ

**ಯಥಾ ಪುರೂರವಾಶ್ಚೈವ ತರ್ಪಯಾಮಾಸ ವೈ ಪಿತೄನ್ ।**
**ಏತತ್ ಸರ್ವಂ ಪ್ರವಕ್ಷ್ಯಾಮಿ ಪರ್ವಾಣಿ ಚ ಯಥಾಕ್ರಮಮ್ ॥ ೫ ॥**

**ಯದಾ ತು ಚಂದ್ರಸೂರ್ಯೌ ವೈ ನಕ್ಷತ್ರೇಣ ಸಮಾಗತೌ ।**
**ಅಮಾವಾಸ್ಯಾಂ ನಿವಸತ ಏಕರಾತ್ರ್ಯೈಕಮಂಡಲೌ ॥ ೬ ॥**

**ಸ ಗಚ್ಛತಿ ತದಾ ದ್ರಷ್ಟುಂ ದಿವಾಕರನಿಶಾಕರೌ ।**
**ಅಮಾವಾಸ್ಯಾ ಮಮಾವಾಸ್ಯಾಂ ಮಾತಾಮಹಪಿತಾಮಹೌ ॥ ೭ ॥**

**ಅಭಿವಾದ್ಯ ಸ ತೌ ತತ್ರ ಕಾಲಾಪೇಕ್ಷಃ ಪ್ರತೀಕ್ಷತೇ ।**
**ಪ್ರಸ್ಯಂದಮಾನಾತ್ ಸೋಮಾತ್ತು ಪಿತ್ರರ್ಥಂ ತು ಪರಿಶ್ರವಾನ್ ॥ ೮ ॥**

**ಐಲಃ ಪುರೂರವಾ ವಿದ್ವಾನ್ ಮಾಸಶ್ರಾದ್ಧಚಿಕೀರ್ಷಯಾ ।**
**ಉಪಾಸ್ತೇ ಪಿತೃಮಂತಂ ತಂ ಸೋಮಂ ದಿವಿ ಸಮಾಸ್ಥಿತಃ ॥ ೯ ॥**

---

ವಿಧಾನವನ್ನೂ ರಾಜನಿಗೆ ಕಾವ್ಯ, ಅಗ್ನಿಷ್ವಾತ್ತ, ಸೌಮ್ಯ ಎಂಬ ಮೂರು ಬಗೆಯ ಪಿತೃಗಳ ದರ್ಶನವಾದುದನ್ನೂ ನಿನಗೆ ಹೇಳುತ್ತೇನೆ.

೫. ಮತ್ತು ಪುರೂರವ ರಾಜನು ತನ್ನ ಪಿತೃಗಳನ್ನುದ್ದೇಶಿಸಿ ಹೇಗೆ ತರ್ಪಣವನ್ನು ಕೊಟ್ಟನು ? ಮುಂತಾದ ಸಕಲ ವಿಚಾರಗಳನ್ನೂ ಕ್ರಮವಾಗಿ ಸಂಭವಿಸುವ ಪರ್ವಕಾಲ ನಿರ್ಣಯವನ್ನೂ ನಿನಗೆ ಹೇಳುತ್ತೇನೆ. ಕೇಳು.

೬. ನಕ್ಷತ್ರಗತಿಯನ್ನನುಸರಿಸಿ ಚಂದ್ರ ಮತ್ತು ಸೂರ್ಯರು ಒಂದು ನಕ್ಷತ್ರದಲ್ಲಿ ಪರಸ್ಪರ ಐಕ್ಯವನ್ನು ಹೊಂದಿದ ಬಿಂಬಗಳಿಂದ ಕೂಡಿ ಅಮಾವಾಸ್ಯೆಯ ಒಂದು ರಾತ್ರಿಯಲ್ಲಿ ವಾಸಮಾಡುವರು.

೭. ಪುರೂರವ ರಾಜನು ಅಂತಹ ಪ್ರತಿಯೊಂದು ಅಮಾವಾಸ್ಯಾತಿಥಿಯಲ್ಲಿಯೂ ತಾಯಿಯ ಮತ್ತು ತಂದೆಯ ತಂದೆಯರಾದ ಮಾತಾಮಹಪಿತಾಮಹರನ್ನು ನೋಡಲು ಚಂದ್ರಸೂರ್ಯರ ಬಳಿಗೆ ಹೋಗುವನು.

೮. ಅವನು ಅಲ್ಲಿಗೆ ಹೋಗಿ ಮಾತಾಮಹ-ಪಿತಾಮಹರನ್ನು ನಮಸ್ಕರಿಸಿ ಚಂದ್ರಬಿಂಬದಿಂದ ಪಿತೃದೇವತೆಗಳಿಗೋಸ್ಕರವಾಗಿ ಸುರಿಯುವ ಅಮೃತ ಬಿಂದುಗಳಿಗೋಸ್ಕರ ಕಾಲವನ್ನು ನಿರೀಕ್ಷಿಸಿತ್ತಲಿರುವನು.

೯. ಜ್ಞಾನಿಯಾದ ಐಲಪುರೂರವ ರಾಜನು ಪಿತೃಪ್ರೀತಿಗೋಸ್ಕರವಾಗಿ ಮಾಸ

ದ್ವಿಲವಾಂ ಕುಹೂಮಾತ್ರಾಂ ಚ ತೇ ಉಭೇ ತು ವಿಚಾರ್ಯ ಸಃ ।
ಸಿನೀವಾಲೀ ಪ್ರಮಾಣೇಭ್ಯಃ ಸಿನೀವಾಲೀ ಮುಪಾಸ್ಯ ಸಃ ॥ ೧೦ ॥

ಕುಹೂಮಾತ್ರಃ ಕಲಾಂ ಚೈವ ಜ್ಞಾತ್ವೋಪಾಸ್ತೇಕುಹೂಂ ತಥಾ ।
ಸ ತದಾ ತಾಮುಪಾಸೀನಃ ಕಾಲಾಪೇಕ್ಷಃ ಪ್ರಪಶ್ಯತಿ ॥ ೧೧ ॥

ಸುಧಾಮೃತಂ ತು ತತ್ ಸೋಮಾತ್ ಸ್ರವದ್ವೈ ಮಾಸತೃಪ್ತಯೇ ।
ದಶಭಿಃ ಪಂಚಭಿಶ್ಚೈವ ಸುಧಾಮೃತಪರಿಸ್ರವೈಃ ॥ ೧೨ ॥

ಕೃಷ್ಣಪಕ್ಷೇ ಭುಜಾಂ ಪ್ರೀತ್ಯಾ ದಹ್ಯಮಾನಾಂ ತಥಾಂಶುಭಿಃ ।
ಸದ್ಯಃ ಪ್ರಕ್ಷರತಾ ತೇನ ಸೌಮ್ಯೇನ ಮಧುನಾ ತು ಸಃ ॥ ೧೩ ॥

---

ಶ್ರಾದ್ಧವನ್ನು ಆಚರಿಸಬೇಕೆಂಬ ಧರ್ಮ ಬುದ್ಧಿಯಿಂದ ಪಿತೃದೇವತಾ ರಾಜನಾದ ಸೋಮರಾಜನನ್ನು ಸ್ವರ್ಲೋಕದಲ್ಲಿ ಹೋಗಿ ಸೇವಿಸುತ್ತಾನೆ.

೧೦. ಅಮಾವಾಸ್ಯಾತಿಥಿಯು ಚಂದ್ರದರ್ಶನದಿಂದ ಕೂಡಿದರೆ ಸಿನೀವಾಲೀ, ಎಂಬುದಾಗಿಯೂ ಚಂದ್ರದರ್ಶನ ಶೂನ್ಯವಾದರೆ ಕುಹೂ ಎಂಬುದಾಗಿಯೂ ಎರಡು ವಿಧವಾಗಿದೆ.ಪುರುರವ ರಾಜನು ಚಂದ್ರದರ್ಶನ ಶೂನ್ಯವಾದ ದ್ವಿಲವಕಾಲ ರೂಪವಾದ ಕುಹೂ ಎಂಬುದನ್ನೂ ಸಿನೀವಾಲೀ ಎಂಬುದರ ಕಾಲಪರಿಮಾಣವನ್ನು ಅನುಸರಿಸಿ ನಡೆಯುವ ಸಿನೀವಾಲೀ ಎಂಬುದನ್ನೂ ವಿಚಾರಮಾಡಿ ಉಪಾಸನೆ ಮಾಡುತ್ತಾನೆ.

೧೧. ಹೀಗೆ ಕುಹೂ ಸಿನೀವಾಲಿಗಳ ಕಾಲಾಂಶವಾದ ಕಲೆಗಳನ್ನು ತಿಳಿದು ಕುಹೂ, ಸಿನೀವಾಲೀ ತಿಥಿ ಅಂಶಗಳನ್ನು ಸೇವಿಸಿ ಕಾಲವನ್ನು ನಿರೀಕ್ಷಿಸುತ್ತಿರುವನು.

೧೨. ಆಗ ಚಂದ್ರ ಬಿಂಬದಿಂದ ಅಮೃತ ರೂಪವಾದ ಸುಧಾನ್ನವು ಒಂದು ಮಾಸದವರೆಗೆ ಪಿತೃತೃಪ್ತಿಯನ್ನುಂಟುಮಾಡುವಂತೆ ಹದಿನೈದು ಭಾಗಗಳ ರೂಪದಿಂದ ಸ್ರವಿಸುವುದಾ.

೧೩. ಸೋಮರಾಜನು ಕೃಷ್ಣಪಕ್ಷದಲ್ಲಿ ಕಿರಣಗಳಿಂದ ದಹಿಸಲ್ಪಟ್ಟು ತನ್ನಲ್ಲಿರುವ ಸುಧೆಯನ್ನು ಪ್ರೀತಿಯಿಂದ ಸ್ರವಿಸುವನು. ಆಗ ಸೋಮರಾಜನ ಸಂಬಂಧವಾದ ಆ ಸುಧೆಯು ಮಧುರೂಪವಾಗಿ ಸ್ರವಿಸುವುದು.

**ನಿರ್ವಾತೇಷ್ವಥ ಪಕ್ಷೇಷು ಪಿತ್ರ್ಯೇಣ ವಿಧಿನಾ ದಿವಿ ।**
**ಸುಧಾಮೃತೇನ ರಾಜೇಂದ್ರಸ್ತರ್ಪಯಾಮಾಸ ವೈ ಪಿತೄನ್ ॥ ೧೪ ॥**

**ಸೌಮ್ಯಾನ್ ಬರ್ಹಿಷದಃ ಕಾವ್ಯಾನಗ್ನಿಷ್ವಾತ್ತಾಂಸ್ತಥೈವ ಚ ।**
**ಋತುಮಗ್ನಿಸ್ತು ಯಃ ಪ್ರೋಕ್ತಃ ಸ ತು ಸಂವತ್ಸರೋ ಮತಃ ॥ ೧೫ ॥**

**ಜಜ್ಞಿರೇ ಹ್ಯೃತವಸ್ತಸ್ಮಾ ದೃಶ್ಯೃತುಭ್ಯಶ್ಚಾರ್ತವಾಸ್ತಥಾ ।**
**ಆರ್ತವಾ ಹ್ಯರ್ಧಮಾಸಾಖ್ಯಾಃ ಪಿತರೋ ಹ್ಯೃತುಸೂನವಃ ॥ ೧೬ ॥**

**ಋತವಃ ಪಿತಾಮಹಾ ಮಾಸಾ ಅಯನಾ ಹ್ಯಬ್ದಸೂನವಃ ।**
**ಪ್ರಪಿತಾಮಹಾಸ್ತು ವೈ ದೇವಾಃ ಪಂಚಾಬ್ದಾ ಬ್ರಹ್ಮಣಃ ಸುತಾಃ॥೧೭ ॥**

**ಸೌಮ್ಯಾಸ್ತು ಸೋಮಜಾ ಜ್ಞೇಯಾಃ ಕಾವ್ಯಾ ಜ್ಞೇಯಾಃ ಕವೇಃ ಸುತಾಃ ।**
**ಉಪಹೂತಾಃ ಸ್ಮೃತಾ ದೇವಾಃ ಸೋಮಪಾಃ ಸೋಮಜಾಃ ಸ್ಮೃತಾಃ ॥ ೧೮ ॥**

---

೧೪. ರಾಜೇಂದ್ರನಾದ ಪುರೂರವನು ಕೃಷ್ಣಪಕ್ಷಗಳಲ್ಲಿ ಪಿತೃಕರ್ಮ ವಿಧಾನವನ್ನು ಅನುಸರಿಸಿ ಸ್ವರ್ಲೋಕದಲ್ಲಿ ಸುಧಾಮೃತದಿಂದ ತನ್ನ ಪಿತೃಗಳಿಗೆ ತರ್ಪಣವನ್ನು ಕೊಟ್ಟನು.

೧೫. ಪಿತೃಲೋಕದಲ್ಲಿ ವಾಸಿಸುವ ಸೋಮಸಂಬಂಧದಿಂದ ಕೂಡಿದ ಬರ್ಹಿಷದ, ಕಾವ್ಯ, ಮತ್ತು ಅಗ್ನಿಷ್ವಾತ್ತರೆಂಬ ಎಲ್ಲ ಪಿತೃದೇವತೆಗಳನ್ನು ತರ್ಪಣದಿಂದ ತೃಪ್ತಿಪಡಿಸಿದನು. ಋತುಸ್ವರೂಪನಾದ ಅಗ್ನಿಯನ್ನು ಸಂವತ್ಸರ ರೂಪವೆಂದು ಪ್ರಾಜ್ಞರು ಕರೆಯುವರು.

೧೬. ಆ ಸಂವತ್ಸರದಿಂದ ಅನೇಕ ಋತುಗಳು ಜನಿಸಿದುವು. ಋತುಗಳಿಂದ ಅರ್ಧಮಾಸವೆಂಬ ಹೆಸರುಳ್ಳ ಆರ್ತವರು ಜನಿಸಿದರು. ಋತುಗಳಿಂದ ಹುಟ್ಟಿದ ಅರ್ಧಮಾಸಗಳೆಂಬ ಆರ್ತವರು ಪಿತೃಸ್ವರೂಪರಾಗಿರುವರು.

೧೭. ಋತು, ಮಾಸ, ಅಯನ ಮುಂತಾದ ಸಂವತ್ಸರದ ಪುತ್ರರು ಪಿತಾಮಹ ರೂಪರು. ಬ್ರಹ್ಮಪುತ್ರರಾದ ಪಂಚಾಬ್ದ ರೂಪರಾದ ದೇವತೆಗಳು ಪ್ರಪಿತಾಮಹ ರೂಪರೆಂದು ತಿಳಿಯಬೇಕು.

೧೮. ಸೋಮನಿಂದ ಹುಟ್ಟುವುದರಿಂದ ಸೌಮ್ಯರೆಂದು ಪಿತೃಗಳನ್ನು ಕರೆಯುವರು, ಹಾಗೆ ಕವಿಯೆಂಬುವನ ಪುತ್ರರು ಕಾವ್ಯ ಎಂದು ಪ್ರಸಿದ್ಧರಾಗಿರುವರು.

ಆಜ್ಯಪಾಸ್ತು ಸ್ಮೃತಾಃ ಕಾವ್ಯಾಸ್ತ್ರಿಸ್ರಸ್ತಾಃ ಪಿತೃಜಾತಯಃ ।
ಕಾವ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಶ್ಚ ತಾಸ್ತ್ರಿಧಾ ॥ ೧೯ ॥

ಗೃಹಸ್ಥಾ ಯೇ ಚ ಯಜ್ವಾನ ಋತುರ್ಬರ್ಹಿಷದೋ ಧ್ರುವಮ್
ಗೃಹಸ್ಥಾಶ್ಚಾಪ್ಯಯಜ್ವಾನ ಅಗ್ನಿಷ್ವಾತ್ತಾಸ್ತ್ವಥಾರ್ತವಾಃ ॥ ೨೦ ॥

ಅಷ್ಟಕಾಪತಯಃ ಕಾವ್ಯಾಃ ಪಂಚಾಬ್ದಾಸ್ತಾನ್ನಿಬೋಧತ ।
ತೇಷಾಂ ಸಂವತ್ಸರೋ ಹ್ಯಗ್ನಿಃ ಸೂರ್ಯಸ್ತು ಪರಿವತ್ಸರಃ ॥ ೨೧ ॥

ಸೋಮ ಇಡ್ವತ್ಸರಃ ಪ್ರೋಕ್ತೋ ವಾಯುಶ್ಚೈವಾನುವತ್ಸರಃ ।
ರುದ್ರಸ್ತು ವತ್ಸರಸ್ತೇಷಾಂ ಪಂಚಾಬ್ದಾಸ್ತೇ ಯುಗಾತ್ಮಕಾಃ ॥ ೨೨ ॥

---

ಸೌಮ್ಯ ಪಿತೃಗಳು ಉಪಹೂತರೆಂದು ಸಂಕೇತದಿಂದ ಪ್ರಸಿದ್ಧರಾಗಿ ಸೋಮಪಾನವನ್ನು ಮಾಡುವರು.

೧೯. ಕಾವ್ಯರೆಂಬ ಪಿತೃಗಳು ಆಜ್ಯವನ್ನು ಪಾನಮಾಡುವರು. ಹೀಗೆ ಒಟ್ಟು ಪಿತೃ ಜಾತಿಯು ಮೂರು ವಿಧವಾಗಿದೆ. ಆ ಮೂರು ಜಾತಿಯು ಕಾವ್ಯ, ಬರ್ಹಿಷದ, ಮತ್ತು ಅಗ್ನಿಷ್ವಾತ್ತ ಎಂಬ ಬೇರೆಯಾದ ಮೂರು ಸಂಕೇತವನ್ನು ಹೊಂದಿದೆ.

೨೦. ಗೃಹಸ್ಥರೂ ಆಹಿತಾಗ್ನಿಗಳೂ ಆಗಿ ಯಾಗಾನುಷ್ಠಾನ ಮಾಡಿದವರು ಋತುಸ್ವರೂಪರಾದ ಬರ್ಹಿಷದರೆಂಬ ಪಿತೃಗಳು. ಗೃಹಸ್ಥರಾಗಿ ಯಾಗ ಮಾಡದಿರುವವರು ಆರ್ತವರೂಪರಾದ ಅಗ್ನಿಷ್ವಾತ್ತ ಎಂಬ ಪಿತೃಗಳು. ಇದು ಬರ್ಹಿಷದರಿಗೂ ಅಗ್ನಿಷ್ವಾತ್ತರಿಗೂ ಇರುವ ಭೇದವು.

೨೧. ಮಾಘಾದಿ ಕೃಷ್ಣಪಕ್ಷದಲ್ಲಿ ಬರುವ ಅಷ್ಟಕಾ ಕಾಲಾಭಿಮಾನಿಗಳಾದ ಪಿತೃಗಳು ಕಾವ್ಯ ಸ್ವರೂಪರು. ಆ ಪಿತೃಗಳು ಐದು ಅಬ್ದ ರೂಪದಿಂದಿರುವರು. ಆ ಪಿತೃಗಳಲ್ಲಿ ಅಗ್ನಿಯು ಸಂವತ್ಸರ ರೂಪನೂ ಸೂರ್ಯನು ಪರಿವತ್ಸರ ರೂಪನೂ ಆಗಿರುವನು.

೨೨. ಸೋಮನು ಇಡ್ವತ್ಸರ ಸ್ವರೂಪನೂ ವಾಯುವು ಅನುವತ್ಸರನೆಂಬುವನೂ ರುದ್ರನು ಐದನೆಯ ವತ್ಸರ ಸ್ವರೂಪನೂ ಆಗಿರುವನು. ಹೀಗೆ ಈ ಐದು ಅಬ್ದಗಳು ಯುಗ ಸ್ವರೂಪವೆಂದು ಕರೆಯಲ್ಪಡುವುವು.

ಕಾವ್ಯಾಶ್ಚೈವೋಷ್ಮಪಾಶ್ಚೈವ ದಿವಾಕೀರ್ತ್ಯಾಶ್ಚ ತೇ ಸ್ಮೃತಾಃ ।
ಯೇ ತೇ ಪಿಬಂತ್ಯಮಾವಾಸ್ಯಾಂ ಮಾಸಿ ಮಾಸಿ ಸುಧಾಂ ದಿವಿ ॥ ೨೩ ॥

ತಾಂಸ್ತೇನ ತರ್ಪಯಾಮಾಸ ಯಾವದಾಸೀತ್ ಪುರೂರವಾಃ ।
ಯಸ್ಮಾತ್ಪ್ರಸ್ರವತೇ ಸೋಮಾನ್ಮಾಸಿ ಮಾಸಿ ಧಿನೋತಿ ಚ ॥ ೨೪ ॥

ತಸ್ಮಾತ್ ಸುಧಾಮೃತಂ ತದ್ವೈ ಪಿತೄಣಾಂ ಸೋಮಪಾಯಿನಾಮ್ ।
ಏವಂ ತದಮೃತಂ ಸೌಮ್ಯಂ ಸುಧಾ ಚ ಮಧು ಚೈವ ಹ ॥ ೨೫ ॥

ಕೃಷ್ಣಪಕ್ಷೇ ಯಥಾ ಚೇಂದೋಃ ಕಲಾಃ ಪಂಚದಶ ಕ್ರಮಾತ್ ।
ಪಿಬಂತ್ಯಂಬುಮಯಂ ದೇವಾಸ್ತ್ರಯಸ್ತ್ರಿಂಶತ್ತು ಛಂದನಾಃ ॥ ೨೬ ॥

ಪೀತ್ವಾರ್ಧಮಾಸಂ ಗಚ್ಛಂತಿ ಚತುರ್ದಶ್ಯಾಂ ಸುಧಾಮೃತಮ್ ।
ಇತ್ಯೇವಂ ಪೀಯಮಾನಸ್ತು ದೇವೈಃ ಸರ್ವೈರ್ನಿಶಾಕರಃ ॥ ೨೭ ॥

---

೨೩. ಆ ಪಿತೃಗಳನ್ನು ಕಾವ್ಯ, ಊಷ್ಮಪ, ದಿವಾಕೀರ್ತ್ಯ ಮುಂತಾದ ಹೆಸರುಗಳಿಂದ ಸ್ಮರಿಸುವರು, ಅವರು ಸ್ವರ್ಗದಲ್ಲಿ ಪ್ರತಿ ಮಾಸದಲ್ಲಿಯೂ ಅಮಾವಾಸ್ಯೆಯಲ್ಲಿ ಸುಧೆಯನ್ನು ಪಾನಮಾಡುವರು.

೨೪. ಪುರೂರವ ರಾಜನು ಆ ಪಿತೃಗಳನ್ನು ಆ ಸುಧಾಮೃತದಿಂದ ತನ್ನ ಜೀವನ ಕಾಲದಲ್ಲೆಲ್ಲ ತಪ್ಪದೆ ತೃಪ್ತಿಪಡಿಸುತ್ತಲಿದ್ದನು, ಆ ಅಮೃತವು ಚಂದ್ರನಿಂದ ಪ್ರವಿಸುವುದೂ ಪಿತೃಗಳನ್ನು ತೃಪ್ತಿಪಡಿಸುವುದೂ ಆಗಿರುವುದು.

೨೫. ಆದುದರಿಂದ ಸ್ರವಣ, ಪ್ರೀಣನವೆಂಬ ಅರ್ಥಅರ್ಭಿತವಾದ ಸುಧಾ ಎಂಬ ಸಂಕೇತವನ್ನು ಹೊಂದಿದೆ. ಸೋಮಪಾನ ಮಾಡಿದ ಪಿತೃಗಣಕ್ಕೆ ಆ ಸೋಮ ಮಂಡಲದಿಂದ ಸ್ರವಿಸಿದ ಅಮೃತವು ಮಧುರೂಪವಾದ ಸುಧಾನ್ನವಾಗುವುದು.

೨೬. ಕೃಷ್ಣಪಕ್ಷದಲ್ಲಿ ಚಂದ್ರನ ಹದಿನೈದು ಕಲೆಗಳನ್ನು ಯಥಾಕ್ರಮವಾಗಿ ಸ್ವಸಂಕಲ್ಪ ವಿಧಾನವುಳ್ಳ, ಮೂವತ್ತ ಮೂರು ದೇವತೆಗಳು ಜಲರೂಪವಾಗಿ ಪಾನ ಮಾಡುತ್ತಾರೆ.

೨೭. ಈ ರೀತಿಯಾಗಿ ಅರ್ಧ ಮಾಸದಲ್ಲಿ ಚತುರ್ದಶೀ ತಿಥಿ ಪರ್ಯಂತವಾಗಿ ದೇವತೆಗಳು ಚಂದ್ರನ ಅಮೃತವನ್ನು ಪಾನಮಾಡಿ ಹೊರಡುತ್ತಾರೆ. ಚಂದ್ರನು ಪ್ರತಿಯೊಂದು ಕೃಷ್ಣಪಕ್ಷದಲ್ಲಿಯೂ ದೇವತೆಗಳಿಂದ ಪಾನಮಾಡಲ್ಪಡುವನು.

ಸಮಾಗಚ್ಛತ್ಯಮಾವಾಸ್ಯಾಂ ಭಾಗೇ ಪಂಚದಶೇ ಸ್ಥಿತಃ ।
ಸುಷುಮ್ನಾಪ್ಯಾಯಿತಂ ಚೈವ ಹ್ಯಮಾವಾಸ್ಯಾಂ ಯಥಾಕ್ರಮಮ್॥೨೮॥

ಪಿಬಂತಿ ದ್ವಿಲವಂ ಕಾಲಂ ಪಿತರಸ್ತೇ ಸುಧಾಮೃತಮ್ ।
ಪೀತಕ್ಷಯಂ ತತಃ ಸೋಮಂ ಸೂರ್ಯೋಽಸಾವೇಕರಶ್ಮಿನಾ ॥ ೨೯ ॥

ಆಪ್ಯಾಯಯತ್ ಸುಷುಮ್ನಾ ತಃ ಪುನಸ್ತಾನ್ ಸೋಮಪಾಯಿನಃ ।
ನಿಃಶೇಷಾಯಾಂ ಕಲಾಯಾಂ ತು ಸೋಮಮಾಪ್ಯಾಯಯತ್ ಪುನಃ ॥ ೩೦ ॥

ಸುಷುಮ್ನಾಪ್ಯಾಯಮಾನಸ್ಯ ಭಾಗಂ ಭಾಗಮಹಃಕ್ರಮಾತ್ ।
ಕಲಾಃ ಕ್ಷೀಯಂತಿ ತಾಃ ಕೃಷ್ಣಾಃ ಶುಕ್ಲಾಶ್ಚಾಪ್ಯಾಯಯಂತಿ ತಮ್ ॥ ೩೧ ॥

ಏವಂ ಸೂರ್ಯಸ್ಯ ವೀರ್ಯೇಣ ಚಂದ್ರಸ್ಯಾಪ್ಯಾಯಿತಾ ತನುಃ ।
ದೃಶ್ಯತೇ ಪೌರ್ಣಮಾಸ್ಯಾಂ ವೈ ಶುಕ್ಲಃ ಸಂಪೂರ್ಣಮಂಡಲಃ ॥ ೩೨ ॥

---

೨೮. ಆಗ ತನ್ನ ಹದಿನೈದನೆಯ ಒಂದು ಭಾಗ ಮಾತ್ರ ಶಿಷ್ಟನಾದ ಚಂದ್ರನು ಅಮಾವಾಸ್ಯಾ ತಿಥಿಯನ್ನು ಹೊಂದುವನು. ಆಗ ಆ ಅಮಾವಾಸ್ಯೆಯಲ್ಲಿ ಸೂರ್ಯನ ಸುಷುಮ್ನ ರಶ್ಮಿಯಿಂದ ಕ್ರಮವಾಗಿ ಚಂದ್ರನಿಗೆ ಆಪ್ಯಾಯನವಾಗುವುದು.

೨೯. ಅಲ್ಲಿ ಕೂಡ ಪಿತೃಗಳು ಎರಡು ಲವ ಮಾತ್ರ ಕಾಲದಲ್ಲ ಸುಧಾಮೃತ ವನ್ನು ಪಾನಮಾಡುವರು, ಈ ರೀತಿಯಾಗಿ ದೇವಪಿತೃಗಳಿಂದ ಪಾನಮಾಡಲ್ಪಟ್ಟು ನಶಿಸಿ ಹೋದ ಚಂದ್ರನನ್ನು ಸೂರ್ಯನು ತನ್ನ ಒಂದು ರಶ್ಮಿಯಿಂದ ವೃದ್ಧಿ ಮಾಡುವನು.

೩೦. ಮತ್ತು ಸೋಮಪಾಯಿಗಳನ್ನು ತನ್ನ ಸುಷುಮ್ನಾ ರಶ್ಮಿಯಿಂದ ಪುನಃ ಆಪ್ಯಾಯನಮಾಡುವನು. ಚಂದ್ರನು ಸಕಲ ಕಲಾಶೂನ್ಯನಾಗುವ ಸಮಯದಲ್ಲಿ ಅವನನ್ನು ಮತ್ತೆ ಆಪ್ಯಾಯನಮಾಡಿ ವೃದ್ಧಿಪಡಿಸುವನು.

೩೧. ಸುಷುಮ್ನಾ ರಶ್ಮಿಯಿಂದ ವೃದ್ಧಿಯಾಗುತ್ತಲಿರುವ ಚಂದ್ರನ ಕೃಷ್ಣಕಲೆ ಗಳು ದಿನಕ್ರಮದಿಂದ ಒಂದೊಂದು ಭಾಗವಾಗಿ ಕ್ಷಯಿಸುತ್ತವೆ. ಆಗ ಶುಕ್ಲ ಕಲೆಗಳು ಮಾತ್ರ ಚಂದ್ರನನ್ನು ಪೋಷಿಸುತ್ತವೆ.

೩೨. ಈ ರೀತಿಯಾಗಿ ಸೂರ್ಯನ ವೀರ್ಯದಿಂದ ಚಂದ್ರನು ಕ್ರಮವಾಗಿ ವೃದ್ಧಿಯಾಗುತ್ತ ಬಂದು ಶುಕ್ಲಪಕ್ಷದ ಪೂರ್ಣಿಮಾ ತಿಥಿಯಲ್ಲಿ ಪೂರ್ಣವಾದ ಮಂಡಲ ದಿಂದ ಪ್ರಕಾಶಿಸುವನು.

**ಸಂಸಿದ್ಧಿರೇವಂ ಸೋಮಸ್ಯ ಪಕ್ಷಯೋಃ ಶುಕ್ಲಕೃಷ್ಣಯೋಃ ।**
**ಇತ್ಯೇವಂ ಪಿತೃಮಾನ್ ಸೋಮಃ ಸ್ಮೃತ ಇದ್ವತ್ಸರಾತ್ಮಕಃ ॥ ೩೩ ॥**

**ಕ್ರಾಂತಃ ಪಂಚದಶೈಃ ಸಾರ್ಧಂ ಸುಧಾಮೃತಪರಿಸ್ರವೈಃ ।**
**ಅತಃ ಪರ್ವಾಣಿ ವಕ್ಷ್ಯಾಮಿ ಪರ್ವಣಾಂ ಸಂಧಯಶ್ಚ ಯೇ ॥ ೩೪ ॥**

**ಗ್ರಂಥಿಮಂತಿ ಯಥಾ ಪರ್ವಾಣೀಕ್ಷುವೇಣ್ವೋರ್ಭವಂತ್ಯುತ ।**
**ತಥಾರ್ಧಮಾಸಿ ಪರ್ವಾಣಿ ಶುಕ್ಲಕೃಷ್ಣಾನಿ ಚೈವ ಹಿ ॥ ೩೫ ॥**

**ಪೂರ್ಣಾಮಾವಾಸ್ಯಯೋರ್ಭೇದೌ ಗ್ರಂಥಯಃ ಸಂಧಯಶ್ಚ ವೈ ।**
**ಅರ್ಧಮಾಸಂ ತು ಪರ್ವಾಣಿ ದ್ವಿತೀಯಾಪ್ರಭೃತೀನಿ ತು ॥ ೩೬ ॥**

**ಅನ್ವಾಧಾನಕ್ರಿಯಾ ಯಸ್ಮಾತ್ ಕ್ರಿಯತೇ ಪರ್ವಸಂಧಿಷು ।**
**ತಸ್ಮಾತ್ತು ಪರ್ವಣಾಮಾದೌ ಪ್ರತಿಪತ್ ಪರ್ವಸಂಧಿಷು ॥ ೩೭ ॥**

---

೩೩. ಈ ರೀತಿಯಾಗಿ ಶುಕ್ಲ ಮತ್ತು ಕೃಷ್ಣ ಪಕ್ಷಗಳಲ್ಲಿ ಚಂದ್ರನ ವೃದ್ಧಿಹ್ರಾಸಗಳು ಆಗುತ್ತಲಿರುವುವು. ಇಂತಹ ಸೋಮನು ಪಿತೃರಾಜನು, ಇವನು ಇದ್ವತ್ಸರವೆಂಬ ಅಬ್ದ ಸ್ವರೂಪವಾಗಿರುವನು.

೩೪. ಆ ಚಂದ್ರನ ಹದಿನೈದು ಕಲೆಗಳ ಸುಧಾಮೃತದ ಸ್ರವಣಸಹಿತವಾಗಿ ಅವನ ಸ್ಥಿತಿಯನ್ನು ವರ್ಣಿಸಿ ಮುಗಿಯಿತು. ಇನ್ನು ಮುಂದೆ ಪರ್ವ, ಮತ್ತು ಪರ್ವ ಕಾಲದ ಸಂಧಿಗಳನ್ನು ಹೇಳುತ್ತೇನೆ ಕೇಳಿರಿ.

೩೫. ಬಿದುರು ಅಥವ ಕಬ್ಬುಗಳಿಗೆ ಮಧ್ಯ ಮಧ್ಯದಲ್ಲಿ ಹೇಗೆ ಗೆಣ್ಣುಗಳು ಇರುತ್ತವೆಯೋ ಅದರಂತೆಯೆ ಅರ್ಧ ಮಾಸದಲ್ಲಿ ಶುಕ್ಲ ಕೃಷ್ಣ ಪಕ್ಷಗಳು ಪರ್ವ ಸಂಧಿಯುಳ್ಳವುಗಳಾಗಿವೆ.

೩೬. ಪೂರ್ಣಿಮಾ ಮತ್ತು ಅಮಾವಾಸ್ಯಾ ತಿಥಿಗಳು ಅರ್ಧ ಮಾಸದ ಗ್ರಂಥಿ ಮತ್ತು ಸಂಧಿ ರೂಪಗಳಾಗಿವೆ. ಅರ್ಧ ಮಾಸಗಳಲ್ಲಿ ದ್ವಿತೀಯಾ ಮುಂತಾದ ತಿಥಿಗಳು ಪರ್ವಗಳಾಗಿವೆ.

೩೭. ಪರ್ವಸಂಧಿಗಳಲ್ಲಿ ಇಷ್ಟಿಯ ಅಂಗವಾಗಿ ಅನ್ವಾಧಾನವೆಂಬ ಕರ್ಮವು ಮಾಡಲ್ಪಡುವುವಾದ್ದರಿಂದ ಎಲ್ಲ ಪರ್ವಗಳ ಸಂಧಿಗಳಲ್ಲಿ ಪ್ರತಿಪತ್ (ಪಾಡ್ಯಮಿ) ತಿಥಿಯು ಆದಿಯಾಗಿರುವುದು.

ಸಾಯಾಹ್ನೇ ಹ್ಯನುಮತ್ಯಾದೌ ಕಾಲೋ ದ್ವಿಲವ ಉಚ್ಯತೇ ।
ಲವೌ ದ್ವಾವೇವ ರಾಕಾಯಾಂ ಕಾಲೋ ಜ್ಞೇಯೋಽಪರಾಹ್ಣಕಃ॥ ೩೮ ॥

ಪ್ರತಿಪತ್ ಕೃಷ್ಣಪಕ್ಷಸ್ಯ ಕಾಲೇಽತೀತೇಽಪರಾಹ್ಣಕೇ ।
ಸಾಯಾಹ್ನೇ ಪ್ರತಿಪನ್ನೇ ಚ ಸ ಕಾಲಃ ಪೌರ್ಣಮಾಸಿಕಃ ॥ ೩೯ ॥

ವ್ಯತೀಪಾತೇ ಸ್ಥಿತೇ ಸೂರ್ಯೇ ಲೇಖಾರ್ಧೇ ತು ಯದಾಂತರೇ ।
ಯುಗಾಂತರೋದಿತೇ ಚೈವ ಲೇಖಾರ್ಧೇ ಶಶಿನಃ ಕ್ರಮಾತ್ ॥ ೪೦ ॥

ಪೌರ್ಣಮಾಸೀವ್ಯತೀಪಾತೇ ಯದೀಕ್ಷೇತಾಂ ಪರಸ್ಪರಮ್ ।
ಯಸ್ಮಿನ್ ಕಾಲೇ ಸಮೌ ಸ್ಯಾತಾಂ ತೌ ವ್ಯತೀಪಾತ ಏವ ಸಃ ॥ ೪೧ ॥

ತಂ ಕಾಲಂ ಸೂರ್ಯನಿರ್ದೇಶ್ಯಂ ದೃಷ್ಟ್ವಾ ಸಂಖ್ಯಾಂ ತು ಸರ್ಪತಿ ।
ಸ ವೈ ವಷಟ್ಕ್ರಿಯಾಕಾಲಃ ಸದ್ಯಃಕಾಲಂ ವಿಧೀಯತೇ ॥ ೪೨ ॥

---

೩೮. ಅನುಮತಿ ಮುಂತಾದ ಪೂರ್ಣಿಮಾತಿಥಿಯ ಒಳಭೇದಗಳಲ್ಲಿ ಸಾಯಂಕಾಲದಲ್ಲಿ ದ್ವಿಲವಕಾಲವು ಮಾತ್ರ ಅನುಮತಿಯ ರೂಪವೂ ಅಪರಾಹ್ಣದಲ್ಲಿ ದ್ವಿಲವ ಕಾಲವು ರಾಕಾರೂಪವೂ ಆಗಿರುವುದು.

೩೯. ಕೃಷ್ಣಪಕ್ಷದ ಪಾಡ್ಯಮಿ ತಿಥಿಯ ಅಪರಾಹ್ಣಕಾಲವು ಕಳೆದು ಸಾಯಂಕಾಲವು ಪ್ರಾಪ್ತವಾಗಲು ಆ ಕಾಲವು ಪೂರ್ಣಮಾಸಕ್ಕೆ ಸಂಬಂಧಿಸಿರುವ ಪರ್ವಕಾಲವೆಂದು ತಿಳಿಯಬೇಕು.

೪೦. ಒಂದು ಸಂವತ್ಸರಾದಿ ಯುಗದಲ್ಲಿ ವ್ಯತೀಪಾತಕಾಲದಲ್ಲಿ ಸೂರ್ಯನು ತನ್ನ ವೃತ್ತ ರೇಖೆಯಲ್ಲಿಯೂ ಚಂದ್ರನು ಆ ಯುಗ ಮಧ್ಯದಲ್ಲಿಯೇ ತನ್ನ ವೃತ್ತ ರೇಖೆಯಲ್ಲಿಯೂ ಸಮ ಅಂತರ ಉಳ್ಳವರಾಗಿ ಉದಯಿಸುವರು.

೪೧. ಸೂರ್ಯ ಚಂದ್ರರು ಪರಸ್ಪರ ಅಭಿಮುಖರಾಗಿ ಪರಸ್ಪರವಾಗಿ ನೋಡುತ್ತಿರುವಂತೆ ಸಮಾಂತರವುಳ್ಳವರಾದುದರಿಂದ ಆ ಕಾಲವು ಪೂರ್ಣಿಮಾ ಮತ್ತು ವ್ಯತೀಪಾತವೆಂದು ಕರೆಯಲ್ಪಡುವುದು.

೪೨. ಆ ಕಾಲ ವಿಶೇಷವು ಸೂರ್ಯಗತಿಯಿಂದ ನಿರ್ದೇಶಿಸಲ್ಪಡುವುದು, ಆದುದರಿಂದ ಅದರ ಗಣನೆಗೆ ಸೂರ್ಯನ ಸರ್ಪಣವು ಕಾರಣವು. ಅದು ವಷಟ್

ಪೂರ್ಣೇಂದೋಃ ಪೂರ್ಣಪಕ್ಷೇ ತು ರಾತ್ರಿಸಂಧಿಶ್ಚ ಪೂರ್ಣಿಮಾ ।
ತತೋ ವಿರಜ್ಯತೇ ನಕ್ತಂ ಪೌರ್ಣಮಾಸ್ಯಾಂ ನಿಶಾಕರಃ || ೪೩ ||

ಯದೀಕ್ಷೇತೇ ವ್ಯತೀಪಾತೇ ದಿವಾ ಪೂರ್ಣೇ ಪರಸ್ಪರಮ್ ।
ಚಂದ್ರಾರ್ಕಾವಪರಾಹ್ಣೇ ತು ಪೂರ್ಣಾತ್ಮಾನೌ ತು ಪೂರ್ಣಿಮಾ|| ೪೪ ||

ಯಸ್ಮಾತ್ತಾಮನುಮನ್ಯಂತೇ ಪಿತರೋ ದೈವತೈಃ ಸಹ ।
ತಸ್ಮಾದನುಮತಿರ್ನಾಮ ಪೂರ್ಣಿಮಾ ಪ್ರಥಮಾ ಸ್ಮೃತಾ || ೪೫ ||

ಅತ್ಯರ್ಥಂ ಭ್ರಾಜತೇ ಯಸ್ಮಾತ್ ವ್ಯೋಮ್ನ್ಯಸ್ಯಾಂ ವೈ ನಿಶಾಕರಃ ।
ರಂಜನಾಚ್ಚೈವ ಚಂದ್ರಸ್ಯ ರಾಕೇತಿ ಕವಯೋಽಬ್ರುವನ್ || ೪೬ ||

ಅಮಾ ವಸೇತಾ ಮೃಕ್ಷೇ ತು ಯದಾ ಚಂದ್ರದಿವಾಕರೌ ।
ರಾಕಾ ಪಂಚದಶೀ ರಾತ್ರಿ ರಮಾವಾಸ್ಯಾ ತತಃ ಸ್ಮೃತಾ || ೪೭ ||

---

ಶಬ್ದವನ್ನುಚ್ಚಾರಣೆ ಮಾಡಿ ಆಹುತಿಯನ್ನು ತ್ಯಾಗಮಾಡುವ ಯಾಗದ ಕಾಲವು. ಅದು ಸದ್ಯಃಕಾಲ ಎಂದರೆ ಆಗಲೆ ಅನ್ವಾಧಾನ ಮತ್ತು ಇಷ್ಟಿಗಳನ್ನು ಜೊತೆಯಲ್ಲಿ ಮಾಡುವ ಕಾಲವು.

೪೩. ಪೂರ್ಣ ಚಂದ್ರನಿಗೆ ಶುಕ್ಲಪಕ್ಷದಲ್ಲಿ ರಾತ್ರಿಯ ಸಂಧಿಕಾಲವು ಪೂರ್ಣಿಮಾತಿಥಿಯು, ಆ ತಿಥಿಯಲ್ಲಿ ಚಂದ್ರನು ರಾತ್ರಿಯಲ್ಲಿ ವಿಶೇಷವಾಗಿ ಶುಭ್ರವರ್ಣದಿಂದ ರಂಜಿತನಾಗಿ ಕಾಣುವನು.

೪೪. ವ್ಯತೀಪಾತದಲ್ಲಿ ಹಗಲು ಅಪರಾಹ್ಣ ಕಾಲದಲ್ಲಿ ಚಂದ್ರಸೂರ್ಯರು ಪೂರ್ಣವಾಗಿ ಪರಸ್ಪರವಾಗಿ ಅವಲೋಕಿಸುತ್ತ ಪೂರ್ಣ ರೂಪದಿಂದಿರುವುದರಿಂದ ಅದನ್ನು ಪೂರ್ಣಿಮೆಯೆಂದು ಕರೆಯುವರು.

೪೫. ಆ ಪರ್ವಕಾಲವನ್ನು ಪಿತೃಗಳೂ ದೇವತೆಗಳೂ ಪ್ರೀತಿಯಿಂದ ಅನುಮೋದಿಸುತ್ತಿರುವುದರಿಂದ ಆ ಪೂರ್ಣಿಮಾತಿಥಿಯನ್ನು ಅನುಮತಿಯೆಂದು ಕರೆಯುವರು. ಇದು ಪೂರ್ಣಿಮೆಯ ಮೊದಲನೆಯ ಅಂಶವು.

೪೬. ಈ ತಿಥಿಯಲ್ಲಿ ಚಂದ್ರನು ಆಕಾಶದಲ್ಲಿ ಅತಿಶಯವಾಗಿ ಪ್ರಕಾಶಿಸುತ್ತಿರುವುದರಿಂದಲೂ ನೋಡುವ ಜನಗಳನ್ನು ಮನೋರಂಜನ ಮಾಡುವುದರಿಂದಲೂ ಆ ತಿಥಿಯನ್ನು ರಾಕಾ ಎಂದು ಕರೆಯುವರು.

೪೭. ಇದೇ ರೀತಿಯಲ್ಲಿ ಚಂದ್ರ-ಸೂರ್ಯರು ಒಂದು ನಕ್ಷತ್ರದಲ್ಲಿ ಜೊತೆ

ವ್ಯುಚ್ಛಿದ್ಯ ತಾಮಮಾವಾಸ್ಯಾಂ ಪಶ್ಯತಸ್ತೌ ಸಮಾಗತೌ ।
ಅನ್ಯೋಽನ್ಯಂ ಚಂದ್ರಸೂರ್ಯೌ ತೌ ಯದಾ ತದ್ದರ್ಶ ಉಚ್ಯತೇ॥ ೪೮ ॥

ದ್ವೌ ದ್ವೌ ಲವಾಮಮಾವಾಸ್ಯಾ ಸ ಕಾಲಃ ಪರ್ವಸಂಧಿಷು ।
ದ್ವ್ಯಕ್ಷರಃ ಕುಹುಮಾತ್ರಶ್ಚ ಪರ್ವಕಾಲಾಸ್ತ್ರಯಃ ಸ್ಮೃತಾಃ ॥ ೪೯ ॥

ನಷ್ಟಚಂದ್ರಾ ತ್ವಮಾವಾಸ್ಯಾ ಯಾ ಮಧ್ಯಾಹ್ನಾತ್ಪ್ರವರ್ತತೇ ।
ದಿವಸಾರ್ಧೇನ ರಾತ್ರ್ಯಾ ಽಽ ಸೂರ್ಯಂ ಪ್ರಾಪ್ಯ ತು ಚಂದ್ರಮಾಃ॥ ೫೦॥

ಸೂರ್ಯೇಣ ಸಹ ಸಾಮುದ್ರಂ ಗತ್ವಾ ಪ್ರಾತಸ್ತನಾತ್ಸ ವೈ ।
ದ್ವೌ ಕಾಲೌ ಸಂಗಮಂ ಚೈವ ಮಧ್ಯಾಹ್ನೇ ನಿಯತಂ ರವಿಃ ॥ ೫೧ ॥

---

ಯಲ್ಲಿ ವಾಸಮಾಡುವುದರಿಂದ ಆ ಹದಿನೈದನೆಯ ತಿಥಿಯನ್ನು ಅಮಾವಾಸ್ಯಾ ಎಂದು ಕರೆಯುವರು. ಹೀಗೆ ರಾಕಾ, ಅಮಾವಾಸ್ಯಾ ಎಂಬ ಸಂಕೇತಗಳು ಅನ್ವರ್ಥವಾಗಿವೆ.

೪೮. ಚಂದ್ರ ಸೂರ್ಯರು ತಮ್ಮ ವಿಭಾಗವನ್ನು ಬಿಟ್ಟು ಐಕ್ಯಹೊಂದಿದವರಾಗಿ ಅನ್ಯೋನ್ಯವಾಗಿ ದರ್ಶನ ಮಾಡುತ್ತಿರುವುದರಿಂದ ಆ ತಿಥಿಯನ್ನು ದರ್ಶವೆಂದು ಅನ್ವರ್ಥವಾಗಿ ಕರೆಯುವರು.

೪೯. ಪ್ರತಿಯೊಂದು ಪರ್ವಸಂಧಿಗಳಲ್ಲಿಯೂ ಎರಡೆರಡುಲವಕಾಲಗಳನ್ನು ಅಮಾವಾಸ್ಯಾ ತಿಥಿರೂಪವಾದ ಪರ್ವಕಾಲವನ್ನಾಗಿ ಭಾವಿಸಬೇಕು. ಮತ್ತು " ಕುಹು " ಎಂಬ ಎರಡು ಅಕ್ಷರಗಳನ್ನು ಉಚ್ಚಾರಮಾಡುವಷ್ಟು ಸೂಕ್ಷ್ಮಕಾಲವು ಒಂದು ಪರ್ವ ಕಾಲವು, ಹೀಗೆ ಪರ್ವಕಾಲಗಳು ಮೂರಾಗಿ ಹೇಳಲ್ಪಟ್ಟಿವೆ.

೫೦. ಯಾವ ಅಮಾವಾಸ್ಯೆಯು ಮಧ್ಯಾಹ್ನದಿಂದ ಪ್ರಾರಂಭಿಸಿ ಅರ್ಧ ದಿವಸದಲ್ಲಿಯೂ ರಾತ್ರಿಯಲ್ಲಿಯೂ ಪ್ರವರ್ತಿಸುವುದೋ ಆ ಅಮಾವಾಸ್ಯೆಯು ನಷ್ಟ ಚಂದ್ರ (ಚಂದ್ರದರ್ಶನವಿಲ್ಲದ) ಅಮಾವಾಸ್ಯೆಯು. ಆಗ ಚಂದ್ರನು ಸೂರ್ಯ ಬಿಂಬದಲ್ಲಿ ಸೇರಿರುವನು.

೫೧. ಸೂರ್ಯ ಬಿಂಬದ ಜೊತೆಯಲ್ಲಿ ಚಂದ್ರನು ಸಮುದ್ರವನ್ನು ಸೇರಿ ರಾತ್ರಿಯಿಂದ ಪ್ರಾತಃಕಾಲದವರೆಗೆ ಸೂರ್ಯಬಿಂಬದಲ್ಲಿ ಸಂಗತನಾಗಿರುವನು. ಹೀಗೆ ಹಿಂದಿನ ಮಧ್ಯಾಹ್ನ ಮತ್ತು ರಾತ್ರಿ ಕಾಲಗಳು ಎರಡು ಸೂರ್ಯ ಚಂದ್ರ ಬಿಂಬಗಳ ಸಂಗಮಕಾಲವು, ಆ ಮಧ್ಯಾಹ್ನದಿಂದ ಸೂರ್ಯ ಬಿಂಬವು ಪ್ರತ್ಯೇಕವಾಗುವುದು.

ಪ್ರತಿಪಚ್ಛುಕ್ಲಪಕ್ಷಸ್ಯ ಚಂದ್ರಮಾಃ ಸೂರ್ಯಮಂಡಲಾತ್ ।
ವಿಮುಚ್ಯಮಾನಯೋರ್ಮಧ್ಯೇ ತಯೋರ್ಮಂಡಲಯೋಸ್ತು ವೈ ॥೫೨॥

ಸ ತದಾ ಹ್ಯಾಹುತೇಃ ಕಾಲೋ ದರ್ಶಸ್ಯ ತು ವಷಟ್ಕ್ರಿಯಾ ।
ಏತದೃತುಮುಖಂ ಜ್ಞೇಯಮಮಾವಾಸ್ಯಸ್ಯ ಪರ್ವಣಃ ॥ ೫೩ ॥

ದಿವಾಪರ್ವ ಹ್ಯಮಾವಾಸ್ಯಾ ಕ್ಷೀಣೇಂದೌ ಬಹುಲೇ ತು ವೈ ।
ತಸ್ಮಾದ್ದಿವಾ ಹ್ಯಮಾವಾಸ್ಯಾಂ ಗೃಹ್ಯತೇಽಸೌ ದಿವಾಕರಃ ॥ ೫೪ ॥

ಗೃಹ್ಯತೇ ತು ದಿವಾ ತಸ್ಮಾದಮಾವಾಸ್ಯಾಂ ದಿವಿ ಕ್ಷಯಾಮ್ ।
ಕಲಾನಾಮಪಿ ಚೈತಾಸಾಂ ವೃದ್ಧಿಹಾನ್ಯಾ ಜಲಾತ್ಮನಃ ॥ ೫೫ ॥

ತಿಥೀನಾಂ ನಾಮಧೇಯಾನಿ ವಿದ್ವದ್ಭಿಃ ಸಂಜ್ಞಿತಾನಿ ವೈ ।
ದರ್ಶಯೇತಾಮಥಾತ್ಮಾನಂ ಸೂರ್ಯಾಚಂದ್ರಮಸಾವುಭೌ ॥ ೫೬ ॥

---

೫೨. ಹೀಗೆ ಸಂಗತವಾಗಿರುವ ಸೂರ್ಯ-ಚಂದ್ರ ಬಿಂಬಗಳ ವಿಭಾಗ ಕಾಲವು ಶುಕ್ಲ ಪಕ್ಷದ ಪಾಡ್ಯಮಿ ತಿಥಿಯಲ್ಲಿ ಆಗುವುದು. ಆಗ ಚಂದ್ರಬಿಂಬವು ಸೂರ್ಯನಿಂದ ಪ್ರತ್ಯೇಕವಾಗುವುದು.

೫೩. ಆ ಪಾಡ್ಯಮಿಯು ದರ್ಶದಲ್ಲಿ ಮಾಡುವ ಇಷ್ಟಿಯಲ್ಲಿ ವಷಟ್ಕಾರವನ್ನು ಉಚ್ಚರಿಸಿ ಆಹುತಿಯನ್ನು ಹೋಮಮಾಡುವ ಕಾಲವಾಗಿದೆ. ಅಮಾವಾಸ್ಯಾ ಪರ್ವಕಾಲವನ್ನು ಋತುಗಳ ಆದಿಯೆಂದು ಭಾವಿಸಬೇಕು.

೫೪. ಕೃಷ್ಣಪಕ್ಷಗಳಲ್ಲಿ ನಷ್ಟ ಚಂದ್ರವಾದ ಅಮಾವಾಸ್ಯಾತಿಥಿಯನ್ನು ದಿವಾಪರ್ವವೆಂದು ಹೇಳುವರು. ಆದುದರಿಂದ ಸೂರ್ಯನು ಅಮಾವಾಸ್ಯಾತಿಥಿಯನ್ನು ದರ್ಶರೂಪವಾಗಿ ಗ್ರಹಿಸುವುದು ದಿವಾಕಾಲದಲ್ಲಿಯೇ ಆಗಿರುವುದು.

೫೫. ಆದುದರಿಂದ ಹಗಲಿನಲ್ಲಿ ಕ್ಷೀಣ ಚಂದ್ರ ಅಮಾವಾಸ್ಯಾ ತಿಥಿಯನ್ನು ಹೊಂದಿ ಕಲಾವೃದ್ಧಿ ಹಾನಿಗಳಿಂದ ಕೂಡಿದ ಚಂದ್ರನನ್ನು ಸೂರ್ಯನು ಗ್ರಹಿಸುವನು.

೫೬. ಅಲ್ಲಿಂದ ಮುಂದೆ ಪ್ರಾರಂಭವಾಗುವ ಪ್ರತಿಪತ್ ಮುಂತಾದ ತಿಥಿಗಳ ಹೆಸರನ್ನು ವಿದ್ವಾಂಸರು ಸಂಕೇತಮಾಡಿರುವರು. ದರ್ಶಕಾಲದಲ್ಲಿ ಚಂದ್ರ ಸೂರ್ಯರು ತಮ್ಮ ಸ್ವರೂಪವನ್ನು ಒಂದಾಗಿ ತೋರಿಸುವರು.

ನಿಷ್ಕ್ರಾಮತ್ಯಥ ತೇನೈವ ಕ್ರಮಶಃ ಸೂರ್ಯಮಂಡಲಾತ್ ।
ದ್ವಿಲವೋನಮಹೋರಾತ್ರಂ ಭಾಸ್ಕರಂ ಸ್ಪೃಶತೇ ಶಶೀ ॥ ೫೭ ॥

ಸ ತದಾ ಹ್ಯಾಹುತೇಃ ಕಾಲೋ ದರ್ಶಸ್ಯ ತು ವಷಟ್ಕ್ರಿಯಾ ।
ಕುಹೇತಿ ಕೋಕಿಲೇನೋಕ್ತೋ ಯಃ ಸ ಕಾಲಃ ಸಮಾಪ್ಯತೇ ॥ ೫೮ ॥

ತತ್ಕಾಲಸಮ್ಮಿತಾ ಯಸ್ಮಾದಮಾವಾಸ್ಯಾ ಕುಹೂಃ ಸ್ಮೃತಾ ।
ಸಿನೀವಾಲೀಪ್ರಮಾಣಸ್ತು ಕ್ಷೀಣಶೇಷೋ ನಿಶಾಕರಃ ॥ ೫೯ ॥

ಅಮಾವಾಸ್ಯಾಂ ವಿಶತ್ಯರ್ಕಸ್ಸಿನೀವಾಲೀ ತತಃ ಸ್ಮೃತಾ ।
ಅನುಮತ್ಯಾಶ್ಚ ರಾಕಾಯಾಃ ಸಿನೀವಾಲ್ಯಾಃ ಕುಹೂಂ ವಿನಾ ॥ ೬೦ ॥

ಏತಾಸಾಂ ದ್ವಿಲವಃ ಕಾಲಃ ಕುಹೂಮಾತ್ರಂ ಕುಹೂಃ ಸ್ಮೃತಾ ।
ಚಂದ್ರಸೂರ್ಯವ್ಯತೀಪಾತೇ ಸಂಗತೇ ಪೂರ್ಣಿಮಾಂತರೇ ॥ ॥ ೬೧ ॥

---

೫೭. ಅಹೋರಾತ್ರಗಳಲ್ಲಿ ಎರಡು ಲವಗಳಿಗೆ ನ್ಯೂನವಾದ ಅಲ್ಪಕಾಲದಲ್ಲಿ ಚಂದ್ರನು ಸೂರ್ಯನನ್ನು ಸ್ಪರ್ಶಮಾಡಿ ಸೂರ್ಯಮಂಡಲದಿಂದ ಮೆಲ್ಲಗೆ ಹೊರಕ್ಕೆ ಹೊರಡುವನು.

೫೮. ಅಮಾವಾಸ್ಯೆಯಲ್ಲಿ ಮಾಡುವ ದರ್ಶೇಷ್ಟಿಯು ವಷಟ್ಕಾರ ಪೂರ್ವಕವಾಗಿ ಮಾಡುವ ಆಹುತಿ ಹೋಮಕ್ಕೆ ಅದು ಮುಖ್ಯವಾದ ಕಾಲವು, ಆ ಕಾಲವು ಕೋಗಿಲೆಯು ಕೂಗುವ ಕುಹೂ ಎಂಬ ಧ್ವನಿಗೆ ಸಮಾನವಾಗಿ ಸೂಕ್ಷ್ಮವಾಗಿರುವುದು.

೫೯. ಕೋಗಿಲೆಯು ಕೂಗುವ ಕುಹೂಧ್ವನಿಗೆ ತುಲ್ಯವಾಗಿರುವುದರಿಂದ ಅಮಾವಾಸ್ಯಾತಿಥಿಯನ್ನು ಕುಹೂ ಎಂದು ಕರೆಯುವರು, ಚಂದ್ರನು ಕ್ಷೀಣನಾಗಿ ಅಲ್ಪಮಾತ್ರ ಉಳಿದಿರುವುದರಿಂದ ದೃಷ್ಟಚಂದ್ರವೆಂಬ ಸಿನೀವಾಲೀ ತಿಥಿಯು ಅಷ್ಟೇ ಪರಿಮಾಣವುಳ್ಳದ್ದಾಗಿದೆ.

೬೦. ಸೂರ್ಯನು ಅಮಾವಾಸ್ಯಾ ತಿಥಿಯನ್ನು ಪ್ರವೇಶಿಸುವನಾದ್ದರಿಂದ ಆ ತಿಥಿಗೆ ಸಿನೀವಾಲಿಯೆಂಬ ಅನ್ವರ್ಥ ನಾಮವು ಬಂದಿರುವುದು, ಹೀಗೆ ಅನುಮತಿ, ರಾಕಾ ಮತ್ತು ಸಿನೀವಾಲೀತಿಥಿಗಳ ಮುಖ್ಯ ಪರ್ವಕಾಲವು ಎರಡು ಲವ ಪರಿಮಾಣದಿಂದ ಕೂಡಿರುವುದು.

೬೧. ಕುಹೂತಿಥಿಯೊಂದನ್ನು ಹೊರತು ಮಿಕ್ಕಾದ ಅನುಮತಿ ಮುಂತಾದುವು

**ಪ್ರತಿಪತ್ ಪ್ರತಿಪದ್ಯೇತ ಪರ್ವಕಾಲೋ ದ್ವಿಮಾತ್ರಕಃ ।**
**ಕಾಲಃ ಕುಹೂಸಿನೀವಾಲ್ಯೋಃ ಸಾಮುದ್ರಸ್ಯ ತು ಮಧ್ಯತಃ ॥ ೬೨ ॥**

**ಅರ್ಕಾಗ್ನಿಮಂಡಲೇ ಸೋಮೇ ಪರ್ವಕಾಲಃ ಕಲಾಸಮಃ ।**
**ಏವಂ ಸ ಶುಕ್ಲಪಕ್ಷೇ ವೈ ರಜನ್ಯಾಃ ಪರ್ವಸಂಧಿಷು ॥ ೬೩ ॥**

**ಸಂಪೂರ್ಣಮಂಡಲಃ ಶ್ರೀಮಾನ್ ಚಂದ್ರಮಾ ಉಪರಜ್ಯತೇ ।**
**ಯಸ್ಮಾದಾಪ್ಯಾಯತೇ ಸೋಮಃ ಪಂಚದಶ್ಯಾಂ ತು ಪೂರ್ಣಿಮಾ ॥ ೬೪ ॥**

**ದಶಭಿಃ ಪಂಚಭಿಶ್ಚೈವ ಕಲಾಭಿರ್ದಿವಸಕ್ರಮಾತ್ ।**
**ತಸ್ಮಾತ್ಕಲಾಃ ಪಂಚದಶ ಸೋಮೇನಾಸ್ಯ ತು ಷೋಡಶೀ ॥ ೬೫ ॥**

---

ಗಳಿಗೆ ದ್ವಿಲವಕಾಲವು. ಕುಹೂವಿಗೆ ಕುಹೂವರ್ಣೋಚ್ಚಾರಣ ಪರಿಮಿತವಾದ ಕಾಲವು. ಪೂರ್ಣಿಮೆಯ ಮಧ್ಯದಲ್ಲಿ ಚಂದ್ರಸೂರ್ಯರ ವ್ಯತೀಪಾತ ಯೋಗವು ಪ್ರಾಪ್ತವಾಗುವುದು.

೬೨. ಆ ಪೂರ್ಣಿಮೆಯ ಮುಂದಿನ ಪ್ರತಿಪತ್ ತಿಥಿಯು ಮಾತ್ರಾದ್ವಯದಿಂದ ಪರಿಮಿತವಾದ ಪರ್ವಕಾಲವಾಗುವುದು, ಕುಹು-ಸಿನೀವಾಲಿಗಳ ಮುಖ್ಯಕಾಲವು ಚಂದ್ರ ಸೂರ್ಯರು ಸಮುದ್ರಸಂಗತರಾಗುವ ಮಧ್ಯಕಾಲವಾಗಿರುವುದು.

೬೩. ತೇಜಃ ಕಲೆಗಳ ಪರಸ್ಪರ ಸಂಗಮದಿಂದ ಪರ್ವಕಾಲಗಳು ಆಗಿರುವುದರಿಂದ ಸೂರ್ಯ-ಅಗ್ನಿ-ಚಂದ್ರಮಂಡಲಗಳ ಕಲಾಸಂಗಮನತುಲ್ಯವಾಗಿ ಪರ್ವಕಾಲವಿರುವುದಾಗಿದೆ, ಹೀಗೆ ಪರ್ವಸಂಧಿಗಳಂತಿರುವ ಶುಕ್ಲಪಕ್ಷದ ತಿಥಿಗಳಲ್ಲಿ ರಾತ್ರಿಯಲ್ಲಿ ಚಂದ್ರನು ಪ್ರಕಾಶಿಸುವನು.

೬೪. ಆಗ ಚಂದ್ರನು ದಿನೇ ದಿನೇ ವೃದ್ಧಿಹೊಂದಿ ಸಂಪೂರ್ಣವಾದ ಮಂಡಲವನ್ನು ಹೊಂದಿ ಸಂತುಷ್ಟನಾಗುವನು. ಪೂರ್ಣಿಮಾತಿಥಿಯ ಜಲಮಯದ ಬಿಂಬವು ಸಂಪೂರ್ಣವಾಗಿ ಪರಿಪುಷ್ಟವಾಗಿರುವುದು.

೬೫. ದಿವಸಗಳ ಕ್ರಮದಿಂದ ಹದಿನೈದು ಕಲೆಗಳಿಂದ ಚಂದ್ರಮಂಡಲಕ್ಕೆ ಆಪ್ಯಾಯನವುಂಟಾಗುವುದು, ಆದುದರಿಂದ ಚಂದ್ರನ ಸ್ವಾಭಾವಿಕವಾದ ಕಲೆಯು ಒಂದು ಹದಿನಾರನೆಯದಾಗಿಯೂ ಮಿಕ್ಕಕಲೆಗಳು ಹದಿನೈದು ಸಂಖ್ಯೆಯಿಂದಲೂ ಇರುತ್ತವೆ.

ತಸ್ಮಾತ್ಸೋಮಸ್ಯ ಭವತಿ ಪಂಚದಶ್ಯಾಮುಷಾಂ ಕ್ಷಯಃ ।
ಇತ್ಯೇತೇ ಪಿತರೋ ದೇವಾಃ ಸೋಮಪಾಃ ಸೋಮವರ್ಧನಾಃ ॥ ೬೬ ॥

ಆರ್ತವಾ ಹ್ಯೃತವೋ ಹ್ಯೃದ್ಧಾ ದೇವಾಸ್ತಾನ್ ಭಾವಯಂತಿ ವೈ ।
ಅತಃ ಪಿತೄನ್ ಪ್ರವಕ್ಷ್ಯಾಮಿ ಮಾಸಶ್ರಾದ್ಧಭುಜಸ್ತು ಯೇ ॥ ೬೭ ॥

ತೇಷಾಂ ಗತಿಂ ಸತತ್ತ್ವಂ ಚ ಪ್ರಾಪ್ತಿಂ ಶ್ರಾದ್ಧಸ್ಯ ಚೈವ ಹಿ ।
ನ ಮೃತಾನಾಂ ಗತಿಃ ಶಕ್ಯಾ ಜ್ಞಾತುಂ ನ ಪುನರಾಗತಿಃ ॥ ೬೮ ॥

ತಪಸಾಽಪಿ ಪ್ರಸಿದ್ಧೇನ ಕಿಂ ಪುನರ್ಮಾಂಸಚಕ್ಷುಷಾ ।
ಅನುದೇವಪಿತೄನೇತೇ ಪಿತರೋ ಲೌಕಿಕಾಃ ಸ್ಮೃತಾಃ ॥ ೬೯ ॥

ದೇವಾಃ ಸೌಮ್ಯಾಶ್ಚ ಕಾವ್ಯಾಶ್ಚ ಅಯಜ್ವಾನೋ ಹ್ಯಯೋನಿಜಾಃ ।
ದೇವಾಸ್ತೇ ಪಿತರಸ್ಸರ್ವೇ ದೇವಾಸ್ತಾನ್ ಭಾವಯಂತ್ಯುತ ॥ ೭೦ ॥

---

೬೬. ಚಂದ್ರನಲ್ಲಿ ಹದಿನೈದು ಕಲೆಗಳು ಪೂರ್ಣಿಮಾತಿಥಿಯಲ್ಲಿ ಒಟ್ಟುಗೂಡಿರುವುದರಿಂದ ಜಲಾಂಶಕ್ಕೆನಿಧಿಯಾಗಿ ಚಂದ್ರಮಂಡಲವು ಪರಿವರ್ತಿಸುವುದು. ಈರೀತಿಯಾಗಿ ಚಂದ್ರನ ಕಲೆಗಳನ್ನು ಪಾನಮಾಡಿದ ಮತ್ತು ಚಂದ್ರಕಲಾರಸದಿಂದ ವೃದ್ಧಿಹೊಂದುವ ಪಿತೃದೇವತೆಗಳನ್ನು ಹೇಳಿರುತ್ತೇನೆ.

೬೭. ಋತುದೇವತೆಗಳು ಆರ್ತವರೆಂಬ ಪಿತೃಗಳನ್ನು ಸಮೃದ್ಧಿಯಾಗಿ ಭರಣಮಾಡುವರು, ಮುಂದೆ ಮಾಸಶ್ರಾದ್ಧದ ಹವಿಸ್ಸನ್ನು ಭುಂಜಿಸುವ ಪಿತೃಗಳನ್ನು ಹೇಳುತ್ತೇನೆ.

೬೮. ಆ ಪಿತೃಗಳ ಗತಿ ಮತ್ತು ತಾತ್ತ್ವಿಕಸ್ವರೂಪ ಶ್ರಾದ್ಧದ ಹವಿಸ್ಸಿನ ಪ್ರಾಪ್ತಿ ಇವುಗಳನ್ನು ಹೇಳುತ್ತೇನೆ. ಆದರೆ ಮೃತರಾದವರಗತಿ ಆಗತಿಗಳನ್ನು ತಿಳಿಸುವುದು ಶಕ್ಯವಲ್ಲ.

೬೯. ಉತ್ತಮಸಾಧನವಾದ ತಪಸ್ಸಿನಿಂದಕೂಡ ಮೃತಪ್ರಾಣಿಗಳ ಗಮನಾಗಮನಗಳನ್ನು ತಿಳಿಯುವುದು ಅಶಕ್ಯವು. ಮಾಂಸಚಕ್ಷುಸ್ಸಿನಿಂದ ಹೇಗೆ ತಾನೆ ತಿಳಿಯಲಾದೀತು. ಲೌಕಿಕ ಪಿತೃಗಳು ಪಿತೃದೇವತೆವರ್ಗವನ್ನು ಅನುಸರಿಸಿಕೊಂಡಿರುವರೆಂದು ಪ್ರಾಜ್ಞರು ತಿಳಿದಿರುವರು.

೭೦. ಸೌಮ್ಯ, ಕಾವ್ಯರೆಂಬ ಪಿತೃಗಳು ಅಯೋನಿಜರಾದ ಪಿತೃದೇವಗಣಕೆ ಸೇರಿದವರು. ಅವರೆಲ್ಲರು ದೇವತೆಗಳನ್ನು ಸ್ತುತಿಸಿ ಸೇವಿಸುತ್ತಿರುವರು.

ಮನುಷ್ಯಪಿತರಶ್ಚೈವ ತೇಭ್ಯೋಽನ್ಯೇ ಲೌಕಿಕಾಃ ಸ್ಮೃತಾಃ ।
ಪಿತಾ ಪಿತಾಮಹಶ್ಚಾಪಿ ತಥಾ ಯಃ ಪ್ರಪಿತಾಮಹಃ ॥ ೭೧ ॥

ಯಜ್ವಾನೋ ಯೇ ತು ಸೋಮೇನ ಸೋಮವಂತಸ್ತು ತೇ ಸ್ಮೃತಾಃ ।
ಯೇ ಯಜ್ವಾನೋ ಹವಿರ್ಯಜ್ಞೈಃ ತೇ ವೈ ಬರ್ಹಿಷದಃ ಸ್ಮೃತಾಃ॥೭೨॥

ಅಗ್ನಿಷ್ವಾತ್ತಾಃ ಸ್ಮೃತಾಸ್ತೇಷಾಂ ಹೋಮಿನೋಽಯಾಜ್ಯಯಾಜಿನಃ ।
ತೇಷಾಂ ತು ಧರ್ಮಸಾಧರ್ಮ್ಯಾತ್ ಸ್ಮೃತಾಃ ಸಾಯುಜ್ಯಗಾ ದ್ವಿಜೈಃ ॥ ೭೩ ॥

ಯೇ ಚಾಪ್ಯಾಶ್ರಮಧರ್ಮಾಣಾಂ ಪ್ರಸ್ಥಾನೇಷು ವ್ಯವಸ್ಥಿತಾಃ ।
ಅಂತೇ ತು ನಾವಸೀದಂತಿ ಶ್ರದ್ಧಾಯುಕ್ತಾಸ್ತು ಕರ್ಮಸು ॥ ೭೪ ॥

ತಪಸಾ ಬ್ರಹ್ಮಚರ್ಯೇಣ ಯಜ್ಞೇನ ಪ್ರಜಯಾ ಚ ವೈ ।
ಶ್ರಾದ್ಧೇನ ವಿದ್ಯಯಾ ಚೈವ ಪ್ರದಾನೇನ ಚ ಸಪ್ತಧಾ ॥ ೭೫ ॥

---

೭೧. ಆ ಪಿತೃದೇವಗಣವಲ್ಲದೆ ಲೌಕಿಕರಾದ ಮನುಷ್ಯಜಾತಿಯ ಪಿತೃಗಳು ಬೇರೆ ಇರುವರು. ಅವರು ಪಿತೃ, ಪಿತಾಮಹ, ಪ್ರಪಿತಾಮಹರೆಂದು ಮೊದಲಾಗಿ ವರ್ಗರೂಪರಾಗಿ ಸ್ಮರಿಸಲ್ಪಟ್ಟಿರುವರು.

೭೨. ಅವರಲ್ಲಿ ಸೋಮದ್ರವ್ಯದಿಂದ ಯಾಗಮಾಡಿದವರು ಸೌಮ್ಯಪಿತೃಗಳೆಂದು ಹವಿರ್ಯಜ್ಞವನ್ನು ಮಾತ್ರ ಮಾಡಿದವರು ಬರ್ಹಿಷದಪಿತೃಗಳೆಂದೂ ಪ್ರಸಿದ್ಧರಾಗಿರುವರು.

೭೩. ಅವರಲ್ಲಿ ಯಾಗಮಾಡಲು ಅರ್ಹತೆ ಇಲ್ಲದೇ ಹೋಮಕ್ಕೆ ಮಾತ್ರ ಭಾಗಿಗಳಾಗಿರುವವರು ಅಗ್ನಿಷ್ವಾತ್ತಪಿತೃಗಳೆಂದು ಪ್ರಸಿದ್ಧರಾಗಿರುವರು. ಅವರು ಹೆಚ್ಚಾಗಿ ಮನುಷ್ಯರಧರ್ಮದಿಂದ ಕೂಡಿರುವುದರಿಂದ ದ್ವಿಜಸಾಯುಜ್ಯವನ್ನು ಹೊಂದಿರುವರು.

೭೪. ಆಶ್ರಮಧರ್ಮಗಳ ವಿವಿಧ ಪಂಥಗಳಲ್ಲಿ ನಿಯಮವಂತರಾಗಿ ಸತ್ಕರ್ಮಗಳಲ್ಲಿ ಶ್ರದ್ಧೆಯುಳ್ಳವರಾಗಿ ಕೊನೆಯವರೆಗೂ ಇದ್ದು ನಶಿಸುವವರು ಕೆಲವು ಮಂದಿ ಇರುವರು.

೭೫. ತಪಸ್ಸು, ಬ್ರಹ್ಮಚರ್ಯ, ಯಜ್ಞ, ಪ್ರಜೆ, ಶ್ರಾದ್ಧ, ವಿದ್ಯೆ, ದಾನ ಎಂದು ಸತ್ಕರ್ಮಗಳು ಪಿತೃಸಾಯುಜ್ಯಕ್ಕೆ ಸಾಧನವಾಗಿ ಏಳು ವಿಧಗಳಾಗಿವೆ.

ಕರ್ಮಸ್ವೇತೇಷು ಯೇ ಯುಕ್ತಾ ಭವಂತ್ಯಾದೇಹಪಾತನಾತ್ ।
ದೇವೈಸ್ತೈಃ ಪಿತೃಭಿಃ ಸಾರ್ಧಂ ಸೂಕ್ಷ್ಮೈಃ ಸೋಮಯಾಜನೈಃ ॥೭೬॥

ಸ್ವರ್ಗತಾ ದಿವಿ ಮೋದಂತೇ ಪಿತೃವತ್ತ ಉಪಾಸತೇ ।
ತೇಷಾಂ ನಿವಾಪೇ ದತ್ತೇ ತು ತತ್ಕುಲೀನೈಶ್ಚ ಬಂಧುಭಿಃ ॥ ೭೭ ॥

ಮಾಸಶ್ರಾದ್ಧಭುಜಸ್ತೃಪ್ತಿಂ ಲಭಂತೇ ಸೋಮಲೌಕಿಕಾಃ ।
ಏತೇ ಮನುಷ್ಯಪಿತರೋ ಮಾಸಶ್ರಾದ್ಧಭುಜಸ್ತು ಯೇ ॥ ೭೮ ॥

ತೇಭ್ಯೋಽಪರೇ ತು ಯೇಽಪ್ಯನ್ಯೇ ಸಂಕೀರ್ಣಾಃ ಕರ್ಮಯೋನಿಷು ।
ಭ್ರಷ್ಟಾಶ್ಚಾಶ್ರಮಧರ್ಮೇಭ್ಯಃ ಸ್ವಧಾಸ್ವಾಹಾವಿವರ್ಜಿತಾಃ ॥ ೭೯ ॥

ಭಿನ್ನದೇಹಾ ದುರಾತ್ಮಾನಃ ಪ್ರೇತಭೂತಾ ಯಮಕ್ಷಯೇ ।
ಸ್ವಕರ್ಮಾಣ್ಯನು ಶೋಚಂತೋ ಯಾತನಾಸ್ಥಾನಮಾಗತಾಃ ॥ ೮೦ ॥

---

೭೬. ಈ ಕರ್ಮಗಳಲ್ಲಿ ಶರೀರಪತನವಾಗುವವರೆಗೂ ನಿಯಮವಂತರಾಗಿದ್ದು ಕಡೆಯಲ್ಲಿ ಅವರು ಯಾಗಾದಿ ಸೂಕ್ಷ್ಮಪರಿಣಾಮಗಳಿಂದ ಪಿತೃಗಣವನ್ನು ಸೇರುವರು.

೭೭. ಅವರು ಸ್ವರ್ಗಕ್ಕೆ ಹೋಗಿ ಅಲ್ಲಿ ಪಿತೃಗಳಿಗೆ ಉಚಿತವಾದ ಸೌಖ್ಯವನ್ನನು ಭವಿಸುವರು. ಮತ್ತು ಅವರ ಬಂಧುಗಳು ಕೊಟ್ಟಿರುವ ತರ್ಪಣವನ್ನು ಹೊಂದುವರು.

೭೮. ಅವರು ಸೋಮಲೋಕದಲ್ಲಿ ಇದ್ದು ಮಾಸಶ್ರಾದ್ದದ ಹವಿಸ್ಸನ್ನು ಭುಂಜಿಸಿ ತೃಪ್ತಿಯನ್ನನುಭವಿಸುವರು. ಇವರು ಮಾಸಶ್ರಾದ್ಧಭೋಜಿಗಳಾದ ಮನುಷ್ಯ ಜಾತಿಯ ಪಿತೃವರ್ಗದವರು.

೭೯. ಇವರಿಗಿಂತಲೂ ಬೇರೆಯಾಗಿ ಕರ್ಮಾಧೀನವಾದ ನಾನಾ ವಿಧದ ಜನ್ಮ ಗಳಲ್ಲಿ ಸಂಕೀರ್ಣರಾಗಿ ಹುಟ್ಟಿ ಆಶ್ರಮಧರ್ಮಗಳಿಂದ ಭ್ರಷ್ಟರಾಗಿ ಸ್ವಧಾಕಾರ ಸ್ವಾಹಾ ಕಾರಗಳಿಂದ ವರ್ಜಿತರಾದವರು ಒಂದುಬಗೆ ಇರುವರು.

೮೦. ಅವರು ಭಿನ್ನಭಿನ್ನವಾದ ದೇಹ ಶೋಚನೀಯವಾದ ಮನಸ್ಸು ಇವು ಗಳಿಂದ ಕೂಡಿ ಪ್ರೇತಜನ್ಮವನ್ನೆತ್ತಿ ಯಮಾಲಯದಲ್ಲಿ ಆಯಾಯ ಯಾತನೆಯ ಸ್ಥಾನಕ್ಕೆ ಹೋಗಿ ತಮ್ಮ ಕರ್ಮಾನುಸಾರವಾಗಿ ಶೋಕವನ್ನನುಭವಿಸುವರು.

ದೀರ್ಘಾಯುಷೋಽತಿಶುಷ್ಕಾಶ್ಚ ಶ್ಮಶ್ರುಲಾಶ್ಚ ವಿವಾಸಸಃ ।
ಕ್ಷುತ್ಪಿಪಾಸಾಪರೀತಾಶ್ಚ ವಿದ್ರವಂತಸ್ತತಸ್ತತಃ ॥ ೮೧ ॥

ಸರಿತ್ಸರಸ್ತಟಾಗಾನಿ ವಾಪೀಶ್ಚಾಪ್ಯುಪಲಿಪ್ಸವಃ ।
ಪರಾನ್ನಾನಿ ಚ ಲಿಪ್ಸಂತಃ ಕಾಲ್ಯಮಾನಾಸ್ತತಸ್ತತಃ ॥ ೮೨ ॥

ಸ್ಥಾನೇಷು ಪಾತ್ಯಮಾನಾಶ್ಚ ಯಾತನಾಶ್ಚ ಪುನಃ ಪುನಃ ।
ಶಾಲ್ಮಲೇ ವೈತರಣ್ಯಾಂ ಚ ಕುಂಭೀಪಾಕೇ ತಥೈವ ಚ ॥ ೮೩ ॥

ಕರಂಭವಾಲುಕಾಯಾಂ ಚ ಅಸಿಪತ್ರವನೇ ತಥಾ ।
ಶಿಲಾಸಂಪೇಷಣೇ ಚೈವ ಪಾತ್ಯಮಾನಾಃ ಸ್ವಕರ್ಮಭಿಃ ॥ ೮೪ ॥

ತತ್ರಸ್ಥಾನಾಂ ಹಿ ತೇಷಾಂ ವೈ ದುಃಖಿತಾನಾಮನಾಶಿನಾಮ್ ।
ತೇಷಾಂ ಲೋಕಾಂತರಸ್ಥಾನಾಂ ಬಾಂಧವೈರ್ನಾಮಗೋತ್ರತಃ ॥ ೮೫ ॥

---

೮೧. ಅವರು ದೀರ್ಘವಾದ ಆಯುಷ್ಯವನ್ನು ಹೊಂದಿ ಅತಿಯಾಗಿ ಕ್ಲೇಶದಿಂದ ಒಣಗಿದವರು, ಗಡ್ಡಮೀಸೆಯುಳ್ಳವರು, ದಿಗಂಬರರು, ಹಸಿವು ಬಾಯಾರಿಕೆಗಳಿಂದ ಪೀಡಿತರೂ ಆಗಿ ಇಲ್ಲಿಂದಲ್ಲಿಗೆ ದುಃಖದಿಂದ ಓಡಾಡುತ್ತಿರುವರು.

೮೨. ಅವರು ನದಿ, ಸರೋವರ, ಕೊಳ, ಬಾವಿ, ಮುಂತಾದ ಸ್ವತಂತ್ರ ವಿಹಾರಸ್ಥಾನಗಳನ್ನು ಅಪೇಕ್ಷಿಸುವವರೂ, ಪರಾನ್ನವನ್ನು ಅತಿ ಲೋಭದಿಂದ ಬಯಸುವವರೂ ಆಗಿ ಕರ್ಮವಾಸನೆಯಿಂದ ಸೆಳೆಯಲ್ಪಡುತ್ತಿರುವರು.

೮೩. ಅವರು ಕರ್ಮಾನುಸಾರವಾದ ಯಾತನೆಗಳನ್ನನುಭವಿಸಲು ಶಾಲ್ಮಲ, ಕುಂಭೀಪಾಕ, ವೈತರಣೀ ಮುಂತಾದ ಸ್ಥಾನಗಳಲ್ಲಿ ಮತ್ತೆ ಮತ್ತೆ ಕೆಡವಲ್ಪಡುವರು.

೮೪. ಮತ್ತು ಕಾದಿರುವ ಮರಳಿನ ರಾಶಿಯಲ್ಲಿಯೂ, ಗರಗಸದ ಪೀಡೆಯುಳ್ಳ ಅಸಿಪತ್ರವೆಂಬ ನರಕದಲ್ಲೂ, ಶಿಲಾಯಂತ್ರದಲ್ಲಿಯೂ, ದುಷ್ಕರ್ಮಬಲದಿಂದ ನಾನಾ ವಿಧವಾಗಿ ಪೀಡಿಸಲ್ಪಡುವರು.

೮೫. ಅಲ್ಲಿ ಈ ವಿಧವಾಗಿ ಭೋಜನವಿಲ್ಲದೇ ದುಃಖಿತರಾಗಿರುವ, ಲೋಕಾಂತರದಲ್ಲಿರುವ ಪಿತೃಗಳಿಗೆ ಈ ಲೋಕದಲ್ಲಿರುವ ಅವರವರ ಬಂಧುಗಳು ನಾಮಗೋತ್ರವನ್ನುಚ್ಚರಿಸಿ ಪಿಂಡದಾನವನ್ನು ಮಾಡಬೇಕು.

ಭೂಮಾವಸವ್ಯಂ ದರ್ಭೇಷು ದತ್ತಾಃ ಪಿಂಡಾಸ್ತ್ರಯಸ್ತು ವೈ ।
ಯಾಂತಿ ತಾಂಸ್ತರ್ಪಯಂತೇ ಚ ಪ್ರೇತಸ್ಥಾನೇಷ್ವಧಿಷ್ಠಿತಾನ್ ॥ ೮೬ ॥

ಅಪ್ರಾಪ್ತಾ ಯಾತನಾಸ್ಥಾನಂ ಪ್ರಭ್ರಷ್ಟಾ ಯೇ ಚ ಪಂಚಧಾ ।
ಪಶ್ಚಾದ್ಯೇ ಸ್ಥಾವರಾಂತೇ ವೈ ಜಾತಾ ನೀಚೈಃ ಸ್ವಕರ್ಮಭಿಃ ॥ ೮೭ ॥

ನಾನಾರೂಪಾಸ್ತು ಜಾಯಂತೇ ತಿರ್ಯಗ್ಯೋನಿಷ್ವಯೋನಿಷು
ಯದಾಹಾರಾ ಭವಂತ್ಯೇತೇ ತಾಸು ತಾಸ್ವಿಹ ಯೋನಿಷು ॥ ೮೮ ॥

ತಸ್ಮಿಂಸ್ತಸ್ಮಿಂಸ್ತದಾಹಾರೇ ಶ್ರಾದ್ಧಂ ದತ್ತಂ ಪ್ರತಿಷ್ಠತೇ
ಕಾಲೇ ನ್ಯಾಯಾಗತಂ ಪಾತ್ರೇ ವಿಧಿನಾ ಪ್ರತಿಪಾದಿತಮ್ ॥ ೮೯ ॥

ಪ್ರಾಪ್ನೋತ್ಯನ್ನಂ ಯಥಾದತ್ತಂ ಜಂತುರ್ಯತ್ರಾವತಿಷ್ಠತೇ ।
ಯಥಾ ಗೋಷು ಪ್ರಣಷ್ಟಾಸು ವತ್ಸೋ ವಿಂದತಿ ಮಾತರಮ್ ॥ ೯೦ ॥

---

೮೬. ಭೂಮಿಯಲ್ಲಿ ಅಪಸವ್ಯದಿಂದ ದರ್ಭೆಗಳ ಮೇಲೆ ಕೊಡಲ್ಪಟ್ಟ ಮೂರು ಪಿಂಡಗಳು ಪ್ರೇತಸ್ಥಾನಗಳಲ್ಲಿರುವ ಆ ಜೀವರನ್ನು ತೃಪ್ತಿಪಡಿಸುತ್ತವೆ.

೮೭. ಕೆಲವರು ಯಾತನಾಸ್ಥಾನಕ್ಕೆ ಹೋಗದೆ ಭ್ರಷ್ಟರಾಗಿ ಸ್ಥಾವರದವರೆಗಿನ ನೀಚಜನ್ಮಗಳಲ್ಲಿ ಸ್ವಕರ್ಮಾನುಸಾರವಾಗಿ ಜನಿಸುವರು. ಅವರು ಅನೇಕ ವಿಧರಾಗಿರುವರು.

೮೮. ಇಂತಹ ಮರಣಹೊಂದಿದ ಪ್ರಾಣಿಗಳು ಅನೇಕ ವಿಧವಾದ ಪಶು, ಪಕ್ಷಿ ಮುಂತಾದ ತಿರ್ಯಕ್ ಜನ್ಮವನ್ನು ಹೊಂದಿ ಆಯಾ ಜನ್ಮಕ್ಕೆ ಉಚಿತವಾದ ಆಹಾರ ವಿಶೇಷವನ್ನು ಆಯಾಯ ಜನ್ಮದಲ್ಲಿ ಹೊಂದುವರು.

೮೯. ಶ್ರಾದ್ಧಕಾಲದಲ್ಲಿ ಸತ್ಪಾತ್ರದಲ್ಲಿ ಯಥಾವಿಧಿಯಾಗಿ ದಾನಮಾಡಿರುವ ಶ್ರಾದ್ಧಾನ್ನವು ಆಯಾಯ ಜಾತಿಗೆ ಅನುಗುಣವಾದ ಆಹಾರರೂಪವಾಗಿ ಪರಿಣಮಿಸಿ ಮೃತಪ್ರಾಣಿಯನ್ನು ತೃಪ್ತಿಪಡಿಸುತ್ತದೆ.

೯೦. ಮೃತವಾದ ಪ್ರಾಣಿಯು ಯಾವ ದೇಶ ಕಾಲದಲ್ಲಿದ್ದರೂ ಕೂಡ ಅವರ ಬಂಧುಗಳಿಂದ ದತ್ತವಾದ ಅನ್ನವು ಅನೇಕ ಗೋವುಗಳ ಗುಂಪಿನಲ್ಲಿ ಕರುವು ತನ್ನ ತಾಯಿಯನ್ನು ಹುಡುಕಿಕೊಂಡು ಹೋಗಿ ಸೇರುವಂತೆ ಪ್ರತ್ಯೇಕವಾಗಿ ಹೋಗಿ ಸೇರುವುದು.

ತಥಾ ಶ್ರಾದ್ಧೇಷು ದತ್ತಾನ್ನಂ ಮಂತ್ರೈಃ ಪ್ರಾಪಯತೇ ಪಿತೄನ್ ।
ಏವಂ ಹ್ಯವಿಫಲಂ ಶ್ರಾದ್ಧಂ ಶ್ರದ್ಧಾದತ್ತಂ ತು ಮಂತ್ರತಃ ॥ ೯೧ ॥

ಸನತ್ಕುಮಾರಃ ಪ್ರೋವಾಚ ಪಶ್ಯನ್ ದಿವ್ಯೇನ ಚಕ್ಷುಷಾ ।
ಗತಾಗತಜ್ಞಃ ಪ್ರೇತಾನಾಂ ಪ್ರಾಪ್ತಿಂ ಶ್ರಾದ್ಧಸ್ಯ ತೈಃ ಸಹ ॥ ೯೨ ॥

ಬಾಹ್ಲೀಕಾಶ್ಚೋಷ್ಮಪಾಶ್ಚೈವ ದಿವಾಕೀರ್ತ್ಯಾಶ್ಚ ತೇ ಸ್ಮೃತಾಃ ।
ಕೃಷ್ಣಪಕ್ಷಸ್ತ್ವಹಸ್ತ್ವೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ॥ ೯೩ ॥

ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಶ್ಚ ವೈ ।
ಋತ್ವಾರ್ತವಾರ್ಧಮಾಸಾಸ್ತು ಅನ್ಯೋಽನ್ಯಂ ಪಿತರಃ ಸ್ಮೃತಾಃ॥ ೯೪ ॥

ಇತ್ಯೇತೇ ಪಿತರೋ ದೇವಾ ಮನುಷ್ಯಪಿತರಶ್ಚ ಯೇ ।
ಪ್ರೀತೇಷು ತೇಷು ಪ್ರೀಯಂತೇ ಶ್ರಾದ್ಧಯುಕ್ತೇಷು ಕರ್ಮಸು ॥ ೯೫ ॥

---

೯೧. ಹೀಗೆ ಶ್ರದ್ಧಾಪೂರ್ವಕವಾಗಿ ಮಂತ್ರಪಠನಮಾಡಿ ಆಚರಿಸಿದಶ್ರಾದ್ಧವು ವ್ಯರ್ಥವಾಗುವುದಿಲ್ಲ. ಶ್ರಾದ್ಧದಲ್ಲಿ ಕೊಡಲ್ಪಟ್ಟಿರುವ ಅನ್ನವನ್ನು ಮಂತ್ರಗಳು ಆಯಾಯ ಪಿತೃಗಳ ಸಮೀಪಕ್ಕೆ ಒಯ್ಯುವುವು.

೯೨. ಸನತ್ಕುಮಾರ ಮಹರ್ಷಿಯು ದಿವ್ಯವಾದ ಜ್ಞಾನದೃಷ್ಟಿಯಿಂದ ಮೃತರಾದವರ ಗತಿ ಮತ್ತು ಆಗತಿಗಳನ್ನೂ ಶ್ರಾಧ್ಧಾನ್ನದ ಪ್ರಾಪ್ತಿಯನ್ನೂ ಕಂಡು ಆಯಾಯ ಬಗೆಗಳನ್ನು ಉಪದೇಶಿಸಿರುವನು.

೯೩. ಆ ಪಿತೃಗಳು ಬಾಹ್ಲೀಕ, ಊಷ್ಮಪ ಮತ್ತು ದಿವಾಕೀರ್ತ್ಯ ಎಂದು ನಾನಾವಿಧವಾಗಿ ಸ್ಮರಿಸಲ್ಪಟ್ಟಿರುವರು. ಪಿತೃಗಣಕ್ಕೆ ಕೃಷ್ಣಪಕ್ಷವು ಹಗಲು, ಶುಕ್ಲಪಕ್ಷವು ನಿದ್ರೆಮಾಡುವ ರಾತ್ರಿಯು.

೯೪. ಹೀಗೆ ಋತು, ಆರ್ತವ, ಅರ್ಧಮಾಸ, ಮುಂತಾದುವುಗಳು ಪಿತೃದೇವರೂ ಮತ್ತು ದೇವಪಿತೃಗಳೂ ಅಲ್ಲದೇ ಪರಸ್ಪರ ಪಿತೃಸ್ವರೂಪರೂ ಆಗಿರುವರು.

೯೫. ಈ ರೀತಿಯಾಗಿ ಹಿಂದೆ ಹೇಳಿದ ಪಿತೃದೇವತೆಗಳೂ, ಮನುಷ್ಯಜಾತಿಯ ಪಿತೃಗಳೂ ಶ್ರಾಧ್ಧಕರ್ಮಗಳಲ್ಲಿ ಪ್ರೀತಿಯನ್ನು ಹೊಂದುವರು. ಪಿತೃದೇವತೆಗಳು ಪ್ರೀತರಾದರೆ ಮನುಷ್ಯಪಿತೃಗಳು ಪ್ರೀತರಾಗುವರು.

ಇತ್ಯೇಷ ವಿಜಯಃ ಪ್ರೋಕ್ತಃ ಪಿತೄಣಾಂ ಸೋಮಪಾಯಿನಾಮ್ ।
ಏವಂ ಪಿತೃಸತತ್ತ್ವಂ ಹಿ ಪುರಾಣೇ ನಿಶ್ಚಯಂ ಗತಮ್ ॥ ೯೬ ॥

ಇತ್ಯರ್ಕಪಿತೃಸೋಮಾನಾಮೈಲಸ್ಯ ಚ ಸಮಾಗಮಃ ।
ಸುಧಾಮೃತಸ್ಯ ಚ ಪ್ರಾಪ್ತಿಃ ಪಿತೄಣಾಂ ಚೈವ ತರ್ಪಣಮ್ ॥ ೯೭ ॥

ಪೂರ್ಣಾಮಾವಾಸ್ಯಯೋಃ ಕಾಲೋ ಯಾತನಾಸ್ಥಾನಮೇವ ಚ ।
ಸಮಾಸಾತ್ಕೀರ್ತಿತಸ್ತುಭ್ಯಮೇಷ ಸರ್ಗಃ ಸನಾತನಃ ॥ ೯೮ ॥

ವೈಶ್ವರೂಪ್ಯಂ ತು ಸರ್ಗಸ್ಯ ಕಥಿತಂ ಹ್ಯೇಕದೈಶಿಕಮ್ ।
ನ ಶಕ್ಯಂ ಪರಿಸಂಖ್ಯಾತುಂ ಶ್ರದ್ಧೇಯಂ ಭೂತಿಮಿಚ್ಛತಾ ॥ ೯೯ ॥

ಸ್ವಾಯಂಭುವಸ್ಯ ಹಿ ಹ್ಯೇಷ ಸರ್ಗಃ ಕ್ರಾಂತೋ ಮಯಾ ತು ವೈ ।
ವಿಸ್ತರೇಣಾನುಪೂರ್ವ್ಯಾ ಚ ಭೂಯಃ ಕಿಂ ವರ್ಣಯಾಮ್ಯಹಮ್ ॥ ೧೦೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇಽಷ್ಟಾವಿಂಶತಿತಮೋಽಧ್ಯಾಯಃ

---

೯೬. ಈ ರೀತಿಯಾಗಿ ಸೋಮಪಾನಮಾಡಿದ ಪಿತೃಗಳ ಗಣವು ಉಪದೇಶಿಸಲ್ಪಟ್ಟಿದೆ. ಪಿತೃಗಳ ತತ್ತ್ವವು ಈ ರೀತಿಯಾಗಿ ಪುರಾಣಗಳಲ್ಲಿ ನಿಶ್ಚಯಿಸಲ್ಪಟ್ಟಿದೆ.

೯೭. ಹೀಗೆ ಸೂರ್ಯ, ಚಂದ್ರ ಮತ್ತು ಪಿತೃಗಳೊಡನೆ ಐಲ ಪುರೂರವ ರಾಜನ ಸಮಾಗಮ, ಸ್ವಧಾರೂಪವಾದ ಅಮೃತದ ಪ್ರಾಪ್ತಿ, ಪಿತೃಗಳನ್ನುದ್ದೇಶಿಸಿ ಮಾಡುವ ತರ್ಪಣಗಳು ಇಲ್ಲಿ ನಿರೂಪಿಸಲ್ಪಟ್ಟಿವೆ.

೯೮. ಮತ್ತು ಪೂರ್ಣಿಮಾ, ಅಮಾವಾಸ್ಯೆಗಳ ಪರ್ವಕಾಲಗಳು ಯಾತನಾಸ್ಥಾನಗಳು ಮತ್ತು ಪುರಾತನವಾದ ಸೃಷ್ಟಿ ಮುಂತಾದುವುಗಳು ಸಂಗ್ರಹವಾಗಿ ವರ್ಣಿಸಲ್ಪಟ್ಟುವು.

೯೯. ಈ ಸೃಷ್ಟಿಪ್ರಪಂಚದ ನಾನಾವಿಧದ ಸ್ವರೂಪಗಳಲ್ಲಿ ಒಂದು ಅಂಶವು ಮಾತ್ರ ಹೇಳಲ್ಪಟ್ಟಿದೆ. ಅದನ್ನೆಲ್ಲಾ ಸಂಪೂರ್ಣವಾಗಿ ವರ್ಣಿಸಲು ಶಕ್ಯವಲ್ಲ. ಶ್ರೇಯಸ್ಸನ್ನು ಕಾಮಿಸುವವನು ಇದನ್ನು ಶ್ರದ್ಧೆಯಿಂದ ನಂಬಬೇಕು.

೧೦೦. ಸ್ವಾಯಂಭುವ ಮನುವಿನ ಸೃಷ್ಟಿಪ್ರಪಂಚವು ನನ್ನಿಂದ ವಿಸ್ತಾರವಾಗಿಯೂ ಪೂರ್ಣವಾಗಿಯೂ ವರ್ಣಿಸಲ್ಪಟ್ಟಿತು. ಇನ್ನು ಮುಂದೆ ನಿಮ್ಮ ಕುತೂಹಲವನ್ನನುಸರಿಸಿ ಯಾವುದನ್ನು ವರ್ಣಿಸಲಿ?

ಬ್ರಹ್ಮಾಂಡಪುರಾಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

# ಏಕೋನತ್ರಿಂಶೋಽಧ್ಯಾಯಃ

**ಋಷಿರುವಾಚ :—**
**ಚತುರ್ಯುಗಾನಿ ಯಾನ್ಯಾಸನ್ ಪೂರ್ವಂ ಸ್ವಾಯಂಭುವೇಽನ್ತರೇ !**
**ತೇಷಾಂ ನಿಸರ್ಗಂ ತತ್ತ್ವಂ ಚ ಶ್ರೋತುಮಿಚ್ಛಾಮಿ ವಿಸ್ತರಾತ್ ॥ ೧ ॥**

**ಸೂತ ಉವಾಚ :—**
**ಪೃಥಿವ್ಯಾದಿಪ್ರಸಂಗೇನ ಯನ್ಮಯಾ ಪ್ರಾಗುದೀರಿತಮ್ ।**
**ತೇಷಾಂ ಚತುರ್ಯುಗಂ ಹ್ಯೇತತ್ತದ್ವಕ್ಷ್ಯಾಮಿ ನಿಬೋಧತ ॥ ೨ ॥**

**ಸಂಖ್ಯಯೇಹ ಪ್ರಸಂಖ್ಯಾಯ ವಿಸ್ತರಾಚ್ಚೈವ ಸರ್ವಶಃ ।**
**ಯುಗಂ ಚ ಯುಗಭೇದಶ್ಚ ಯುಗಧರ್ಮಸ್ತಥೈವ ಚ ॥ ೩ ॥**

**ಯುಗಸಂಧ್ಯಾಂಶಕಶ್ಚೈವ ಯುಗಸಂಧಾನಮೇವ ಚ ।**
**ಷಟ್ಪ್ರಕಾಶಯುಗಾಖ್ಯೈಷಾ ತಾಂ ಪ್ರವಕ್ಷ್ಯಾಮಿ ತತ್ತ್ವತಃ ॥ ೪ ॥**

---

೧. ಶಾಂಶಪಾಯನಿ ಮುನಿಯು ಈ ರೀತಿಯಾಗಿ ಪ್ರಶ್ನಿಸಿದನು.—

ಪೂರ್ವದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಯಾವ ನಾಲ್ಕು ಯುಗಗಳಿದ್ದವೋ ಅವುಗಳ ಸೃಷ್ಟಿಯನ್ನೂ, ತತ್ತ್ವವನ್ನೂ ವಿಸ್ತಾರವಾಗಿ ಕೇಳಲು ಅಪೇಕ್ಷಿಸುತ್ತೇನೆ.

೨. ಈ ಪ್ರಶ್ನೆಯನ್ನು ಕೇಳಿದ ಸೂತಮುನಿಯು ಇಂತೆಂದನು :—

ಪೃಥಿವೀ ಮುಂತಾದ ಭೂತಗಳನ್ನು ವರ್ಣಿಸುವ ಸಂದರ್ಭದಲ್ಲಿ ಹಿಂದೆ ನನ್ನಿಂದ ಹೇಳಲ್ಪಟ್ಟ ಚತುರ್ಯುಗತತ್ತ್ವವನ್ನು ಈಗ ವಿಸ್ತರಿಸಿ ಹೇಳುತ್ತೇನೆ, ಕೇಳಿರಿ.

೩. ಆ ಯುಗಗಳ ಸಂಖ್ಯೆಯನ್ನು ವಿಭಾಗಿಸಿ ವಿಸ್ತಾರವಾಗಿ ಹೇಳುತ್ತೇನೆ. ಮತ್ತು ಯುಗಸ್ವರೂಪ, ಯುಗಧರ್ಮ, ಮತ್ತು ಯುಗಭೇದಗಳನ್ನು ವರ್ಣಿಸುವೆನು.

೪. ಹಾಗೂ ಯುಗಗಳ ಸಂಧ್ಯಾ, ಅಂಶ, ಯುಗಗಳ ಹೆಸರು ಈ ಬಗೆಗಳನ್ನು ತತ್ತ್ವರೂಪದಿಂದ ನಿರೂಪಣೆ ಮಾಡುತ್ತೇನೆ.

ಲೌಕಿಕೇನ ಪ್ರಮಾಣೇನ ನಿಷ್ಪಾದ್ಯಾಬ್ದಂ ತು ಮಾನುಷಮ್ ।
ತೇನಾಬ್ದೇನ ಪ್ರಸಂಖ್ಯಾಯೈ ವಕ್ಷ್ಯಾಮೀಹ ಚತುರ್ಯುಗಮ್

ನಿಮೇಷಕಾಲತುಲ್ಯಂ ಹಿ ವಿದ್ಯಾಲ್ಲಘ್ವಕ್ಷರಂ ಚ ಯತ್ ॥ ೫ ॥

ಕಾಷ್ಠಾ ನಿಮೇಷಾ ದಶ ಪಂಚ ಚೈವ ।
ತ್ರಿಂಶಚ್ಚ ಕಾಷ್ಠಾ ಗಣಯೇತ್ಕಲಾಂ ತು ॥
ತ್ರಿಂಶತ್ಕಲಾಶ್ಚಾಪಿ ಭವೇನ್ಮುಹೂರ್ತ ।
ಸ್ತೈಃ ತ್ರಿಂಶತಾ ರಾತ್ರ್ಯಹನೀ ಸಮೇ ತೇ ॥ ೬ ॥

ಅಹೋರಾತ್ರೌ ವಿಭಜತೇ ಸೂರ್ಯೋ ಮಾನುಷಲೌಕಿಕೌ ॥ ೭ ॥

ತತ್ರಾಹಃ ಕರ್ಮಚೇಷ್ಟಾಯಾಂ ರಾತ್ರಿಃ ಸ್ವಪ್ನಾಯ ಕಲ್ಪತೇ ।
ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತಯೋಃ ಪುನಃ ॥ ೮ ॥

---

೫. ಮೊದಲು ಲೋಕಸಿದ್ಧವಾದ ಪ್ರಮಾಣದಿಂದ ಮನುಷ್ಯಪರಿಮಾಣದಿಂದ ವರ್ಷವನ್ನು ತೀರ್ಮಾನಿಸಬೇಕು. ಆ ವರ್ಷದ ಪರಿಮಾಣ ಸಂಖ್ಯೆಯಿಂದ ಮುಂದೆ ನಾಲ್ಕು ಯುಗಗಳನ್ನು ವರ್ಣಿಸುತ್ತೇನೆ. ಆದಿಯಲ್ಲಿ ಒಂದು ಲಘು ಅಕ್ಷರವನ್ನು ಉಚ್ಚಾರ ಮಾಡುವಷ್ಟು ಸೂಕ್ಷ್ಮಕಾಲವು ಒಂದು ನಿಮೇಷವೆನಿಸುವುದು.

೬. ಅಂತಹ ಹದಿನೈದು ನಿಮೇಷಗಳು ಒಂದು ಕಾಷ್ಠಾಸ್ವರೂಪವು. ಆ ಮೂವತ್ತು ಕಾಷ್ಠಾಗಳು ಒಂದು ಕಲೆಯು. ಮೂವತ್ತು ಕಲೆಗಳು ಒಂದು ಮುಹೂರ್ತವು. ಅಂತಹ ಮೂವತ್ತು ಮುಹೂರ್ತಗಳಿಂದ ಒಂದು ರಾತ್ರಿಯೂ, ಅದಕ್ಕೆ ಸಮವಾದ ಪ್ರಮಾಣದಿಂದ ಹಗಲೂ ಆಗುವುವು.

೭. ಇಂತಹ ಅಹೋರಾತ್ರಿಗಳನ್ನು ಮನುಷ್ಯ ಪ್ರಮಾಣದಿಂದ ಲೌಕಿಕವಾಗಿ ಸೂರ್ಯನು ವಿಂಗಡಿಸುವನು.

೮. ಅವುಗಳಲ್ಲಿ ಹಗಲು, ಕೆಲಸಮಾಡುವುದಕ್ಕೂ ರಾತ್ರಿಕಾಲವು ನಿದ್ರಾಸುಖವನ್ನನುಭವಿಸುವುದಕ್ಕೂ ಸಿದ್ಧವಾಗಿರುವುದು. ಇಂತಹ ಮೂವತ್ತು ದಿನಗಳ ಒಂದು ಮಾಸವು ಪಿತೃಗಳಿಗೆ ಒಂದು ರಾತ್ರಿ ಹಗಲುಗಳಿಂದ ಕೂಡಿದ ಒಂದು ದಿನವು. ಅವುಗಳಲ್ಲಿ ಹಗಲು ರಾತ್ರಿಗಳ ವಿಭಾಗವನ್ನು ಈ ರೀತಿಯಾಗಿ ತಿಳಿಯಬೇಕು.

ಕೃಷ್ಣಪಕ್ಷಸ್ತ್ವಹಸ್ತೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ।
ತ್ರಿಂಶದ್ಯೇ ಮಾನುಷಾ ಮಾಸಾಃ ಪಿತ್ರ್ಯೋ ಮಾಸಸ್ತು ಸ ಸ್ಮೃತಃ॥ ೯ ॥

ಶತಾನಿ ತ್ರೀಣಿ ಮಾಸಾನಾಂ ಷಷ್ಟ್ಯಾ ಚಾಪ್ಯಧಿಕಾನಿ ವೈ ।
ಪಿತ್ರ್ಯಃ ಸಂವತ್ಸರೋ ಹ್ಯೇಷ ಮಾನುಷೇಣ ವಿಭಾವ್ಯತೇ ॥ ೧೦ ॥

ಮಾನುಷೇಣೈವ ಮಾನೇನ ವರ್ಷಾಣಾಂ ಯಚ್ಛತಂ ಭವೇತ್ ।
ಪಿತೄಣಾಂ ತ್ರೀಣಿ ವರ್ಷಾಣಿ ಸಂಖ್ಯಾತಾನೀಹ ತಾನಿ ವೈ ॥ ೧೧ ॥

ದಶ ಚೈವಾಧಿಕಾ ಮಾಸಾಃ ಪಿತೃಸಂಖ್ಯೇಹ ಸಂಜ್ಞಿತಾಃ ।
ಲೌಕಿಕೇನೈವ ಮಾನೇನ ಹ್ಯಬ್ದೋ ಯೋ ಮಾನುಷಃ ಸ್ಮೃತಃ ॥ ೧೨ ॥

ಏತದ್ದಿವ್ಯ ಮಹೋರಾತ್ರಂ ಶಾಸ್ತ್ರೇ ಸ್ಯಾನ್ನಿಶ್ಚಯೋ ಗತಃ ।
ದಿವ್ಯೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ॥ ೧೩ ॥

---

೯. ಕೃಷ್ಣಪಕ್ಷವು ಪಿತೃಗಳಿಗೆ ಅಹಃಕಾಲವು. ಶುಕ್ಲಪಕ್ಷವು ನಿದ್ರಿಸುವ ರಾತ್ರಿ ಕಾಲವು. ಮನುಷ್ಯಪ್ರಮಾಣದ ಮೂವತ್ತು ಮಾಸಗಳು ಪಿತೃಗಳಿಗೆ ಒಂದು ಮಾಸವೆಂದು ಸ್ಮರಿಸಲ್ಪಟ್ಟಿರುವುದು.

೧೦. ಹಾಗೆ ಮುನ್ನೂರ ಅರವತ್ತು ಮನುಷ್ಯ ಪರಿಮಾಣದ ಮಾಸಗಳು ಪಿತೃಗಳಿಗೆ ಒಂದು ಸಂವತ್ಸರರೂಪವಾಗುವುದು. ಇದು ಮನುಷ್ಯ ಪ್ರಮಾಣವನ್ನನುಸರಿಸಿ ತೋರಿಸಿದ ಸಂಖ್ಯೆಯು.

೧೧. ಹಾಗೆಯೇ ಮನುಷ್ಯಪ್ರಮಾಣದಿಂದ ಒಂದುನೂರು ವರ್ಷಗಳು ಪಿತೃಗಳಿಗೆ ಮೂರು ವರ್ಷಗಳು ಮತ್ತು ಹತ್ತು ತಿಂಗಳಾಗುವುವು.

೧೨. ಹೀಗೆ ಮೂರುವರ್ಷಗಳು ಮತ್ತು ಹತ್ತು ತಿಂಗಳೆಂಬ ಸಂಖ್ಯೆಯು ಪಿತೃಮಾನವನ್ನನುಸರಿಸಿ ವರ್ಣಿಸಲ್ಪಟ್ಟಿದೆ. ಇದನ್ನು ಲೌಕಿಕ ಪ್ರಮಾಣದಿಂದಲೇ ಪ್ರಾಜ್ಞರು ನಿರ್ಧರಿಸಿರುವರು.

೧೩. ಇವೆಲ್ಲವೂ ಸೇರಿ ದೇವಮಾನದ ಅಹೋರಾತ್ರಿರೂಪವಾದ ಒಂದುದಿನವಾಗುವುದೆಂದು ಶಾಸ್ತ್ರದಲ್ಲಿ ತೀರ್ಮಾನವಾಗಿರುವುದು. ಈ ದಿವ್ಯಮಾನದಲ್ಲಿಯೂ ರಾತ್ರಿ ಮತ್ತು ಹಗಲುಗಳ ವಿಭಾಗವನ್ನು ಈ ರೀತಿಯಾಗಿ ತಿಳಿಯಬೇಕು.

ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಮ್ ।
ಯೇ ತೇ ರಾತ್ರ್ಯಹನೀ ದಿವ್ಯೇ ಪ್ರಸಂಖ್ಯಾನಂ ತಯೋಃ ಪುನಃ ॥ ೧೪ ॥

ತ್ರಿಂಶದ್ಯಾನಿ ತು ವರ್ಷಾಣಿ ದಿವ್ಯೋ ಮಾಸಸ್ತು ಸ ಸ್ಮೃತಃ ।
ಯನ್ಮಾನುಷಂ ಶತಂ ವಿದ್ಧಿ ದಿವ್ಯಾ ಮಾಸಾಸ್ತ್ರಯಸ್ತು ತೇ ॥ ೧೫ ॥

ದಶ ಚೈವ ತಥಾಽಹಾನಿ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ।
ತ್ರೀಣಿ ವರ್ಷಶತಾನ್ಯೇವ ಷಷ್ಟಿವರ್ಷಾಣಿ ಯಾನಿ ತು ॥ ೧೬ ॥

ದಿವ್ಯಃ ಸಂವತ್ಸರೋ ಹ್ಯೇಷ ಮಾನುಷೇಣ ಪ್ರಕೀರ್ತಿತಃ ।
ತ್ರೀಣಿ ವರ್ಷಸಹಸ್ರಾಣಿ ಮಾನುಷಾಣಿ ಪ್ರಮಾಣತಃ ॥ ೧೭ ॥

ತ್ರಿಂಶದನ್ಯಾನಿ ವರ್ಷಾಣಿ ಮತಃ ಸಪ್ತರ್ಷಿವತ್ಸರಃ ।
ನವ ಯಾನಿ ಸಹಸ್ರಾಣಿ ವರ್ಷಾಣಿ ಮಾನುಷಾಣಿ ತು ॥ ೧೮ ॥

---

೧೪. ಅವುಗಳಲ್ಲಿ ಉತ್ತರಾಯಣವು ಪೂರ್ತಿಯಾಗಿ ಅಹಃಕಾಲವೂ, ದಕ್ಷಿಣಾಯನವೆಲ್ಲವೂ ರಾತ್ರಿಕಾಲವೂ ಆಗುವುದು. ಆ ಹಗಲು ರಾತ್ರಿಗಳು ಸೇರಿ ದಿವ್ಯಮಾನದ ಒಂದು ದಿನವಾಗುವುದು.

೧೫. ಮನುಷ್ಯಮಾನದ ಮೂವತ್ತು ವರ್ಷಗಳು ದೇವಮಾನದ ಒಂದು ಮಾಸವೂ ಮತ್ತು ಮನುಷ್ಯಮಾನದ ಒಂದುನೂರು ವರ್ಷಗಳು ದೇವಮಾನದಿಂದ ಮೂರು ಮಾಸ ಮತ್ತು ಹತ್ತು ದಿನಗಳೂ ಆಗುವುವು.

೧೬. ಇದು ದಿವ್ಯ ಪರಿಮಾಣವನ್ನು ತೋರಿಸುವ ವಿಧಾನವು :—ಮುನ್ನೂರು ಅರವತ್ತು ಮನುಷ್ಯಪರಿಮಾಣದ ವರ್ಷಗಳು ದೇವತೆಗಳಿಗೆ ಒಂದು ವರ್ಷಕಾಲವೆಂದು ಮನುಷ್ಯಮಾನದ ಸಂಖ್ಯೆಯನ್ನು ಪರಿಗ್ರಹಿಸಿ ಎಣಿಸಲ್ಪಟ್ಟಿದೆ.

೧೭. ಹಾಗೆ ಪ್ರಮಾಣವನ್ನನುಸರಿಸಿ ಮನುಷ್ಯರ ಮೂರುಸಾವಿರ ಮತ್ತು ಮೂವತ್ತು ವರ್ಷಗಳು ಸಪ್ತರ್ಷಿಗಳಿಗೆ ಒಂದು ವರ್ಷವಾಗುವುದು.

೧೮. ಮತ್ತು ಮನುಷ್ಯಮಾನದಿಂದ ಒಂಭತ್ತುಸಾವಿರ ಮತ್ತು ತೊಂಭತ್ತು ವರ್ಷಗಳಾದರೆ ಧ್ರುವಮಂಡಲಕ್ಕೆ ಪರಿಮಾಣದಲ್ಲಿ ಒಂದು ಸಂವತ್ಸರವಾಗುವುದು.

ಅನ್ಯಾನಿ ನವತಿಶ್ಚೈವ ಧ್ರುವಃ ಸಂವತ್ಸರಃ ಸ್ಮೃತಃ ।
ಷಡ್ವಿಂಶತಿ ಸಹಸ್ರಾಣಿ ವರ್ಷಾಣಿ ಮಾನುಷಾಣಿ ತು ॥ ೧೯ ॥

ವರ್ಷಾಣಾಂ ತು ಶತಂ ಜ್ಞೇಯಂ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ।
ತ್ರೀಣ್ಯೇವ ನಿಯುತಾನ್ಯಾಹುರ್ವರ್ಷಾಣಾಂ ಮಾನುಷಾಣಿ ತು ॥ ೨೦ ॥

ಷಷ್ಟಿಶ್ಚೈವ ಸಹಸ್ರಾಣಿ ಸಂಖ್ಯಾತಾನಿ ತು ಸಂಖ್ಯಯಾ ।
ದಿವ್ಯವರ್ಷಸಹಸ್ರಂ ತು ಪ್ರಾಹುಃ ಸಂಖ್ಯಾವಿದೋ ಜನಾಃ ॥ ೨೧ ॥

ಇತ್ಯೇವಮೃಷಿಭಿರ್ಗೀತಂ ದಿವ್ಯಯಾ ಸಂಖ್ಯಯಾ ತ್ವಿಹ ।
ದಿವ್ಯೇನೈವ ಪ್ರಮಾಣೇನ ಯುಗಸಂಖ್ಯಾಪ್ರಕಲ್ಪನಮ್ ॥ ೨೨ ॥

ಚತ್ವಾರಿ ಭಾರತೇ ವರ್ಷೇ ಯುಗಾನಿ ಕವಯೋಽಬ್ರುವನ್ ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುಷ್ಟಯಮ್ ॥ ೨೩ ॥

ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾ ವಿಧೀಯತೇ ।
ದ್ವಾಪರಂ ಚ ಕಲಿಶ್ಚೈವ ಯುಗಾನ್ಯೇತಾನಿ ಕಲ್ಪಯೇತ್ ॥ ೨೪ ॥

---

೧೯. ಹಾಗೆಯೇ ಇಪ್ಪತ್ತಾರು ಸಹಸ್ರ ಸಂಖ್ಯೆಯ ಮನುಷ್ಯ ಪ್ರಮಾಣದ ವರ್ಷಗಳು ದಿವ್ಯಮಾನದಿಂದ ಒಂದುನೂರು ವರ್ಷ ಆಗುವುವು.

೨೦-೨೧. ಮತ್ತು ಮನುಷ್ಯಪರಿಮಾಣದ ಮೂರುಲಕ್ಷ ಮತ್ತು ಅರವತ್ತು ಸಾವಿರ ವರ್ಷಗಳು ದೇವಮಾನದ ಒಂದುಸಾವಿರ ವರ್ಷಗಳನ್ನಾಗಿ ಕಾಲಪರಿಮಾಣಜ್ಞರಾದ ವಿದ್ವಾಂಸರು ವಿಭಾಗ ಮಾಡಿರುವರು.

೨೨. ಈ ರೀತಿಯಾಗಿ ಮಹರ್ಷಿಗಳು ದೇವಮಾನದ ಸಂಖ್ಯೆಯಿಂದ ಕಾಲವನ್ನು ವಿಭಾಗಮಾಡಿರುವರು. ಯುಗಗಳ ಸಂಖ್ಯಾ ವಿಭಾಗವು ದೇವಮಾನವನ್ನೇ ಅವಲಂಬಿಸಿರುವುದು.

೨೩. ಜ್ಞಾನಿಗಳು ಈ ಭರತಖಂಡದಲ್ಲಿ ಕೃತ, ತ್ರೇತ, ದ್ವಾಪರ, ಮತ್ತು ಕಲಿ ಯುಗವೆಂದು ನಾಲ್ಕು ಯುಗಗಳಿರುವುವೆಂದು ಹೇಳಿರುವರು.

೨೪. ಇವುಗಳಲ್ಲಿ ಮೊದಲನೆಯದು ಕೃತಯುಗವು. ಎರಡನೆಯದು ತ್ರೇತಾ ಯುಗವು. ಮೂರನೇಯದು ದ್ವಾಪರಯುಗವು. ಕಡೆಯದಾದ ಕಲಿಯುಗವು ನಾಲ್ಕನೆಯದೆಂಬುದು ಯುಗಗಳ ಕ್ರಮವು.

ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತ್ತ ಕೃತಂ ಯುಗಮ್ ।
ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಃ ಸಂಧ್ಯಯಾ ಸಮಃ ॥ ೨೫ ॥

ಇತರೇಷು ಸಸಂಧ್ಯೇಷು ಸಸಂಧ್ಯಾಂಶೇಷು ಚ ತ್ರಿಷು ।
ಏಕನ್ಯಾಯೇನ ವರ್ತಂತೇ ಸಹಸ್ರಾಣಿ ಶತಾನಿ ಚ ॥ ೨೬ ॥

ತ್ರೀಣಿ ದ್ವೇ ಚ ಸಹಸ್ರಾಣಿ ತ್ರೇತಾದ್ವಾಪರಯೋಃ ಕ್ರಮಾತ್ ।
ತ್ರಿಶತೀ ದ್ವಿಶತೀ ಸಂಧ್ಯೇ ಸಂಧ್ಯಾಂಶೌ ಚಾಪಿ ತತ್ಸಮೌ ॥ ೨೭ ॥

ಕಲಿಂ ವರ್ಷಸಹಸ್ರಂ ತು ಯುಗಮಾಹುರ್ದ್ವಿಜೋತ್ತಮಾಃ ।
ತಸ್ಯೈಕಶತಿಕಾ ಸಂಧ್ಯಾ ಸಂಧ್ಯಾಂಶಃ ಸಂಧ್ಯಯಾ ಸಮಃ ॥ ೨೮ ॥

ತೇಷಾಂ ದ್ವಾದಶಸಾಹಸ್ರೀ ಯುಗಸಂಖ್ಯಾ ಪ್ರಕೀರ್ತಿತಾ ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೈವ ಚತುಷ್ಟಯಮ್ ॥ ೨೯ ॥

---

೨೫. ಅವುಗಳಲ್ಲಿ ಕೃತಯುಗಕ್ಕೆ ನಾಲ್ಕುಸಹಸ್ರ ವರ್ಷಗಳು ಪರಿಮಾಣವು. ಅದಕ್ಕೆ ನಾಲ್ಕುನೂರು ಸಹಸ್ರವರ್ಷಕಾಲವು ಸಂಧ್ಯಾಕಾಲವು. ಮಧ್ಯ ಸಂಧಿಕಾಲವೂ ಕೂಡ ಅದಕ್ಕೆ ಸರಿಯಾಗಿ ನಾಲ್ಕುನೂರು ಸಾವಿರವರ್ಷಕಾಲವಾಗಿರುವುದು.

೨೬. ಮಿಕ್ಕ ಯುಗಗಳಲ್ಲಿಯೂ ಮತ್ತು ಅವುಗಳ ಸಂಧ್ಯಾ, ಸಂಧ್ಯಾಂಶ, ಈ ಮೂರು ಭಾಗಗಳಲ್ಲಿಯೂ ಇದೇ ನ್ಯಾಯದಿಂದ ಸಹಸ್ರ ಅದಕ್ಕೆ ಸಮಾನವಾಗಿ ಶತ ಸಂಖ್ಯೆಯಿಂದ ಪರಿಮಾಣವಿರುವುದೆಂದು ತಿಳಿಯಬೇಕು.

೨೭. ತ್ರೇತಾಯುಗದಲ್ಲಿ ಮೂರುಸಾವಿರ ವರ್ಷಗಳು ಮತ್ತು ಮೂರುನೂರು ವರ್ಷಗಳ ಸಂಧ್ಯಾ ಮತ್ತು ಸಂಧ್ಯಾಂಶಗಳು. ಹಾಗೆಯೇ ದ್ವಾಪರಯುಗದಲ್ಲಿ ಎರಡು ನೂರು ಸಾವಿರ ವರ್ಷ ಮತ್ತು ಇನ್ನೂರು ವರ್ಷಗಳ ಸಂಧ್ಯಾ ಮತ್ತು ಸಂಧ್ಯಾಂಶ ಗಳು ಇರುವುವು.

೨೮. ಕಲಿಯುಗದಲ್ಲಿ ಒಂದುಸಾವಿರ ವರ್ಷಗಳು ಮತ್ತು ಅದರ ಸಂಧ್ಯಾ; ಸಂಧ್ಯಾಂಶಗಳಲ್ಲಿ ಪ್ರತ್ಯೇಕ ಒಂದುನೂರು ವರ್ಷಗಳಿರುತ್ತವೆಯೆಂದು ದ್ವಿಜೋತ್ತ ಮರು ಹೇಳಿರುವರು.

೨೯. ಹೀಗೆ ಒಟ್ಟು ಸೇರಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿಯೆಂಬ ಚತು

**ಅತ್ರ ಸಂವತ್ಸರಾ ದೃಷ್ಟಾ ಮಾನುಷೇಣ ಪ್ರಮಾಣತಃ ।**
**ಕೃತಸ್ಯ ತಾವದ್ವಕ್ಷ್ಯಾಮಿ ವರ್ಷಾಣಿ ಚ ನಿಬೋಧತ　　॥ ೩೦ ॥**

**ಸಹಸ್ರಾಣಾಂ ಶತಾನ್ಯಾಹುಶ್ಚತುರ್ದಶ ಹಿ ಸಂಖ್ಯಯಾ ।**
**ಚತ್ವಾರಿಂಶತ್ಸಹಸ್ರಾಣಿ ತಥಾನ್ಯಾನಿ ಕೃತಂ ಯುಗಮ್　　॥ ೩೧ ॥**

**ತಥಾ ಶತಸಹಸ್ರಾಣಿ ವರ್ಷಾಣಿ ದಶಸಂಖ್ಯಯಾ ।**
**ಅಶೀತಿಶ್ಚ ಸಹಸ್ರಾಣಿ ಕಾಲಸ್ತ್ರೇತಾಯುಗಸ್ಯ ಸಃ　　॥ ೩೨ ॥**

**ಸಪ್ತೈವ ನಿಯುತಾನ್ಯಾಹುರ್ವರ್ಷಾಣಾಂ ಮಾನುಷೇಣ ತು ।**
**ವಿಂಶತಿಶ್ಚ ಸಹಸ್ರಾಣಿ ಕಾಲಃ ಸ ದ್ವಾಪರಸ್ಯ ಚ　　॥ ೩೩ ॥**

**ತಥಾ ಶತಸಹಸ್ರಾಣಿ ವರ್ಷಾಣಾಂ ತ್ರೀಣಿ ಸಂಖ್ಯಯಾ ।**
**ಷಷ್ಟಿಶ್ಚೈವ ಸಹಸ್ರಾಣಿ ಕಾಲಃ ಕಲಿಯುಗಸ್ಯ ತು　　॥ ೩೪ ॥**

---

ಯುಗಗಳ ಸಂಖ್ಯೆಯು ಹನ್ನೆರಡುಸಾವಿರ ಪರಿಮಾಣವುಳ್ಳದ್ದಾಗುವುದು, ಎಂದು ಉಪದೇಶಿಸಲ್ಪಟ್ಟಿದೆ.

೩೦. ಈ ಸಂದರ್ಭದಲ್ಲಿ ಮನುಷ್ಯ ಪ್ರಮಾಣದಿಂದ ವರ್ಷಗಳು ಲೆಕ್ಕಿಸಲ್ಪಟ್ಟಿವೆ. ಇನ್ನು ಮುಂದೆ ಕೃತಯುಗದ ವರ್ಷಗಳನ್ನು ಹೇಳುತ್ತೇನೆ, ಕೇಳಿರಿ.

೩೧. ಕೃತಯುಗದ ವರ್ಷಗಳ ಪರಿಮಾಣವು ಒಂದುಕೋಟಿ ನಲವತ್ತುಲಕ್ಷದ ನಲವತ್ತು ಸಾವಿರ ಸಂಖ್ಯೆಯು.

೩೨. ಹಾಗೆಯೇ ತ್ರೇತಾಯುಗದ ವರ್ಷಗಳ ಸಂಖ್ಯೆಯು ಒಂದುಕೋಟಿ ಎಂಭತ್ತುಸಾವಿರವೆಂದು ತಿಳಿಯಬೇಕು.

೩೩. ಅದೇ ರೀತಿಯಾಗಿ ಮನುಷ್ಯಪ್ರಮಾಣದಿಂದ ಎಣಿಸಿರುವ ಏಳುಲಕ್ಷ ಇಪ್ಪತ್ತುಸಾವಿರ ವರ್ಷಗಳು ದ್ವಾಪರಯುಗದ ಪ್ರಮಾಣವು.

೩೪. ಕಡೆಯದಾದ ಕಲಿಯುಗಕ್ಕೆ ಮೂರುಲಕ್ಷ ಅರುವತ್ತುಸಾವಿರ ಸಂಖ್ಯೆಯ ಮನುಷ್ಯ ಪರಿಮಾಣದ ವರ್ಷಗಳೆಂದು ತಿಳಿಯಬೇಕು.

ಏವಂ ಚತುರ್ಯುಗೇ ಕಾಲ ಋತ್ತೈಃ ಸಂಧ್ಯಾಂಶಕೈಃ ಸ್ಮೃತಃ ।
ನಿಯುತಾನ್ಯೇವ ಷಡ್ವಿಂಶಾನ್ನಿರಸಾನಿ ಯುಗಾನಿ ವೈ ॥ ೩೫ ॥

ಚತ್ವಾರಿಂಶತ್ತಥಾ ತ್ರೀಣಿ ನಿಯುತಾನೀಹ ಸಂಖ್ಯಯಾ ।
ವಿಂಶತಿಶ್ಚ ಸಹಸ್ರಾಣಿ ಸ ಸಂಧ್ಯಾಂಶಶ್ಚತುರ್ಯುಗಃ ॥ ೩೬ ॥

ಏವಂ ಚತುರ್ಯುಗಾಖ್ಯಾನಾಂ ಸಾಧಿಕಾ ಹ್ಯೇಕಸಪ್ತತಿಃ ।
ಕೃತತ್ರೇತಾದಿಯುಕ್ತಾನಾಂ ಮನೋರಂತರಮುಚ್ಯತೇ ॥ ೩೭ ॥

ಮನ್ವಂತರಸ್ಯ ಸಂಖ್ಯಾಂ ತು ವರ್ಷಾಗ್ರೇಣ ನಿಬೋಧತ ।
ತ್ರಿಂಶತ್ಕೋಟ್ಯಸ್ತು ವರ್ಷಾಣಾಂ ಮಾನುಷೇಣ ಪ್ರಕೀರ್ತಿತಾಃ ॥ ೩೮ ॥

ಸಪ್ತಷಷ್ಟಿಸ್ತಥಾನ್ಯಾನಿ ನಿಯುತಾನ್ಯಧಿಕಾನಿ ತು ।
ವಿಂಶತಿಶ್ಚ ಸಹಸ್ರಾಣಿ ಕಾಲೋಽಯಂ ಸಾಧಿಕಂ ವಿನಾ ॥ ೩೯ ॥

---

೩೫. ಈ ರೀತಿಯಾಗಿ ನಾಲ್ಕುಯುಗಗಳ ಪ್ರೈಕಿ ಒಂದೊಂದು ಯುಗದ ಕಾಲದಲ್ಲಿ ಸಂಭವಿಸುವ ಸಂಧ್ಯಾಂಶಕಗಳ ಪರಿಮಾಣವು ಯುಗದ ಪರಿಮಾಣವನ್ನು ಬಿಟ್ಟು ಇಪ್ಪತ್ತಾರು ಲಕ್ಷವನ್ನಾಗಿ ಹೇಳುವರು.

೩೬. ಒಟ್ಟಾಗಿ ಸೇರಿ ಆಯಾಯ ಯುಗದ ಸಂಧ್ಯಾಂಶಗಳ ಪರಿಮಾಣದ ತಾರತಮ್ಯದಿಂದ ನಲವತ್ತಮೂರುಲಕ್ಷ ಇಪ್ಪತ್ತಮೂರುಸಾವಿರ ವರ್ಷಗಳು ನಾಲ್ಕು ಯುಗಗಳ ಸಂಧ್ಯಾಂಶಗಳ ಪರಿಮಾಣವು.

೩೭. ಈ ರೀತಿಯಾಗಿ ಹಿಂದೆ ಹೇಳಿದ ನಾಲ್ಕು ಯುಗಗಳ ಒಟ್ಟು ಸಂಖ್ಯೆಯು ಎಪ್ಪತ್ತೊಂದು ವರ್ಷಗಳೆಂದು ದೇವಮಾನದಿಂದ ಗಣಿಸಲ್ಪಡುವುವು. ಅಷ್ಟು ಪರಿಮಾಣದ ಕಾಲವನ್ನು ಮನ್ವಂತರವೆಂದು ಕರೆಯುವರು.

೩೮. ಅಂತಹ ಮನ್ವಂತರಕಾಲದ ವರ್ಷಪರಿಮಾಣವನ್ನು ಮನುಷ್ಯ ಪರಿಮಾಣದಿಂದ ಗಣಿಸಿ ಹೇಳುವುದನ್ನು ಕೇಳಿರಿ.

೩೯. ಮೂವತ್ತುಕೋಟಿ ಅರವತ್ತೇಳುಲಕ್ಷ ಮತ್ತು ಇಪ್ಪತ್ತುಸಾವಿರ ವರ್ಷಗಳು ಒಂದು ಮನ್ವಂತರದ ಕಾಲವು.

ಮನ್ವಂತರಸ್ಯ ಸಂಖ್ಯೈಷಾ ಸಂಖ್ಯಾವಿದ್ಭಿರ್ದ್ವಿಜೈಃ ಸ್ಮೃತಾ ।
ಮನ್ವಂತರಸ್ಯ ಕಾಲೋಽಯಂ ಯುಗೈಃ ಸಾರ್ಧಂ ಚ ಕೀರ್ತಿತಃ ॥ ೪೦ ॥

ಚತುಃಸಹಸ್ರಯುಕ್ತಂ ವೈ ಪ್ರಾಕ್ಕೃತಂ ತತ್ಕೃತಂ ಯುಗಮ್ ।
ತ್ರೇತಾಶಿಷ್ಟಂ ಪ್ರವಕ್ಷ್ಯಾಮಿ ದ್ವಾಪರಂ ಕಲಿಮೇವ ಚ ॥ ೪೧ ॥

ಯುಗಪತ್ಸಮಯೇನಾರ್ಥೋ ದ್ವಿಧಾ ವಕ್ತುಂ ನ ಶಕ್ಯತೇ ।
ಕ್ರಮಾಗತಂ ಮಯಾ ಹ್ಯೇತತ್ತುಭ್ಯಂ ನೋಕ್ತಂ ಯುಗದ್ವಯಮ್
॥ ೪೨ ॥

ಋಷಿವಂಶಪ್ರಸಂಗೇನ ವ್ಯಾಕುಲತ್ವಾತ್ತಥೈವ ಚ ।
ಅತ್ರ ತ್ರೇತಾಯುಗಸ್ಯಾದೌ ಮನುಃ ಸಪ್ತರ್ಷಯಶ್ಚ ಯೇ ॥ ೪೩ ॥

ಶ್ರೌತಂ ಸ್ಮಾರ್ತಂ ಚ ತೇ ಧರ್ಮಂ ಬ್ರಹ್ಮಣಾನುಪ್ರಚೋದಿತಮ್ ।
ದಾರಾಗ್ನಿಹೋತ್ರಸಂಬಂಧಮೃಗ್ಯಜುಃ ಸಾಮಸಂಹಿತಮ್ ॥ ೪೪ ॥

---

೪೦. ಮನ್ವಂತರದ ಕಾಲಪರಿಮಾಣವನ್ನು ಬಲ್ಲ ಜ್ಞಾನಿಗಳಿಂದ ಈ ಸಂಖ್ಯೆಯು ಎಣಿಸಲ್ಪಟ್ಟು ಆಯಾಯ ಯುಗಗಳ ಪರಿಮಾಣದೊಡನೆ ಉಪದೇಶಿಸಲ್ಪಟ್ಟಿದೆ.

೪೧. ಯುಗಗಳಲ್ಲಿ ಮೊದಲನೆಯದಾದ ಕೃತಯುಗವೆಂಬುದು ಈ ರೀತಿಯಾಗಿ ನಾಲ್ಕುಸಾವಿರ ವರ್ಷಗಳಿಂದ ಕೂಡಿರುವುದಾಗಿದೆ. ಇನ್ನು ಮುಂದೆ ಉಳಿದ ತ್ರೇತಾ ಯುಗ, ದ್ವಾಪರಯುಗ ಮತ್ತು ಕಲಿಯುಗಗಳ ಪರಿಮಾಣವನ್ನು ಹೇಳುವೆನು.

೪೨. ಕ್ರಮಿಕವಾಗಿ ನಡೆಯುತ್ತಿರುವ ಯುಗಗಳಲ್ಲಿ ಆಯಾಯ ಯುಗಧರ್ಮವನ್ನು ಸಂಕೀರ್ಣವಾಗಿ ಹೇಳಲಾಗುವುದಿಲ್ಲ. ಈ ಯುಗಕ್ರಮದಿಂದ ಬಂದ ಯುಗಗಳ ಪೈಕಿ ದ್ವಾಪರ ಮತ್ತು ಕಲಿಯೆಂಬ ಎರಡು ಯುಗಗಳ ವಿಷಯವನ್ನು ಹಿಂದೆ ನಿಮಗೆ ಉಪದೇಶಿಸಿಲ್ಲ.

೪೩. ಋಷಿಗಳ ವಂಶವನ್ನು ನಿರೂಪಿಸುವ ಪ್ರಸಂಗದಿಂದ ಮನಸ್ಸಿನ ವ್ಯಾಕುಲತೆಯಿಂದ ಕಡೆಯ ಎರಡು ಯುಗಗಳ ವಿಷಯವು ಪ್ರಸ್ತಾಪಿಸಲ್ಪಟ್ಟಿಲ್ಲ. ತ್ರೇತಾ ಯುಗದ ಆದಿಯಲ್ಲಿ ಮನು ಮತ್ತು ಸಪ್ತರ್ಷಿಗಳೂ, ಮಹಾತ್ಮರೂ ಸನ್ಮಾರ್ಗಕ್ಕೆ ಮೂಲಭೂತರಾಗಿರುವರು.

೪೪. ಅವರು ಶ್ರೌತ. ಸ್ಮಾರ್ತ ಎಂಬ ಪತ್ನಿ ಮತ್ತು ಆಹಿತವಾದ ಅಗ್ನಿ ಇವು

ಇತ್ಯಾದಿಲಕ್ಷಣಂ ಶ್ರೌತಂ ಧರ್ಮಂ ಸಪ್ತರ್ಷಯೋಽಬ್ರುವನ್ ।
ಪರಂಪರಾಗತಂ ಧರ್ಮಂ ಸ್ಮಾರ್ತಂ ತ್ವಾಚಾರಲಕ್ಷಣಮ್ ॥ ೪೫ ॥

ವರ್ಣಾಶ್ರಮಾಚಾರಯುತಂ ಮನುಃ ಸ್ವಾಯಂಭುವೋಽಬ್ರವೀತ್ ।
ಸತ್ಯೇನ ಬ್ರಹ್ಮಚರ್ಯೇಣ ಶ್ರುತೇನ ತಪಸಾ ಚ ವೈ ॥ ೪೬ ॥

ತೇಷಾಂ ತು ತಪ್ತತಪಸಾ ಆರ್ಷೇಣೋಪಕ್ರಮೇಣ ತು ।
ಸಪ್ತರ್ಷೀಣಾಂ ಮನೋಶ್ಚೈವ ಹ್ಯಾದ್ಯೇ ತ್ರೇತಾಯುಗೇ ತಥಾ॥ ೪೭ ॥

ಅಬುದ್ಧಿಪೂರ್ವಕಂ ತೇಷಾಮಕ್ರಿಯಾಪೂರ್ವಮೇವ ಚ ।
ಅಭಿವ್ಯಕ್ತಾಸ್ತು ತೇ ಮಂತ್ರಾಸ್ತಾರಕಾದ್ಯೈರ್ನಿದರ್ಶನೈಃ ॥ ೪೮ ॥

ಆದಿಕಲ್ಪೇ ತು ದೇವಾನಾಂ ಪ್ರಾದುರ್ಭೂತಾಸ್ತು ಯಾಃ ಸ್ವಯಮ್ ।
ಪ್ರಣಾಶೇಷ್ವಥ ಸಿದ್ಧೀನಾಮನ್ಯಾಸಾಂ ಚ ಪ್ರವರ್ತನಮ್ ॥ ೪೯ ॥

---

ಗಳಿಂದ ನೆರವೇರುವ, ಋಕ್, ಯಜುಸ್ಸು, ಸಾಮವೇದ ಮಂತ್ರಗಳಿಂದ ಕೂಡಿದ, ಬ್ರಹ್ಮನಿಂದ ಉಪದೇಶಿಸಲ್ಪಟ್ಟ ಧರ್ಮವನ್ನು ಆದಿಯಲ್ಲಿ ಉಪದೇಶಿಸುವರು.

೪೫. ಹಿಂದೆ ಹೇಳಿದ ಧರ್ಮಗಳಲ್ಲಿ ಶ್ರೌತಧರ್ಮವನ್ನು ಸಂಪೂರ್ಣವಾಗಿ ಸಪ್ತರ್ಷಿಗಳು ಉಪದೇಶಿಸಿರುವರು. ಈ ಶ್ರೌತಧರ್ಮಕ್ಕೆ ವ್ಯತಿರಿಕ್ತವಾಗಿ ಆಚಾರ ಪ್ರಾಪ್ತವಾದ ಸಂಪ್ರದಾಯದ ಧರ್ಮವು ಸ್ಮಾರ್ತಧರ್ಮವೆಂದು ಪ್ರಖ್ಯಾತವಾಗಿರುವುದು.

೪೬. ಸ್ವಾಯಂಭುವ ಮನುವು ವರ್ಣಧರ್ಮ ಆಶ್ರಮಧರ್ಮಗಳಿಂದ ಕೂಡಿದ ಆ ಸ್ಮಾರ್ತ ಧರ್ಮಗಳನ್ನು ಹೇಳಿರುವನು. ಇವುಗಳಲ್ಲಿ ಸತ್ಯ, ಬ್ರಹ್ಮಚರ್ಯ, ಶಾಸ್ತ್ರಾಧ್ಯಯನ, ತಪಸ್ಸು ಇವುಗಳು ಮುಖ್ಯವಾದವುಗಳು.

೪೭. ಹಿಂದಿನ ಸಪ್ತರ್ಷಿಗಳು ಮತ್ತು ಮನುರಾಜನಿಗೆ ಮೊದಲನೆಯ ತ್ರೇತಾಯುಗದಲ್ಲಿ ತಪೋಬಲ ಮತ್ತು ವೇದದ ಅರ್ಥಜ್ಞಾನ ಇವುಗಳು ವಿಶೇಷವಾಗಿದ್ದುವು.

೪೮. ಆದುದರಿಂದ ಆ ಸಪ್ತರ್ಷಿಗಳಿಗೂ ಮನುರಾಜನಿಗೂ ಜ್ಞಾನದೃಷ್ಟಿ, ಕರ್ಮಾನುಷ್ಠಾನ, ಈ ಸಾಧನಗಳ ಅಪೇಕ್ಷೆ ಇಲ್ಲದೇ ನಕ್ಷತ್ರೋದಯ ಮುಂತಾದ ಉದಾಹರಣೆಗಳಿಂದ ಆಯಾಯ ಮಂತ್ರಗಳು ಭಾಸವಾದುವು.

೪೯. ಕಲ್ಪದ ಆದಿಯಲ್ಲಿ ದೇವತೆಗಳಿಗೆ ತಾನಾಗಿ ಪ್ರಾದುರ್ಭವಿಸಿರುವ ಸಿದ್ಧಿ ವಿಶೇಷಗಳ ಲೋಪವುಂಟಾಗಿ ಮತ್ತೊಂದು ವಿಧವಾದ ಸಿದ್ಧಿಗಳು ಪ್ರವರ್ತಿಸುವುವು.

ಆಸನ್ಮಂತ್ರಾ ವ್ಯತೀತೇಷು ಯೇ ಕಲ್ಪೇಷು ಸಹಸ್ರಶಃ ।
ತೇ ಮಂತ್ರಾ ವೈ ಪುನಸ್ತೇಷಾಂ ಪ್ರತಿಭಾಯಾಮುಪಸ್ಥಿತಾಃ ॥ ೫೦ ॥

ಋಚೋ ಯಜೂಂಷಿ ಸಾಮಾನಿ ಮಂತ್ರಾಶ್ಚಾಥರ್ವಣಾನಿ ತು ।
ಸಪ್ತರ್ಷಿಭಿಸ್ತು ತೇ ಪ್ರೋಕ್ತಾಃ ಸ್ಮಾರ್ತಂ ಧರ್ಮಂ ಮನುರ್ಜಗೌ ॥೫೧ ॥

ತ್ರೇತಾದೌ ಸಂಹಿತಾ ವೇದಾಃ ಕೇವಲಾ ಧರ್ಮಸೇತವಃ ।
ಸಂರೋಧಾದಾಯುಷಶ್ಚೈವ ವರ್ತ್ಸ್ಯಂತೇ ದ್ವಾಪರೇಷು ವೈ ॥ ೫೨ ॥

ಋಷಯಸ್ತಪಸಾ ವೇದಾನ್ ದ್ವಾಪರಾದಿಷ್ವಧೀಯತೇ ।
ಅನಾದಿನಿಧನಾ ದಿವ್ಯಾಃ ಪೂರ್ವಂ ಸೃಷ್ಟಾಃ ಸ್ವಯಂಭುವಾ ॥ ೫೩ ॥

ಸಧರ್ಮಾಃ ಸವ್ರತಾಃ ಸಾಂಗಾ ಯಥಾಧರ್ಮಂ ಯುಗೇ ಯುಗೇ ।
ವಿಕ್ರಿಯಂತೇ ಸಮಾನಾರ್ಥಾ ವೇದವಾದಾ ಯಥಾಯುಗಮ್ ॥ ೫೪ ॥

---

೫೦. ಹಿಂದೆ ಕಳೆದ ಕಲ್ಪಗಳಲ್ಲಿ ಸಾವಿರಾರು ಸಂಖ್ಯೆಯಿಂದ ಯಾವ ಮಂತ್ರಗಳು ಪ್ರಸಿದ್ಧವಾಗಿದ್ದುವೋ ಆ ಮಂತ್ರಗಳು ಮತ್ತೆ ಆ ಮಹಾತ್ಮರಿಗೆ ಬುದ್ಧಿಯಲ್ಲಿ ಪ್ರಾದುರ್ಭವಿಸಿದುವು.

೫೧. ಆ ಮಂತ್ರಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳ ಮಂತ್ರಗಳು ಸಪ್ತರ್ಷಿಗಳಿಂದ ಉಪದೇಶಿಸಲ್ಪಟ್ಟವು. ಮನು ಚಕ್ರವರ್ತಿಯು ಸ್ಮಾರ್ತಧರ್ಮವನ್ನು ಉಪದೇಶಿಸಿರುವನು.

೫೨. ತ್ರೇತಾಯುಗದ ಆದಿಯಲ್ಲಿ ಸಂಹಿತಾರೂಪವಾಗಿದ್ದ ವೇದಗಳು ಧರ್ಮಕ್ಕೆ ರಕ್ಷಕಗಳಾಗಿ ಸೇತುವಿನಂತಿದ್ದವು. ಅವು ಆ ಯುಗದ ಮಾನವರ ಆಯುಷ್ಯವು ಕ್ಷಯಿಸುವವರೆಗೂ ಇದ್ದು ಮುಂದೆ ದ್ವಾಪರಾದಿ ಯುಗಗಳಲ್ಲಿಯೂ ಅವಿಚ್ಛಿನ್ನವಾಗಿರುವುವು.

೫೩. ಬ್ರಹ್ಮನಿಂದ ಮೊದಲು ಉಪದೇಶಿಸಲ್ಪಟ್ಟು ಉತ್ಪತ್ತಿ ನಾಶವಿಲ್ಲದ ದಿವ್ಯವಾದ ವೇದಗಳನ್ನು ತಪಃಶಕ್ತಿಯಿಂದ ದ್ವಾಪರಾದಿ ಯುಗಗಳಲ್ಲಿ ಸ್ಮರಿಸಿ ಅಧ್ಯಯನ ಮಾಡುತ್ತಾರೆ.

೫೪. ಪ್ರತಿಪಾದ್ಯ ಧರ್ಮ, ಅಧ್ಯಯನ ನಿಯಮ, ಶಿಕ್ಷಾದಿ ಷಡಂಗ—ಇವುಗಳಿಂದ ಸಹಿತವಾದ ವೇದಗಳು ಆಯಾಯ ಯುಗಗಳಿಗೆ ತಕ್ಕಂತೆ ಪ್ರತಿಯೊಂದು

ಆರಂಭಯಜ್ಞಾಃ ಕ್ಷತ್ರಾಶ್ಚ ಹವಿರ್ಯಜ್ಞಾ ವಿಶಸ್ತಥಾ ।
ಪರಿಚಾರಯಜ್ಞಾಃ ಶೂದ್ರಾಸ್ತು ಜಪಯಜ್ಞಾ ದ್ವಿಜೋತ್ತಮಾಃ॥ ೫೫ ॥

ತದಾ ಪ್ರಮುದಿತಾ ವರ್ಣಾಸ್ತ್ರೇತಾಯಾಂ ಧರ್ಮಪಾಲಿತಾಃ ।
ಕ್ರಿಯಾವಂತಃ ಪ್ರಜಾವಂತಃ ಸಮೃದ್ಧಾಃ ಸುಖಿನಸ್ತಥಾ ॥ ೫೬ ॥

ಬ್ರಾಹ್ಮಣಾನನುವರ್ತಂತೇ ಕ್ಷತ್ರಿಯಾಃ ಕ್ಷತ್ರಿಯಾನ್ವಿಶಃ ।
ವೈಶ್ಯಾನನುವರ್ತಿನಃ ಶೂದ್ರಾಃ ಪರಸ್ಪರಮನುವ್ರತಾಃ ॥ ೫೭ ॥

ಶುಭಾಃ ಪ್ರವೃತ್ತಯಸ್ತೇಷಾಂ ಧರ್ಮಾವರ್ಣಾ ಶ್ರಮಾಸ್ತಥಾ ।
ಸಂಕಲ್ಪಿತೇನ ಮನಸಾ ವಾಚೋಕ್ತೇನ ಸ್ವಕರ್ಮಣಾ ॥ ೫೮ ॥

ತ್ರೇತಾಯುಗೇ ಚ ವಿಫಲಃ ಕರ್ಮಾರಂಭಃ ಪ್ರಸಿಧ್ಯತಿ ।
ಆಯುರ್ಮೇಧಾ ಬಲಂ ರೂಪಮಾರೋಗ್ಯಂ ಧರ್ಮಶೀಲತಾ ॥ ೫೯ ॥

---

ಯುಗದಲ್ಲಿಯೂ ಸಮಾನವಾದ ಅರ್ಥದಲ್ಲಿ ಆವಿರ್ಭಾವ ತಿರೋಭಾವರೂಪವಾದ ವಿಕಾರವನ್ನು ಹೊಂದುತ್ತವೆ.

೫೫. ಆ ಯುಗದ ಮಾನವರಲ್ಲಿ ಕ್ಷತ್ರಿಯರು ಯುದ್ಧಾದಿ ಉದ್ಯಮವನ್ನೂ, ವೈಶ್ಯರು ಕೃಷಿ ಮುಂತಾದ ಹವಿಃಸಾಧನ ಸಂಪಾದನವನ್ನೂ, ಶೂದ್ರರು ಇತರ ಪರಿಚರ್ಯಾರೂಪವಾದ ಕರ್ಮವನ್ನೂ, ದ್ವಿಜೋತ್ತಮರು ಜಪಕರ್ಮವನ್ನೂ ಮುಖ್ಯಯಜ್ಞದೃಷ್ಟಿಯಿಂದ ಆದರದಿಂದ ಅನುಷ್ಠಾನ ಮಾಡುತ್ತಾರೆ.

೫೬. ಆಗ ಅವರು ಅನುಷ್ಠಾನಮಾಡಿದ ಸುಕೃತದ ಪ್ರಾಬಲ್ಯದಿಂದ ರಕ್ಷಿಸಲ್ಪಟ್ಟವರಾಗಿ ಪ್ರಜೆಗಳು ಸತ್ಕರ್ಮ, ಪ್ರಜಾ, ಸಂಪತ್ತಿನ ಸಮೃದ್ಧಿ, ಮತ್ತು ಸುಖಗಳಿಂದ ಕೂಡಿ ಬಹಳ ಆನಂದದಿಂದ ಇರುತ್ತಾರೆ.

೫೭. ಆಗ ಬ್ರಾಹ್ಮಣರನ್ನು ಅನುಸರಿಸಿ ಕ್ಷತ್ರಿಯರೂ, ಕ್ಷತ್ರಿಯರ ಇಷ್ಟಾನುಸಾರವಾಗಿ ವೈಶ್ಯರೂ ವೈಶ್ಯರ ಹಿತವನ್ನು ಅನುವರ್ತಿಸಿ ಶೂದ್ರರೂ ಒಬ್ಬರನ್ನೊಬ್ಬರು ಅನುಸರಿಸಿಕೊಂಡು ಸತ್ಕರ್ಮ ತತ್ಪರರಾಗಿ ರಾಷ್ಟ್ರಹಿತವನ್ನು ಸಾಧಿಸುತ್ತಿದ್ದರು.

೫೮. ಅವರ ಪ್ರವೃತ್ತಿಯು ಶುಭಮಾರ್ಗದಲ್ಲಿಯೇ ಇದ್ದಿತು. ಮತ್ತು ವರ್ಣ ಆಶ್ರಮ ಧರ್ಮಗಳು ಉತ್ತಮರೀತಿಯಲ್ಲಿ ಮಾನಸ ಸಂಕಲ್ಪ-ಶರೀರ ಮತ್ತುವಾಕ್ಕುಗಳಿಂದ ನಡೆಯುತ್ತಲಿದ್ದುವು.

೫೯. ತ್ರೇತಾಯುಗದಲ್ಲಿ ಕರ್ಮದ ಅನುಷ್ಠಾನವು ವಿಶೇಷವಾದ ಫಲವನ್ನು

ಸರ್ವಸಾಧಾರಣಾ ಹ್ಯೇತೇ ತ್ರೇತಾಯಾಂ ವೈ ಭವಂತ್ಯುತ ।
ವರ್ಣಾಶ್ರಮವ್ಯವಸ್ಥಾನಂ ತೇಷಾಂ ಬ್ರಹ್ಮಾ ತದಾಕರೋತ್ ॥ ೬೦ ॥

ಪುನಃ ಪ್ರಜಾಸ್ತು ತಾ ಮೋಹಾದ್ಧರ್ಮಾಂಸ್ತಾನಪ್ಯಪಾಲಯನ್ ।
ಪರಸ್ಪರವಿರೋಧೇನ ಮನುಂ ತಾಃ ಪುನರಭ್ಯಯುಃ ॥ ೬೧ ॥

ಪುನಃ ಸ್ವಾಯಂಭುವೋ ದೃಷ್ಟ್ವಾ ಯಾಥಾತಥ್ಯಂ ಪ್ರಜಾಪತಿಃ ।
ಧ್ಯಾತ್ವಾ ತು ಶತರೂಪಾಯಾಂ ಪುತ್ರೌ ಸ ಉದಪಾದಯತ್ ॥ ೬೨ ॥

ಪ್ರಿಯವ್ರತೋತ್ತಾನಪಾದೌ ಪ್ರಥಮೌ ತೌ ಮಹೀಕ್ಷಿತೌ ।
ತತಃ ಪ್ರಭೃತಿ ರಾಜಾನ ಉತ್ಪನ್ನಾ ದಂಡಧಾರಿಣಃ ॥ ೬೩ ॥

---

ಕೊಡುವುದು. ಆದುದರಿಂದ ಪ್ರತಿಯೊಬ್ಬರಲ್ಲಿಯೂ ಆಯುಸ್ಸು, ಮೇಧೆ, ಬಲ, ರೂಪ, ಆರೋಗ್ಯ, ಧರ್ಮದಲ್ಲಿ ಪ್ರವೃತ್ತಿ ಮುಂತಾದುವು ಸಹಜವಾಗಿದ್ದವು.

೬೦. ಈ ಗುಣಗಳು ಎಲ್ಲರಲ್ಲೂ ಸಾಧಾರಣ ಗುಣಗಳಾಗಿದ್ದವು. ಇಂತಹ ಫಲಗಳಿಗೆ ಸಾಧನವಾಗಿ ತ್ರೇತಾಯುಗದಲ್ಲಿ ಅನುಷ್ಠಾನ ಮಾಡಬೇಕಾದ ಧರ್ಮಗಳನ್ನು ಬ್ರಹ್ಮನು ಆದಿಯಲ್ಲಿ ಕಲ್ಪಿಸಿರುವನು.

೬೧. ಹೀಗೆ ಪ್ರವಾಹವಾಗಿ ನಡೆದುಕೊಂಡು ಬರುತ್ತಿರಲು ಪ್ರಜೆಗಳಲ್ಲಿ ಮೋಹವುಂಟಾಗಿ ಆ ಧರ್ಮಗಳನ್ನು ರಕ್ಷಿಸದಿರಲು ಪುನಃ ಅದನ್ನು ವ್ಯವಸ್ಥೆ ಮಾಡಲು ತಮ್ಮಲ್ಲಿರುವ ಪರಸ್ಪರ ವಿರೋಧ ದೃಷ್ಟಿಯನ್ನು ಪ್ರಕಾಶಪಡಿಸಿ ಮನುವನ್ನು ಶರಣ ಹೊಂದಿದರು.

೬೨. ಮತ್ತೆ ಸ್ವಾಯಂಭುವ ಮನುವೆಂಬ ಪ್ರಜಾಪತಿಯು ಧರ್ಮದ ಪಾರಮಾರ್ಥಿಕರೂಪವನ್ನು ತಿಳಿದು ಅದನ್ನು ಉಜ್ಜೀವಿಸಬೇಕೆಂದು ಸಂಕಲ್ಪಿಸಿ ಶತರೂಪಾ ಎಂಬ ಪತ್ನಿಯಲ್ಲಿ ಇಬ್ಬರು ಪುತ್ರರನ್ನು ಸೃಷ್ಟಿಸಿದನು.

೬೩. ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಆ ಇಬ್ಬರು ಪುತ್ರರು ರಾಜರ ವಂಶಾವಳಿಯಲ್ಲಿ ಮೊದಲನೆಯವರಾಗಿ ಹುಟ್ಟಿದರು. ಆ ಮೊದಲ್ಗೊಂಡು ಅಪರಾಧಿಗಳನ್ನು ಶಿಕ್ಷಿಸಲು ದಂಡಧಾರಿಗಳಾದ ಕ್ಷತ್ರಿಯರ ಪ್ರಜೆಯು ಪ್ರಾದುರ್ಭವಿಸಿತು.

ಪ್ರಜಾನಾಂ ರಂಜನಾಚ್ಚೈವ ರಾಜಾನಸ್ತೇಽಭವನ್ನೃಪಾಃ ।
ಪ್ರಚ್ಛನ್ನಪಾಪಾಸ್ತೈರ್ಯೇ ಚ ನ ಶಕ್ಯಾಸ್ತು ನರಾಧಿಪೈಃ ॥ ೬೪ ॥

ಧರ್ಮರಾಜಃ ಸ್ಮೃತಸ್ತೇಷಾಂ ಶಾಸ್ತಾ ವೈವಸ್ವತೋ ಯಮಃ ।
ವರ್ಣಾನಾಂ ಪ್ರವಿಭಾಗಾಶ್ಚ ತ್ರೇತಾಯಾಂ ಸಂಪ್ರಕೀರ್ತಿತಾಃ ॥ ೬೫ ॥

ಸಂಭೃತಾಶ್ಚ ತದಾ ಮಂತ್ರಾ ಋಷಿಭಿರ್ಬ್ರಹ್ಮಣಃ ಸುತೈಃ ।
ಯಜ್ಞಾಃ ಪ್ರವರ್ತಿತಾಶ್ಚೈವ ತದಾ ಹ್ಯೇವ ತು ದೈವತೈಃ ॥ ೬೬ ॥

ಯಾಮಶುಕ್ರಾರ್ಜಿತೈಶ್ಚೈವ ಸರ್ವಸಾಧನಸಂಭೃತೈಃ ।
ಸಾರ್ಧಂ ವಿಶ್ವಭುಜಾ ಚೈವ ದೇವೇಂದ್ರೇಣ ಮಹೌಜಸಾ ॥ ೬೭ ॥

ಸ್ವಾಯಂಭುವೇಽಂತರೇ ದೇವೈರ್ಯಜ್ಞಸ್ತೈಃ ಪ್ರಾಕ್ ಪ್ರವರ್ತಿತಃ ।
ಸತ್ಯಂ ಜಪಸ್ತಪೋ ಧ್ಯಾನಂ ತ್ರೇತಾಯಾ ಧರ್ಮ ಉಚ್ಯತೇ ॥ ೬೮ ॥

---

೬೪. ಅವರು ದುಷ್ಟನಿಗ್ರಹ ಮಾತ್ರವಲ್ಲದೆ ಶಿಷ್ಟರನ್ನು ರಂಜಿಸುತ್ತಲೂ ಇರುವುದರಿಂದ ರಾಜರೆಂದು ಕರೆಯಲ್ಪಟ್ಟರು. ಆದರೆ ಪ್ರಕಾಶವಾಗಿ ಪಾಪಮಾಡಿದವರನ್ನು ದಂಡಿಸಲು ಶಕ್ತರಾದರೂ ಪ್ರಚ್ಛನ್ನವಾಗಿ ಪಾಪಮಾಡಿದವರನ್ನು ಅವರು ಶಿಕ್ಷಿಸಲಾರರು.

೬೫. ಹೀಗೆ ರಹಸ್ಯವಾಗಿ ಪಾಪಮಾಡಿದವರನ್ನು ಸೂರ್ಯ ಪುತ್ರನಾದ ಯಮ ಧರ್ಮರಾಜನು ಶಿಕ್ಷಿಸುವನು, ಹೀಗೆ ತ್ರೇತಾಯುಗದಲ್ಲಿ ವರ್ಣಗಳ ಪ್ರವಿಭಾಗವು ವರ್ಣಿಸಲ್ಪಟ್ಟಿರುವುದು.

೬೬. ಬ್ರಹ್ಮನ ಮಾನಸಪುತ್ರರಾದ ಮಹರ್ಷಿಗಳಿಂದ ಕರ್ಮ ಸಾಧನವಾದ ಅನೇಕ ಮಂತ್ರಗಳು ಸಂಗ್ರಹಿಸಲ್ಪಟ್ಟವು, ಮತ್ತು ದೇವತೆಗಳು ಮೊದಲು ಯಜ್ಞಗಳನ್ನು ಆರಂಭಿಸಿದರು;

೬೭. ದೇವತೆಗಳಿಂದ ಪ್ರವರ್ತಿಸಲ್ಪಟ್ಟ ಯಜ್ಞಗಳಲ್ಲಿ ಯಾಮರೆಂಬ ಪಿತೃಗಣ ಮತ್ತು ಶುಕ್ರಾದಿಗ್ರಹ ಮುಂತಾದವರಿಂದ ಆರ್ಜಿಸಲ್ಪಟ್ಟ ಸಕಲಸಾಧನಗಳು ಸಂಗ್ರಹಿಸಲ್ಪಟ್ಟಿದ್ದವು. ಮಹಾ ಪರಕ್ರಮಶಾಲಿಯಾದ ದೇವೇಂದ್ರನು ಬ್ರಹ್ಮದೇವನೊಂದಿಗೆ ಯಜ್ಞವನ್ನು ಆಚರಿಸಿ ಪ್ರಚಾರಕ್ಕೆ ತಂದನು.

೬೮. ಸ್ವಾಯಂಭುವ ಮನ್ವಂತರದಲ್ಲಿ ಮೊದಲು ದೇವತೆಗಳಿಂದ ಯಜ್ಞವು ಪ್ರವರ್ತಿ

ತದಾ ಧರ್ಮಸಹಸ್ರಾಂತೇऽಹಿಂಸಾ ಧರ್ಮಃ ಪ್ರವರ್ತತೇ ।
ಜಾಯಂತೇ ಚ ತದಾ ಶೂರಾ ಆಯುಷ್ಮಂತೋ ಮಹಾಬಲಾಃ ॥ ೬೯ ॥

ನ್ಯಸ್ತದಂಡಾ ಮಹಾಭಾಗಾ ಧರ್ಮಿಷ್ಠಾ ಬ್ರಹ್ಮವಾದಿನಃ ।
ಪದ್ಮಪತ್ರಾಯತಾಕ್ಷಾಶ್ಚ ಪೃಥೂರಸ್ಕಾಃ ಸುಸಂಹತಾಃ ॥ ೭೦ ॥

ಸಿಹ್ಮಾತಂಕಾ ಮಹಾಸತ್ತ್ವಾ ಮತ್ತಮಾತಂಗಗಾಮಿನಃ ।
ಮಹಾಧನುರ್ಧರಾಶ್ಚೈವ ತ್ರೇತಾಯಾಂ ಚಕ್ರವರ್ತಿನಃ ॥ ೭೧ ॥

ಸರ್ವಲಕ್ಷಣಸಂಪೂರ್ಣಾ ನ್ಯಗ್ರೋಧಪರಿಮಂಡಲಾಃ ।
ನ್ಯಗ್ರೋಧೌ ತು ಸ್ಮೃತೌ ಬಾಹೂ ವ್ಯಾಮೋ ನ್ಯಗ್ರೋಧ ಉಚ್ಯತೇ॥೭೨॥

ವ್ಯಾಮೇನೈವೋಚ್ಛ್ರಯೋ ಯಸ್ಯ ಸಮ ಊರ್ಧ್ವಂ ತು ದೇಹಿನಃ ।
ಸಮೋಚ್ಛ್ರಯಪರೀಣಾಹೋ ಜ್ಞೇಯೋ ನ್ಯಗ್ರೋಧಮಂಡಲಃ॥೭೩ ॥

---

ಸಲ್ಪಟ್ಟಿತು. ತ್ರೇತಾಯುಗದಲ್ಲಿ ಸತ್ಯವಚನ, ಜಪ, ತಪಸ್ಸು, ಮತ್ತು ದಾನ ಇವುಗಳು ಮುಖ್ಯ ಧರ್ಮಗಳಾಗಿದ್ದವು.

೬೯. ಆಗ ಸಾವಿರಾರು ವಿಧ ಧರ್ಮಗಳ ಎಲ್ಲಿಯಲ್ಲಿ ಅಹಿಂಸಾ ರೂಪವಾದ ಧರ್ಮವು ಪ್ರಚಾರವಾಗುತ್ತದೆ. ಮತ್ತು ಆಗ ಧರ್ಮರಕ್ಷಣೆಗೋಸ್ಕರ ಶೂರರೂ, ದೀರ್ಘಾಯುಷ್ಯವುಳ್ಳವರೂ, ಮಹಾ ಬಲಿಷ್ಠರೂ ಆದ ಕ್ಷತ್ರಿಯರು ಜನಿಸುವರು.

೭೦. ಮತ್ತು ಆ ಕ್ಷತ್ರಿಯರು ಹಿಂಸೆಯನ್ನು ಪರಿತ್ಯಾಗ ಮಾಡಿದವರೂ, ಮಹಾತ್ಮರೂ, ಧರ್ಮ ತತ್ಪರರೂ, ಬ್ರಹ್ಮವಾದಿಗಳೂ, ತಾವರೆಯ ದಳದಂತೆ ವಿಶಾಲ ನೇತ್ರವುಳ್ಳವರೂ, ವಿಸ್ತಾರವಾದ ಎದೆಯುಳ್ಳವರೂ, ಒತ್ತಾದ ಶರೀರ ಸನ್ನಿವೇಶ ವುಳ್ಳವರೂ ಆಗಿರುವರು.

೭೧. ಆ ತ್ರೇತಾಯುಗದಲ್ಲಿದ್ದ ಕ್ಷತ್ರಿಯರು ಸಿಂಹಕ್ಕಿಂತ ಬಲಿಷ್ಠರೂ, ಮದಿಸಿದ ಆನೆಯಂತೆ ಗಂಭೀರ ಗಮನವುಳ್ಳವರೂ, ವಿಶಾಲವಾದ ಬಿಲ್ಲನ್ನು ಧರಿಸಿರುವವರೂ ಆಗಿರುವರು.

೭೨. ಮತ್ತು ಚಕ್ರವರ್ತಿಯ ಸರ್ವ ಲಕ್ಷಣಗಳಿಂದ ಕೂಡಿ ಆಲದ ಮರದಂತೆ ವಿಸ್ತಾರವಾದ ಸ್ವರೂಪ ಮತ್ತು ದೀರ್ಘವಾದ ಬಾಹುಗಳು ಇವುಗಳಿಂದ ಕೂಡಿರುವರು.

೭೩. ಈ ಕ್ಷತ್ರಿಯ ಶರೀರದ ವಿಸ್ತಾರ ಮತ್ತು ಉನ್ನತಿ ಇವುಗಳಿಗೆ ಆಲದ

ಚಕ್ರಂ ರಥೋ ಮಣಿರ್ಭಾರ್ಯಾ ನಿಧಿರಶ್ವೋ ಗಜಸ್ತಥಾ ।
ಸಪ್ತೈತಾನಿ ಚ ರತ್ನಾನಿ ಸರ್ವೇಷಾಂ ಚಕ್ರವರ್ತಿನಾಮ್ ॥ ೭೪ ॥

ಚಕ್ರಂ ರಥೋ ಮಣಿಃ ಖಡ್ಗಶ್ಚರ್ಮ ರತ್ನಂ ಚ ಪಂಚಮಮ್ ।
ಕೇತುರ್ನಿಧಿಶ್ಚ ಸಪ್ತೈವ ಪ್ರಾಣಹೀನಾನಿ ಚಕ್ಷತೇ ॥ ೭೫ ॥

ಭಾರ್ಯಾ ಪುರೋಹಿತಶ್ಚೈವ ಸೇನಾನೀ ರಥಕೃಚ್ಚ ಯಃ ।
ಮಂತ್ರ್ಯಶ್ವಃ ಕಲಭಶ್ಚೈವ ಪ್ರಾಣಿನಃ ಸಪ್ತ ಕೀರ್ತಿತಾಃ ॥ ೭೬ ॥

ರತ್ನಾನ್ಯೇತಾನಿ ದಿವ್ಯಾನಿ ಸಂಸಿದ್ಧಾನಿ ಮಹಾತ್ಮನಾಮ್ ।
ಚತುರ್ದಶ ವಿಧೇಯಾನಿ ಸರ್ವೇಷಾಂ ಚಕ್ರವರ್ತಿನಾಮ್ ॥ ೭೭ ॥

ವಿಷ್ಣೋರಂಶೇನ ಜಾಯಂತೇ ಪೃಥಿವ್ಯಾಂ ಚಕ್ರವರ್ತಿನಃ ।
ಮನ್ವಂತರೇಷು ಸರ್ವೇಷು ಅತೀತಾನಾಗತೇಷ್ವಿಹ ॥ ೭೮ ॥

---

ಮರವೇ ಸರ್ವಾಂಶಗಳಿಂದಲೂ ಉಪಮಾನವಾಗಿರುವುದು ಎಂದು ತಿಳಿಯಬೇಕು

೭೪. ಇಂತಹ ಚಕ್ರವರ್ತಿಗಳಲ್ಲಿ ಚಕ್ರ, ರಥ, ಮಣಿ, ಪತ್ನಿ, ನಿಧಿ, ಕುದುರೆ, ಆನೆ, ಇವು ಚಕ್ರವರ್ತಿ ಪದವನ್ನು ಪೂರ್ಣಮಾಡುವ ಸಪ್ತರತ್ನಗಳಾಗಿವೆ.

೭೫. ಚಕ್ರ, ರಥ, ಮಣಿ, ಖಡ್ಗ, ಚರ್ಮ, ಧ್ವಜ, ನಿಧಿ, ಎಂಬ ಸಪ್ತರತ್ನಗಳು ಚಕ್ರವರ್ತಿಗಳ ಸಮೃದ್ಧಿಯಲ್ಲಿ ಸೇರಿದ ಅಚೇತನವಾದ ರತ್ನಗಳೆಂದು ಹೇಳುವರು.

೭೬. ಇದರಂತೆ ಪತ್ನಿ, ಪುರೋಹಿತ, ಸೇನಾಧಿಪತಿ, ರಥಕಾರ, ಮಂತ್ರಿ, ಅಶ್ವ, ಗಜ, ಎಂಬುವ ಏಳು ಪ್ರಾಣ ಸಹಿತವಾದ ರತ್ನಗಳೆಂದು ಪ್ರಾಜ್ಞರು ಹೇಳುವರು.

೭೭. ಮಹಾತ್ಮರಾದ ಚಕ್ರವರ್ತಿಗಳಲ್ಲಿ ಈ ಚೇತನ, ಅಚೇತನಗಳೆಂಬ ಎರಡು ಬಗೆಯಾದ ಹದಿನಾಲ್ಕು ರತ್ನಗಳು ಸಿದ್ಧಿಯನ್ನು ಕೊಡುವುವುಗಳಾಗಿ ಇರುವ ಶುಭೋಪಕರಣಗಳಾಗಿವೆ.

೭೮. ಭೂಮಂಡಲದಲ್ಲಿ ಹಿಂದೆ ಕಳೆದ ಮತ್ತು ಮುಂದೆ ಬರುವ ಪ್ರತಿಯೊಂದು ಮನ್ವಂತರಗಳಲ್ಲಿಯೂ ಚಕ್ರವರ್ತಿಗಳು ವಿಷ್ಣುವಿನ ಅಂಶದಿಂದ ಕೂಡಿ ಜನಿಸುವರು.

ಭೂತಭವ್ಯಾನಿ ಯಾನೀಹ ವರ್ತಮಾನಾನಿ ಯಾನಿ ಚ ।
ತ್ರೇತಾಯುಗೇ ಚ ತಾನ್ಯತ್ರ ಜಾಯಂತೇ ಚಕ್ರವರ್ತಿನಃ ॥ ೭೯ ॥

ಭದ್ರಾಣೀಮಾನಿ ತೇಷಾಂ ವೈ ಭವಂತೀಹ ಮಹೀಕ್ಷಿತಾಮ್ ।
ಅತ್ಯದ್ಭುತಾನಿ ಚತ್ವಾರಿ ಬಲಂ ಧರ್ಮಃ ಸುಖಂ ಧನಮ್ ॥ ೮೦ ॥

ಅನ್ಯೋನ್ಯಸ್ಯಾವಿರೋಧೇನ ಪ್ರಾಪ್ಯಂತೇ ತು ನೃಪೈಃ ಸಮಮ್ ।
ಅರ್ಥೋ ಧರ್ಮಶ್ಚ ಕಾಮಶ್ಚ ಯಶೋ ವಿಜಯ ಏವ ಚ ॥ ೮೧ ॥

ಐಶ್ವರ್ಯೇಣಾಣಿಮಾದ್ಯೇನ ಪ್ರಭುಶಕ್ತ್ಯಾ ತಥೈವ ಚ ।
ಶ್ರುತೇನ ತಪಸಾ ಚೈವ ಮುನೀನಭಿಭವಂತಿ ವೈ ॥ ೮೨ ॥

ಬಲೇನ ತಪಸಾ ಚೈವ ದೇವದಾನವಮಾನವಾನ್ ।
ಲಕ್ಷಣೈಶ್ಚೈವ ಜಾಯಂತೇ ಶರೀರಸ್ಥೈರಮಾನುಷೈಃ ॥ ೮೩ ॥

---

೭೯. ತ್ರೇತಾಯುಗದಲ್ಲಿ ಜನಿಸಿರುವ ಚಕ್ರವರ್ತಿಗಳಿಗೆ ಭೂತ, ಭವಿಷ್ಯ ಮತ್ತು ವರ್ತಮಾನ ಕಾಲಗಳಲ್ಲಿ ಆವಿರ್ಭವಿಸುವ ಮಂಗಳಕರವಾದ ಎಲ್ಲ ರತ್ನ ವಸ್ತುಗಳೂ ಅಧೀನವಾಗಿರುವುವು.

೮೦. ರಾಜರಲ್ಲಿ ಮಂಗಳಕರವಾದ ಸಮಸ್ತ ವಸ್ತುಗಳೂ ಪೂರ್ಣವಾಗಿರುವು ವಲ್ಲದೆ ಬಲ, ಧರ್ಮ, ಸುಖ ಮತ್ತು ಧನ ಎಂಬ ನಾಲ್ಕು ಅತ್ಯದ್ಭುತವಾದ ಸಾಧನ ಗಳು ಇರುವುವು.

೮೧. ಈ ಸಾಧನಗಳಿಂದ ಪೂರ್ಣರಾದ ರಾಜರು ಅರ್ಥ, ಧರ್ಮ ಕಾಮ, ಕೀರ್ತಿ ಮತ್ತು ವಿಜಯಗಳನ್ನು ಒಂದನ್ನು ಮತ್ತೊಂದು ವಿರೋಧಿಸದಂತೆ ಯಥೇಚ್ಛ ವಾಗಿ ಗಳಿಸಿರುವರು.

೮೨. ಮತ್ತು ಅಂತಹ ರಾಜರು ಅಣಿಮಾದಿ ಅಷ್ಟೈಶ್ವರ್ಯ, ಪ್ರಭುಶಕ್ತಿ, ವೇದ ಶಾಸ್ತ್ರಾದಿ ಅಧ್ಯಯನ ಸಂಪತ್ತು. ಮತ್ತು ತಪಶ್ಚರ್ಯೆ ಇವುಗಳಿಂದ ಮಹರ್ಷಿಗಳನ್ನು ಮೀರಿಸಿ ರಾಜರ್ಷಿಗಳಾಗಿರುವರು.

೮೩. ಮತ್ತು ಶಕ್ತಿ ತಪೋಬಲಗಳಿಂದ ದೇವ, ಅಸುರ, ಮತ್ತು ಮಾನವರನ್ನು ತಿರಸ್ಕರಿಸಿ ಮನುಷ್ಯ ಸಾಮಾನ್ಯರಲ್ಲಿಲ್ಲದ ಲಕ್ಷಣಗಳಿಂದ ಕೂಡಿದ ದೇಹವನ್ನು ಧರಿಸು ವರು.

ಕೇಶಾಃ ಸ್ನಿಗ್ಧಾ ಲಲಾಟೋಚ್ಚಾ ಜಿಹ್ವಾ ಚಾಸ್ಯ ಪ್ರಮಾರ್ಜನೀ ।
ತಾಮ್ರಪ್ರಭೋಷ್ಠನೇತ್ರಾಶ್ಚ ಶ್ರೀವತ್ಸಾಶ್ಚೋರ್ಧ್ವರೋಮಶಾಃ ॥ ೮೪ ॥

ಆಜಾನುಬಾಹವಶ್ಚೈವ ತಾಮ್ರಹಸ್ತಾಃ ಕಟೌ ಕೃಶಾಃ ।
ನ್ಯಗ್ರೋಧಪರಿಣಾಹಾಶ್ಚ ಸಿಹ್ಮಸ್ಕಂಧಾಸ್ತು ಮೇಹನಾಃ ॥ ೮೫ ॥

ಗಜೇಂದ್ರಗತಯಶ್ಚೈವ ಮಹಾಹನವ ಏವ ಚ ।
ಪಾದಯೋಶ್ಚಕ್ರಮತ್ಸ್ಯೌ ತು ಶಂಖಪದ್ಮೌ ತು ಹಸ್ತಯೋಃ ॥ ೮೬ ॥

ಪಂಚಾಶೀತಿಸಹಸ್ರಾಣಿ ತೇ ರಾಜಂತ್ಯಜರಾ ನೃಪಾಃ ।
ಅಸಂಗಗತಯಸ್ತೇಷಾಂ ಚತಸ್ರಶ್ಚಕ್ರವರ್ತಿನಾಮ್ ॥ ೮೭ ॥

ಅಂತರಿಕ್ಷೇ ಸಮುದ್ರೇ ಚ ಪಾತಾಳೇ ಪರ್ವತೇಷು ಚ ।
ಇಜ್ಯಾ ದಾನಂ ತಪಃ ಸತ್ಯಂ ತ್ರೇತಾಯಾಂ ಧರ್ಮ ಉಚ್ಯತೇ ॥ ೮೮ ॥

---

೮೪. ಅವರ ಕೂದಲು ನಯವಾಗಿಯೂ, ಹಣೆಯು ಎತ್ತರವಾಗಿಯೂ ನಾಲಿಗೆಯು ದೀರ್ಘವಾಗಿಯೂ ತುಟಿ ಮತ್ತು ಕಡೆಗಣ್ಣು ಕೆಂಪಾಗಿಯೂ ಇರುವುದು. ಮತ್ತು ಮಂಗಳಕರವಾದ ಮಚ್ಚೆ, ಊರ್ಧ್ವಾಗ್ರವಾದ ರೋಮಗಳಿಂದ ಕೂಡಿರುವರು.

೮೫. ಮಂಡಿಯವರೆಗೆ ದೀರ್ಘವಾದ ಬಾಹುವೂ, ಕೆಂಪಾದ ಕೈಗಳೂ ಕೃಶವಾದ ಕಟಿಭಾಗವೂ, ಆಲದರೆಂಬೆಯಂತೆ ವಿಶಾಲವಾದ ಬಾಹು, ಸಿಂಹದಂತೆ ಸ್ಕಂಧ, ಮುಂತಾದ ಲಕ್ಷಣವಾದ ಅಂಗಾಂಗಗಳಿಂದ ಶೋಭಿಸುವರು.

೮೬. ಅವರ ಗಮನವು ಮದಿಸಿದ ಆನೆಯಂತೆ ಗಂಭೀರವಾಗಿರುವುದು. ಕಪೋಲಗಳು ವಿಶಾಲವಾಗಿರುವುವು. ಮತ್ತು ಚರಣಗಳಲ್ಲಿ ಚಕ್ರ, ಮತ್ಸ್ಯಗಳ ರೇಖೆಗಳೂ, ಕೈಗಳಲ್ಲಿ ಶಂಖ, ಪದ್ಮಗಳ ರೇಖೆಗಳೂ ಇರುವುವು.

೮೭. ಇಂತಹ ರಾಜರು ಎಂಭತ್ತೈದು ಸಹಸ್ರ ಸಂಖ್ಯೆಯಿಂದ ಜನಿಸಿ ಮುಪ್ಪಿಲ್ಲದವರೂ, ತಡೆಯಿಲ್ಲದ ಸಂಚಾರವುಳ್ಳವರೂ, ನಿರಂಕುಶವಾದ ಪ್ರಭುತ್ವವುಳ್ಳವರೂ. ಆಗಿ ಧರ್ಮವನ್ನು ಪಾಲಿಸುವರು.

೮೮. ಅಂತರಿಕ್ಷ ಸಮುದ್ರ-ಪಾತಾಲ, ಮತ್ತು ಪರ್ವತ ಮುಂತಾದ ಎಲ್ಲ ಸ್ಥಳಗಳಲ್ಲಿಯೂ, ಅವ್ಯಾಹತವಾಗಿ ಸಂಚಾರ ಮಾಡುವರು. ಆ ತ್ರೇತಾಯುಗದಲ್ಲಿ ಯಜ್ಞ, ದಾನ, ತಪಸ್ಸು ಮತ್ತು ಸತ್ಯವಚನಗಳು ಮುಖ್ಯವಾದ ಧರ್ಮಗಳಾಗಿ ಪರಿಣಮಿಸುವುವು.

ತದಾ ಪ್ರವರ್ತತೇ ಧರ್ಮೋ ವರ್ಣಾಶ್ರಮವಿಭಾಗಶಃ ।
ಮರ್ಯಾದಾಸ್ಥಾಪನಾರ್ಥಂ ಚ ದಂಡನೀತಿಃ ಪ್ರವರ್ತತೇ ॥ ೮೯ ॥

ಹೃಷ್ಟಪುಷ್ಟಾಃ ಪ್ರಜಾಃ ಸರ್ವಾ ಅರೋಗಾಃ ಪೂರ್ಣಮಾನಸಾಃ ।
ಏಕೋ ವೇದಶ್ಚತುಷ್ಪಾದಸ್ತ್ರೇತಾಯುಗವಿಧೌ ಸ್ಮೃತಃ ॥ ೯೦ ॥

ತ್ರೀಣಿ ವರ್ಷಸಹಸ್ರಾಣಿ ತದಾ ಜೀವಂತಿ ಮಾನವಾಃ ।
ಪುತ್ರಪೌತ್ರಸಮಾಕೀರ್ಣಾ ಮ್ರಿಯಂತೇ ಚ ಕ್ರಮೇಣ ತು ॥ ೯೧ ॥

ಏಷ ತ್ರೇತಾಯುಗೇ ಧರ್ಮಸ್ತ್ರೇತಾಸಂಧ್ಯಾಂ ನಿಬೋಧತ ।
ತ್ರೇತಾಯುಗಸ್ವಭಾವಾನಾಂ ಸಂಧ್ಯಾ ಪಾದೇನ ವರ್ತತೇ ।
ಸಂಧ್ಯಾಪಾದಸ್ವಭಾವಸ್ತು ಸೋಽಂಶಪಾದೇನ ತಿಷ್ಠತಿ ॥ ೯೨ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಏಕೋನತ್ರಿಂಶತ್ತಮೋಽಧ್ಯಾಯಃ.

---

೮೯. ಆಗ ವರ್ಣ ಮತ್ತು ಆಶ್ರಮಗಳ ವಿಭಾಗದಿಂದ ಧರ್ಮವೂ ಕೂಡ ಶಾಖೆಯಾಗಿ ವಿಸ್ತರಿಸುತ್ತದೆ. ಮತ್ತು ರಾಜ್ಯ ಮರ್ಯಾದೆಯನ್ನು ಸ್ಥಾಪಿಸುವುದಕ್ಕೆ ದಂಡ ನೀತಿಯೂ ಪ್ರವರ್ತಿಸುವುದು.

೯೦. ಆಗಿನ ಪ್ರಜೆಗಳು ಹೃಷ್ಟಪುಷ್ಟರಾಗಿಯೂ, ನಿರೋಗರಾಗಿಯೂ, ತೃಪ್ತಿ ಹೊಂದಿದ ಮಾನಸವುಳ್ಳವರಾಗಿಯೂ ಸುಖದಿಂದ ಬಾಳುವರು. ತ್ರೇತಾಯುಗದ ಆಚಾರ ವಿಧಾನದಲ್ಲಿ ವೇದವು ನಾಲ್ಕು ಪಾದಗಳಿಂದ ಸ್ಥಿರವಾಗಿ ನಿಂತಿರುವ ಮುಖ್ಯವಾದ ಆಧಾರವಾಗಿರುವುದು.

೯೧. ಆಗ ಮಾನವರು ಮೂರು ಸಾವಿರ ವರ್ಷದವರೆಗೆ ದೀರ್ಘಾಯುಷ್ಯವನ್ನು ಹೊಂದುವರು. ಅಷ್ಟು ಕಾಲ ಸುಖವಾಗಿ ಜೀವಿಸಿ ಪುತ್ರ ಪೌತ್ರಾದಿ ಸಂಪನ್ನರಾಗಿ ಕಾಲಕ್ರಮದಲ್ಲಿ ಮರಣ ಹೊಂದುವರು.

೯೨. ಈ ರೀತಿಯಲ್ಲಿ ತ್ರೇತಾಯುಗದಲ್ಲಿ ಧರ್ಮವು ಪ್ರಸರಿಸುವುದು. ಇನ್ನು ಮುಂದೆ ತ್ರೇತಾಯುಗದ ಸಂಧ್ಯಾಂಶವನ್ನು ಕೇಳಿರಿ. ಆ ಸಂಧ್ಯಾಂಶವು ತ್ರೇತಾಯುಗದ ಸ್ವಭಾವವನ್ನನುಸರಿಸಿ ಒಂದು ಪಾದಾಂಶದಿಂದ ಪ್ರವರ್ತಿಸುವುದು. ಯುಗಕ್ಕೂ ಯುಗದ ಸಂಧ್ಯಾಂಶಕ್ಕೂ ಕೂಡ ಸ್ವಭಾವದಲ್ಲಿ ಹೋಲಿಕೆ ಇರುವುದು.

ಬ್ರಹ್ಮಾಂಡ ಪುರಾಣದಲ್ಲಿ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

# ತ್ರಿಂಶತ್ತಮೋಽಧ್ಯಾಯಃ

**ಶಾಂಶಪಾಯುನಿರುವಾಚ :—**

**ಕಥಂ ತ್ರೇತಾಯುಗಮುಖೇ ಯಜ್ಞಸ್ಯ ಸ್ಯಾತ್ ಪ್ರವರ್ತನಮ್ ।**
**ಪೂರ್ವಂ ಸ್ವಾಯಂಭುವೇ ಸರ್ಗೇ ಯಥಾವತ್ತ್ವಚ್ಚ ಬ್ರೂಹಿ ಮೇ ॥ ೧ ॥**

**ಅಂತರ್ಹಿತಾಯಾಂ ಸಂಧ್ಯಾಯಾಂ ಸಾರ್ಧಂ ಕೃತಯುಗೇನ ವೈ ।**
**ಕಾಲಾಖ್ಯಾಯಾಂ ಪ್ರವೃತ್ತಾಯಾಂ ಪ್ರಾಪ್ತೇ ತ್ರೇತಾಯುಗೇ ತದಾ ॥ ೨ ॥**

**ಓಷಧೀಷು ಚ ಜಾತಾಸು ಪ್ರವೃತ್ತೇ ವೃಷ್ಟಿಸರ್ಜನೇ ।**
**ಪ್ರತಿಷ್ಠಿತಾಯಾಂ ವಾರ್ತಾಯಾಂ ಗೃಹಾಶ್ರಮಪರೇ ಪುನಃ ॥ ೩ ॥**

**ವರ್ಣಾಶ್ರಮವ್ಯವಸ್ಥಾನಂ ಕೃತವಂತಶ್ಚ ಸಂಖ್ಯಯಾ ।**
**ಸಂಭಾರಾಂಸ್ತಾಂಸ್ತು ಸಂಭೃತ್ಯ ಕಥಂ ಯಜ್ಞಃ ಪ್ರವರ್ತಿತಃ ॥ ೪ ॥**

---

೧. ಶಾಂಶಪಾಯನ ಮುನಿಯು ಪ್ರಶ್ನಿಸುವನು.

ಸೂತಮುನಿಯೆ, ಸ್ವಾಯಂಭುವಮನ್ವಂತರದ ಸೃಷ್ಟಿಯಲ್ಲಿ ತ್ರೇತಾಯುಗದ ಆದಿಯಲ್ಲಿ ಅಪೂರ್ವವಾಗಿ ಯಜ್ಞದ ಪ್ರಸಾರವು ಹೇಗೆ ಉಂಟಾಯಿತೆಂಬುದನ್ನು ನನಗೆ ಉಪದೇಶಿಸಬೇಕು.

೨. ಹಾಗೆ ಕೃತ ಯುಗ ಮತ್ತು ಅದರ ಸಂಧ್ಯಾಂಶಗಳು ಕಳೆಯಲಾಗಿ ಹೊಸ ಕಾಲರೂಪವಾದ ತ್ರೇತಾಯುಗವು ಪ್ರವರ್ತಿಸುವುದು.

೩. ಮತ್ತು ಆ ಕಾಲದಲ್ಲಿ ಸಸ್ಯಗಳ ಉತ್ಪತ್ತಿಯು ಪ್ರಾರಂಭವಾಗುವುದು. ಅವುಗಳನ್ನ ವೃದ್ಧಿಮಾಡಲು ಮಳೆಯು ಸಾಧನವಾಗುವುದು. ಮತ್ತು ಪ್ರಜೆಗಳು ಗೃಹ, ಆಶ್ರಮ ಇವುಗಳನ್ನು ರಚಿಸಿಕೊಂಡು ಸಂಸಾರ ವ್ಯವಹಾರವನ್ನು ಪ್ರತಿಷ್ಠೆಗೊಳಿಸುವರು.

೪. ಅಂತಹ ಪ್ರಜೆಗಳು ತಮ್ಮ ತಮ್ಮ ವರ್ಣ, ಆಶ್ರಮಗಳ ವ್ಯವಸ್ಥೆಯನ್ನು ಕಲ್ಪಿಸಿಕೊಂಡು ಉಚಿತವಾದ ಸಾಮಗ್ರಿಯನ್ನು ಸಿದ್ಧಪಡಿಸಿಕೊಂಡು ಯಜ್ಞರೂಪವಾದ ಧರ್ಮವನ್ನು ಪ್ರವರ್ತಿಸಿದುದು ಹೇಗೆ? ಎಂಬುದನ್ನು ಹೇಳಬೇಕು.

ಏತಚ್ಛ್ರುತ್ವಾಬ್ರವೀತ್ಸೂತಃ ಶ್ರೂಯತಾಂ ಶಾಂಶಪಾಯನೇ।
ಯಥಾ ತ್ರೇತಾಯುಗಮುಖೇ ಯಜ್ಞಸ್ಯ ಸ್ಯಾತ್ ಪ್ರವರ್ತನಮ್ ॥ ೫ ॥

ಪೂರ್ವಂ ಸ್ವಾಯಂಭುವೇ ಸರ್ಗೇ ತದ್ವಕ್ಷ್ಯಾಮ್ಯಾನುಪೂರ್ವ್ಯತಃ।
ಅಂತರ್ಹಿತಾಯಾಂ ಸಂಧ್ಯಾಯಾಂ ಸಾರ್ಧಂ ಕೃತಯುಗೇನ ತು ॥ ೬ ॥

ಕಾಲಾಖ್ಯಾಯಾಂ ಪ್ರವೃತ್ತಾಯಾಂ ಪ್ರಾಪ್ತೇ ತ್ರೇತಾಯುಗೇ ತದಾ।
ಔಷಧೀಷು ಚ ಜಾತಾಸು ಪ್ರವೃತ್ತೇ ವೃಷ್ಟಿಸರ್ಜನೇ ॥ ೭ ॥

ಪ್ರತಿಷ್ಠಿತಾಯಾಂ ವಾರ್ತಾಯಾಂ ಗೃಹಾಶ್ರಮಪರೇಷು ಚ।
ವರ್ಣಾಶ್ರಮವ್ಯವಸ್ಥಾನಂ ಕೃತ್ವಾ ಮಂತ್ರಾಂಸ್ತು ಸಂಹತಾನ್ ॥ ೮ ॥

ಮಂತ್ರಾಂಸ್ತಾನ್ ಯೋಜಯಿತ್ವಾಥ ಇಹಾಮುತ್ರ ಚ ಕರ್ಮಸು।
ತದಾ ವಿಶ್ವಭುಗಿಂದ್ರಸ್ತು ಯಜ್ಞಂ ಪ್ರಾವರ್ತಯತ್ಪ್ರಭುಃ ॥ ೯ ॥

---

೫. ಈ ಪ್ರಶ್ನವಚನವನ್ನು ಕೇಳಿ ಸೂತಮುನಿಯು ಈ ರೀತಿ ಪ್ರತ್ಯುತ್ತರ ವಿತ್ತನು. ಶಾಂಶಪಾಯನ ಮುನಿಯೇ, ತ್ರೇತಾಯುಗದ ಆದಿಯಲ್ಲಿ ಯಜ್ಞವು ಹೇಗೆ ಪ್ರಚಾರಕ್ಕೆ ಬಂತೆಂಬುದನ್ನು ಕೇಳು

೬. ಸ್ವಾಯಂಭುವ ಮನ್ವಂತರದಲ್ಲಿ ಯಜ್ಞವು ಕ್ರಮವಾಗಿ ಪ್ರಚಾರಕ್ಕೆ ಬಂದಿರುವ ಆನುಪೂರ್ವಿಯನ್ನು ಹೇಳುವೆನು. ಕೃತಯುಗವು ತನ್ನ ಸಂಧ್ಯಾಂಶದೊಡನೆ ಮೊದಲು ಕಳೆದುಹೋಯಿತಷ್ಟೆ.

೭. ಅನಂತರದಲ್ಲಿ ನೂತನ ಕಾಲರೂಪವಾದ ತ್ರೇತಾಯುಗವು ಪ್ರಾರಂಭಿಸಿ ನಾನಾವಿಧವಾದ ಧಾನ್ಯವನ್ನು ಕೊಡುವ ಸಸ್ಯಗಳು ಅದನ್ನು ವೃದ್ಧಿಗೊಳಿಸುವ ವೃಷ್ಟಿ ಪಾತವೂ ಉಂಟಾದುವು.

೮. ಗೃಹ, ಆಶ್ರಮಗಳ ನಿರ್ಮಾಣವು ಮತ್ತು ಉಚಿತವಾದ ಧಾರ್ಮಿಕ ವ್ಯವ ಹಾರ ವ್ಯವಸ್ಥೆಯು ಸ್ಥಿರವಾಗಲು ಅನೇಕ ಮಂತ್ರಗಳ ಸಂಘದಿಂದ ವರ್ಣ, ಆಶ್ರಮ ಧರ್ಮಗಳ ವ್ಯವಸ್ಥೆಯು ನೆಲೆಗೊಂಡಿತು.

೯. ಆಗ ಪ್ರಭುವೂ ವಿಶ್ವವನ್ನು ಪಾಲಿಸುವನೂ ಆದ ದೇವೇಂದ್ರನೂ, ಆ ಮಂತ್ರಗಳನ್ನು ವಿನಿಯೋಗಿಸಿ ಐಹಿಕ, ಆಮುಷ್ಮಿಕ, ಫಲಗಳನ್ನು ಕೊಡುವ ಯಜ್ಞ ವನ್ನು ಪ್ರವರ್ತಿಸಿದನು.

ದೈವತೈಃ ಸಹಿತೈಃ ಸರ್ವೈಃ ಸರ್ವಸಂಭಾರಸಂಭೃತೈಃ ।
ತಸ್ಯಾಶ್ವಮೇಧೇ ವಿತತೇ ಸಮಾಜಗ್ಮುರ್ಮಹರ್ಷಯಃ ॥ ೧೦ ॥

ಯಜಂತಂ ಪಶುಭಿರ್ಮೇಧ್ಯೈರೂಚುಃ ಸರ್ವೇ ಸಮಾಗತಾಃ ।
ಕರ್ಮವ್ಯಗ್ರೇಷು ಋತ್ವಿಕ್ಷು ಸಂತತೇ ಯಜ್ಞಕರ್ಮಣಿ ॥ ೧೧ ॥

ಸಂಪ್ರಗೀಥೇಷು ಸರ್ವೇಷು ಸಾಮಗೇಷ್ವಥ ಸುಸ್ವರಮ್ ।
ಪರಿಕ್ರಾಂತೇಷು ಲಘುಷು ಹ್ಯಧ್ವರ್ಯುವೃಷಭೇಷು ಚ ॥ ೧೨ ॥

ಆಲಬ್ಧೇಷು ಚ ಮೇಧ್ಯೇಷು ತಥಾ ಪಶುಗಣೇಷು ಚ ।
ಹವಿಷ್ಯಗ್ನೌ ಹೂಯಮಾನೇ ಬ್ರಾಹ್ಮಣೈಶ್ಚಾಗ್ನಿಹೋತ್ರಿಭಿಃ ॥ ೧೩ ॥

ಆಹೂತೇಷು ಚ ಸರ್ವೇಷು ಯಜ್ಞಭಾಕ್ಷು ಕ್ರಮಾತ್ತದಾ ।
ಯ ಇಂದ್ರಿಯಾತ್ಮಕಾ ದೇವಾಸ್ತದಾ ತೇ ಯಜ್ಞಭಾಗಿನಃ ॥ ೧೪ ॥

---

೧೦. ಆ ದೇವೇಂದ್ರನು ಯಜ್ಞಾರಂಭದಲ್ಲಿ ಸಮಸ್ತ ದೇವತೆಗಳಿಂದ ಕೂಡಿ ಎಲ್ಲ ಯಜ್ಞ ಸಂಭಾರವನ್ನು ಸಂಗ್ರಹಿಸಿ ಅಶ್ವಮೇಧ ಯಾಗವನ್ನು ಪ್ರಾರಂಭಿಸಿದನು. ಆಗ ಅನೇಕ ಮಹರ್ಷಿಗಳು ಆ ಯಜ್ಞಶಾಲೆಗೆ ಬಂದರು.

೧೧. ಆಗ ಅಲ್ಲಿಗೆ ಬಂದು ಸೇರಿದ ಸಕಲ ಮಹರ್ಷಿಗಳು, ಅನೇಕ ಋತ್ವಿಜರು ತಮ್ಮ ತಮ್ಮ ಕರ್ಮಗಳನ್ನು ಆಚರಿಸುತ್ತಾ ಸಾಂಗೋಪಾಂಗವಾಗಿ ಯಜ್ಞವನ್ನು ನಡೆಸುತ್ತಿರಲು ಅನೇಕ ಪವಿತ್ರ ಪಶುಗಳನ್ನರ್ಪಿಸಿ ಯಾಗ ಮಾಡುತ್ತಿದ್ದ ಇಂದ್ರನನ್ನು ನೋಡಿ ಮಾತನಾಡಿದರು.

೧೨. ಸಾಮವೇದ ನಿಪುಣರು ಅನೇಕ ಸ್ತೋತ್ರಗಳನ್ನು ಸುಸ್ವರದಿಂದ ಗಾನ ರೂಪವಾಗಿ ಹೇಳುತ್ತಲೂ ಶ್ರೇಷ್ಠರಾದ ಅಧ್ವರ್ಯು ಋತ್ವಿಜರು ಚಟುವಟಿಕೆಯಿಂದ ತಮ್ಮ ಕೆಲಸವನ್ನು ನಡೆಸುತ್ತಲೂ ಇದ್ದರು.

೧೩. ಮತ್ತು ಪವಿತ್ರವಾದ ಪಶುಗಳು ದೇವತೆಗಳಿಗೋಸ್ಕರ ಅರ್ಪಿಸಲ್ಪಡುತ್ತಿದ್ದವು. ಅಗ್ನಿಹೊತ್ರಿಗಳೂ, ಆಚಾರವಂತರೂ ಆದ ಆ ಬ್ರಾಹ್ಮಣರಿಂದ ಅಗ್ನಿಯಲ್ಲಿ ಹವಿಸ್ಸು ಹೋಮ ಮಾಡಲ್ಪಡುತ್ತಿದ್ದಿತು.

೧೪. ಆ ಯಜ್ಞಗಳಲ್ಲಿ ಹವಿಸ್ಸಿಗೆ ಭಾಗಿಗಳೂ, ಇಂದ್ರಿಯ ಶಕ್ತಿಸ್ವರೂಪರೂ ಆದ, ದೇವತೆಗಳೆಲ್ಲರೂ ಆಹೂತರಾಗಿ ಕ್ರಮವಾಗಿ ಬಂದು ಯಜ್ಞದ ಹವಿಸ್ಸನ್ನು ಭುಂಜಿಸುತ್ತಲಿದ್ದರು.

ತದ್ಯಜಂತೇ ತದಾ ದೇವಾನ್ ಕಲ್ಪಾದಿಷು ಭವಂತಿ ಯೇ।
ಅಧ್ವರ್ಯುರ್ಗಣಃ ಪ್ರೈಷಕಾಲೇ ವ್ಯುತ್ಥಿತಾ ವೈ ಮಹರ್ಷಯಃ ॥ ೧೫ ॥

ಮಹರ್ಷಯಸ್ತು ತಾನ್ ದೃಷ್ಟ್ವಾ ದೀನಾನ್ ಪಶುಗಣಾಂಸ್ತದಾ।
ಪಪ್ರಚ್ಛುರಿಂದ್ರಂ ಸಂಭೂಯ ಕೋಽಯಂ ಯಜ್ಞವಿಧಿಸ್ತವ ॥ ೧೬ ॥

ಅಧರ್ಮೋ ಬಲವಾನೇಷ ಹಿಂಸಾ ಧರ್ಮೇಪ್ಸಯಾ ತತಃ।
ತತಃ ಪಶುವಧಶ್ಚೈಷ ತವ ಯಜ್ಞೇ ಸುರೋತ್ತಮ ॥ ೧೭ ॥

ಅಧರ್ಮೋ ಧರ್ಮಘಾತಾಯ ಪ್ರಾರಬ್ಧಃ ಪಶುಹಿಂಸಯಾ।
ನಾಯಂ ಧರ್ಮೋ ಹ್ಯಧರ್ಮೋಽಯಂ ನ ಹಿಂಸಾ ಧರ್ಮ ಉಚ್ಯತೇ
॥ ೧೮ ॥

ಆಗಮೇನ ಭವಾನ್ ಯಜ್ಞಂ ಕರೋತು ಯದಿಹೇಚ್ಛತಿ।
ವಿಧಿದೃಷ್ಟೇನ ಯಜ್ಞೇನ ಧರ್ಮೇಣಾವ್ಯಪಸೇತುನಾ ॥ ೧೯ ॥

---

೧೫. ಆಗ ಕಲ್ಪದ ಆದಿಯಲ್ಲಿದ್ದ ದೇವತೆಗಳನ್ನುದ್ದೇಶಿಸಿ ಯಾಜಕರು ಯಜ್ಞ ಮಾಡಿದರು. ಆಗ ಪ್ರೈಷವನ್ನು ಉಚ್ಚರಿಸುವ ಸಮಯದಲ್ಲಿ ಅಧ್ವರ್ಯು ಋತ್ವಿಜರಾದ ಮಹರ್ಷಿಗಳೆಲ್ಲರೂ ಎದ್ದು ನಿಂತರು.

೧೬. ಮಹರ್ಷಿಗಳೆಲ್ಲರೂ ಮರಣಭೀತಿಯಿಂದ ದೈನ್ಯದಿಂದಿರುವ ಪಶುಗಳನ್ನು ಕಂಡು ಇಂದ್ರನನ್ನು ಕುರಿತು ಈ ನಿನ್ನ ಯಜ್ಞವಿಧಾನವು ಯಾವ ಬಗೆಯದು ಎಂದು ಪ್ರಶ್ನೆಮಾಡಿದರು.

೧೭. ದೇವತೋತ್ತಮನೆ, ಧರ್ಮವನ್ನಾಚರಿಸುವ ಅಭಿಲಾಷೆಯಿಂದ ಪಶು ವಧದಿಂದ ಕೂಡಿದ ಈ ಯಜ್ಞವನ್ನು ಅನುಷ್ಠಾನ ಮಾಡಿ ಪ್ರಬಲವಾದ ಹಿಂಸಾ ರೂಪವಾದ ಅಧರ್ಮವನ್ನು ಆರ್ಜಿಸಿದಂತಾಗುವುದು.

೧೮. ಪಶು ಹಿಂಸೆಯಿಂದ ಕೂಡಿದ, ಆರಂಭಿಸಲ್ಪಟ್ಟ ಈ ಅಧರ್ಮವು ಧರ್ಮ ವನ್ನು ನಾಶಪಡಿಸುವುದು. ಈ ಯಜ್ಞವು ನಿಜವಾಗಿ ಧರ್ಮರೂಪವಲ್ಲ. ಇದು ಅಧರ್ಮವು, ಹಿಂಸೆಯು, ಎಂದಿಗೂ ಧರ್ಮವಾಗಲಾರದು.

೧೯. ನೀನು ಯಜ್ಞವನ್ನು ಮಾಡಲು ಇಚ್ಛಿಸುವವನಾದರೆ ಶಾಸ್ತ್ರಾಧಾರವನ್ನು ಪರ್ಯಾಲೋಚಿಸಿ ಧರ್ಮಕ್ಕೆ ಚ್ಯುತಿ ಬರದ ವಿಧಿಯಲ್ಲಿ ಕಂಡ ಯಜ್ಞವನ್ನು ಮಾಡಲು ಅರ್ಹನಾಗಿದ್ದೀ.

ಯಜ್ಞಬೀಜೈಃ ಸುರಶ್ರೇಷ್ಠ ಯೇಷು ಹಿಂಸಾ ನ ವಿದ್ಯತೇ।
ತ್ರಿವರ್ಷಂ ಪರಮಂ ಕಾಲಮುಷಿತೈಃಪ್ರರೋಹಿಭಿಃ ॥ ೨೦ ॥

ಏಷ ಧರ್ಮೋ ಮಹಾಪ್ರಾಜ್ಞ ವಿರಿಂಚಿವಿಹಿತಃ ಪುರಾ।
ಏವಂ ವಿಶ್ವಭುಗಿಂದ್ರಸ್ತು ಋಷಿಭಿಸ್ತತ್ತ್ವದರ್ಶಿಭಿಃ ॥ ೨೧ ॥

ತದಾ ವಿವಾದಃ ಸುಮಹಾನಿಂದ್ರಸ್ಯಾಸೀನ್ಮಹರ್ಷಿಭಿಃ।
ಜಂಗಮಸ್ಥಾವರೈಃ ಕೈರ್ಹಿ ಯಷ್ಟವ್ಯಮಿತಿ ಚೋಚ್ಯತೇ ॥ ೨೨ ॥

ತೇ ತು ಖಿನ್ನಾ ವಿವಾದೇನ ತತ್ತ್ವಮುಕ್ತ್ವಾ ಮಹರ್ಷಯಃ।
ಸಂಧಾಯ ವಾಕ್ಯಮಿಂದ್ರೇಣ ಪಪ್ರಚ್ಛುಃ ಖೇಚರಂ ವಸುಮ್ ॥ ೨೩ ॥

ಮಹಾಪ್ರಾಜ್ಞ ಕಥಂ ದೃಷ್ಟಸ್ತ್ವಯಾ ಯಜ್ಞವಿಧಿರ್ನೃಪ।
ಔತ್ತಾನಪಾದೇ ಪ್ರಬ್ರೂಹಿ ಸಂಶಯಂ ನೋ ನುದ ಪ್ರಭೋ ॥ ೨೪ ॥

---

ದೇವೋತ್ತಮನೆ.—

೨೦. ಯಜ್ಞಾರ್ಹವಾಗಿರುವ, ಮೂರು ವರ್ಷಗಳ ಕಾಲ ಹಳೆಯದಾಗಿ ಪುನಃ ಅಂಕುರಿಸಲು ಅಯೋಗ್ಯವಾದ ಧಾನ್ಯ ಬೀಜಗಳಿಂದ ನೀನು ಯಜ್ಞವನ್ನಾಚರಿಸು. ಆಗ ಹಿಂಸೆಯ ಲೇಶವೂ ಇರುವುದಿಲ್ಲ.

೨೧. ಮಹಾಪ್ರಜ್ಞಾಶಾಲಿಯೇ! ಈ ಧರ್ಮವು ಪೂರ್ವದಲ್ಲಿ ಬ್ರಹ್ಮನಿಂದ ವಿಹಿತವಾದದ್ದು, ಎಂಬುದಾಗಿ ತತ್ವಜ್ಞಾನಿಗಳಾದ ಮಹರ್ಷಿಗಳಿಂದ ವಿಶ್ವಪಾಲಕನಾದ ಇಂದ್ರನು ಹೇಳಲ್ಪಟ್ಟನು.

೨೨, ಆಗ ಇಂದ್ರನಿಗೂ ಮಹರ್ಷಿಗಳಿಗೂ ಅತ್ಯಗಾಧವಾದ ವಾದವು ಜರುಗಿತು. ಜಂಗಮ ಪ್ರಾಣಿ ಅಥವಾ ಸ್ಥಾವರ ಬೀಜ ಇವುಗಳಲ್ಲಿ ಯಾವ ಸಾಧನದಿಂದ ಯಜ್ಞವನ್ನು ಆಚರಿಸಬೇಕೆಂಬ ವಿಷಯವಾಗಿ ತೀವ್ರವಾದ ಚರ್ಚೆಯನ್ನು ಮಾಡಿದರು.

೨೩. ಮಹರ್ಷಿಗಳು ತತ್ವಾಂಶವನ್ನು ಹೇಳಿ ವಾದದಿಂದ ಖಿನ್ನರಾಗಿ ಇಂದ್ರನೊಡನೆ ಸಂಧಿಮಾಡಿಕೊಂಡು ಅಂತರಿಕ್ಷದಲ್ಲಿ ವಾಸಮಾಡುವ ವಸುವನ್ನು ಕುರಿತು ಪ್ರಶ್ನಿಸಿದರು.

೨೪. ಮಹಾಪ್ರಜ್ಞಾಶಾಲಿಯೂ, ಪ್ರಭುವೂ ಆದ ಉತ್ತಾನಪಾದನ ಪುತ್ರನಾದ

**ಶ್ರುತ್ವಾ ವಾಕ್ಯಂ ವಸುಸ್ತೇಷಾಮವಿಚಾರ್ಯ ಬಲಾಬಲಮ್ ।**
**ವೇದಶಾಸ್ತ್ರಮನುಸ್ಮೃತ್ಯ ಯಜ್ಞತತ್ತ್ವಮುವಾಚ ಹ　　॥ ೨೫ ॥**

**ಯಥೋಪನೀತೈರ್ಯಷ್ಟವ್ಯಮಿತಿ ಹೋವಾಚ ಪಾರ್ಥಿವಃ ।**
**ಯಷ್ಟವ್ಯಂ ಪಶುಭಿರ್ಮೇಧ್ಯೈರಥ ಬೀಜೈಃ ಫಲೈರಪಿ　　॥ ೨೬ ॥**

**ಹಿಂಸಾಸ್ವಭಾವೋ ಯಜ್ಞಸ್ಯ ಇತಿ ಮೇ ದರ್ಶನಾಗಮೌ ।**
**ಯಥಾಹ ದೇವತಾ ಮಂತ್ರಾ ಹಿಂಸಾಲಿಂಗಾ ಮಹರ್ಷಿಭಿಃ　　॥ ೨೭ ॥**

**ದೀರ್ಘೇಣ ತಪಸಾ ಯುಕ್ತೈರ್ದರ್ಶನೈಸ್ತಾರಕಾದಿಭಿಃ ।**
**ತತ್ಪ್ರಮಾಣ್ಯಾನ್ಮಯಾ ಚೋಕ್ತಂ ತಸ್ಮಾತ್ಸಂಪ್ರಾಪ್ತುಮರ್ಹಥ　　॥ ೨೮ ॥**

**ಯದಿ ಪ್ರಮಾಣಂ ತಾನ್ಯೇವ ಮಂತ್ರವಾಕ್ಯಾನಿ ವೈ ದ್ವಿಜಾಃ ।**
**ತಥಾ ಪ್ರವರ್ತತಾಂ ಯಜ್ಞೋ ಹ್ಯನ್ಯಥಾ ವೋಽನೃತಂ ವಚಃ　　॥೨೯॥**

---

ವಸುರಾಜನೇ ! ನೀನು ಯಜ್ಞದ ವಿಧಾನವನ್ನು ಯಾವ ರೀತಿಯಲ್ಲಿ ತಿಳಿದಿರುವಿ ? ಆ ವಿಷಯದಲ್ಲಿ ನಮಗುಂಟಾದ ಸಂಶಯವನ್ನು ಹೋಗಲಾಡಿಸುವಂತೆ ಬೋಧಿಸು.

೨೫. ವಸುರಾಜನು ಈ ಮಾತನ್ನು ಕೇಳಿ ಇಂದ್ರ, ಮಹರ್ಷಿಗಳಿಗೆ ಪ್ರಮಾಣಗಳ ಬಲಾಬಲವನ್ನು ವಿಚಾರಿಸದೇ ವೇದಶಾಸ್ತ್ರ ಮುಂತಾದ ಪ್ರಮಾಣವನ್ನು ಪರ್ಯಾಲೋಚಿಸಿ ಯಜ್ಞದ ತತ್ವವನ್ನುಪದೇಶಿಸಿದನು.

೨೬. ವಸುರಾಜನು ಪವಿತ್ರವಾದ ಪಶು, ಬೀಜ, ಮತ್ತು ಫಲಗಳು ಎಲ್ಲವೂ ಯಜ್ಞಕ್ಕೆ ವಿಹಿತವಾದ ಸಾಧನಗಳು, ವಿಧಿಯನ್ನನುಸರಿಸಿ ಎಲ್ಲ ಸಾಧನಗಳಿಂದಲೂ ಆಯಾಯ ಮಾರ್ಗಗಳನ್ನು ಆಚರಿಸಬೇಕು ಎಂದು ಹೇಳಿದನು.

೨೭. ಯಜ್ಞವೆಂಬುದು ಹಿಂಸೆಯ ಸ್ವರೂಪದಿಂದ ಕೂಡಿದ್ದೇ ಆಗಿದೆ, ಎಂದು ನನ್ನ ಶಾಸ್ತ್ರಾಧಾರದಿಂದ ಬಂದ ಅನುಭವವು. ಈ ಯಜ್ಞಾಂಗವಾದ ಮಂತ್ರಗಳು ಹಿಂಸೆಯನ್ನು ಪ್ರಕಾಶಪಡಿಸುವ ಅರ್ಥಗಳನ್ನು ಗರ್ಭೀಕರಿಸಿವೆ.

೨೮. ದೀರ್ಘಕಾಲದ ತಪಶ್ಚರ್ಯೆಯಿಂದ ಕೂಡಿದ ಮಹಾತ್ಮರ ಸಾಕ್ಷಾತ್ಕಾರಗಳಿಂದ ನಕ್ಷತ್ರಾದಿ ವಿಷಯಗಳಂತೆ ಪ್ರಮಾಣವಾಗಿ ಯಜ್ಞಾದಿ ಕರ್ಮಗಳು ಎಣಿಸಲ್ಪಟ್ಟಿವೆ. ಆ ಪ್ರಾಮಾಣ್ಯವನ್ನವಲಂಬಿಸಿ ನಾನು ಉಪದೇಶಿಸಿರುವೆನು. ಅದನ್ನು ಆಚರಿಸಲು ನೀವು ಅರ್ಹರಾಗಿದ್ದೀರಿ.

೨೯. ಮಹರ್ಷಿಗಳೇ ! ನೀವು ಬೋಧಿಸಿದ ಮಂತ್ರವಾಕ್ಯಗಳು ಪ್ರಮಾಣ

ಏವಂ ಕೃತೋತ್ತರಾಸ್ತೇ ವೈ ಯುಕ್ತಾತ್ಮಾನಸ್ತಪೋಧನಾಃ ।
ಅವಶ್ಯಭಾವಿತಂ ದೃಷ್ಟ್ವಾ ತಮರ್ಥಂ ವಾಗ್ಯತಾಭವನ್ ॥ ೩೦ ॥

ಇತ್ಯುಕ್ತಮಾತ್ರೇ ನೃಪತಿಃ ಪ್ರವಿವೇಶ ರಸಾತಲಮ್ ।
ಊರ್ಧ್ವಚಾರೀ ವಸುರ್ಭೂತ್ವಾ ರಸಾತಲಚರೋಽಭವತ್ ॥ ೩೧ ॥

ವಸುಧಾತಲವಾಸೀ ತು ತೇನ ವಾಕ್ಯೇನ ಸೋಽಭವತ್ ।
ಧರ್ಮಾಣಾಂ ಸಂಶಯಚ್ಛೇತ್ತಾ ರಾಜಾ ವಸುರಧೋಗತಃ ॥ ೩೨ ॥

ತಸ್ಮಾನ್ನ ವಾಚ್ಯಮೇಕೇನ ಬಹುಜ್ಞೇನಾಪಿ ಸಂಶಯೇ ।
ಬಹುದ್ವಾರಸ್ಯ ಧರ್ಮಸ್ಯ ಸೂಕ್ಷ್ಮಾ ದೂರತರಾ ಗತಿಃ ॥ ೩೩ ॥

ತಸ್ಮಾನ್ನ ನಿಶ್ಚಯಾದ್ವಕ್ತುಂ ಧರ್ಮಃ ಶಕ್ಯಸ್ತು ಕೇನ ಚಿತ್ ।
ದೇವಾನೃಷೀನುಪಾದಾಯ ಸ್ವಾಯಂಭುವಮೃತೇ ಮನುಮ್ ॥೩೪॥

---

ವಾಗಿದ್ದ ಪಕ್ಷದಲ್ಲಿ ನೀವು ಯಜ್ಞವನ್ನಾಚರಿಸಿ. ಹಾಗಿಲ್ಲದಿದ್ದಲ್ಲಿ ನಿಮ್ಮ ವಚನವು ಅನೃತವಾಗವುದು.

೩೦. ಈ ರೀತಿಯಾಗಿ ವಸುರಾಜನಿಂದ ಉತ್ತರವನ್ನು ಪಡೆದ ತಪಸ್ವಿಗಳು ಜಿತೇಂದ್ರಿಯರಾಗಿ ಈ ಯಜ್ಞಾದಿ ಕರ್ಮವು ವಿಧಿಬಲದಿಂದ ಅವಶ್ಯಭಾವಿ ಎಂದು ತೀರ್ಮಾನಿಸಿ ಮೌನವನ್ನವಲಂಬಿಸಿದರು.

೩೧. ವಸುರಾಜನು ಇಷ್ಟು ಮಾತ್ರ ಹೇಳಿದೊಡನೆಯೇ ಇದುವರೆಗೂ ಊರ್ಧ್ವಲೋಕದಲ್ಲಿ ವಾಸಿಸುತ್ತಿದ್ದು ಈಗ ಭೂಮಿಗೆ ಬಂದು ಭೂತಲದಲ್ಲಿ ಸಂಚರಿಸುವವನಾದನು.

೩೨. ಯಜ್ಞದ ವಿಷಯದಲ್ಲಿ ತಾನು ಆಡಿದ ಒಂದು ವಾಕ್ಯದ ಪ್ರಭಾವದಿಂದ ಭೂಮಂಡಲವಾಸಿಯಾದನು. ಹೀಗೆ ಧರ್ಮದ ಸಂಶಯವನ್ನು ಪರಿಚ್ಛೇದ ಮಾಡಲು ಯತ್ನಿಸಿದ ವಸುರಾಜನು ಅಧೋಗತಿಯನ್ನು ಹೊಂದಿದನು.

೩೩. ಆದುದರಿಂದ ಹೆಚ್ಚುಜ್ಞಾನಶಾಲಿಯಾದರೂ ಒಬ್ಬನು ಸ್ವತಂತ್ರವಾಗಿ ಧರ್ಮ ವಿಷಯದ ತೀರ್ಮಾನವನ್ನು ಹೇಳುವುದು ಉಚಿತವಲ್ಲ. ಅನೇಕ ದ್ವಾರಗಳಿಂದ ಪ್ರಸರಿಸುವ ಧರ್ಮದ ಗತಿಯು ಸೂಕ್ಷ್ಮವೂ ಅಗಮ್ಯವೂ ಆಗಿರುವುದು .

೩೪. ಆದ್ದರಿಂದ ಧರ್ಮವನ್ನು ತೀರ್ಮಾನವಾಗಿ ಉಪದೇಶಿಸಲು ದೇವ,

ತಸ್ಮಾದಹಿಂಸಾ ಧರ್ಮಸ್ಯ ದ್ವಾರಮುಕ್ತಂ ಮಹರ್ಷಿಭಿಃ ।
ಋಷಿಕೋಟಿಸಹಸ್ರಾಣಿ ಸ್ವತಪೋಭಿರ್ದಿವಂ ಯಯುಃ ॥ ೩೫ ॥

ತಸ್ಮಾನ್ನ ದಾನಂ ಯಜ್ಞಂ ವಾ ಪ್ರಶಂಸಂತಿ ಮಹರ್ಷಯಃ ।
ಉಂಛಮೂಲಫಲಂ ಪಾತ್ರಮುದಪಾನಂ ತಪೋಧನಾಃ ॥ ೩೬ ॥

ಏತದ್ದತ್ವಾ ವಿಭವತಃ ಸ್ವರ್ಗೇ ಲೋಕೇ ಪ್ರತಿಷ್ಠಿತಾಃ ।
ಅದ್ರೋಹಶ್ಚಾಪ್ಯಲೋಭಶ್ಚ ತಪೋ ಭೂತದಯಾ ದಮಃ ॥ ೩೭ ॥

ಬ್ರಹ್ಮಚರ್ಯಂ ತಥಾ ಸತ್ಯಮನುಕ್ರೋಶಃ ಕ್ಷಮಾ ಧೃತಿಃ ।
ಸನಾತನಸ್ಯ ಧರ್ಮಸ್ಯ ಮೂಲಮೇತದ್ದುರಾಸದಮ್ ॥ ೩೮ ॥

ಶ್ರೂಯಂತೇ ಹಿ ತಪಃಸಿದ್ಧಾ ಬ್ರಹ್ಮಕ್ಷತ್ರಾದಯೋಽನಘಾಃ ।
ಪ್ರಿಯವ್ರತೋತ್ತಾನಪಾದೌ ಧ್ರುವೋ ಮೇಧಾತಿಥಿರ್ವಸುಃ ॥ ೩೯ ॥

---

ಋಷಿ ಮತ್ತು ಸ್ವಾಯಂಭುವಮನು ಇವರನ್ನು ಬಿಟ್ಟು ಮತ್ತೊಬ್ಬರಿಂದ ಶಕ್ಯವಿಲ್ಲ.

೩೫. ಮಹರ್ಷಿಗಳು ಅಹಿಂಸೆಯನ್ನು ಧರ್ಮದ ಮುಖ್ಯದ್ವಾರವನ್ನಾಗಿ ಹೇಳುವರು. ಸಹಸ್ರ ಅಥವಾ ಕೋಟಿಸಂಖ್ಯೆಯ ಋಷಿಗಳು ಹಿಂಸಾವರ್ಜಿತವಾದ ತಪಸ್ಸಿನಿಂದ ಸ್ವರ್ಗವನ್ನು ಹೊಂದಿರುವರು.

೩೬. ಆದ್ದರಿಂದ ಹಿಂಸಾಯುಕ್ತವಾದ ದಾನವನ್ನೂ ಯಜ್ಞವನ್ನೂ ಮಹರ್ಷಿಗಳು ಪ್ರಶಂಸಿಸುವುದಿಲ್ಲ. ಕಾಳಾರಿಸಿದ ಧಾನ್ಯಬೀಜ, ಗೆಡ್ಡೆಗೆಣಸು, ವನ್ಯಫಲ, ಶಾಕ, ಜಲಪಾತ್ರ, ಇವುಗಳು ದಾನವೆಂಬ ಪುಣ್ಯಕರ್ಮಕ್ಕೆ ಮಹಾಸಾಧನಗಳು.

೩೭. ತಪಸ್ವಿಗಳು ಶಕ್ತಿಗನುಸಾರವಾಗಿ ಇವುಗಳನ್ನು ದಾನಮಾಡಿ ಸ್ವರ್ಗಲೋಕದಲ್ಲಿ ಪ್ರತಿಷ್ಠೆಯನ್ನು ಹೊಂದಿರುವರು. ದಾನಾದಿ ಸತ್ಕರ್ಮಗಳ ಜೊತೆಗೆ ಅದ್ರೋಹ, ಅಲೋಭ, ತಪಸ್ಸು, ಭೂತದಯೆ, ಮತ್ತು ಇಂದ್ರಿಯನಿಗ್ರಹ ಇವು ಮುಖ್ಯವಾದ ಧರ್ಮಗಳು.

೩೮. ಹಾಗೆಯೇ ಬ್ರಹ್ಮಚರ್ಯ, ಸತ್ಯವಚನ, ದಯೆ, ತಾಳ್ಮೆ ಮತ್ತು ಧೈರ್ಯ ಇವುಗಳು ಸನಾತನ ಧರ್ಮಕ್ಕೆ ಶಾಶ್ವತವಾದ ಮೂಲವು.

೩೯. ಹಿಂದೆ ಬ್ರಹ್ಮಕ್ಷತ್ರಿಯರಲ್ಲಿ ಮಹಾ ಮಹಿಮರಾದ ಅನೇಕ ತಪಸ್ವಿಗಳು ಈ ಧರ್ಮ ಮೂಲಗಳಿಂದ ಸಿದ್ಧಿಹೊಂದಿರುವುದನ್ನು ಕೇಳುತ್ತಲಿದ್ದೇವೆ. ಅವರು

ಸುಧಾಮಾ ವಿರಜಾಶ್ಚೈವ ಶಂಖಃ ಪಾಂಡ್ಯಜ ಏವ ಚ।
ಪ್ರಾಚೀನಬರ್ಹಿಃ ಪರ್ಜನ್ಯೋ ಹವಿರ್ಧಾನಾದಯೋ ನೃಪಾಃ ॥ ೪೦ ॥

ಏತೇ ಚಾನ್ಯೇ ಚ ಬಹವಃ ಸ್ವೈಸ್ತಪೋಭಿರ್ದಿವಂ ಗತಾಃ ।
ರಾಜರ್ಷಯೋ ಮಹಾಸತ್ತ್ವಾ ಯೇಷಾಂ ಕೀರ್ತಿಃ ಪ್ರತಿಷ್ಠಿತಾ॥ ೪೧ ॥

ತಸ್ಮಾದ್ವಿಶಿಷ್ಯತೇ ಯಜ್ಞಾತ್ತಪಃ ಸರ್ವೈಸ್ತು ಕಾರಣೈಃ।
ಬ್ರಹ್ಮಣಾ ತಪಸಾ ಸೃಷ್ಟಂ ಜಗದ್ವಿಶ್ವಮಿದಂ ಪುರಾ ॥ ೪೨ ॥

ತಸ್ಮಾನ್ನಾನ್ವೇತಿ ತದ್ಯಜ್ಞಸ್ತಪೋಮೂಲಮಿದಂ ಸ್ಮೃತಮ್ ।
ದ್ರವ್ಯಮಂತ್ರಾತ್ಮಕೋ ಯಜ್ಞಸ್ತಪಸ್ತ್ವನಶನಾತ್ಮಕಮ್ ॥ ೪೩ ॥

ಯಜ್ಞೇನ ದೇವಾನಾಪ್ನೋತಿ ವೈರಾಜಂ ತಪಸಾ ಪುನಃ ।
ಬ್ರಾಹ್ಮಂ ತು ಕರ್ಮಸನ್ನ್ಯಾಸಾದ್ವೈರಾಗ್ಯಾತ್ಪ್ರಕೃತೇರ್ಲಯಮ್ ॥ ೪೪ ॥

---

ಯಾರೆಂದರೆ—ಪ್ರಿಯವ್ರತ, ಉತ್ತಾನಪಾದ, ಧ್ರುವ, ಮೇಧಾತಿಥಿ ಮುಂತಾದವರು ಅಂತಹ ರಾಜರ್ಷಿಗಳು.

೪೦. ಮತ್ತು ಸುಧಾಮ, ವಿರಜ, ಶಂಖ, ಪಾಂಡ್ಯಜ, ಪ್ರಾಚೀನ ಬರ್ಹಿ, ಪರ್ಜನ್ಯ, ಹವಿರ್ಧಾನ ಮುಂತಾದ ರಾಜರು ಆ ಗಣನೆಗೆ ಸೇರಿದವರಾಗಿದ್ದಾರೆ.

೪೧. ಇಲ್ಲಿ ಹೇಳಿರುವ ಮತ್ತು ಇತರ ಅನೇಕ ಮಂದಿ ಬಲಿಷ್ಠ ರಾಜರ್ಷಿಗಳು ತಮ್ಮ ತಪೋನುಷ್ಠಾನದಿಂದ ಸ್ವರ್ಗವನ್ನು ಹೊಂದಿರುವರು. ಮತ್ತು ಲೋಕದಲ್ಲಿ ಅವರ ಕೀರ್ತಿಯು ಶಾಶ್ವತವಾಗಿರುವುದು.

೪೨. ಆದ್ದರಿಂದ ಧರ್ಮಗಳಲ್ಲೆಲ್ಲ ಅನೇಕ ಕಾರಣಗಳಿಂದ ಯಜ್ಞಕ್ಕಿಂತಲೂ ತಪಸ್ಸು ಬಹುಮುಖ್ಯವಾದುದು. ಬ್ರಹ್ಮನು ಪೂರ್ವದಲ್ಲಿ ತಪೋಬಲದಿಂದ ಪ್ರಪಂಚವನ್ನು ಸೃಷ್ಟಿಸಿರುವನು.

೪೩. ಆದ್ದರಿಂದ ಯಜ್ಞವು ಜಗತ್ತಿನಲ್ಲಿ ಮೂಲಭೂತವಾಗಿ ಅನ್ವಯಿಸಿಕೊಂಡಿಲ್ಲ. ಈ ಜಗತ್ತು ತಪಸ್ಸಿನ ಮೂಲದಿಂದ ಜನಿಸಿರುವುದು. ಯಜ್ಞವು ದ್ರವ್ಯ-ಮಂತ್ರಗಳಿಂದ ಸಾಧ್ಯವಾಗಿರುವುದು. ತಪಸ್ಸು ನಿರಶನರೂಪವಾದುದು.

೪೪. ಯಜ್ಞಾನುಷ್ಠಾನದಿಂದ ದೇವಪದವಿಯನ್ನು ಹೊಂದುತ್ತಾನೆ. ತಪಸ್ಸಿನಿಂದ ವಿರಾಟ್‌ಸ್ಥಾನವನ್ನು ಪಡೆಯುತ್ತಾನೆ. ಕರ್ಮ ಸನ್ಯಾಸದಿಂದ ಬ್ರಹ್ಮಪದವಿ

ಜ್ಞಾನಾತ್ಪ್ರಾಪ್ನೋತಿ ಕೈವಲ್ಯಂ ಪಂಚೈತಾ ಗತಯಃ ಸ್ಮೃತಾಃ ।
ಏವಂ ವಿವಾದಃ ಸುಮಹಾನ್ ಯಜ್ಞಸ್ಯಾಸೀತ್ ಪ್ರವರ್ತನೇ ॥ ೪೫ ॥

ದೇವತಾನಾಮೃಷೀಣಾಂ ಚ ಪೂರ್ವಂ ಸ್ವಾಯಂಭುವೇಂತರೇ ।
ತತಸ್ತ್ವೃಷಯೋ ದೃಷ್ಟ್ವಾ ಹತಂ ಧರ್ಮಬಲೇನ ತು ॥ ೪೬ ॥

ವಸೋರ್ವಾಕ್ಯಮನಾದೃತ್ಯ ಜಗ್ಮುಃ ಸರ್ವೇ ಯಥಾಗತಮ್ ।
ಗತೇಷು ಮುನಿಸಂಘೇಷು ದೇವಾ ಯಜ್ಞಮವಾಪ್ನುವನ್ ॥ ೪೭ ॥

ಯಜ್ಞಪ್ರವರ್ತನಂ ಹ್ಯೇವಮಾಸೀತ್ ಸ್ವಾಯಂಭುವೇಽಂತರೇ ।
ತತಃ ಪ್ರಭೃತಿ ಯಜ್ಞೋಽಯಂ ಯುಗೈಃ ಸಹ ವಿವರ್ತಿತಃ ॥ ೪೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ತ್ರಿಂಶತ್ತಮೋಽಧ್ಯಾಯಃ.

---

ಯನ್ನು ಆರ್ಜಿಸುತ್ತಾನೆ. ವೈರಾಗ್ಯದಿಂದ ಪ್ರಕೃತಿ ಜಯರೂಪವಾದ ಫಲವನ್ನು ಸಂಪಾದಿಸುತ್ತಾನೆ.

೪೫. ಜ್ಞಾನಯೋಗದಿಂದ ಕೈವಲ್ಯವನ್ನು ಹೊಂದುತ್ತಾನೆ. ಹೀಗೆಯೇ ವಿಶಿಷ್ಟ ಧರ್ಮದಿಂದ ಸಾಧ್ಯವಾದ ಗತಿಗಳು ಐದುಬಗೆಯಾಗಿವೆ. ಎಂದು ಸ್ಮರಿಸಲ್ಪಟ್ಟಿವೆ. ಹೀಗೆಯೇ ತ್ರೇತಾಯುಗದ ಆದಿಯಲ್ಲಿ ಯಜ್ಞದ ಪ್ರವೃತ್ತಿಯಲ್ಲಿ ದೊಡ್ಡ ವಿವಾದವು ಪ್ರಾಪ್ತವಾಗಿತ್ತು.

೪೬. ಪೂರ್ವದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ದೇವತೆಗಳಿಗೂ ಋಷಿಗಳಿಗೂ ಉಂಟಾದ ವಾದದಲ್ಲಿ ಋಷಿಗಳೆಲ್ಲರೂ ಯಜ್ಞಕರ್ಮಗಳನ್ನು ಅಧರ್ಮರೂಪವೆಂದೂ ಅದನ್ನು ಸಮ್ಮತಿಸಿದ ವಸುವು ಧರ್ಮಬಲದಿಂದ ಹೀನನಾದವನೆಂದೂ ನಂಬಿದರು.

೪೭. ಆದುದರಿಂದ ವಸುರಾಜನ ವಾಕ್ಯವನ್ನೆಣಿಸದೇ ಮಹರ್ಷಿಗಳೆಲ್ಲರೂ ಹಿಂದಿರುಗಿ ಹೋದರು. ಮಹರ್ಷಿಗಳು ವಾದಿಸಿ ಹೊರಟುಹೋದ ಬಳಿಕ ದೇವತೆಗಳು ಯಜ್ಞವನ್ನು ಯಥಾವಿಧಿಯಾಗಿ ಆಚರಿಸಿದರು.

೪೮. ಸ್ವಾಯಂಭುವಮನ್ವಂತರದಲ್ಲಿ ಈ ರೀತಿಯಾಗಿ ಯಜ್ಞದ ಪ್ರವೃತ್ತಿಯು ಆರಂಭವಾಯಿತು. ಆ ಮೊದಲ್ಗೊಂಡು ಒಂದಾದ ಮೇಲೊಂದು ಯುಗಗಳು ಕಳೆಯುವಂತೆ ಯಜ್ಞಕರ್ಮವು ಪ್ರಚಾರಕ್ಕೆ ಬಂದಿತು.

ಬ್ರಹ್ಮಾಂಡಪುರಾಣದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿದುದು.

# ಏಕತ್ರಿಂಶತ್ತಮೋಽಧ್ಯಾಯಃ

**ಸೂತ ಉವಾಚ**

**ಅತ ಊರ್ಧ್ವಂ ಪ್ರವಕ್ಷ್ಯಾಮಿ ದ್ವಾಪರಸ್ಯ ವಿಧಿಂ ಪುನಃ ।**
**ತತ್ರ ತ್ರೇತಾಯುಗೇ ಕ್ಷೀಣೇ ದ್ವಾಪರಂ ಪ್ರತಿಪದ್ಯತೇ ॥ ೧ ॥**

**ದ್ವಾಪರಾದೌ ಪ್ರಜಾನಾಂ ತು ಸಿದ್ಧಿಸ್ತ್ರೇತಾಯುಗೇ ತು ಯಾ ।**
**ಪರಿವೃತ್ತೇ ಯುಗೇ ತಸ್ಮಿಂಸ್ತತಸ್ತಾಭಿಃ ಪ್ರಣಶ್ಯತಿ ॥ ೨ ॥**

**ತತಃ ಪ್ರವರ್ತತೇ ತಾಸಾಂ ಪ್ರಜಾನಾಂ ದ್ವಾಪರೇ ಪುನಃ**
**ಸಂಭೇದಶ್ಚೈವ ವರ್ಣಾನಾಂ ಕಾರ್ಯಾಣಾಂ ಚ ವಿಪರ್ಯಯಃ ॥ ೩ ॥**

**ಯಜ್ಞಾವಧೀರಣಂ ದಂಡೋ ಮದೋ ದಂಭಃ ಕ್ಷಮಾ ಬಲಮ್ ।**
**ಏಷಾ ರಜಸ್ತಮೋ ಯುಕ್ತಾ ಪ್ರವೃತ್ತಿರ್ದ್ವಾಪರೇ ಸ್ಮೃತಾ ॥ ೪ ॥**

---

೧. ಸೂತಮಹರ್ಷಿಯು ಮುಂದುವರಿಸಿ ಹೇಳಿದನು.

ಇನ್ನು ಮುಂದೆ ದ್ವಾಪರ ಯುಗದ ವಿಧಾನವನ್ನು ಹೇಳುವೆನು. ಹಿಂದೆ ಹೇಳಿದ ಪ್ರಕಾರದಿಂದ ಕೂಡಿದ ತ್ರೇತಾಯುಗವು ಕಳೆಯಲು ದ್ವಾಪರಯುಗವು ಪ್ರಾಪ್ತವಾಗುವುದು.

೨. ಹಿಂದಿನ ತ್ರೇತಾಯುಗದಲ್ಲಿ ಪ್ರಜೆಗಳಿಗೆ ಯಾವ ಸಿದ್ಧಿಯು ಉಜ್ವಲವಾಗಿತ್ತೋ ಆ ಸಿದ್ಧಿಯು ಆ ಪ್ರಜೆಗಳ ಸಂಗಡ ತ್ರೇತಾಯುಗದ ಪ್ರವೃತ್ತಿಯಲ್ಲಿ ಲಯ ಹೊಂದುವುದು.

೩. ತರುವಾಯ ದ್ವಾಪರ ಯುಗದಲ್ಲಿನ ಪ್ರಜೆಗಳಿಗೆ ಮತ್ತೆ ಆಯಾಯ ವರ್ಣಗಳ ಮತ್ತು ವರ್ಣಧರ್ಮಗಳ ಸಂಕರರೂಪವಾದ ವಿಪರ್ಯಯವು ಉಂಟಾಗುವುದು.

೪. ದ್ವಾಪರ ಯುಗದ ಆರಂಭದಲ್ಲಿ ಯಜ್ಞಾದಿ ಸತ್ಕರ್ಮಗಳ ತಿರಸ್ಕಾರವು ಹಿಂಸೆ, ಮದ, ಗರ್ವ, ಅಸಹನೆ, ಶಕ್ತಿ ಮುಂತಾದ ರಾಜಸತಾಮಸ ಗುಣಗಳಿಂದ ಕೂಡಿದ ಪ್ರವೃತ್ತಿಯು ವಿಶೇಷವಾಗಿ ಪ್ರಸರಿಸಿತು.

**ಆದ್ಯೇ ಕೃತೇ ಯೋ ಧರ್ಮೋಽಸ್ತಿ ಸ ತ್ರೇತಾಯಾಂ ಪ್ರವರ್ತತೇ ।**
**ದ್ವಾಪರೇ ವ್ಯಾಕುಲೀಭೂತ್ವಾ ಪ್ರಣಶ್ಯತಿ ಕಲೌ ಯುಗೇ ॥ ೫ ॥**

**ವರ್ಣಾನಾಂ ವಿಪರಿಧ್ವಂಸಃ ಸಂಕೀರ್ಯಂತೇ ತಥಾಶ್ರಮಾಃ ।**
**ದ್ವೈವಿಧ್ಯಂ ಪ್ರತಿಪದ್ಯೇತೇ ಯುಗೇ ತಸ್ಮಿನ್ ಶ್ರುತಿಸ್ಮೃತೀ ॥ ೬ ॥**

**ದ್ವೈಧಾತ್ತಥಾ ಶ್ರುತಿಸ್ಮೃತ್ಯೋರ್ನಿಶ್ಚಯೋ ನಾಧಿಗಮ್ಯತೇ ।**
**ಅನಿಶ್ಚಯಾಧಿಗಮನಾದ್ಧರ್ಮತತ್ತ್ವಂ ನ ವಿದ್ಯತೇ ॥ ೭ ॥**

**ಧರ್ಮಾಸತ್ತ್ವೇನ ಮಿತ್ರಾಣಾಂ ಮತಿಭೇದೋ ಭವೇನ್ನೃಣಾಮ್ ।**
**ಪರಸ್ಪರವಿಭಿನ್ನೈಸ್ತೈರ್ದೃಷ್ಟೀನಾಂ ವಿಭ್ರಮೇಣ ಚ ॥ ೮ ॥**

**ಅಯಂ ಧರ್ಮೋ ಹ್ಯಯಂ ನೇತಿ ನಿಶ್ಚಯೋ ನಾಧಿಗಮ್ಯತೇ ।**
**ಕಾರಣಾನಾಂ ಚ ವೈಕಲ್ಪ್ಯಾತ್ ಕಾರ್ಯಾಣಾಂ ಚಾಪ್ಯನಿಶ್ಚಯಾತ್ ॥ ೯ ॥**

---

೫. ಮೊದಲಿನ ಕೃತಯುಗದಲ್ಲಿ ಯಾವ ಧರ್ಮವು ಉಜ್ವಲವಾಗಿದ್ದಿತೋ ಅದು ತ್ರೇತಾಯುಗದಲ್ಲಿ ಸ್ವಲ್ಪವಾಗಿ ಪ್ರವರ್ತಿಸಿ ದ್ವಾಪರ ಯುಗದಲ್ಲಿ ವ್ಯಾಕುಲತೆಯನ್ನು ಹೊಂದಿ ಕಲಿಯುಗದಲ್ಲಿ ಸಂಪೂರ್ಣವಾಗಿ ನಾಶವಾಗುವುದು.

೬. ಆಗ ವರ್ಣಧರ್ಮಗಳು ಮತ್ತು ಆಶ್ರಮಧರ್ಮಗಳು ಸಂಕರ ಹೊಂದಿ ಸಂಪೂರ್ಣ ನಶಿಸುವುವು. ಮತ್ತು ಆ ಯುಗದಲ್ಲಿ ಶ್ರುತಿಸ್ಮೃತಿಗಳೆರಡೂ ಬೇರೆ ಬೇರೆ ಮಾರ್ಗವನ್ನು ಅನುಸರಿಸುವುವು.

೭. ಹೀಗೆ ಶ್ರುತಿಸ್ಮೃತಿಗಳ ಪರಸ್ಪರ ವೈಷಮ್ಯದಿಂದ ಧರ್ಮದ ವಿಷಯದಲ್ಲಿ ನಿರ್ಣಯವು ಉಂಟಾಗುವುದಿಲ್ಲ. ನಿರ್ಣಯವಿಲ್ಲದ್ದರಿಂದ ಧರ್ಮದ ತತ್ವವೇ ನಾಶವಾಗುವುದು.

೮. ಹೀಗೆ ಧರ್ಮಲೋಪವುಂಟಾಗಲು ಮಿತ್ರರಾದ ಪ್ರಜೆಗಳಿಗೆ ಪರಸ್ಪರ ವಿರೋಧಾಭಿಪ್ರಾಯವು ಉಂಟಾಗಿ ಅವರವರ ದೃಷ್ಟಿ ಭೇದದಿಂದಲೂ, ಭ್ರಾಂತಿಯಿಂದಲೂ ಭಿನ್ನಪ್ರಸ್ಥಾನಗಳೇರ್ಪಡುವುವು.

೯. ಆಗ ಇದು ಧರ್ಮವು ಮತ್ತು ಇದು ಧರ್ಮವಲ್ಲವೆಂಬ ತೀರ್ಮಾನವು ಯಾರಿಗೂ ಉಂಟಾಗುವುದಿಲ್ಲ. ಧರ್ಮದ ಕಾರಣಗಳು ಮತ್ತು ಫಲಗಳು ವಿಚಿತ್ರವಾಗಿರುವುದರಿಂದ ಧರ್ಮದ ಸ್ವರೂಪವನ್ನು ನಿಶ್ಚಯಿಸಲಾಗುವುದಿಲ್ಲ.

ಮತಿಭೇದೇನ ತೇಷಾಂ ವೈ ದೃಷ್ಟೀನಾಂ ವಿಭ್ರಮೋ ಭವೇತ್ ।
ತತೋ ದೃಷ್ಟಿವಿಭಿನ್ನೈಸ್ತು ಕೃತಂ ಶಾಸ್ತ್ರಾಕುಲಂ ತ್ವಿದಮ್ ॥ ೧೦ ॥

ಏಕೋ ವೇದಶ್ಚತುಷ್ಪಾದ್ಧಿ ತ್ರೇತಾಸ್ವಿಹ ವಿಧೀಯತೇ ।
ಸಂಕ್ಷಯಾದಾಯುಷಶ್ಚೈವ ವ್ಯಸ್ಯತೇ ದ್ವಾಪರೇಷು ಚ ॥ ೧೧ ॥

ಋಷಿಮಂತ್ರಾತ್ಪುನರ್ಭೇದಾದ್ಭಿದ್ಯತೇ ದೃಷ್ಟಿವಿಭ್ರಮೈಃ ।
ಮಂತ್ರಬ್ರಾಹ್ಮಣ ವಿನ್ಯಾಸೈಃ ಸ್ವರವರ್ಣವಿಪರ್ಯಯೈಃ ॥ ೧೨ ॥

ಸಂಹಿತಾ ಋಗ್ಯಜುಃಸಾಮ್ನಾಂ ಸಂಪಠ್ಯಂತೇ ಮಹರ್ಷಿಭಿಃ ।
ಸಾಮಾನ್ಯಾ ವೈಕೃತಾಶ್ಚೈವ ದೃಷ್ಟಿಭಿನ್ನೇ ಕ್ವಚಿತ್ಕ್ವಚಿತ್ ॥ ೧೩ ॥

ಬ್ರಾಹ್ಮಣಂ ಕಲ್ಪಸೂತ್ರಾಣಿ ಮಂತ್ರಪ್ರವಚನಾನಿ ಚ ।
ಅನ್ಯೇಽಪಿ ಪ್ರಸ್ಥಿತಾಸ್ತಾನ್ವೈ ಕೇಚಿತ್ತಾನ್ ಪ್ರತ್ಯವಸ್ಥಿತಾಃ ॥ ೧೪ ॥

---

೧೦. ಅನೇಕ ಪ್ರತಿಭಶಾಲಿಗಳ ಬುದ್ಧಿ ತಾರತಮ್ಯದಿಂದ ದೃಷ್ಟಿಭೇದವೂ, ಭ್ರಾಂತಿಯೂ ಉಂಟಾಗುವುದು. ಆಗ ಅವರವರ ದೃಷ್ಟಿಭೇದದಿಂದ ಅಖಿಲ ಶಾಸ್ತ್ರವೂ ವ್ಯಾಕುಲತೆಯನ್ನು ಹೊಂದುವುದು

೧೧. ತ್ರೇತಾಯುಗದಲ್ಲಿ ವೇದವು ನಾಲ್ಕು ಪಾದಗಳಿಂದ ಸಂಪೂರ್ಣವಾಗಿ ಪ್ರತಿಷ್ಠಿತವಾಗಿರುವುದು. ಅದು ಪ್ರಜೆಗಳ ಆಯುಸ್ಸಿನ ಕ್ಷಯದಿಂದ ದ್ವಾಪರ ಯುಗದಲ್ಲಿ ವ್ಯತ್ಯಾಸವನ್ನು ಹೊಂದುವುದು.

೧೨. ಧರ್ಮಕ್ಕೆ ಆಧಾರವಾದ, ಋಷಿಗಳಿಂದ ಕಂಡು ಹಿಡಿಯಲ್ಪಟ್ಟ ಮಂತ್ರಗಳ ಪ್ರಭೇದ, ಅವರವರ ದೃಷ್ಟಿ-ಭ್ರಾಂತಿಗಳ ವ್ಯತ್ಯಾಸ, ಮಂತ್ರ-ಬ್ರಾಹ್ಮಣಗಳ ವಿನ್ಯಾಸ ವಿಶೇಷ, ಸ್ವರ ವರ್ಣಗಳ ವ್ಯತ್ಯಾಸದಿಂದ ಧರ್ಮದ ಸ್ಥಿತಿಯೇ ಬದಲಾಯಿಸುವುದು.

೧೩. ಮಹರ್ಷಿಗಳಿಂದ ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಸಂಹಿತಾ ರೂಪವಾದ ವೇದಭಾಗಗಳೂ ಕೆಲವು ಭಾಗಗಳಲ್ಲಿ ಸಾಮಾನ್ಯರೂಪವಾಗಿ ಮೂಲ ಮಾತ್ರವೂ ಕೆಲವು ಭಾಗಗಳಲ್ಲಿ ವಿಕೃತಿ ವಿಶೇಷಗಳಿಂದ ಸಹಿತವಾಗಿಯೂ ತಮ್ಮ ತಮ್ಮ ದೃಷ್ಟಿಯನ್ನು ಅನುಸರಿಸಿ ಪಠಿಸಲ್ಪಟ್ಟಿವೆ.

೧೪. ಮತ್ತು ಬ್ರಾಹ್ಮಣ ಕಲ್ಪಸೂತ್ರಗಳು ಅನೇಕ ಮಂತ್ರಪಾಠಗಳು,

ದ್ವಾಪರೇಷು ಪ್ರವರ್ತಂತೇ ನಿವರ್ತಂತೇ ಕಲೌ ಯುಗೇ
ಏಕಮಾಧ್ವರ್ಯವಂ ತ್ವಾಸೀತ್ ಪುನರ್ದ್ವೈಧಮಜಾಯತ || ೧೫ ||

ಸಾಮಾನ್ಯವಿಪರೀತಾರ್ಥೈಃ ಕೃತಶಾಸ್ತ್ರಾಕುಲಂ ತ್ವಿದಮ್ |
ಆಧ್ವರ್ಯವಸ್ಯ ಪ್ರಸ್ಥಾನೈರ್ಬಹುಧಾ ವ್ಯಾಕುಲೀಕೃತೈಃ || ೧೬ ||

ತಥೈವಾಥರ್ವಋಕ್ಸಾಮ್ನಾಂ ವಿಕಲ್ಪೈಶ್ಚಾಪಿ ಸಂಖ್ಯಯಾ |
ವ್ಯಾಕುಲೇ ದ್ವಾಪರೇ ನಿತ್ಯಂ ಕ್ರಿಯಂತೇ ಭಿನ್ನದರ್ಶನೈಃ || ೧೭ ||

ತೇಷಾಂ ಭಿನ್ನಾಃ ಪ್ರತೀಭೇದಾ ವಿಕಲ್ಪಾಶ್ಚಾಪಿ ಸಂಖ್ಯಯಾ |
ದ್ವಾಪರೇ ಸಂಪ್ರವರ್ತಂತೇ ವಿನಶ್ಯಂತಿ ತತಃ ಕಲೌ || ೧೮ ||

---

ಮುಂತಾದ ವಿವಿಧವಾದ ಪ್ರಸ್ಥಾನ ಭೇದಗಳು ಹೊರಟಿವೆ. ಕೆಲವರು ಅವುಗಳಲ್ಲಿ ಆಕ್ಷೇಪ ಸಮಾಧಾನರೂಪವಾಗಿ ವಿವರಣೆಗಳನ್ನು ಪ್ರಕಾಶಪಡಿಸಿದರು.

೧೫. ದ್ವಾಪರ ಯುಗದಲ್ಲಿ ಈ ವೇದ ವಾದಗಳ ಪ್ರಸ್ಥಾನಗಳೆಲ್ಲವೂ ಪ್ರವರ್ತಿಸಿ ಕಲಿಯುಗದಲ್ಲಿ ಎಲ್ಲವೂ ನಶಿಸಿ ಹೋಗುವುವು. ಆಗ ಒಂದು ವಿಧವಾದ ಆಧ್ವರ್ಯವ ಎಂದರೆ ಅಧ್ವರ್ಯು ಋತ್ವಿಜನು ಮುಖ್ಯವಾಗಿ ಮಾಡಬೇಕಾದ ಕರ್ಮಪದ್ಧತಿಯು ಇತ್ತು. ಮತ್ತೆ ಅದು ನಾನಾ ಮುಖವಾಗಿ ವಿಕ್ಷೇಪವನ್ನು ಹೊಂದಿತು.

೧೬. ಸಾಮಾನ್ಯವಾಗಿ ಕರ್ಮಕಾಂಡದ ವಿಷಯದಲ್ಲಿ ವಿರುದ್ಧಾರ್ಥ ವ್ಯಾಖ್ಯಾನಗಳಿಂದ ಶಾಸ್ತ್ರವೆಲ್ಲವೂ ವ್ಯಾಕುಲತೆಯನ್ನು ಹೊಂದಿತು. ಹೀಗೆ ಆಧ್ವರ್ಯವದ ಅನೇಕ ಪ್ರಸ್ಥಾನಗಳು ದ್ವಾಪರಯುಗದಲ್ಲಿ ಹರಡಿದ್ದವು.

೧೭. ಹಾಗೆಯೇ ಅಥರ್ವವೇದ, ಋಗ್ವೇದಗಳ ಮಂತ್ರಗಳ ವಿಕಲ್ಪದಿಂದಲೂ, ನಾನಾ ಮುಖವಾದ ವಿಕಲ್ಪಗಳಿಂದಲೂ ದ್ವಾಪರಯುಗದಲ್ಲಿ ವಿರೋಧವಾದ ದೃಷ್ಟಿ ಭೇದಗಳು ತುಂಬಿದ್ದುವು.

೧೮. ವೇದ ಶಾಸ್ತ್ರಗಳ ನಾನಾ ಭೇದಗಳೂ ಅವುಗಳಲ್ಲಿ ಅನೇಕ ಅವಾಂತರ ಭೇದಗಳೂ ಮತ್ತು ವಿಕಲ್ಪಗಳೂ ನಾನಾ ಸಂಖ್ಯೆಯಿಂದ ಹುಟ್ಟಿ ದ್ವಾಪರಯುಗದಲ್ಲಿ ವಿಶೇಷವಾಗಿ ಪ್ರವರ್ತಿಸಿ ಕಲಿಯುಗದಲ್ಲಿ ನಶಿಸಿ ಹೋಗುವುವು.

ತೇಷಾಂ ವಿಪರ್ಯಯೋತ್ಪನ್ನಾ ಭವಂತಿ ದ್ವಾಪರೇ ಪುನಃ ।
ಅವೃಷ್ಟಿರ್ಮರಣಂ ಚೈವ ತಥೈವ ವ್ಯಾಧ್ಯುಪದ್ರವಾಃ ॥ ೧೯ ॥

ವಾಙ್ಮನಃಕರ್ಮಜೈರ್ದುಃಖೈರ್ನಿರ್ವೇದೋ ಜಾಯತೇ ಪುನಃ ।
ನಿರ್ವೇದಾಜ್ಜಾಯತೇ ತೇಷಾಂ ದುಃಖಮೋಕ್ಷವಿಚಾರಣಾ ॥ ೨೦ ॥

ವಿಚಾರಣಾಚ್ಚ ವೈರಾಗ್ಯಂ ವೈರಾಗ್ಯಾದ್ದೋಷದರ್ಶನಮ್ ।
ದೋಷದರ್ಶನತಶ್ಚೈವ ದ್ವಾಪರೇಽಜ್ಞಾನಸಂಭವಃ ॥ ೨೧ ॥

ತೇಷಾಮಜ್ಞಾನಿನಾಂ ಪೂರ್ವಮಾದ್ಯೇ ಸ್ವಾಯಂಭುವೇಽಂತರೇ ।
ಉತ್ಪದ್ಯಂತೇ ಹಿ ಶಾಸ್ತ್ರಾಣಾಂ ದ್ವಾಪರೇ ಪರಿಪಂಥಿನಃ ॥ ೨೨ ॥

ಆಯುರ್ವೇದವಿಕಲ್ಪಶ್ಚ ಹ್ಯಂಗಾನಾಂ ಜ್ಯೋತಿಷಸ್ಯ ಚ ।
ಅರ್ಥಶಾಸ್ತ್ರವಿಕಲ್ಪಾಶ್ಚ ಹೇತುಶಾಸ್ತ್ರವಿಕಲ್ಪನಮ್ ॥ ೨೩ ॥

---

೧೯. ಹೀಗೆ ದ್ವಾಪರಯುಗದಲ್ಲಿ ಶಾಸ್ತ್ರದೃಷ್ಟಿಯ ಭೇದದಿಂದ ವಿಪರೀತಾನುಷ್ಠಾನವು ಹೆಚ್ಚಿ ಅನಾವೃಷ್ಟಿ, ಮರಣ, ವ್ಯಾಧಿಗಳ ಉಪದ್ರವ ಮುಂತಾದ ಪೀಡೆಗಳು ಹೆಚ್ಚುತ್ತವೆ.

೨೦. ವಾಕ್, ಮನಸ್ಸು ಮತ್ತು ಕಾಯಗಳಿಂದ ಸಂಭವಿಸುವ ವಿವಿಧ ಪೀಡೆಗಳನ್ನು ಅನುಭವಿಸಿ ಸಂಸಾರದಲ್ಲಿ ಪ್ರಜೆಗಳಿಗೆ ಅನಾಸಕ್ತಿಯು ಹುಟ್ಟಿ ಆ ಅನಾಸಕ್ತಿಯಿಂದ ದುಃಖ ಪರಿಹಾರೋಪಾಯದಲ್ಲಿ ವಿಚಾರ ದೃಷ್ಟಿಯು ಉಂಟಾಗುವುದು.

೨೧. ವಿಚಾರ ಮಾಡುವುದರಿಂದ ವೈರಾಗ್ಯವೂ ವೈರಾಗ್ಯದಿಂದ ಭೋಗಸಾಮಗ್ರಿಯಲ್ಲಿ ದೋಷ ದೃಷ್ಟಿಯೂ ಉಂಟಾಗಿ ದ್ವಾಪರದಲ್ಲಿ ಅಜ್ಞಾನದ ಶಾಖೋಪಶಾಖೆಗಳು ಬೆಳೆಯುವುವು.

೨೨. ಮೊದಲನೆಯ ಸ್ವಾಯಂಭುವ ಮನ್ವಂತರದ ದ್ವಾಪರಯುಗದಲ್ಲಿ ಅಜ್ಞಾನಿಗಳಾದ ಜನರು ನಂಬಿರುವ ಶಾಸ್ತ್ರ ಪ್ರಮಾಣಗಳಿಗೆ ಅನೇಕ ವಿರೋಧಗಳು ಉಂಟಾಗುವುವು.

೨೩. ಆಯುರ್ವೇದ, ವೇದಾಂಗ, ಜ್ಯೋತಿಷ, ಅರ್ಥಶಾಸ್ತ್ರ, ಮತ್ತು ಹೇತುಶಾಸ್ತ್ರಗಳಲ್ಲಿ ಪ್ರಜೆಗಳು ನಿರಂಕುಶವಾಗಿ ತಮ್ಮ ದೃಷ್ಟಿಯಿಂದ ವ್ಯಾಖ್ಯಾನಮಾಡಿ ಶಾಸ್ತ್ರಗಳನ್ನು ಕ್ಷೋಭಪಡಿಸಿ ಅನೇಕ ವಿಕಲ್ಪ ಪಕ್ಷಗಳನ್ನು ಹರಡುವರು.

ಪ್ರಕ್ರಿಯಾ ಕಲ್ಪಸೂತ್ರಾಣಾಂ ಭಾಷ್ಯವಿದ್ಯಾವಿಕಲ್ಪನಮ್ ।
ಸ್ಮೃತಿಶಾಸ್ತ್ರಪ್ರಭೇದಶ್ಚ ಪ್ರಸ್ಥಾನಾನಿ ಪೃಥಕ್ ಪೃಥಕ್ ॥ ೨೪ ॥

ದ್ವಾಪರೇಷ್ವಭಿವರ್ತಂತೇ ಮತಿಭೇದಾಶ್ರಯಾನ್ನೃಣಾಮ್ ।
ಮನಸಾ ಕರ್ಮಣಾ ವಾಚಾ ಕೃಚ್ಛ್ರಾದ್ವಾರ್ತಾ ಪ್ರಸಿಧ್ಯತಿ ॥ ೨೫ ॥

ದ್ವಾಪರೇ ಸರ್ವಭೂತಾನಾಂ ಕಾಯಕ್ಲೇಶಪುರಸ್ಕೃತಾ ।
ಲೋಭೋ ವೃತ್ತಿರ್ವಣಿಕ್ಪೂರ್ವಾ ತತ್ತ್ವಾನಾಮವಿನಿಶ್ಚಯಃ ॥ ೨೬ ॥

ವೇದಶಾಸ್ತ್ರಪ್ರಣಯನಂ ಧರ್ಮಾಣಾಂ ಸಂಕರಸ್ತಥಾ ।
ವರ್ಣಾಶ್ರಮಪರಿಧ್ವಂಸಃ ಕಾಮಕ್ರೋಧೌ ತಥೈವ ಚ ॥ ೨೭ ॥

ದ್ವಾಪರೇಷು ಪ್ರವರ್ತಂತೇ ರಾಗೋ ಲೋಭೋ ವಧಸ್ತಥಾ ।
ವೇದಂ ವ್ಯಾಸಶ್ಚತುರ್ಧಾ ತು ವ್ಯಸ್ಯತೇ ದ್ವಾಪರಾದಿಷು ॥ ೨೮ ॥

---

೨೪. ಕಲ್ಪ ಸೂತ್ರಗಳ ರಚನೆ, ಭಾಷ್ಯ ಗ್ರಂಥಗಳ ನಿರ್ಮಾಣ, ಸ್ಮೃತಿಶಾಸ್ತ್ರ ಪ್ರಣಯನ ಮುಂತಾದ ವಿಧಾನಗಳಿಂದ ಪ್ರಸ್ಥಾನಗಳು ಬೇರೆ ಬೇರೆಯಾಗಿ ಅನೇಕ ಸಂಖ್ಯೆಯಿಂದ ಪ್ರವರ್ತಿಸುವುವು.

೨೫. ದ್ವಾಪರಯುಗದಲ್ಲಿ ಪ್ರತಿಯೊಬ್ಬರಲ್ಲಿಯೂ ಕರ್ತವ್ಯಗಳಲ್ಲಿ ವಿರೋಧ ಬುದ್ಧಿಯು ಹುಟ್ಟುವುದರಿಂದ ಮನಸ್ಸು, ಕಾಯ, ವಾಕ್ಕುಗಳಲ್ಲಿ ಏಕವಿಧವಾದ ಮತಿಯು ಇಲ್ಲದ್ದರಿಂದ ವ್ಯವಹಾರವು ಬಹು ಸಂಕಟದಿಂದ ನಡೆಯುವುದು.

೨೬. ದ್ವಾಪರಯುಗದಲ್ಲಿ ಸರ್ವ ಪ್ರಾಣಿಗಳೂ ಕ್ಲೇಶದಿಂದ ಜೀವಿಸುವರು, ವರ್ತಕರಂತೆ ಲೋಭವು ಮಿತಿಮೀರುವುದು. ಮತ್ತು ಯಾರಿಗೂ ಲೋಕ ತತ್ತ್ವದ ನಿಶ್ಚಯವು ಇಲ್ಲದಂತಾಗುವುದು.

೨೭. ಹೊಸದಾಗಿ ವೇದ ಶಾಸ್ತ್ರಗಳ ಕಲ್ಪನೆ; ಧರ್ಮಗಳ ಸಾಂಕರ್ಯ, ವರ್ಣ-ಆಶ್ರಮಗಳ ಭಂಗ, ಮತ್ತು ಕಾಮಕ್ರೋಧಗಳ ವೃತ್ತಿಯ ಪ್ರಾಬಲ್ಯವೂ ದ್ವಾಪರಯುಗದಲ್ಲಿ ಪರಿಣಮಿಸುವುವು.

೨೮. ದ್ವಾಪರಾದಿ ಯುಗಗಳಲ್ಲಿ ರಾಗ, ಲೋಭ, ಮತ್ತು ಪರಸ್ಪರವಧಾದಿ ಹಿಂಸೆಗಳು ಪ್ರವರ್ತಿಸುವುವು. ಆಗ ವ್ಯಾಸಮುನಿಯು ಏಕರೂಪವಾಗಿದ್ದ ವೇದವನ್ನು ನಾಲ್ಕು ವಿಧವಾಗಿ ವಿಂಗಡಿಸುವನು.

ನಿಃಶೇಷೇ ದ್ವಾಪರೇ ತಸ್ಮಿಂಸ್ತಸ್ಯ ಸಂಧ್ಯಾ ತು ಯಾದೃಶೀ ।
ಪ್ರತಿಷ್ಠತೇ ಗುಣೈರ್ಹೀನೋ ಧರ್ಮೋಽಸೌ ದ್ವಾಪರಸ್ಯ ತು ॥ ೨೯ ॥

ತಥೈವ ಸಂಧ್ಯಾ ಪಾದೇನ ಹ್ಯಂಗಃ ಸಂಧ್ಯಾ ಇತೀಷ್ಯತೇ ।
ದ್ವಾಪರಸ್ಯಾವಶೇಷೇಣ ತಿಷ್ಯಸ್ಯ ತು ನಿಬೋಧತ ॥ ೩೦ ॥

ದ್ವಾಪರಸ್ಯಾಂಶಶೇಷೇಣ ಪ್ರತಿಪತ್ತಿಃ ಕಲೇರಪಿ ।
ಹಿಂಸಾಸೂಯಾನೃತಂ ಮಾಯಾ ವಧಶ್ಚೈವ ತಪಸ್ವಿನಾಮ್ ॥ ೩೧ ॥

ಏತೇ ಸ್ವಭಾವಾಸ್ತಿಷ್ಯಸ್ಯ ಸಾಧಯಂತಿ ಚ ವೈ ಪ್ರಜಾಃ ।
ಏಷ ಧರ್ಮಃ ಕೃತಃ ಕೃತ್ಸ್ನೋ ಧರ್ಮಶ್ಚ ಪರಿಹೀಯತೇ ॥ ೩೨ ॥

ಮನಸಾ ಕರ್ಮಣಾ ಸ್ತುತ್ಯಾ ವಾರ್ತಾ ಸಿಧ್ಯತಿ ವಾ ನ ವಾ ।
ಕಲೌ ಪ್ರಮಾರಕೋ ರೋಗಃ ಸತತಂ ಕ್ಷುದ್ಭಯಾನಿ ಚ ॥ ೩೩ ॥

---

೨೯. ಹೀಗೆ ದ್ವಾಪರಯುಗವು ಪೂರ್ಣವಾಗಿ ಕಳೆದ ತರುವಾಯ ಅದಕ್ಕೆ ಉಚಿತವಾಗಿ ಅದರ ಸಂಧ್ಯಾಂಶವು ಕಳೆಯುವುದು, ದ್ವಾಪರಯುಗದಲ್ಲಿ ಧರ್ಮವು ಗುಣಹೀನವಾಗಿ ಜರುಗುವುದು.

೩೦. ಅದರಂತೆ ದ್ವಾಪರಯುಗದ ಅಂತವಾದ ಸಂಧ್ಯಾಕಾಲವು ಯುಗಧರ್ಮದ ಪಾದಾಂಶದಿಂದ ಕಳೆಯುವುದು. ದ್ವಾಪರಯುಗಾಂತರದಲ್ಲಿ ಕಲಿಯುಗದ ಮಹಿಮೆಯನ್ನು ಕೇಳಿರಿ.

೩೧. ಕಲಿಯುಗದ ಸ್ಥಿತಿಯು ದ್ವಾಪರಯುಗದಲ್ಲಿ ಹೇಳಿರುವ ಅಧರ್ಮಾಂಶಗಳಿಂದ ಹೆಚ್ಚಾಗಿ ಪೂರ್ಣವಾಗಿರುವುದು. ಹಿಂಸೆ, ಅಸೂಯೆ, ಮಾಯೆ, ತಪಸ್ವಿಗಳನ್ನು ಪೀಡಿಸುವುದು ಮುಂತಾದ ಪ್ರವೃತ್ತಿಗಳು ಹೆಚ್ಚುವುವು.

೩೨. ಕಲಿಯುಗಕ್ಕೆ ಇವುಗಳೆಲ್ಲ ಸ್ವಭಾವವಾಗಿ ಪರಿಣಮಿಸುವುವು. ಪ್ರಜೆಗಳು ಇದನ್ನು ತತ್ಪರತೆಯಿಂದ ಆಚರಿಸುವರು. ಆಗ ಅಧರ್ಮವೇ ಧರ್ಮಪದವನ್ನು ಆಕ್ರಮಿಸುವುದು. ಧರ್ಮವು ಸಂಪೂರ್ಣವಾಗಿ ನಾಶವಾಗುವುದು.

೩೩. ಮನಸ್ಸು, ಕರ್ಮ, ವಾಕ್‌ಸ್ತುತಿ ಮುಂತಾದ ದುಷ್ಟೋಪಕರಣಗಳಿಂದಲೂ ಜೀವನ ವ್ಯವಹಾರವು ನಡೆಯುವುದು ತುಂಬಾ ಕಷ್ಟವಾಗುವುದು, ಕಲಿಯುಗ

ಅನಾವೃಷ್ಟಿಭಯಂ ಘೋರಂ ದೇಶಾನಾಂ ಚ ವಿಪರ್ಯಯಃ ।
ನ ಪ್ರಮಾಣಂ ಸ್ಮೃತೇರಸ್ತಿ ತಿಷ್ಯೇ ಲೋಕೇಷು ವೈ ಯುಗೇ ॥ ೩೪ ॥

ಗರ್ಭಸ್ಥೋ ಮ್ರಿಯತೇ ಕಶ್ಚಿದ್ಯೌವನಸ್ಥಸ್ತಥಾ ಪರಃ ।
ಸ್ಥವಿರಾಃ ಕೇಽಪಿ ಕೌಮಾರೇ ಮ್ರಿಯಂತೇ ವೈ ಕಲೌ ಪ್ರಜಾಃ ॥ ೩೫ ॥

ದುರಿಷ್ಟೈರ್ದುರಧೀತೈಶ್ಚ ದುಷ್ಕೃತೈಶ್ಚ ದುರಾಗಮೈಃ ।
ವಿಪ್ರಾಣಾಂ ಕರ್ಮದೋಷೈಸ್ತೈಃ ಪ್ರಜಾನಾಂ ಜಾಯತೇ ಭಯಮ್
॥ ೩೬ ॥

ಹಿಂಸಾ ಮಾಯಾ ತಥೇರ್ಷ್ಯಾ ಚ ಕ್ರೋಧೋಽಸೂಯಾ ತಥಾ ನೃಷು।
ತಿಷ್ಯೇ ಭವಂತಿ ಜಂತೂನಾಂ ರಾಗೋ ಲೋಭಶ್ಚ ಸರ್ವಶಃ ॥ ೩೭ ॥

---

ದಲ್ಲಿ ಮರಣವನ್ನುಂಟುಮಾಡುವ ಮಹಾ ರೋಗವೂ, ಹಸಿವಿನ ಬಾಧೆಯೂ ಪ್ರಸರಿಸುತ್ತವೆ.

೩೪. ಕಲಿಯುಗದಲ್ಲಿ ದೇಶಗಳಲ್ಲಿ ಅನಾವೃಷ್ಟಿಯ ಪೀಡಾಭಯವು ಘೋರವಾಗುವುದು, ದೇಶಗಳಿಗೆ ವಿಪರ್ಯಯವುಂಟಾಗುವುದು, ಮತ್ತು ಆ ಯುಗಗಳಲ್ಲಿ ಸ್ಮೃತಿ ಗ್ರಂಥಗಳಿಗೆ ಪ್ರಾಮಾಣ್ಯವು ಲುಪ್ತವಾಗುವುದು.

೩೫. ಕಲಿಯುಗದಲ್ಲಿರುವ ಪ್ರಜೆಗಳಿಗೆ ಪೂರ್ಣಾಯುಷ್ಯವನ್ನು ಅನುಭವಿಸುವ ನಿಯಮವಿಲ್ಲದಂತೆ ಒಬ್ಬನು ಗರ್ಭದಲ್ಲಿಯೇ ಮರಣಹೊಂದುವನು, ಮತ್ತೊಬ್ಬನು ಯೌವನದಲ್ಲಿಯೂ, ಬೇರೊಬ್ಬನು ವಾರ್ಧಕಾವಸ್ಥೆಯಲ್ಲಿಯೂ ಇತರನೊಬ್ಬನು ಕೌಮಾರಾವಸ್ಥೆಯಲ್ಲಿಯೂ ಮರಣಹೊಂದುವನು.

೩೬. ವಿಪ್ರರು ಆಚರಿಸುವ ವಿಧಿಯನ್ನು ಬಿಟ್ಟು ಅವಿಹಿತವಿಧಾನದಿಂದ ಮಾಡುವ ಯಾಗಾದಿಗಳಿಂದಲೂ, ಅಧ್ಯಯನಗಳಿಂದಲೂ, ದುಷ್ಕರ್ಮಗಳಿಂದಲೂ, ಮತ್ತು ದುಷ್ಟವಾದ ಶಾಸ್ತ್ರಜ್ಞಾನಾರ್ಜನೆಯಿಂದಲೂ ಕೂಡಿ ಆಯಾಯ ಕರ್ಮಗಳಲ್ಲಿನ ಛಿದ್ರ ದೋಷಗಳಿಂದ ಭೀತರಾಗಿರುವರು.

೩೭. ಕಲಿಯುಗದ ಪ್ರಜೆಗಳಿಗೆ ಸ್ವಾಭಾವಿಕವಾಗಿ ಹಿಂಸೆ, ವಂಚನೆ, ಈರ್ಷ್ಯೆ, ಕ್ರೋಧ, ಅಸೂಯೆ, ಅಕ್ಷಮೆ, ರಾಗ, ಮತ್ತು ಲೋಭಗಳೆಂಬ ವೃತ್ತಿಗಳು ಪ್ರತಿಯೊಂದು ವಿಷಯದಲ್ಲಿಯೂ ಉಂಟಾಗುವುವು.

**ಸಂಕ್ಷೋಭೋ ಜಾಯತೇಽತ್ಯರ್ಥಂ ಕಲಿಮಾಸಾದ್ಯ ವೈ ಯುಗಮ್ ।**
**ಪೂರ್ಣೇ ವರ್ಷಸಹಸ್ರೇ ವೈ ಪರಮಾಯುಸ್ತದಾ ನೃಣಾಮ್ ॥ ೩೮ ॥**

**ನಾಧೀಯತೇ ತದಾ ವೇದಾನ್ ನ ಯಜಂತೇ ದ್ವಿಜಾತಯಃ ।**
**ಉತ್ಸೀದಂತಿ ನರಾಶ್ಚೈವ ಕ್ಷತ್ರಿಯಾಶ್ಚ ವಿಶಃ ಕ್ರಮಾತ್ ॥ ೩೯ ॥**

**ಶೂದ್ರಾಣಾಮಂತ್ಯಯೋನೇಸ್ತು ಸಂಬಂಧಾ ಬ್ರಾಹ್ಮಣೈಃ ಸಹ ।**
**ಭವಂತೀಹ ಕಲೌ ತಸ್ಮಿನ್ ಶಯನಾಸನಭೋಜನೈಃ ॥ ೪೦ ॥**

**ರಾಜಾನಃ ಶೂದ್ರಭೂಯಿಷ್ಠಾಃ ಪಾಖಂಡಾನಾಂ ಪ್ರವರ್ತಕಾಃ ।**
**ಗುಣಹೀನಾಃ ಪ್ರಜಾಶ್ಚೈವ ತದಾ ವೈ ಸಂಪ್ರವರ್ತತೇ ॥ ೪೧ ॥**

**ಆಯುರ್ಮೇಧಾ ಬಲಂ ರೂಪಂ ಕುಲಂ ಚೈವ ಪ್ರಣಶ್ಯತಿ ।**
**ಶೂದ್ರಾಶ್ಚ ಬ್ರಾಹ್ಮಣಾಚಾರಾಃ ಶೂದ್ರಾಚಾರಾಶ್ಚ ಬ್ರಾಹ್ಮಣಾಃ ॥ ೪೨ ॥**

---

೩೮. ಆಗ ಆ ಕಲಿಯುಗದ ಪ್ರಭಾವದಿಂದ ಲೋಕಕ್ಕೆ ಹೆಚ್ಚು ಕ್ಷೋಭವುಂಟಾಗುವುದು, ಈ ರೀತಿಯಾಗಿ ಕಲಿಯುಗದಲ್ಲಿಯೂ ಸಹಸ್ರವರ್ಷಗಳು ಪೂರ್ಣವಾಗಿ ಕಳೆದ ತರುವಾಯ ಮಾನವರು ಕಲಿಯುಗ ಪ್ರಾಬಲ್ಯದ ಎಲ್ಲೆಯನ್ನು ಹೊಂದುವರು-

೩೯. ಆಗ ವೇದಾಧಿಕಾರಿಗಳಾದ ದ್ವಿಜರು ವೇದಾಧ್ಯಯನವನ್ನು ಮಾಡುವುದಿಲ್ಲ. ಮತ್ತು ಯಜ್ಞಾದಿಗಳನ್ನು ಆಚರಿಸುವುದಿಲ್ಲ. ಆಗ ಕ್ಷತ್ರಿಯರು, ವೈಶ್ಯರು, ಮುಂತಾದ ಮಾನವರು ನಶಿಸಿ ಹೋಗುವರು.

೪೦. ಆ ಕಲಿಯುಗದಲ್ಲಿ ಬ್ರಾಹ್ಮಣರು ಶೂದ್ರ ಅಥವಾ ಅಂತ್ಯಜರೊಡನೆ ಸೇರಿ ಶಯನ-ಆಸನ-ಭೋಜನ ವ್ಯವಹಾರಗಳಲ್ಲಿ ಸಂಬಂಧಿಸಿ ವಿನೋದಪಡುವರು.

೪೧. ಶೂದ್ರ ಪ್ರಾಬಲ್ಯದಿಂದ ಕೂಡಿದ ರಾಜರು ಆಸ್ತಿಕ ಮಾರ್ಗಕ್ಕೆ ವಿರೋಧಿಯಾದ ಪಾಖಂಡ ಮತ ಪ್ರಚಾರಕ್ಕೆ ಅವಕಾಶಕೊಡುವರು, ಪ್ರಜೆಗಳೆಲ್ಲರೂ ಗುಣಗಳಿಂದ ವರ್ಜಿತರಾಗಿ ಹುಟ್ಟುತ್ತಾರೆ.

೪೨. ಮತ್ತು ಆಯುಷ್ಯ, ಮೇಧಾ, ಬಲ, ರೂಪ, ಮತ್ತು ಸತ್ಕುಲಪ್ರಸೂತಿ ಎಂಬ ಗುಣಗಳು ಮಾಯವಾಗುವುವು, ಶೂದ್ರರು ವಿಶೇಷವಾಗಿ ಬ್ರಾಹ್ಮಣರ ಆಚಾರವನ್ನು ಮಾಡುವವರೂ ಬ್ರಾಹ್ಮಣರು ಶೂದ್ರ ಧರ್ಮವನ್ನು ಅವಲಂಬಿಸುವವರೂ ಆಗುವರು.

**ರಾಜವೃತ್ತಾಃ ಸ್ಥಿತಾಶ್ಚೋರಾಶ್ಚೋರಾಚಾರಾಶ್ಚ ಪಾರ್ಥಿವಾಃ ।**
**ಭೃತ್ಯಾ ಏತೇ ಹ್ಯಸುಭೃತೋ ಯುಗಾಂತೇ ಸಮುಪಸ್ಥಿತೇ ॥ ೪೩ ॥**

**ಅಶೀಲಿನ್ಯೋಽನೃತಾಶ್ಚೈವ ಸ್ತ್ರಿಯೋ ಮದ್ಯಾಮಿಷಪ್ರಿಯಾಃ ।**
**ಮಾಯಾವಿನ್ಯೋ ಭವಿಷ್ಯಂತಿ ಯುಗಾಂತೇ ಮುನಿಸತ್ತಮ ॥ ೪೪ ॥**

**ಏಕಪತ್ನ್ಯೋ ನ ಶಿಷ್ಯಂತಿ ಯುಗಾಂತೇ ಮುನಿಸತ್ತಮ ।**
**ಶ್ವಾಪದಪ್ರಬಲತ್ವಂ ಚ ಗವಾಂ ಚೈವ ಹ್ಯುಪಕ್ಷಯಃ ॥ ೪೫ ॥**

**ಸಾಧೂನಾಂ ವಿನಿವೃತ್ತಿಂ ಚ ವಿದ್ಯಾತ್ತಸ್ಮಿನ್ ಯುಗಕ್ಷಯೇ ।**
**ತದಾ ಧರ್ಮೋ ಮಹೋದರ್ಕೋ ದುರ್ಲಭೋ ದಾನಮೂಲವಾನ್ ॥ ೪೬ ॥**

**ಚಾತುರಾಶ್ರಮಶೈಥಿಲ್ಯೋ ಧರ್ಮಃ ಪ್ರವಿಚರಿಷ್ಯತಿ ।**
**ತದಾ ಹ್ಯಲ್ಪಫಲಾ ಭೂಮಿಃ ಕ್ವಚಿಚ್ಚಾಪಿ ಮಹಾಫಲಾ ॥ ೪೭ ॥**

---

೪೩. ಅಂತ್ಯವಾದ ಕಲಿಯುಗವು ಬಂದಿರಲು ರಾಜರಂತೆ ತೋರುವ ಆಚಾರ ಯುತರಾಗಿ ಚೋರರೂ, ಚೋರವೃತ್ತದಿಂದ ಕೂಡಿದ ರಾಜರೂ ಲೋಕದಲ್ಲಿ ಹೆಚ್ಚು ವರು, ಮತ್ತು ಸೇವಕರು ಸ್ವಾಮಿಯಲ್ಲಿ ಭಕ್ತಿಯನ್ನು ಇಡದೇ ತಮ್ಮ ರಕ್ಷಣೆಯೇ ಹೆಚ್ಚೆಂದು ಭಾವಿಸುವರು.

೪೪. ಮುನಿಶ್ರೇಷ್ಠನೆ! ಆ ಕಲ್ಲಿಯುಗದ ಅವಸಾನದಲ್ಲಿ ಸ್ತ್ರೀಯರೆಲ್ಲರೂ ಶೀಲ ವರ್ಜಿತರೂ ಅನೃತವನ್ನು ನುಡಿಯುವವರೂ ಮದ್ಯ ಮಾಂಸಾದಿ ಅಹಾರದಲ್ಲಿ ಆಸೆ ಯುಳ್ಳವರೂ, ಮತ್ತು ವಂಚನ ಶೀಲವುಳ್ಳವರೂ ಆಗಿರುವರು.

೪೫. ಮುನಿಶ್ರೇಷ್ಠನೆ! ಏಕಪತ್ನೀ ವ್ರತವನ್ನು ಪಾಲಿಸುವ ನಾರಿಯರು ಆ ಕಲಿಯುಗದಲ್ಲಿ ಉಳಿಯುವುದಿಲ್ಲ, ಮತ್ತು ಯುಗಾವಸಾನದಲ್ಲಿ ಕ್ರೂರವಾದ ಶ್ವಾಪದ ಪ್ರಾಣಿಗಳ ಆಧಿಕ್ಯವುಂಟಾಗಿ ಗೋವುಗಳಿಗೆ ನಾಶವು ಒದಗುವುದು.

೪೬. ಸಾಧುಪುರುಷರು ಆ ಯುಗಾಂತದಲ್ಲಿ ಅದೃಶ್ಯರಾಗುವರು, ಎಂದು ತಿಳಿಯಬೇಕು. ಆಗ ದಾನಮೂಲಕವಾಗಿ ಸಂಭವಿಸುವ ಶುಭಪರಿಣಾಮಕಾರಿಯಾದ ಧರ್ಮವು ದುರ್ಲಭವಾವುದು.

೪೭. ಬ್ರಾಹ್ಮಣಾದಿ ಆಶ್ರಮಗಳಿಗೆ ಶೈಥಿಲ್ಯವುಂಟಾಗಿ ಧರ್ಮವೂ ಶಿಥಿಲ ವಾಗಿಯೂ ಸಂಕೀರ್ಣವಾಗಿಯೂ ನಡೆಯುವುದು, ಆಗ ಭೂಮಿಯು ಅಲ್ಪಫಲವನ್ನು

ನ ರಕ್ಷಿತಾರೋ ಭೋಕ್ತಾರೋ ಬಲಿಭಾಗಸ್ಯ ಪ್ರಾರ್ಥಿವಾಃ ।
ಯುಗಾಂತೇ ಚ ಭವಿಷ್ಯಂತಿ ಸ್ವರಕ್ಷಣಪರಾಯಣಾಃ ॥ ೪೮ ॥

ಅರಕ್ಷಿತಾರೋ ರಾಜಾನೋ ವಿಪ್ರಾಃ ಶೂದ್ರೋಪಜೀವಿನಃ ।
ಶೂದ್ರಾಭಿವಾದಿನಃ ಸರ್ವೇ ಯುಗಾಂತೇ ದ್ವಿಜಸತ್ತಮಾಃ ॥ ೪೯ ॥

ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾಸ್ತಥಾ ।
ಪ್ರಮದಾಃ ಕೇಶಶೂಲಾಶ್ಚ ಯುಗಾಂತೇ ಸಮುಪಸ್ಥಿತೇ ॥ ೫೦ ॥

ತಪೋಯಜ್ಞಫಲಾನಾಂ ಚ ವಿಕ್ರೇತಾರೋ ದ್ವಿಜೋತ್ತಮಾಃ ।
ಯತಯಶ್ಚ ಭವಿಷ್ಯಂತಿ ಬಹವೋಽಸ್ಮಿನ್ ಕಲೌ ಯುಗೇ ॥ ೫೧ ॥

ಚಿತ್ರವರ್ಷೀ ಯದಾ ದೇವಸ್ತದಾ ಪ್ರಾಹುರ್ಯುಗಕ್ಷಯಮ್ ।
ಸರ್ವೇ ವಾಣಿಜಕಾಶ್ಚಾಪಿ ಭವಿಷ್ಯಂತ್ಯಧಮೋ ಯುಗೇ ॥ ೫೨ ॥

---

ಕೊಡುವುದು. ಆದರೆ ಪ್ರಯೋಜನಕ್ಕೆ ಬಾರದ ಸ್ಥಳಗಳಲ್ಲಿ ಅಥವಾ ಉಪಯೋಗ ವಿಲ್ಲದ ಫಲಗಳ ವಿಷಯದಲ್ಲಿ ಮಹಾಫಲವತ್ತಾಗುವುದು.

೪೮. ಈ ವಿಧದ ಯುಗಾವಸಾನದಲ್ಲಿ ರಾಜರು ಕಪ್ಪಕಾಣಿಕೆಗಳನ್ನು ಮಾತ್ರ ತೆಗೆದುಕೊಂಡು ಲೋಕ ರಕ್ಷಣ ವ್ಯಾಪಾರದಲ್ಲಿ ವಿಮುಖರಾಗುವರು, ಮತ್ತು ಆತ್ಮ ರಕ್ಷಣೆಯಲ್ಲಿ ವಿಶೇಷವಾದ ಆಸಕ್ತಿಯುಳ್ಳವರಾಗುವರು.

೪೯. ರಾಜರು ರಾಜ್ಯಪಾಲನ ವ್ಯಾಪಾರವನ್ನು ತ್ಯಜಿಸುವರು, ವಿಪ್ರರು ಶೂದ್ರ ರನ್ನು ಉಪಜೀವಿಸುವರು. ಮತ್ತು ಪವಿತ್ರರಾದ ದ್ವಿಜರು ಈ ಯುಗಾವಸಾನದಲ್ಲಿ ಶೂದ್ರರನ್ನು ನಮಸ್ಕರಿಸಿ ಸೇವಾಪರರಾಗುವರು.

೫೦. ದುಷ್ಟ ಯುಗದ ಪರಿಣಾಮದಲ್ಲಿ ದೇಶಗಳೆಲ್ಲವೂ ಅನ್ನ ವಿಕ್ರಯಸ್ಥಾನ ಗಳೆಂಬ ಶೂಲದಿಂದಲೂ ದ್ವಿಜರು ಶಿವಚಿಹ್ನಧಾರಣ ಶೂಲದಿಂದಲೂ ಮತ್ತು ಪತಿ ಹೀನರಾದ ಸ್ತ್ರೀಯರು ಕೇಶಧಾರಣ ಶೂಲದಿಂದಲೂ ಕೂಡಿಕೊಂಡು ಇರುವರು.

೫೧. ದ್ವಿಜೋತ್ತಮರು ತಮ್ಮ ತಪಸ್ಸು, ಯಜ್ಞಗಳ ಫಲಗಳನ್ನು ಮೂಲ್ಯ ವನ್ನು ತೆಗೆದುಕೊಂಡು ವಿಕ್ರಯಿಸುವರು. ಈ ಕಲಿಯುಗದಲ್ಲಿ ಜ್ಞಾನಸಾರವಿಲ್ಲದ ಬಾಹ್ಯಯತಿಗಳು ಅನೇಕ ಮಂದಿಯಾಗುವರು.

೫೨. ಪರ್ಜನ್ಯ ದೇವನು ನಿಯಮವನ್ನು ಬಿಟ್ಟು ವಿಚಿತ್ರವಾಗಿ ಮಳೆ ಸುರಿಸ

ಭೂಯಿಷ್ಠಂ ಕೂಟಮಾನೈಶ್ಚ ಪಣ್ಯಂ ವಿಕ್ರೀಣತೇ ಜನಾಃ ।
ಕುಶೀಲಚರ್ಯಾಪಾಖಂಡೈರ್ವ್ಯಾಘ್ರರೂಪೈಃ ಸಮಾವೃತಮ್ ॥ ೫೩ ॥

ಪುರುಷಾಲ್ಪಂ ಬಹುಸ್ತ್ರೀಕಂ ಯುಗಾಂತೇ ಸಮುಪಸ್ಥಿತೇ ।
ಬಹುಯಾಚನಕೋ ಲೋಕೋ ಭವಿಷ್ಯತಿ ಪರಸ್ಪರಮ್ ॥ ೫೪ ॥

ಅವ್ಯಾಕರ್ತಾ ಕ್ರೂರವಾಕ್ಯಾ ನಾರ್ಜವೋ ನಾನಸೂಯಕಃ ।
ನ ಕೃತೇ ಪ್ರತಿಕರ್ತಾ ಚ ಯುಗೇ ಕ್ಷೀಣೇ ಭವಿಷ್ಯತಿ ॥ ೫೫ ॥

ಅಶಂಕಾ ಚೈವ ಪತಿತೇ ಯುಗಾಂತೇ ತಸ್ಯ ಲಕ್ಷಣಮ್ ।
ತತಃ ಶೂನ್ಯಾ ವಸುಮತೀ ಭವಿಷ್ಯತಿ ವಸುಂಧರಾ ॥ ೫೬ ॥

ಗೋಪ್ತಾರಶ್ಚಾಪ್ಯಗೋಪ್ತಾರಃ ಪ್ರಭವಿಷ್ಯಂತಿ ಶಾಸಕಾಃ ।
ಹರ್ತಾರಃ ಪರರತ್ನಾನಾಂ ಪರದಾರವಿಮರ್ಶಕಾಃ ॥ ೫೭ ॥

---

ಲಾರಂಭಿಸಿದಾಗ ಆ ಯುಗದ ಅವಸಾನವೆಂದು ಹೇಳುವರು. ಅಧಮವಾದ ಆ ಯುಗದಲ್ಲಿ ಸರ್ವಮಾನವರೂ ವಾಣಿಜ್ಯ ವೃತ್ತಿಯನ್ನು ಅವಲಂಬಿಸುವರು.

೫೩. ಮತ್ತು ಜನರು ಕೃತ್ರಿಮವಾದ ಅಳತೆ-ತೂಕಗಳಿಂದ ಹೆಚ್ಚಾಗಿ ಕ್ರಯ ವಿಕ್ರಯಗಳನ್ನು ಮಾಡುವರು, ಜನರು ಪಾಖಂಡ, ವ್ಯಾಘ್ರರೂಪರಾದ ಕ್ರೂರ ಕರ್ಮಾಚರಣೆಯುಳ್ಳ ಜನರಿಂದ ಜಗತ್ತು ವ್ಯಾಪ್ತವಾಗುವುದು.

೫೪. ಈ ಯುಗದಲ್ಲಿ ಪುರುಷ ಸಂಖ್ಯೆಯು ಅಲ್ಪವಾಗಿಯೂ ಸ್ತ್ರೀ ಸಂಖ್ಯೆಯು ಪ್ರಚುರವಾಗಿಯೂ ಇರುವುದು, ಮತ್ತು ರಾಷ್ಟ್ರದಲ್ಲಿ ಪರಸ್ಪರ ಯಾಚನಾವೃತ್ತಿಯನ್ನು ಅವಲಂಬಿಸಿದ ಜನರು ಹೆಚ್ಚುವರು.

೫೫. ಯುಗಾಂತ ಸಮಯದಲ್ಲಿ ಜನರು ಭಾಷಣದಲ್ಲಿ ವ್ಯಾಕರಣ ಸಂಸ್ಕಾರ ಶೂನ್ಯರೂ ಕ್ರೂರವಾದ ಭಾಷಣ ವಕ್ರಸ್ವಭಾವ, ಅಸೂಯೆ ಮುಂತಾದ ದೋಷ ಗಳಿಂದ ಕೂಡಿರುವವರೂ ಆಗುವರು. ಕೃತಜ್ಞತೆಯಿಂದ ಉಪಕಾರಿಗಳಿಗೆ ಪ್ರತ್ಯು ಪಕಾರ ಕರಣವು ಲುಪ್ತವಾಗುವುದು.

೫೬. ಆ ಯುಗದಲ್ಲಿ ಪ್ರಜೆಗಳಿಗೆ ಯಾವುದೊಂದು ಉದ್ಯಮದಲ್ಲಿಯೂ ನಿರ್ಭೀತಿಯು ಉದಯಿಸುವುದು. ಇದು ಆ ಯುಗಾಂತದ ಲಕ್ಷಣವು. ತರುವಾಯ ಭೂಮಿಯು ಸಕಲ ಸಂಪತ್ತುಗಳಿಂದ ಶೂನ್ಯವಾಗುವುದು.

೫೭. ರಾಜ್ಯಪಾಲನಾಧಿಕಾರದಲ್ಲಿ ನಿಯುಕ್ತರಾದ ಶಾಸಕರು ಸ್ವವ್ಯಾಪಾರವನ್ನು

**ಕಾಮಾತ್ಮಾನೋ ದುರಾತ್ಮಾನೋ ಹ್ಯಧಮಾಃ ಸಾಹಸಪ್ರಿಯಾಃ ।**
**ಪ್ರಣಷ್ಟಚೇಷ್ಟನಾ ಧೂರ್ತಾ ಮುಕ್ತಕೇಶಾಸ್ತ್ವಶೂಲಿನಃ ॥ ೫೮ ॥**

**ಊನಷೋಡಶವರ್ಷಾಶ್ಚ ಪ್ರಜಾಯಂತೇ ಯುಗಕ್ಷಯೇ ।**
**ಶುಕ್ಲದಂತಾ ಜಿತಾಕ್ಷಾಶ್ಚ ಮುಂಡಾಃ ಕಾಷಾಯವಾಸಸಃ ॥ ೫೯ ॥**

**ಶೂದ್ರಾ ಧರ್ಮಂ ಚರಿಷ್ಯಂತಿ ಯುಗಾಂತೇ ಸಮುಪಸ್ಥಿತೇ ।**
**ಸಸ್ಯಚೋರಾ ಭವಿಷ್ಯಂತಿ ತಥಾ ಚೇಲಾಪಹಾರಿಣಃ ॥ ೬೦ ॥**

**ಚೋರಾಚ್ಚೋರಾಶ್ಚ ಹರ್ತಾರೋ ಹರ್ತುರ್ಹರ್ತಾ ತಥಾಪರಃ ।**
**ಜ್ಞಾನಕರ್ಮಣ್ಯುಪರತೇ ಲೋಕೇ ನಿಷ್ಕ್ರಿಯತಾಂ ಗತೇ ॥ ೬೧ ॥**

---

ಪರಿತ್ಯಾಗಮಾಡುವರು. ಮತ್ತು ರಾಜ್ಯ ಶಾಸಕರು ಪರ ರತ್ನಗಳನ್ನು ಅಪಹರಿಸುವವರೂ, ಪರಸ್ತ್ರೀಯರ ಸಂಗವನ್ನು ಮಾಡುವವರೂ ಆಗುವರು.

೫೮. ಆಗಿನ ಪ್ರಜೆಗಳು ಕಾಮಲೋಲುಪರೂ, ಕೆಟ್ಟ ಸ್ವಭಾವವುಳ್ಳವರೂ, ಸಾಹಸ ಕರ್ಮಗಳಲ್ಲಿ ಪ್ರೀತಿಯುಳ್ಳವರೂ. ನಶಿಸಿ ಹೋದ ಸಕಲ ಉಚಿತ ವ್ಯಾಪಾರವುಳ್ಳವರೂ, ಧೂರ್ತರೂ, ಶಿಖಾಬಂಧವಿಲ್ಲದ ಕೇಶಗಳುಳ್ಳವರೂ ಮತ್ತು ಆಚಾರ ಭ್ರಂಶದ ಸ್ಮೃತಿಯೇ ಇಲ್ಲದವರೂ ಆಗುವರು.

೫೯. ಯುಗಾವಸಾನದಲ್ಲಿ ಸ್ವಲ್ಪ ನ್ಯೂನವಾದ ಹದಿನಾರು ವರ್ಷಗಳು ಮಾತ್ರ ಪೂರ್ಣಾಯುಷ್ಯವುಳ್ಳವರಾಗಿ ಜನಿಸುವರು. ಮತ್ತು ಅನೇಕರು ಪೂಜ್ಯವಾದ ಯತಿವೇಷದಲ್ಲಿ ಆಸೆಪಟ್ಟು ದಂತಾದಿ ಸಂಸ್ಕಾರದಿಂದ ಅಲಂಕೃತರೂ, ಜಿತೇಂದ್ರಿಯರಲ್ಲದವರೂ, ಶಿರೋಮುಂಡನ, ಕಾಷಾಯವಸ್ತ್ರಧಾರಣಗಳಿಂದ ಕೂಡಿದವರೂ ಆಗಿರುವರು.

೬೦. ಮತ್ತು ಈ ದುಷ್ಕಾಲವು ಪ್ರಾಪ್ತವಾಗಲು ಅನಧಿಕಾರಿಗಳಾದ ಶೂದ್ರರು ಧರ್ಮಾಚರಣೆಯಲ್ಲಿ ಆಸಕ್ತರಾಗುವರು. ಮತ್ತು ಜನಗಳು ಸಸ್ಯ, ಧಾನ್ಯವನ್ನೂ ವಸ್ತ್ರಾದಿಗಳನ್ನೂ ಅಪಹರಿಸುವ ಶೀಲವಂತರಾಗುವರು.

೬೧. ಲೋಕದಲ್ಲಿ ಜ್ಞಾನ-ಕರ್ಮ ಮಾರ್ಗಗಳು ಭ್ರಷ್ಟವಾಗಿ ಒಂದು ವಿಧದ ನಿಯಮಿತಕರ್ತವ್ಯವೇ ಇಲ್ಲದಂತಾಗಿ ಚೋರರನ್ನು ವಂಚಿಸಿ ಅವನ ಸಂಪತ್ತನ್ನು ಚೌರ್ಯಮಾಡುವವರೂ ಹರ್ತೃವಿನಿಂದ ಹರಣಮಾಡುವವರೂ ಹೆಚ್ಚುವರು.

ಕೀಟಮೂಷಕಸರ್ಪಾಶ್ಚ ಧರ್ಷಯಿಷ್ಯಂತಿ ಮಾನವಾನ್ ।
ಅಭೀಕ್ಷ್ಣಂ ಕ್ಷೇಮಮಾರೋಗ್ಯಂ ಸಾಮರ್ಥ್ಯಂ ದುರ್ಲಭಂ ತಥಾ ॥೬೨॥

ಕೌಶಿಕಾನ್ ಪ್ರತಿವತ್ಸ್ಯಂತಿ ದೇಶಾಃ ಕ್ಷುದ್ಭಯಪೀಡಿತಾಃ ।
ದುಃಖೇನಾಭಿಪ್ಲುತಾನಾಂ ಚ ಪರಮಾಯುಃ ಶತಂ ತದಾ ॥ ೬೩ ॥

ದೃಶ್ಯಂತೇ ಚ ನ ದೃಶ್ಯಂತೇ ವೇದಾಃ ಕಲಿಯುಗೇಽಖಿಲಾಃ ।
ಉತ್ಸೀದಂತೇ ತಥಾ ಯಜ್ಞಾಃ ಕೇವಲಾಧರ್ಮಪೀಡಿತಾಃ ॥ ೬೪ ॥

ಕಾಷಾಯಿಣೋಽಥ ನಿರ್ಗ್ರಂಥಾಸ್ತಥಾ ಕಾಪಾಲಿಕಾಶ್ಚ ಹ ।
ವೇದವಿಕ್ರಯಿಣಶ್ಚಾನ್ಯೇ ತೀರ್ಥವಿಕ್ರಯಿಣೋಽಪರೇ ॥ ೬೫ ॥

ವರ್ಣಾಶ್ರಮಾಣಾಂ ಯೇ ಚಾನ್ಯೇ ಪಾಖಂಡಾಃ ಪರಿಪಂಥಿನಃ ।
ಉತ್ಪದ್ಯಂತೇ ತಥಾ ತೇ ವೈ ಸಂಪ್ರಾಪ್ತೇ ಶು ಕಲೌ ಯುಗೇ ॥ ೬೬ ॥

---

೬೨. ಕ್ರಿಮಿ, ಇಲಿ, ಹಾವುಗಳು ಮನುಷ್ಯರನ್ನು ಹಿಂಸಿಸಿ ಭಯಪಡಿಸುತ್ತವೆ. ಕ್ಷೇಮ, ಆರೋಗ್ಯ, ಸಾಮರ್ಥ್ಯ ಮುಂತಾದ ಸದ್ಗುಣಗಳು ದುರ್ಲಭವಾಗುವುವು-

೬೩. ಹಸಿವಿನ ಪೀಡೆಯಿಂದ ಪೀಡಿತಗಳಾದ ದೇಶಗಳು ಗೂಬೆಗಳಂತೆ ಮಲಿನವಾದ ಜೀವನವನ್ನು ಅವಲಂಬಿಸುವರು. ಮತ್ತು ದುಃಖದಿಂದ ಪೀಡಿತರಾಗಿ ಒಂದು ನೂರು ವರ್ಷ ಮಾತ್ರದ ಪರಮಾವಧಿಯ ಆಯುಷ್ಯವನ್ನು ಹೊಂದುವರು.

೬೪. ವೇದಗಳು ತಾತ್ತ್ವಿಕವಾದ ಅಧಿಕಾರವುಳ್ಳ ದ್ವಿಜರು ಅಧ್ಯಯನವನ್ನು ಬಿಟ್ಟಿದ್ದರಿಂದಲೂ ಕಂಡೂ ಕಾಣದವು ಆಗುತ್ತವೆ. ಕೇವಲ ಅಧರ್ಮದ ಬಾಹುಲ್ಯದಿಂದ ಮಿಶ್ರಿತವಾಗಿ ಯಜ್ಞಕರ್ಮಗಳು ನಾಶವಾಗುತ್ತವೆ.

೬೫. ಅನೇಕ ಪ್ರಜೆಗಳು ಗ್ರಂಥಜ್ಞಾನವಿಲ್ಲದೇ ಬಾಹ್ಯವಾದ ಕಾಷಾಯವಸ್ತ್ರಧಾರಣ, ಭಿಕ್ಷಾಕಪಾಲಧಾರಣ ಮುಂತಾದ ವಾಮಾಚಾರಗಳನ್ನು ಮಾಡುವರು, ಹಾಗು ವೇದ ವಿಕ್ರಯ, ತೀರ್ಥ ವಿಕ್ರಯಗಳನ್ನು ಮಾಡುವರು.

೬೬. ಇಂತಹ ಕಲಿಯುಗದ ಮಹಿಮೆಯಿಂದ ಲುಪ್ತವಾಗಿ ಅಲ್ಪವಾಗಿ ಉಳಿದಿರುವ ವರ್ಣಾಶ್ರಮ ಧರ್ಮಗಳನ್ನು ನಿರ್ಮೂಲ ಮಾಡುವ ಪಾಖಂಡ ಮತಗಳು ವಿಶೇಷವಾಗಿ ಹುಟ್ಟುತ್ತವೆ.

ಅಧೀಯತೇ ತದಾ ವೇದಾನ್ ಶೂದ್ರಾ ಧರ್ಮಾರ್ಥಕೋವಿದಾಃ ।
ಯಜಂತೇ ಚಾಶ್ವಮೇಧೇನ ರಾಜಾನಃ ಶೂದ್ರಯೋನಯಃ ॥ ೬೭ ॥

ಸ್ತ್ರೀಬಾಲಗೋವಧಂ ಕೃತ್ವಾ ಹತ್ವಾಽನ್ಯೇ ಚ ಪರಸ್ಪರಮ್ ।
ಅಪಹತ್ಯ ತಥಾನ್ಯೋನ್ಯಂ ಸಾಧಯಂತಿ ತದಾ ಪ್ರಜಾಃ ॥ ೬೮ ॥

ದುಃಖಪ್ರವಚನಾಲ್ಪಾಯುರ್ದೇಹಾಲ್ಪಾಯುಶ್ಚ ರೋಗತಃ ।
ಅಧರ್ಮಾಭಿನಿವೇಶಿತ್ವಾತ್ತಮೋವೃತ್ತಂ ಕಲೌ ಸ್ಮೃತಮ್ ॥ ೬೯ ॥

ಪ್ರಜಾಸು ಭ್ರೂಣಹತ್ಯಾ ಚ ತದಾ ವೈರಾತ್ಪ್ರವರ್ತತೇ ।
ತಸ್ಮಾದಾಯುರ್ಬಲಂ ರೂಪಂ ಕಲಿಂ ಪ್ರಾಪ್ಯ ಪ್ರಹೀಯತೇ ॥ ೭೦ ॥

ತದಾ ಚಾಲ್ಪೇನ ಕಾಲೇನ ಸಿದ್ಧಿಂ ಗಚ್ಛಂತಿ ಮಾನವಾಃ ।
ಧನ್ಯಾ ಧರ್ಮಂ ಚರಿಷ್ಯಂತಿ ಯುಗಾಂತೇ ದ್ವಿಜಸತ್ತಮಾಃ ॥ ೭೧ ॥

---

೬೭. ಆಗ ಶೂದ್ರರು ವೇದಗಳನ್ನು ಅಧ್ಯಯನಮಾಡಿ ಧರ್ಮ ಅರ್ಥಗಳಲ್ಲಿ ಪಾಂಡಿತ್ಯವನ್ನು ವ್ಯಕ್ತಪಡಿಸುವರು. ಶೂದ್ರಯೋನಿಯಿಂದ ಜನಿಸಿದ ರಾಜರು ಅಶ್ವಮೇಧಾದಿ ಯಾಗವನ್ನು ಆಚರಿಸುವರು,

೬೮. ಎಲ್ಲ ಪ್ರಜೆಗಳು ಸ್ತ್ರೀಹತ್ಯೆ, ಭ್ರೂಣಹತ್ಯೆ. ಮತ್ತು ಗೋಹತ್ಯೆಗಳನ್ನು ಪರಸ್ಪರ ಮರಣ ಕರ್ಮಗಳನ್ನೂ ಆರಿಸಿ ತಮ್ಮ ಸ್ವಾರ್ಥಗಳನ್ನು ಸಾಧಿಸಲು ಯತ್ನಿಸುವರು.

೬೯. ದುಃಖಕರವಾದ ಪ್ರವಚನ, ದೇಹ ಅಶಕ್ತಿಯಿಂದ ಅಲ್ಪಾಯುಷ್ಯ, ರೋಗದಿಂದ ಅಲ್ಪಾಯುಷ್ಯ ಮುಂತಾದ ದುರವಸ್ಥೆಗಳು ಸಂಭವಿಸುವುವು, ಅಧರ್ಮದಲ್ಲಿ ಆಗ್ರಹಪೂರ್ವಕವಾದ ಪ್ರವೃತ್ತಿಯುಂಟಾಗಿ ಕಲಿಯುಗದಲ್ಲಿ ತಮೋಗುಣದ ವೃತ್ತವು ತುಂಬಿಹೋಗುವುದು.

೭೦. ಪ್ರಜೆಗಳಲ್ಲಿ ವೈರಮೂಲಕವಾಗಿ ಭ್ರೂಣಹತ್ಯೆಯು ಪ್ರವರ್ತಿಸುವುದು. ಆದುದರಿಂದ ಕಲಿಯುಗವನ್ನು ಅವಲಂಬಿಸಿರುವ ಪ್ರಜೆಗಳಿಗೆ ಆಯುಷ್ಯ, ಬಲ, ರೂಪ ಮುಂತಾದುವು ನಶಿಸುವುವು.

೭೧. ಆಗ ಧನ್ಯರಾದ ಕೆಲವು ಮಂದಿ ದ್ವಿಜಶ್ರೇಷ್ಠರು ಧರ್ಮವನ್ನು ಆಚರಿಸಿ ಅಲ್ಪವಾದ ಕಾಲದಿಂದಲೇ ಸುಕೃತ ಸಿದ್ಧಿಯನ್ನು ಹೊಂದುವರು.

ಶ್ರುತಿಸ್ಮೃತ್ಯುದಿತಂ ಧರ್ಮಂ ಯೇ ಚರಂತ್ಯನಸೂಯಕಾಃ ।
ತ್ರೇತಾಯಾಮಾಬ್ದಿಕೋ ಧರ್ಮೋ ದ್ವಾಪರೇ ಮಾಸಿಕಃ ಸ್ಮೃತಃ ॥ ೭೨ ॥

ಯಥಾಶಕ್ತಿ ಚರನ್ ಪ್ರಾಜ್ಞಸ್ತದಹ್ನಾ ಪ್ರಾಪ್ನುಯಾತ್ ಕಲೌ ।
ಏಷಾ ಕಲಿಯುಗಾವಸ್ಥಾ ಸಂಧ್ಯಾಂಶಂ ತು ನಿಬೋಧತ ॥ ೭೩ ॥

ಯುಗೇ ಯುಗೇ ತು ಹೀಯಂತೇ ತ್ರಿತ್ರಿಪಾದಾಸ್ತು ಸಿದ್ಧಯಃ ।
ಯುಗಸ್ವಭಾವಾತ್ಸಂಧ್ಯಾಸು ತಿಷ್ಠಂತೀಹ ತು ಯಾದೃಶಃ ॥ ೭೪ ॥

ಸಂಧ್ಯಾಸ್ವಭಾವಾಃ ಸ್ವಾಂಶೇಷು ಪಾದಶೇಷಾಃ ಪ್ರತಿಷ್ಠಿತಾಃ ।
ಏವಂ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತಕೇ ॥ ೭೫ ॥

ತೇಷಾಂ ಶಾಸ್ತಾ ಹ್ಯಸಾಧೂನಾಂ ಭೃಗೂಣಾಂ ನಿಧನೋತ್ಥಿತಃ ।
ಗೋತ್ರೇಣ ವೈ ಚಂದ್ರಮಸೋ ನಾಮ್ನಾ ಪ್ರಮತಿರುಚ್ಯತೇ ॥ ೭೬ ॥

---

೭೨. ಶ್ರುತಿ-ಸ್ಮೃತಿಗಳಲ್ಲಿ ಹೇಳಿರುವ ಧರ್ಮಗಳನ್ನು ಶ್ರದ್ಧೆಯಿಂದ ಅಸೂಯಾ ವರ್ಜಿತರಾಗಿ ಯಾವ ಮಾನವರು ಅನುಷ್ಠಾನಮಾಡುವರೋ ಅವರೇ ಧನ್ಯರು. ತ್ರೇತಾಯುಗದಲ್ಲಿ ಧರ್ಮದ ಸಿದ್ಧಿಯು ಒಂದು ವರ್ಷದಿಂದಲೂ ದ್ವಾಪರಯುಗದಲ್ಲಿ ಒಂದು ಮಾಸದಿಂದಲೂ ಉಂಟಾಗುವುದು.

೭೩. ಆ ಧರ್ಮವನ್ನು ಕಲಿಯುಗದಲ್ಲಿ ಯಥಾಶಕ್ತಿಯಾಗಿ ಒಂದು ದಿನ ಮಾತ್ರ ಮಾಡಿ ಸಿದ್ಧಿಯನ್ನು ಹೊಂದಬಹುದು. ಇದು ಕಲಿಯುಗದ ಅವಸ್ಥೆಯು ಇನ್ನು ಮುಂದೆ ಕಲಿಯುಗದ ಸಂಧ್ಯಾಂಶವನ್ನು ಕೇಳಿರಿ.

೭೪. ಪ್ರತಿಯೊಂದೊಂದು ಯುಗಗಳಲ್ಲಿಯೂ ಆಯಾಯ ಯುಗಗಳ ಸಿದ್ಧಿಗಳು ಮೂರು ಪಾದಗಳಿಂದ ನ್ಯೂನವಾಗುವುವು. ಯುಗಗಳಲ್ಲಿ ಯಾವ ಸಿದ್ಧಿಗಳಿರುವುವೊ ಅದೇ ಜಾತಿಯ ಸಿದ್ಧಿಗಳು ನ್ಯೂನಪರಿಮಾಣದಿಂದ ಸಂಧ್ಯಾಂಶಗಳಲ್ಲಿರುವುವು.

೭೫. ಸಂಧ್ಯಾಕಾಲಗಳಲ್ಲಿರುವ ಸ್ವಭಾವಗಳು ಸಂಧ್ಯಾಂಶಗಳಲ್ಲಿ ಪಾದ ಮಾತ್ರ ಶೇಷವಾಗಿರುವುವು. ಈ ರೀತಿಯಾಗಿ ಯುಗ, ಸಂಧ್ಯಾಕಾಲಗಳು ಮುಗಿದು ಸಂಧ್ಯಾಂಶ ಕಾಲವು, ಪ್ರಾಪ್ತವಾಗುವುದು.

೭೬. ಆಗ ಭೃಗುವಂಶದವರ ನಿಧನವಾದ ಮೇಲೆ ಅಸಾಧು ಜನರನ್ನು ಶಿಕ್ಷಿಸುವುದಕ್ಕೋಸ್ಕರ ಚಂದ್ರನ ವಂಶದಲ್ಲಿ ಪ್ರಮತಿಯೆಂಬ ಹೆಸರಿನ ರಾಜನು ಜನಿಸುವನು.

ಮಾಧವಸ್ಯ ತು ಸೋಽಂಶೇನ ಪೂರ್ವಂ ಸ್ವಾಯಂಭುವೇಽಂತರೇ ।
ಸಮಾಃ ಸ ವಿಂಶತಿಃ ಪೂರ್ಣಾಃ ಪರ್ಯಟನ್ ವೈ ವಸುಂಧರಾಮ್ ॥ ೭೭ ॥

ಅನುಕರ್ಷನ್ ಸ ವೈ ಸೇನಾಂ ಸವಾಜಿರಥಕುಂಜರಾಮ್ ।
ಪ್ರಗೃಹೀತಾಯುಧೈರ್ವಿಪ್ರೈಃ ಶತಶೋಽಥ ಸಹಸ್ರಶಃ ॥ ೭೮ ॥

ಸ ತದಾ ತೈಃ ಪರಿವೃತೋ ಮ್ಲೇಚ್ಛಾನ್ ಹಂತಿ ಸ್ಮ ಸರ್ವಶಃ ।
ಸಹ ವಾ ಸರ್ವಶಶ್ಚೈವ ರಾಜ್ಞಸ್ತಾನ್ ಶೂದ್ರಯೋನಿಜಾನ್ ॥ ೭೯ ॥

ಪಾಖಂಡಾಂಸ್ತು ತತಃ ಸರ್ವಾನ್ ನಿಃಶೇಷಂ ಕೃತವಾನ್ ವಿಭುಃ ।
ನಾತ್ಯರ್ಥಂ ಧಾರ್ಮಿಕಾ ಯೇ ಚ ತಾನ್ ಸರ್ವಾನ್ ಹಂತಿ ಸರ್ವಶಃ ॥ ೮೦ ॥

ವರ್ಣವ್ಯತ್ಯಾಸಜಾತಾಶ್ಚ ಯೇ ಚ ತಾನನುಜೀವಿನಃ ।
ಉದೀಚ್ಯಾನ್ಮಧ್ಯದೇಶಾಂಶ್ಚ ಪರ್ವತೀಯಾಂಸ್ತಥೈವ ಚ ॥ ೮೧ ॥

---

೭೭. ಮೊದಲಿನ ಸ್ವಾಯಂಭುವ ಮನ್ವಂತರದಲ್ಲಿ ವಿಷ್ಣುವಿನ ಅಂಶದಿಂದ ದುಷ್ಟನಿಗ್ರಹಕ್ಕೋಸ್ಕರ ಜನಿಸಿದ ಆ ಪ್ರಮತಿರಾಜನು ಇಪ್ಪತ್ತು ವರ್ಷಕಾಲ ಭೂಮಿಯನ್ನು ಸಂಚರಿಸಿದನು.

೭೮. ದುಷ್ಟರನ್ನು ನಿಗ್ರಹಿಸಲು ಆ ನೃಪತಿಯು ಆನೆ, ಕುದುರೆ, ರಥ ಮುಂತಾದ ಚತುರಂಗ ಸೈನ್ಯದಿಂದಲೂ ಅಸ್ತ್ರಧಾರಿಗಳಾದ ಶತ, ಸಹಸ್ರ ವಿಪ್ರರ ವೃಂದದಿಂದಲೂ ಕೂಡಿ ಸಂಚಾರಮಾಡಿದನು.

೭೯. ಆ ಸೇನೆಯಿಂದ ಕೂಡಿದ ರಾಜನು ಎಲ್ಲ ಎಡೆಗಳಲ್ಲಿಯೂ ಮ್ಲೇಚ್ಛರನ್ನೂ ಶೂದ್ರಯೋನಿಯಿಂದ ಜನಿಸಿ ದುರ್ವೃತ್ತದಲ್ಲಿದ್ದ ರಾಜರನ್ನೂ ಸಂಹರಿಸುತ್ತ ಬಂದನು.

೮೦. ಹಾಗೆ ಜಗತ್ತಿನಲ್ಲಿದ್ದ ಸಮಸ್ತ ಪಾಖಂಡಿಗಳನ್ನು ಸಂಹಾರಮಾಡಿದನು. ಹಾಗೆಯೇ ಅಲ್ಪ ಮಾತ್ರವೂ ಧರ್ಮ ವರ್ಜಿತರೂ ಅಧರ್ಮ ಸೇವಕರೂ ಆದವರನ್ನು ನಿಶ್ಶೇಷವಾಗಿ ನಾಶಮಾಡಿದನು.

೮೧. ಉತ್ತರ ದೇಶ, ಮಧ್ಯದೇಶ, ಪರ್ವತ ಪ್ರದೇಶಗಳನ್ನು ಆಶ್ರಯಿಸಿರುವ ವರ್ಣ ಸಾಂಕರ್ಯದಿಂದ ಜನಿಸಿದ ಮತ್ತು ಅಂತಹವರನ್ನು ಆಶ್ರಯಿಸಿ ಬಾಳುವ ಸಕಲ ಧರ್ಮದ್ರೋಹಿಗಳನ್ನು ನಾಶಮಾಡಿದನು.

ಪ್ರಾಚ್ಯಾನ್ ಪ್ರತೀಚ್ಯಾಂಶ್ಚ ತಥಾ ವಿಂಧ್ಯಪೃಷ್ಠಚರಾನಪಿ ।
ತಥೈವ ದಾಕ್ಷಿಣಾತ್ಯಾಂಶ್ಚ ದ್ರವಿಡಾನ್ ಸಿಂಹಲೈಃ ಸಹ ॥ ೮೨ ॥

ಗಾಂಧಾರಾನ್ ಪಾರದಾಂಶ್ಚೈವ ಪಹ್ಲವಾನ್ ಯವನಾನ್ ಶಕಾನ್ ।
ತುಷಾರಾನ್ ಬರ್ಬರಾನ್ ಚೀನಾನ್ ಶೂಲಿಕಾನ್ ದರದಾನ್ ಖಶಾನ್ ॥ ೮೩ ॥

ಲಂಪಾಕಾರಾನ್ ಸಕತಕಾನ್ ಕಿರಾತಾನಾಂ ಚ ಜಾತಯಃ ।
ಪ್ರವೃತ್ತಚಕ್ರಾಬಲವಾನ್ ಮ್ಲೇಚ್ಛಾನಾಮಂತಕೃದ್ವಿಭುಃ ॥ ೮೪ ॥

ಅದೃಷ್ಟಃ ಸರ್ವಭೂತಾನಾಂ ಚಚಾರಾಥ ವಸುಂಧರಾಮ್ ।
ಮಾಧವಸ್ಯ ತು ಸೋಽಂಶೇನ ದೇವಸ್ಯೇಹ ವಿಜಜ್ಞಿವಾನ್ ॥ ೮೫ ॥

ಪೂರ್ವಜನ್ಮನಿ ವಿಖ್ಯಾತಃ ಪ್ರಮತಿರ್ನಾಮ ವೀರ್ಯವಾನ್ ।
ಗೋತ್ರತೋ ವೈ ಚಂದ್ರಮಸಃ ಪೂರ್ವೇ ಕಲಿಯುಗೇ ಪ್ರಭುಃ ॥ ೮೬ ॥

---

೮೨. ಈ ವಿಧವಾದ ಧರ್ಮದ್ರೋಹಿಗಳು ಪೂರ್ವ, ಪಶ್ಚಿಮ ದೇಶಗಳಲ್ಲಿಯೂ ವಿಂಧ್ಯಪರ್ವತದ ಶಿಖರದಲ್ಲಿಯೂ ದಕ್ಷಿಣ ದೇಶದಲ್ಲಿಯೂ, ದ್ರವಿಡ ಸಿಹ್ಮಲ ಮುಂತಾದ ದೇಶಗಳಲ್ಲಿಯೂ ವಾಸಮಾಡಲು ಅವಕಾಶ ವಿಲ್ಲದಂತೆ ಎಲ್ಲರನ್ನೂ ವಧಿಸಿದನು.

೮೩. ಗಂಧಾರ, ಪಾರದ, ಪಹ್ಲವ, ಯವನ, ಶಕ, ತುಷಾರ, ಬರ್ಬರ, ಚೀನ, ಶೂಲಿಕ, ದರದ, ಮತ್ತು ಖಶ ಎಂಬ ಅಧಾರ್ಮಿಕ ಭೂಯಿಷ್ಠವಾದ ದೇಶಗಳಲ್ಲಿರುವ ಯವನರನ್ನು ನಿರ್ಮೂಲ ಮಾಡಿದನು.

೮೪. ಲಂಪಾಕಾರ, ಕತಕ, ಅಧರ್ಮಚಕ್ರಪ್ರವರ್ತಕ, ಬಲವ, ಮ್ಲೇಚ್ಛ ಮತ್ತು ಕಿರಾತ ಮುಂತಾದ ಅಧಾರ್ಮಿಕ ಜಾತಿಯನ್ನು ಪ್ರಭುವಾದ ರಾಜನು ಕೊನೆಗಾಣಿಸಿದನು.

೮೫. ವಿಷ್ಣುವಿನ ಅಂಶದಿಂದ ಹುಟ್ಟಿದ ಆ ಧೊರೆಯು ಸರ್ವಪ್ರಾಣಿಗಳಿಗೂ ತಾತ್ತ್ವಿಕ ರೂಪದಿಂದ ತಿಳಿಯದವನಾಗಿ ಭೂಮಿಯಲ್ಲಿ ಸಂಚಾರಮಾಡಿದನು. ಆದರೆ ರಾಜನು ಮಾತ್ರ ತನ್ನ ಮಹಿಮೆ ಸದುದ್ದೇಶಗಳಿಂದ ಕೂಡಿ ಜನಿಸಿದ್ದನು.

೮೬. ಕಲಿಯುಗದಲ್ಲಿ ಹಿಂದಿನ ಜನ್ಮದಲ್ಲಿ ಪ್ರಮತಿ ಎಂಬ ಹೆಸರಿನಿಂದ ಪ್ರಖ್ಯಾತನೂ ಶಕ್ತಿವಂತನಾದ ಪ್ರಭುವೂ ಆದ ರಾಜನು ಚಂದ್ರವಂಶದಲ್ಲಿ ಜನಿಸಿದ್ದನು.

ದ್ವಾತ್ರಿಂಶೇಽಭ್ಯುದಿತೇ ವರ್ಷೇ ಪ್ರಕ್ರಾಂತೋ ವಿಂಶತೀಃ ಸಮಾಃ ।
ವಿನಿಘ್ನನ್ ಸರ್ವಭೂತಾನಿ ಮಾನವಾನೇವ ಸರ್ವಶಃ ॥ ೮೭ ॥

ಕೃತ್ವಾ ಬೀಜಾವಶೇಷಂ ತು ಪೃಥ್ವ್ಯಾಂ ಕ್ರೂರೇಣ ಕರ್ಮಣಾ ।
ಪರಸ್ಪರನಿಮಿತ್ತೇನ ಕೋಪೇನಾಕಸ್ಮಿಕೇನ ತು ॥ ೮೮ ॥

ಸುಸಾಧಯಿತ್ವಾ ವೃಷಲಾನ್ ಪ್ರಾಯಶಸ್ತಾನಧಾರ್ಮಿಕಾನ್ ।
ಗಂಗಾಯಮುನಯೋರ್ಮಧ್ಯೇ ನಿಷ್ಠಾಂ ಪ್ರಾಪ್ತಃ ಸಹಾನುಗಃ॥ ೮೯ ॥

ತತೋ ವ್ಯತೀತೇ ಕಲ್ಪೇ ತು ಸಾಮಾನ್ಯೇ ಸಹಸೈನಿಕಃ ।
ಉತ್ಸಾದ್ಯ ಪಾರ್ಥಿವಾನ್ ಸರ್ವಾನ್ ಮ್ಲೇಚ್ಛಾಂಶ್ಚೈವ ಸಹಸ್ರಶಃ ॥ ೯೦ ॥

ತತ್ರ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತಕೇ ।
ಸ್ಥಿತಾಸ್ವಲ್ಪಾವಶಿಷ್ಟಾಸು ಪ್ರಜಾಸ್ವಿಹ ಕ್ವಚಿತ್ಕ್ವಚಿತ್ ॥ ೯೧ ॥

---

೮೭. ಅವನು ಮೂವತ್ತೆರಡನೆಯ ವರ್ಷವು ಉದಯಿಸಲಾಗಿ ಎಲ್ಲಾ ಬಗೆಗಳಿಂದಲೂ ಕ್ಷತ್ರಿಯೋಚಿತವಾದ ಮಾನದಿಂದ ಕೂಡಿ ಇಪ್ಪತ್ತು ವರ್ಷಗಳ ಕಾಲ ಸರ್ವ ದುಷ್ಟ ಪ್ರಾಣಿಗಳನ್ನೂ ದುಷ್ಟಮಾನವರನ್ನೂ ಸಂಹರಿಸಿದನು.

೮೮. ಹೀಗೆ ಪೃಥ್ವಿಯಲ್ಲಿ ಅನ್ಯೋನ್ಯ ಕಾರಣಗಳಿಂದ ಹುಟ್ಟುವ ಆಕಸ್ಮಿಕವಾದ ಕೋಪ, ಮತ್ತು ಕ್ರೂರಕರ್ಮಗಳಿಂದ ಎಲ್ಲವೂ ನಾಶಹೊಂದಿ ಬೀಜ ಮಾತ್ರ ಅವಶೇಷವಾಗಿದ್ದ ಸಮಯದಲ್ಲಿ ಈ ಧೊರೆಯು ಉದಯಿಸಿದನು.

೮೯. ತರುವಾಯ ಅವನು ಅಧಾರ್ಮಿಕರಾದ ಸಮಸ್ತ ವೃಷಲರನ್ನು ಕೊಂದು ತನ್ನ ಉದ್ದೇಶ್ಯವನ್ನು ಸಾಧಿಸಿ ಸೈನ್ಯ ಪರಿವಾರ ಸಹಿತನಾಗಿ ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ವಾಸವನ್ನು ಮಾಡಿದನು.

೯೦. ಹೀಗೆ ಸಾಮಾನ್ಯವಾಗಿ ಆ ಕಲ್ಪವು ಕಳೆಯಲಾಗಿ ಸೈನ್ಯ ಸಹಿತನಾಗಿ ಆ ರಾಜನು ಅನೇಕ ಮ್ಲೇಚ್ಛರನ್ನೂ, ಅವರನ್ನು ಅನುವರ್ತಿಸುವ ಅನೇಕ ರಾಜರನ್ನೂ ನಾಶಮಾಡಿದನು.

೯೧. ಹೀಗೆ ಯುಗಾವಸಾನವು ಬಂದು ಸಂಧ್ಯಾಂಶಕ ಕಾಲವು ಪ್ರಾಪ್ತವಾಗಲು ಲೋಕದಲ್ಲಿ ಪ್ರಜೆಗಳು ಅಲ್ಲಲ್ಲಿ ಸ್ವಲ್ಪ ಮಾತ್ರ ಅವಶಿಷ್ಟರಾದರು.

ಅಪಗ್ರಹಾಸ್ತತಸ್ತಾ ವೈ ಲೋಭಾವಿಷ್ಟಾಸ್ತು ವೃಂದಶಃ ।
ಉಪಹಿಂಸಂತಿ ಚಾನ್ಯೋನ್ಯಂ ಪ್ರೋಥಯಂತಃ ಪರಸ್ಪರಮ್ ॥ ೯೨ ॥

ಅರಾಜಕೇ ಯುಗವಶಾತ್ ಸಂಶಯೇ ಸಮುಪಸ್ಥಿತೇ ।
ಪ್ರಜಾಸ್ತಾ ವೈ ತತಃ ಸರ್ವಾಃ ಪರಸ್ಪರಭಯಾರ್ದಿತಾಃ ॥ ೯೩ ॥

ವ್ಯಾಕುಲಾಶ್ಚ ಪರಿಭ್ರಾಂತಾಸ್ತ್ಯಕ್ತ್ವಾ ದಾರಾನ್ ಗೃಹಾಣಿ ಚ ।
ಸ್ವಾನ್ ಪ್ರಾಣಾನನಪೇಕ್ಷಂತೋ ನಿಷ್ಕಾರಣಸುದುಃಖಿತಾಃ ॥ ೯೪ ॥

ನಷ್ಟೇ ಶ್ರೌತೇ ಸ್ಮೃತೌ ಧರ್ಮೇ ಪರಸ್ಪರಹತಾಸ್ತದಾ ।
ನಿರ್ಮಯಾದಾ ನಿರಾಕ್ರಂದಾ ನಿಸ್ನೇಹಾ ನಿರಪತ್ರಪಾಃ ॥ ೯೫ ॥

ನಷ್ಟೇ ಧರ್ಮೇ ಪ್ರತಿಹತಾ ಹ್ರಸ್ವಕಾಃ ಪಂಚವಿಂಶತಿಮ್ ।
ಹಿತ್ವಾ ಪುತ್ರಾಂಶ್ಚ ದಾರಾಂಶ್ಚ ವಿಷಾದವ್ಯಾಕುಲೇಂದ್ರಿಯಾಃ ॥ ೯೬ ॥

---

೯೨. ಆ ಪ್ರಜೆಗಳು ದುರಾಗ್ರಹಕ್ಕೆ ವಶರಾಗಿ ಅತಿಯಾದ ಲೋಭದಿಂದ ಕೂಡಿ ಗುಂಪು ಗುಂಪಾಗಿಒಬ್ಬರನ್ನೊಬ್ಬರು ಹಿಂಸಿಸುತ್ತಲೂ, ನಾಶಮಾಡುತ್ತಲೂ ಕಾಲವನ್ನು ಕಳೆದರು.

೯೩. ರಾಜ್ಯವೆಲ್ಲವೂ ಆಳುವ ರಾಜನಿಂದ ಶೂನ್ಯವಾಗಿ ದುಷ್ಟ ಯುಗ ಪ್ರಾಬಲ್ಯದಿಂದ ಪ್ರಜೆಗಳಿಗೆ ಪ್ರಾಣಸಂಶಯವು ಒದಗಲಾಗಿ ಸಮಸ್ತ ಪ್ರಜೆಗಳು ಅನ್ಯೋನ್ಯವಾದ ಭಯದಿಂದ ಪೀಡಿತರಾಗುವರು.

೯೪. ಮತ್ತು ಅಧಿಕವಾದ ಮನೋವ್ಯಾಕುಲತೆಯಿಂದ ಭ್ರಾಂತರಾಗಿ ಪತ್ನೀ-ಗೃಹ ಮುಂತಾದುವುಗಳನ್ನು ಬಿಟ್ಟು ತಮ್ಮ ಪ್ರಾಣಗಳಲ್ಲಿ ಕೂಡ ಆಶೆಯನ್ನು ಬಿಟ ವರೂ ನಿಷ್ಕಾರಣವಾಗಿ ದುಃಖಗೊಂಡವರೂ ಆಗುವರು.

೯೫. ಮತ್ತು ಆ ಕಲಿಯುಗದ ಪ್ರಜೆಗಳು ಶ್ರೌತ ಧರ್ಮವಾದ ಯಾಗಾದಿಗಳ ಸ್ಮಾರ್ತಧರ್ಮವಾದ ಪಂಚಮಹಾಯಜ್ಞ ಮುಂತಾದುವುಗಳ ನಾಶದಿಂದ ಅನ್ಯೋನ್ಯ ವಿರೋಧವುಳ್ಳವರೂ, ಶಾಶ್ವತವಾದ ಮರ್ಯಾದಾ ಶೂನ್ಯರೂ, ಶುಭ ವಚನಗಳ ಆಕ್ರಂದನರಹಿತರೂ, ಮತ್ತು ಸ್ನೇಹ-ಲಜ್ಜಾದಿಗುಣರಹಿತರೂ ಆಗಿರುವರು.

೯೬. ಧರ್ಮವೆಂಬ ಆಧಾರವು ನಷ್ಟವಾದುದರಿಂದ ಎಲ್ಲ ಉದಯಗಳಲ್ಲಿಯೂ

ಅನಾವೃಷ್ಟಿಹತಾಶ್ಚೈವ ವಾರ್ತಾಮುತ್ಸೃಜ್ಯ ದುಃಖಿತಾಃ ।
ಪ್ರತ್ಯಂತಾಂಸ್ತು ನಿಷೇವಂತೇ ಹಿತ್ವಾ ಜನಪದಾನ್ ಸ್ವಕಾನ್ ॥ ೯೭ ॥

ಸರಿತಃ ಸಾಗರಾನೂಪಾನ್ ಸೇವಂತೇ ಪರ್ವತಾಂಸ್ತಥಾ ।
ಮಾಂಸೈರ್ಮೂಲಫಲೈಶ್ಚೈವ ವರ್ತಯಂತಃ ಸುದುಃಖಿತಾಃ ॥ ೯೮ ॥

ಚೀರಪತ್ರಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ।
ವರ್ಣಾಶ್ರಮಪರಿಭ್ರಷ್ಟಾಃ ಸಂಕರಂ ಘೋರಮಾಸ್ಥಿತಾಃ ॥ ೯೯ ॥

ಏತಾಂ ಕಾಷ್ಠಾಮನುಪ್ರಾಪ್ತಾ ಅಲ್ಪಶೇಷಾಃ ಪ್ರಜಾಸ್ತತಃ ।
ಜರಾವ್ಯಾಧಿಕ್ಷುಧಾವಿಷ್ಟಾ ದುಃಖಾನ್ನಿರ್ವೇದಮಾಗಮನ್ ॥ ೧೦೦ ॥

---

ಪ್ರತಿಹತಿಯುಳ್ಳವರಾಗಿ ಹ್ರಸ್ವಪರಿಮಾಣ, ಇಪ್ಪತ್ತೈದಾ ವರ್ಷಗಳಷ್ಟು ಅಲ್ಪಾಯುಷ್ಯಗಳಿಂದ ಕೂಡಿದವರೂ, ಪುತ್ರಕಳತ್ರಗಳನ್ನು ತ್ಯಜಿಸಿದವರೂ ಮತ್ತು ವಿಷಾದದಿಂದ ವ್ಯಾಕುಲವಾದ ಇಂದ್ರಿಯಗಳುಳ್ಳವರೂ ಆಗುತ್ತಾರೆ.

೯೭. ಅನಾವೃಷ್ಟಿಯಿಂದ ಪೀಡಿತರಾಗಿ ತಮ್ಮ ಜೀವನೋಪಾಯವಾರ್ತೆಯನ್ನು ಕಳೆದುಕೊಂಡು ದುಃಖಿತರಾಗಿ ತಮ್ಮ ವಾಸ ಭೂಮಿಯನ್ನು ಬಿಟ್ಟು ಗುಡ್ಡ ಕಾಡುಗಳನ್ನು ಸೇವಿಸುವರು.

೯೮. ಆಗ ನದೀ-ಸಮುದ್ರ-ಜಲಾಶಯ ಮತ್ತು ಬೆಟ್ಟಗಳಲ್ಲಿ ಎಲ್ಲಿಯಾದರೂ ವಾಸಮಾಡಿಕೊಂಡು ತಮ್ಮ ಆಹಾರವು ದುರ್ಲಭವಾಗಿ ಹಸಿವಿನ ಬಾಧೆಗೆ ಒಳಪಟ್ಟು ಮಾಂಸ, ಫಲ ಮುಂತಾದ ಆಹಾರವನ್ನು ಸೇವಿಸಿ ದುಃಖದಿಂದ ಕಾಲವನ್ನು ಕಳೆಯುವರು.

೯೯. ನಾರು-ಎಲೆ-ಚರ್ಮಮಯವಾದ ವಸ್ತ್ರಾವರಣವನ್ನು ಧರಿಸಿ, ಕರ್ತವ್ಯ ಕ್ರಿಯೆ, ಸಾಧನ ಪರಿಗ್ರಹ ವರ್ಜಿತರಾಗಿ ವರ್ಣಾಶ್ರಮ ಧರ್ಮಚ್ಯುತಿಯಿಂದ ಘೋರ ವಾವ ಸಂಕರವನ್ನು ಹೊಂದಿರುವರು.

೧೦೦. ಯುಗಾವಸ್ಥೆಯ ಎಲ್ಲೆಯನ್ನು ಹೊಂದಿರುವ, ನಾಶವಾಗಿ ಮಿಕ್ಕಿರುವ ಅಲ್ಪ ಸಂಖ್ಯೆಯ ಪ್ರಜೆಗಳು ಮುಪ್ಪು, ರೋಗ, ಮತ್ತು ಹಸಿವಿನ ಬಾಧೆಗಳಿಂದ ದುಃಖವನ್ನು ಅನುಭವಿಸಿ ಮನಸ್ಸಿನಲ್ಲಿ ಅನಾಸಕ್ತಿಯನ್ನು ಹೊಂದಿದರು.

ವಿಚಾರಣಾ ತು ನಿರ್ವೇದಾತ್ ಸಾಮ್ಯಾವಸ್ಥಾ ವಿಚಾರಣಾತ್ ।
ಸಾಮ್ಯಾವಸ್ಥಾತ್ಮಕೋ ಬೋಧಃ ಸಂಬೋಧಾದ್ಧರ್ಮಶೀಲತಾ ॥೧೦೧॥

ತಾಸೂಪಶಮಯುಕ್ತಾಸು ಕಲಿಶಿಷ್ಟಾಸು ವೈ ಸ್ವಯಮ್ ।
ಅಹೋರಾತ್ರಂ ತದಾ ತಾಸಾಂ ಯುಗಾಂತೇ ಪರಿವರ್ತಿನಿ ॥
ಚಿತ್ತಸಮ್ಮೋಹನಂ ಕೃತ್ವಾ ತಾಸಾಂ ವೈ ಸುಪ್ತಮತ್ತವತ್ ॥ ೧೦೨ ॥

ಭಾವಿನೋಽರ್ಥಸ್ಯ ಚ ಬಲಾತ್ತತಃ ಕೃತಮವರ್ತತ ।
ಪ್ರವೃತ್ತೇ ತು ತತಸ್ತಸ್ಮಿನ್ ಪೂತೇ ಕೃತಯುಗೇ ತು ವೈ ॥ ೧೦೩ ॥

ಉತ್ಪನ್ನಾಃ ಕಲಿಶಿಷ್ಟಾಸು ಪ್ರಜಾಃ ಕಾರ್ತಯುಗಾಸ್ತದಾ ।
ತಿಷ್ಠಂತಿ ಚೇಹ ಯೇ ಸಿದ್ಧಾ ಅದೃಷ್ಟಾ ವಿಚರಂತಿ ಚ ॥ ೧೦೪ ॥

---

೧೦೧. ವೈರಾಗ್ಯವೆಂಬ ನಿರ್ವೇದದ ಉದಯದಿಂದ ತತ್ತ್ವವಿಚಾರಣೆಯೂ ವಿಚಾರ ಮಾರ್ಗದಿಂದ ಶೋಕಾದಿ ವಿಕಾರಗಳಿಲ್ಲದ ಸಾಮ್ಯಾವಸ್ಥೆಯೂ ಸಾಮ್ಯಾವಸ್ಥೆಯಿಂದ ಬೋಧವೂ, ಮತ್ತು ಬೋಧಪ್ರಾಪ್ತಿಯಿಂದ ಧರ್ಮಾಚರಣಶೀಲವೂ ಉಂಟಾಗುವುವು.

೧೦೨. ಕಲಿಯುಗದ ಅಂತವು ಕಳೆದು ಮಿಕ್ಕಿರುವ ಪ್ರಜೆಗಳು ತಾವು ಉಪಶಮದಿಂದ ಕೂಡಿರಲು ಯುಗ ಸಂಧಿಯಲ್ಲಿ ಆ ಪ್ರಜೆಗಳಿಗೆ ನಿದ್ದೆ ಹೋಗಿ ಎಚ್ಚೆತ್ತು ಕೊಳ್ಳುವಂತೆ ಮನಸ್ಸಿಗೆ ಒಂದೂ ತೋರದೆ ಮೋಹಗೊಂಡಂತೆ ಅಹೋ ರಾತ್ರವು ಕಳೆಯುವುದು.

೧೦೩. ವಿಧಿ ಬಲದಿಂದ ಅವಶ್ಯಭಾವಿಯಾದ ಅರ್ಥಸಿದ್ಧಿ ಬಲದಿಂದ ಅನಂತರದಲ್ಲಿ ಕೃತಯುಗವು ಪ್ರಾರಂಭವಾಗುವುದು. ಹಾಗೆ ಪವಿತ್ರವಾದ ಕೃತಯುಗವು ಪ್ರಾಪ್ತವಾಗಲು ಕಲಿಯುಗದ ಅಂತದಲ್ಲಿ ಮಿಕ್ಕಿರುವ ಪ್ರಜೆಗಳು ಕೃತಯುಗದ ಸುಕೃತ ಪ್ರಜೆಗಳಾಗಿ ಜನಿಸುವರು.

೧೦೪. ಯಾವ ಸಿದ್ಧಿ ವಿಶೇಷವುಳ್ಳ ಮಹಾತ್ಮರು ಜಗಚ್ಚಕ್ರದ ಸ್ಥಿತಿಗೋಸ್ಕರ ಅತೀಂದ್ರಿಯ ಗತಿಯಿಂದ ಕೂಡಿರುವರೋ, ಅವರು ಸಪ್ತರ್ಷಿಗಳಿಂದ ಸಹಿತರಾಗಿ ಯುಗಪರಿವರ್ತನೆಯಿಂದ ಪ್ರಾಪ್ತವಾಗುವ ಕೃತಯುಗಾದಿಯಲ್ಲಿ ಇರುವರು.

**ಸಹ ಸಪ್ತರ್ಷಿಭಿಶ್ಚೈವ ತತ್ರ ತೇ ಚ ವ್ಯವಸ್ಥಿತಾಃ ।**
**ಬ್ರಹ್ಮಕ್ಷತ್ರವಿಶಃ ಶೂದ್ರಾ ಬೀಜಾರ್ಥಂ ಯೇ ಸ್ಮೃತಾ ಇಹ ॥ ೧೦೫ ॥**

**ಕಲಿಜೈಃ ಸಹ ತೇ ಸಂತಿ ನಿರ್ವಿಶೇಷಾಸ್ತದಾಭವನ್ ।**
**ತೇಷಾಂ ಸಪ್ತರ್ಷಯೋ ಧರ್ಮಂ ಕಥಯಂತೀತರೇಷು ಚ ॥ ೧೦೬ ॥**

**ವರ್ಣಾಶ್ರಮಾಚಾರಯುಕ್ತಃ ಶ್ರೌತಃ ಸ್ಮಾರ್ತೋ ದ್ವಿಧಾ ತು ಸಃ ।**
**ತತಸ್ತೇಷು ಕ್ರಿಯಾವತ್ಸು ವರ್ತಂತೇ ವೈ ಪ್ರಜಾಃ ಕೃತೇ ॥ ೧೦೭ ॥**

**ಶ್ರೌತಸ್ಮಾರ್ತೇ ಕೃತಾನಾಂ ಚ ಧರ್ಮೇ ಸಪ್ತರ್ಷಿದರ್ಶಿತೇ ।**
**ಕೇಚಿದ್ಧರ್ಮವ್ಯವಸ್ಥಾರ್ಥಂ ತಿಷ್ಠಂತೀಹಾಯುಗಕ್ಷಯಾತ್ ॥ ೧೦೮ ॥**

**ಮನ್ವಂತರಾಧಿಕಾರೇಷು ತಿಷ್ಠಂತಿ ಮುನಯಸ್ತು ವೈ ।**
**ಯಥಾ ದಾವಪ್ರದಗ್ಧೇಷು ತೃಣೇಷ್ವಿಹ ತಪೇನ ತು ॥ ೧೦೯ ॥**

---

೧೦೫. ಯುಗಾರಂಭದಲ್ಲಿ ಬೀಜ ಭೂತರಾಗಿ ಯಾವ ಬ್ರಹ್ಮ-ಕ್ಷತ್ರಿಯ-ವೈಶ್ಯ ಮತ್ತು ಶೂದ್ರರು ಇರುವರೋ, ಅವರು ಅಜ್ಞಾನಾಂಶದಲ್ಲಿ ಕಲಿಯುಗದ ಪ್ರಜೆಗಳಿಗೆ ಸಮಾನರಾಗಿರುವರು.

೧೦೬. ಅವರಿಗೆ ಸಪ್ತರ್ಷಿಗಳು ಧರ್ಮವನ್ನು ಉಪದೇಶಿಸುವರು. ಸಪ್ತರ್ಷಿಗಳಿಂದ ಉಪದೇಶಿಸಲ್ಪಟ್ಟ ಆ ಧರ್ಮವು ಶ್ರೌತ ಮತ್ತು ಸ್ಮಾರ್ತವೆಂದು ಎರಡು ವಿಧವಾಗಿರುವುದು.

೧೦೭. ಅನಂತರದಲ್ಲಿ ಯುಗಾದಿಯಲ್ಲಿ ಬೀಜಭೂತರಾಗಿರುವ ವರ್ಣಗಳು ಸಪ್ತರ್ಷಿಗಳಿಂದ ಉಪದೇಶಿಸಲ್ಪಟ್ಟ ಧರ್ಮವನ್ನು ಆಚರಿಸಲಾಗಿ ಎಲ್ಲ ಪ್ರಜೆಗಳು ಅದನ್ನು ಅವಲಂಬಿಸಿ ಕೃತಯುಗದಲ್ಲಿ ವಾಸಮಾಡುವರು.

೧೦೮. ಕೃತಯುಗದಲ್ಲಿ ಸಪ್ತರ್ಷಿಗಳಿಂದ ನಿರ್ದೇಶಿಸಲ್ಪಟ್ಟ ಶ್ರೌತಸ್ಮಾರ್ತ ಧರ್ಮಗಳು ಪ್ರಚಾರದಲ್ಲಿರಲಾಗಿ ಅಂತಹ ಧರ್ಮವನ್ನು ವ್ಯವಸ್ಥೆ ಮಾಡಲು ಯುಗಾವಸಾನದ ವರೆಗೂ ಕೆಲವುರು ಸಿದ್ಧರು ವಾಸಮಾಡುವರು.

೧೦೯. ಹಾಗೆ ಮುನಿಗಳು ಧರ್ಮ ವ್ಯವಸ್ಥೆಗೋಸ್ಕರ ಮನ್ವಂತರಾಧಿಕಾರದಲ್ಲಿ ನಿರತರಾಗಿರುವರು. ಅವಿಚ್ಛಿನ್ನವಾಗಿ ಧರ್ಮವನ್ನು ಪ್ರಚಾರದಲ್ಲಿ ತರಲು ಮುನಿಗಳು ವ್ಯವಸ್ಥಾಪಕರಾಗಿರುವರು.

ವನಾನಾಂ ಪ್ರಥಮಂ ವೃಷ್ಟ್ಯಾ ತೇಷಾಂ ಮೂಲೇಷು ಸಂಭವಃ ।
ತಥಾ ಕಾರ್ತಯುಗಾನಾಂ ತು ಕಲಿಜೇಷ್ವಿಹ ಸಂಭವಃ ॥ ೧೧೦ ॥

ಏವಂ ಯುಗೋ ಯುಗಸ್ಯೇಹ ಸಂತಾನಸ್ತು ಪರಸ್ಪರಮ್ ।
ವರ್ತತೇ ಹ್ಯವ್ಯವಚ್ಛೇದಾದ್ಯಾವನ್ಮನ್ವಂತರಕ್ಷಯಃ ॥ ೧೧೧ ॥

ಸುಖಮಾಯುರ್ಬಲಂ ರೂಪಂ ಧರ್ಮೋಽರ್ಥಃ ಕಾಮ ಏವ ಚ ।
ಯುಗೇಷ್ವೇತಾನಿ ಹೀಯಂತೇ ತ್ರಿತ್ರಿಪಾದಾಃ ಕ್ರಮೇಣ ಚ ॥ ೧೧೨ ॥

ಸಸಂಧ್ಯಾಂಶೇಷು ಹೀಯಂತೇ ಯುಗಾನಾಂ ಧರ್ಮಸಿದ್ಧಯಃ ।
ಇತ್ಯೇಷ ಪ್ರತಿಸಂಧಿರ್ಯಃ ಕೀರ್ತಿತಸ್ತು ಮಯಾ ದ್ವಿಜಾಃ ॥ ೧೧೩ ॥

---

೧೧೦. ಅರಣ್ಯಗಳಲ್ಲಿ ಕಾಡುಕಿಚ್ಚಿನಿಂದಲೂ ಬಿಸಿಲಿನಿಂದಲೂ ಬೇಸಿಗೆಯಲ್ಲಿ ಹುಲ್ಲು ಸುಟ್ಟುಹೋಗಿ ಬೀಜಮಾತ್ರವೆ ಉಳಿದಿರುವಾಗ ಮುಂಗಾರು ಮಳೆ ಬಿದ ಕೂಡಲೆ ಬೀಜಗಳಿಂದ ಹಸುರು ಹುಲ್ಲು ಹೇಗೆ ಹುಟ್ಟುವುದೋ ಆ ರೀತಿಯಿಂದಲೇ ಕಲಿಯುಗಾಂತದಿಂದ ಅವಶಿಷ್ಟರಾದ ಜನರಲ್ಲಿ ಕೃತಯುಗದ ಪ್ರಜಾಸಂಭವವು ಆಗುವುದು.

೧೧೧. ಈ ರೀತಿಯಾಗಿ ಎಲ್ಲ ಯುಗಗಳು ಒಂದನ್ನೊಂದು ಸಂಧಿಸಿ ಶೃಂಖಲೆಯಂತೆ ಪರಸ್ಪರ ಸಂತಾನರೂಪದಿಂದ ಅವಿಚ್ಛಿನ್ನವಾಗಿ ಮನ್ವಂತರವು ಕಳೆಯುವವರೆಗೂ ನಡೆಯುತ್ತಿರುವುವು.

೧೧೨. ಹಿಂದಿನ ಯುಗಕ್ಕಿಂತ ಮುಂದಿನ ಯುಗದಲ್ಲಿ ಸುಖ, ಆಯುಷ್ಯ, ಬಲ, ರೂಪ ಮತ್ತು ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗ ಈ ಗುಣಗಳು ಒಂದೊಂದು ಪಾದಾಂಶಗಳಿಂದ ಕ್ರಮವಾಗಿ ನ್ಯೂನವಾಗುತ್ತವೆ.

೧೧೩. ಯುಗ ಮತ್ತು ಸಂಧ್ಯಾಂಶಗಳಲ್ಲಿ ಧರ್ಮದ ಸಿದ್ಧಿಗಳು ಉತ್ತರೋತ್ತರವಾಗಿ ನ್ಯೂನವಾಗುತ್ತಿರುತ್ತವೆ. ದ್ವಿಜರೆ, ಈ ರೀತಿಯಾಗಿ ನಿಮಗೆ ನನ್ನಿಂದ ಯುಗಗಳ ಪ್ರತಿಸಂಧಿಯು ವರ್ಣಿಸಲ್ಪಟ್ಟಿತು. ಕಲಿಯುಗದಿಂದ ಮತ್ತೆ ಕೃತಯುಗಾದಿ ಪ್ರವೃತ್ತಿಯು ಪ್ರತಿಸಂಧಿಯೆಂದು ಕರೆಯಲ್ಪಡುವುದು.

ಚತುರ್ಯುಗಾನಾಂ ಸರ್ವೇಷಾಮೇತೇನೈವ ಪ್ರಸಾಧನಮ್ ।
ಏಷಾ ಚತುರ್ಯುಗಾವೃತ್ತಿರಾಸಹಸ್ರಾದ್ಗುಣೀಕೃತಾ ॥ ೧೧೪ ॥

ಬ್ರಹ್ಮಣಸ್ತದಹಃ ಪ್ರೋಕ್ತಂ ರಾತ್ರಿಶ್ಚೈತಾವತೀ ಸ್ಮೃತಾ ।
ಅತ್ರಾಜವಂ ಜಡೀಭಾವೋ ಭೂತಾನಾಮಾಯುಗಕ್ಷಯಾತ್ ॥ ೧೧೫ ॥

ಏತದೇವ ತು ಸರ್ವೇಷಾಂ ಯುಗಾನಾಂ ಲಕ್ಷಣಂ ಸ್ಮೃತಮ್ ।
ಏಷಾ ಚತುರ್ಯುಗಾನಾಂ ಚ ಗುಣಿತಾ ಹ್ಯೇಕಸಪ್ತತಿಃ ॥ ೧೧೬ ॥

ಕ್ರಮೇಣ ಪರಿವೃತ್ತಾ ತು ಮನೋರಂತರಮುಚ್ಯತೇ ।
ಚತುರ್ಯುಗೇ ಯಥೈಕಸ್ಮಿನ್ ಭವತೀಹ ಯಥಾ ತು ಯತ್॥ ೧೧೭ ॥

ತಥಾ ಚಾನ್ಯೇಷು ಭವತಿ ಪುನಸ್ತದ್ವದ್ಯಥಾಕ್ರಮಮ್ ।
ಸರ್ಗೇ ಸರ್ಗೇ ತಥಾ ಭೇದಾ ಉತ್ಪದ್ಯಂತೇ ತಥೈವ ತು ॥ ೧೧೮ ॥

---

೧೧೪. ಈ ಕ್ರಮದಿಂದಲೇ ಚತುರ್ಯುಗಗಳ ಕ್ರಮಾವಸ್ಥೆಯನ್ನು ಅರಿಯಬೇಕು. ಬ್ರಹ್ಮನ ದಿನಪರಿಮಾಣವನ್ನು ಗಣಿಸಲು ಹಿಂದೆ ಹೇಳಿರುವ ಚತುರ್ಯುಗಗಳನ್ನು ಸಹಸ್ರ ಸಂಖ್ಯೆಯಿಂದ ಗುಣಿಸಬೇಕು.

೧೧೫. ಅಂತಹ ಚತುರ್ಯುಗ ಸಹಸ್ರ ಪರಿಮಿತವಾದ ಕಾಲವನ್ನು ಬ್ರಹ್ಮನ ಒಂದು ಹಗಲನ್ನಾಗಿಯೂ ಅಷ್ಟೇ ಪರಿಮಾಣವುಳ್ಳ ಕಾಲವನ್ನು ರಾತ್ರಿಯನ್ನಾಗಿಯೂ ಪ್ರಾಜ್ಞರು ಹೇಳಿರುತ್ತಾರೆ. ಪ್ರಾಣಿಗಳ ಪ್ರಲಯಕಾಲವು ಬರುವವರೆಗೂ ಈ ರೀತಿಯಾಗಿ ಯುಗಗಳ ಚಲನೆಯು ವೇಗವಾಗಿ ನಡೆಯುವುದು.

೧೧೬. ಇದು ಸರ್ವಯುಗಗಳಿಗೆ ಸಾಮಾನ್ಯವಾದ ಲಕ್ಷಣವು. ಇಂತಹ ಚತುರ್ಯುಗಗಳ ಆವೃತ್ತಿಯು ಕ್ರಮವಾಗಿ ಎಪ್ಪತ್ತೊಂದು ಸಂಖ್ಯೆಯಿಂದ ಕಳಿಯುವುದು.

೧೧೭. ಹಾಗೆ ಎಪ್ಪತ್ತೊಂದು ಸಂಖ್ಯೆಯ ಚತುರ್ಯುಗಾವೃತ್ತಿಯು ಒಂದು ಮನ್ವಂತರವೆಂದು ಗಣಿಸಲ್ಪಡುವುದು. ಈ ರೀತಿಯಾಗಿ ಒಂದು ಚತುರ್ಯುಗಗಳ ಆವೃತ್ತಿಯಲ್ಲಿ ನಡೆಯುವ ವಿಶೇಷವು ಪ್ರತಿಯೊಂದು ಯುಗಾವೃತ್ತಿಯಲ್ಲಿಯೂ ಸಂಭವಿಸುವುದು.

೧೧೮. ಹಿಂದಿನ ಕ್ರಮವನ್ನು ಅನುಸರಿಸಿ ಪ್ರತಿಯೊಂದು ಯುಗಗಳಲ್ಲಿಯೂ

**ಪ್ರಂಚತ್ರಿಂಶತ್ಪರಿಮಿತಾ ನ ನ್ಯೂನಾ ನಾಧಿಕಾಃ ಸ್ಮೃತಾಃ ।**
**ತಥಾ ಕಲ್ಪಾ ಯುಗೈಃ ಸಾರ್ಧಂ ಭವಂತಿ ಸಹ ಲಕ್ಷಣೈಃ ॥**
**ಮನ್ವಂತರಾಣಾಂ ಸರ್ವೇಷಾಮೇತದೇವ ತು ಲಕ್ಷಣಮ್ ॥ ೧೧೯ ॥**

**ಯಥಾ ಯುಗಾನಾಂ ಪರಿವರ್ತನಾನಿ**
**ಚಿರಪ್ರವೃತ್ತಾನಿ ಯುಗಸ್ವಭಾವಾತ್ ।**
**ತಥಾ ನ ಸಂತಿಷ್ಠತಿ ಜೀವಲೋಕಃ**
**ಕ್ಷಯೋದಯಾಭ್ಯಾಂ ಪರಿವರ್ತಮಾನಃ ॥ ೧೨೦ ॥**

**ಇತ್ಯೇತಲ್ಲಕ್ಷಣಂ ಪ್ರೋಕ್ತಂ ಯುಗಾನಾಂ ವೈ ಸಮಾಸತಃ ॥ ೧೨೧ ॥**

**ಅತೀತಾನಾಗತಾನಾಂ ಹಿ ಸರ್ವಮನ್ವಂತರೇಷ್ವಿಹ ।**
**ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ವೈ ॥ ೧೨೨ ॥**

---

ಆಯಾಯ ವಿಶೇಷಗಳು ಉದಯಿಸುತ್ತವೆ. ಪದಾರ್ಥಗಳ ಉದಯ ಲಯಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ.

೧೧೯. ಪ್ರತಿಯೊಂದು ಮನ್ವಂತರಗಳಲ್ಲಿಯೂ ಅಧಿಕ ಅಥವಾ ನ್ಯೂನ ಸಂಖ್ಯೆಗಳ ಸಂಶಯಕ್ಕೆ ಆಸ್ಪದವಿಲ್ಲದಹಾಗೆ ಮೂವತ್ತೈದು ಸಂಖ್ಯೆಯ ಕಲ್ಪಗಳು ಲಕ್ಷಣಗಳಿಂದ ಕೂಡಿದ ಯುಗಗಳ ಸಂಗಡ ಪರಿವರ್ತಿಸುವುವು. ಇದು ಸಕಲ ಮನ್ವಂತರಗಳಿಗೆ ಸಾಧಾರಣ ಲಕ್ಷಣವೆಂದು ಅರಿಯಬೇಕು.

೧೨೦. ಕೃತ ಮುಂತಾದ ಯುಗಗಳು ಕಾಲಸ್ವಭಾವವನ್ನು ಅನುಸರಿಸಿ ಬಹುಕಾಲದಿಂದ ಪರಿವರ್ತಿಸುತ್ತ ಇರುವಂತೆ ಜೀವವರ್ಗವು ಉದಯ ಮತ್ತು ಕ್ಷಯಾವಸ್ಥೆಗಳಿಂದ ಪರಿವರ್ತಿಸುತ್ತಿರುವುದರಿಂದ ಶಾಶ್ವತವಾದ ಕಾಲಗತಿಯನ್ನು ಅನುಭವಿಸುವಂತೆ ಶಾಶ್ವತ ಸ್ಥಿತಿಯನ್ನು ಹೊಂದಿಕೊಂಡಿಲ್ಲ:

೧೨೧. ದ್ವಿಜರೆ, ನಿಮ್ಮ ಜಿಜ್ಞಾಸೆಯಂತೆ ಯುಗಗಳ ಲಕ್ಷಣವನ್ನು ಸಂಗ್ರಹವಾಗಿ ನಿಮಗೆ ಉಪದೇಶ ಮಾಡಿರುತ್ತೇನೆ.

೧೨೨. ಸಮಸ್ತ ಮನ್ವಂತರಗಳಲ್ಲಿ ಹಿಂದೆ ಕಳೆದ ಅನೇಕ ಸಂಖ್ಯೆಯ ಮತ್ತು ಮುಂದೆ ಬರಲಿರುವ ಅನೇಕ ಸಂಖ್ಯೆಯ ಮನ್ವಂತರಗಳಲ್ಲಿ ಒಂದಕ್ಕೆ ಒಂದು ಸಾಮ್ಯವನ್ನು ಹೊಂದಿಕೊಂಡು ಎಲ್ಲವೂ ಕಳೆಯುತ್ತಿರುವುವು.

ಖ್ಯಾತಾನೀಹ ವಿಜಾನೀಧ್ವಂ ಕಲ್ಪಂ ಕಲ್ಪೇನ ಚೈವ ಹ ।
ಅನಾಗತೇಷು ತದ್ವಚ್ಚ ತರ್ಕಃ ಕಾರ್ಯೋ ವಿಜಾನತಾ ॥ ೧೨೩ ॥

ಮನ್ವಂತರೇಷು ಸರ್ವೇಷು ಅತೀತಾಗತೇಷ್ವಿಹ ।
ತುಲ್ಯಾಭಿಮಾನಿನಃ ಸರ್ವೇ ನಾಮರೂಪೈರ್ಭವಂತ್ಯುತ ॥ ೧೨೪ ॥

ದೇವಾ ಹ್ಯಷ್ಟವಿಧಾ ಯೇ ವಾ ಇಹ ಮನ್ವಂತರೇಶ್ವರಾಃ ।
ಋಷಯೋ ಮನವಶ್ಚೈವ ಸರ್ವೇ ತುಲ್ಯಾಃ ಪ್ರಯೋಜನೈಃ ॥ ೧೨೫ ॥

ಏವಂ ವರ್ಣಾಶ್ರಮಾಣಾಂ ತು ಪ್ರವಿಭಾಗಂ ಪುರಾ ಯುಗೇ ।
ಯುಗಸ್ವಭಾವಾಂಶ್ಚ ತಥಾ ವಿಧತ್ತೇ ವೈ ಸದಾ ಪ್ರಭುಃ ॥ ೧೨೬ ॥

---

೧೨೩. ಮನ್ವಂತರಗಳು ಒಂದಕ್ಕೊಂದು ಸಮಾನವಾಗಿರುವಂತೆ ಕಲ್ಪಗಳೂ ಕೂಡ ಒಂದರಂತೆ ಮತ್ತೊಂದು ನಡೆಯುವುದು. ಮುಂದೆ ಬರತಕ್ಕ ಕಲ್ಪ ಮನ್ವಂತರಗಳ ಸ್ಥಿತಿಯನ್ನು ಹಿಂದೆ ಕಳೆದುವುಗಳ ದೃಷ್ಟಾಂತದಿಂದ ಊಹಿಸಿ ತರ್ಕ ಪ್ರಮಾಣದಿಂದ ತಿಳಿಯಬೇಕು.

೧೨೪. ಭೂತ ಮತ್ತು ಭಾವಿ ಸಕಲ ಮನ್ವಂತರಗಳಲ್ಲಿಯೂ ಆಯಾಯ ಅಭಿಮಾನಿ ಪುರುಷರು ನಾಮ-ರೂಪಗಳಿಂದ ತುಲ್ಯರಾಗಿಯೇ ಇರುವರು.

೧೨೫. ವರ್ತಮಾನ ಮನ್ವಂತರದಲ್ಲಿ ಈಶ್ವರರಾಗಿರುವ ಎಂಟುವಿಧದ ದೇವತೆ, ಋಷಿ ಮತ್ತು ಮನು ಇವರು ಪ್ರತಿಯೊಂದು ಮನ್ವಂತರದಲ್ಲಿಯೂ ಒಂದೇವಿಧದ ಪ್ರಯೋಜನವನ್ನುಂಟುಮಾಡುವವರಾಗಿರುವರು.

೧೨೬. ಹೀಗೆ ಜಗನ್ನಿಯಾಮಕನಾದ ಪರಮೇಶ್ವರನು ಪೂರ್ವಕಾಲದಲ್ಲಿ ಒಂದು ಯುಗದಲ್ಲಿ ವರ್ಣ-ಆಶ್ರಮಗಳ ವಿಭಾಗವನ್ನೂ ಯುಗಸ್ವಭಾವಗಳನ್ನೂ ವ್ಯವಸ್ಥೆ ಮಾಡಿರುವನು.

ವರ್ಣಾಶ್ರಮವಿಭಾಗಾಶ್ಚ ಯುಗಾನಿ ಯುಗಸಿದ್ಧಯಃ ।
ಅನುಷಂಗಾತ್ ಸಮಾಖ್ಯಾತಾಃ ಸೃಷ್ಟಿಸರ್ಗಂ ನಿಬೋಧತ ।
ವಿಸ್ತರೇಣಾನುಪೂರ್ವ್ಯಾ ಚ ಸ್ಥಿತಿಂ ವಕ್ಷ್ಯೇ ಯುಗೇಷ್ವಿಹ ॥ ೧೨೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಏಕತ್ರಿಂಶತ್ತಮೋಽಧ್ಯಾಯಃ

---

೧೨೭. ವರ್ಣ-ಆಶ್ರಮಗಳ ವಿಭಾಗವನ್ನೂ, ಯುಗಪರಿವರ್ತನವನ್ನೂ ಮತ್ತು ಯುಗಗಳಲ್ಲಿರುವ ಸಿದ್ಧಿಗಳನ್ನೂ ಪ್ರಸಂಗದಿಂದ ಹೇಳಿರುತ್ತೇನೆ. ಮುಂದೆ ಸೃಷ್ಟಿ ಪ್ರಪಂಚವನ್ನು ಕೇಳಿರಿ. ಪ್ರತಿಯೊಂದು ಯುಗಗಳಲ್ಲಿರುವ ಸ್ಥಿತಿಯನ್ನು ಕ್ರಮಬದ್ಧವಾಗಿಯೂ ವಿಸ್ತಾರವಾಗಿಯೂ ಪ್ರತಿಪಾದಿಸುತ್ತೇನೆ.

ಬ್ರಹ್ಮಾಂಡಪುರಾಣದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

# ದ್ವಾತ್ರಿಂಶತ್ತಮೋಽಧ್ಯಾಯಃ

---

**ಸೂತ ಉವಾಚ :—**

**ಯುಗೇಷು ಯಾಸ್ತು ಜಾಯಂತೇ ಪ್ರಜಾಸ್ತಾ ಮೇ ನಿಬೋಧತ ।**
**ಆಸುರೀ ಸರ್ಪಗಾಂಧರ್ವಾ ಪೈಶಾಚೀ ಯಕ್ಷರಾಕ್ಷಸೀ ॥ ೧ ॥**

**ಯಸ್ಮಿನ್ ಯುಗೇ ಚ ಸಂಭೂತಿಸ್ತಾಸಾಂ ಯಾವಚ್ಚ ಜೀವಿತಮ್ ।**
**ಪಿಶಾಚಾಸುರಗಂಧರ್ವಾ ಯಕ್ಷರಾಕ್ಷಸಪನ್ನಗಾಃ ॥ ೨ ॥**

**ಪರಿಣಾಹೋಚ್ಛ್ರಯೈಸ್ತುಲ್ಯಾ ಜಾಯಂತೇ ಹ ಕೃತೇ ಯುಗೇ ।**
**ಷಣ್ಣವತ್ಯಂಗುಲೋತ್ಸೇಧೋ ಹ್ಯಷ್ಟಾನಾಂ ದೇವಜನ್ಮನಾಮ್ ॥ ೩ ॥**

**ಸ್ವೇನಾಂಗುಲಪ್ರಮಾಣೇನ ನಿಷ್ಪನ್ನೇನ ಚ ಪೌಷ್ಟಿಕಾತ್ ।**
**ಏತತ್ ಸ್ವಾಭಾವಿಕಂ ತೇಷಾಂ ಪ್ರಮಾಣಮಿತಿ ಕುರ್ವತೇ ॥ ೪ ॥**

---

ಸೂತಮುನಿಯು ಇಂತೆಂದನು :—

೧. ಆಯಾಯ ಯುಗಗಲ್ಲಿ ಹುಟ್ಟುವ ಪ್ರಜಾ ವಿಶೇಷಗಳನ್ನು ಬೋಧಿಸುವ ನನ್ನ ವಚನವನ್ನು ಕೇಳಿರಿ. ಅಸುರ, ಸರ್ಪ, ಗಂಧರ್ವ, ಪಿಶಾಚ, ಯಕ್ಷ ಮತ್ತು ರಾಕ್ಷಸ ಮುಂತಾದ ವಿವಿಧ ಪ್ರಜೆಗಳು ಆಯಾಯ ಯುಗಗಳಲ್ಲಿ ಜನ್ಮವನ್ನೆತ್ತುವರು.

೨. ಇವುಗಳಲ್ಲಿ ಯಾವ ಪ್ರಜೆಯು ವಿಶೇಷವಾಗಿ ಯಾವ ಯುಗದಲ್ಲಿ ಸಂಭವಿಸುವುದು, ಮತ್ತು ಅವುಗಳ ಜೀವಿತ ಕಾಲವೆಷ್ಟು ಮುಂತಾದುದನ್ನೆಲ್ಲ ತಿಳಿಸುತ್ತೇನೆ. ಪಿಶಾಚ, ಅಸುರ ಮತ್ತು ಗಂಧರ್ವರು ಕೃತಯುಗದಲ್ಲಿ ಜನ್ಮವನ್ನು ಹೊಂದುವರು.

೩. ಕೃತಯುಗದಲ್ಲಿ ಹುಟ್ಟುವ ಪಿಶಾಚ, ಅಸುರ-ಗಂಧರ್ವರ ಉನ್ನತಿ ಮತ್ತು ವಿಸ್ತಾರ ಪರಿಮಾಣಗಳು ತುಲ್ಯವಾಗಿರುವುವು. ಎಂಟುವಿಧ ದೇವಯೋನಿ ವಿಶೇಷರ ಉನ್ನತಿಯು ತೊಂಭತ್ತಾರು ಅಂಗುಲ ಪರಿಮಾಣವುಳ್ಳದ್ದಾಗಿದೆ.

೪. ಎಲ್ಲ ಪರಿಮಾಣವು ತಮ್ಮ ತಮ್ಮ ಅಂಗುಷ್ಠಾಂಗುಲಿಯ ವೃದ್ಧಿಯನ್ನನು

ಮನುಷ್ಯಾ ವರ್ತಮಾನಾಸ್ತು ಯುಗಸಂಧ್ಯಾಂಶಕೇಷ್ವಿಹ ।
ದೇವಾಸುರಪ್ರಮಾಣಂ ತು ಸಪ್ತಸಪ್ತಾಂಗುಲಾದಸತ್ ॥ ೫ ॥

ಅಂಗುಲಾನಾಂ ಶತಂ ಪೂರ್ಣಮಷ್ಟಪಂಚಾಶದುತ್ತರಮ್ ।
ದೇವಾಸುರಪ್ರಮಾಣಂ ತು ಉಚ್ಛ್ರಯಾತ್ಕಲಿಜೈಃ ಸ್ಮೃತಮ್ ॥ ೬ ॥

ಚತ್ವಾರಶ್ಚಾಪ್ಯಶೀತಿಶ್ಚ ಕಲಿಜೈರಂಗುಲೈಃ ಸ್ಮೃತಃ ।
ಸ್ವೇನಾಂಗುಲಿಪ್ರಮಾಣೇನ ಊರ್ಧ್ವಮಾಪಾದಮಸ್ತಕಾತ್ ॥ ೭ ॥

ಇತ್ಯೇಷ ಮಾನುಷೋತ್ಸೇಧೋ ಹ್ರಸತೀಹ ಯುಗಾಂಶಕೇ ।
ಸರ್ವೇಷು ಯುಗಕಾಲೇಷು ಅತೀತಾನಾಗತೇಷ್ವಿಹ ॥ ೮ ॥

ಸ್ವೇನಾಂಗುಲಿಪ್ರಮಾಣೇನ ಅಷ್ಟತಾಲಃ ಸ್ಮೃತೋ ನರಃ ।
ಆಪಾದತಲಮಸ್ತಿಷ್ಕೋ ನವತಾಲೋ ಭವೇತ್ತು ಯಃ ॥ ೯ ॥

---

ಸರಿಸಿ ಸುಂದರ ಪ್ರಮಾಣದಿಂದ ನಿಷ್ಪನ್ನವಾಗಿರುವುದು. ಸಕಲ ಪ್ರಜೆಗಳಿಗೂ ತಮ್ಮ ಅಂಗುಲಿ ಪರಿಮಿತ ಪ್ರಮಾಣವೆಂಬುದು ಸಾಧಾರಣವಾದುದು.

೫. ವರ್ತಮಾನಕಾಲದ ಯುಗ-ಯುಗಸಂಧ್ಯಾಂಶಗಳಲ್ಲಿರುವ ಮನುಜರು ದೇವ-ಅಸುರ ಪ್ರಮಾಣಗಳಲ್ಲಿ ಹದಿನಾಲ್ಕು ಅಂಗುಲ ಪ್ರಮಾಣ ನ್ಯೂನತೆಯನ್ನು ಹೊಂದುವರು.

೬. ಕಲಿಯುಗವ ಪ್ರಜಾದೃಷ್ಟಿಯಿಂದ ವರ್ತಮಾನ ಕಾಲದಲ್ಲಿರುವ ದೇವ-ಅಸುರರ ಉನ್ನತಿಯು ಒಂದುನೂರು ಐವತ್ತಾರು ಅಂಗುಲ ಪರಿಮಾಣದಿಂದ ಮಿತವಾಗಿರುವುದು.

೭. ಕಲಿಯುಗದಲ್ಲಿ ಮನುಜರ ದೇಹವು ಪಾದಾಗ್ರ ಮೊದಲುಗೊಂಡು ಶಿರಸ್ಸಿನ ವರೆಗೆ ತಮ್ಮ ಅಂಗುಲದ ಪ್ರಮಾಣದಿಂದ ಎಂಭತ್ತನಾಲ್ಕು ಸಂಖ್ಯೆಯ ಅಂಗುಲ ಪರಿಮಾಣವನ್ನು ಹೊಂದಿದೆ.

೮. ಅತೀತ ಅಥವಾ ಅನಾಗತ ಸಮಸ್ತ ಯುಗ ಪರಂಪರೆಯಲ್ಲಿ ಮಾನುಷ ದೇಹದ ಉನ್ನತಿಯು ಯುಗ ಮತ್ತು ಯುಗಾಂಶಗಳಲ್ಲಿಯೂ ವಿಶೇಷವಾಗಿ ಹ್ರಾಸವನ್ನು ಹೊಂದುವುದು.

೯. ಸಾಮಾನ್ಯವಾಗಿ ಮನುಷ್ಯನು ತನ್ನ ಅಂಗುಲದ ಪ್ರಮಾಣದಿಂದ ಗಣಿಸ

ಸಂಹತಾಜಾನುಬಾಹುಸ್ತು ಸ ಸುರೈರಪಿ ಪೂಜ್ಯತೇ ।
ಗವಾಶ್ವಹಸ್ತಿನಾಂ ಚೈವ ಮಹಿಷಸ್ಥಾವರಾತ್ಮನಾಮ್ ॥ ೧೦ ॥

ಕ್ರಮೇಣೈತೇನ ವಿಜ್ಞೇಯೋ ಹ್ರಾಸವೃದ್ಧೀ ಯುಗೇ ಯುಗೇ ।
ಷಟ್‌ಸಪ್ತತ್ಯಂಗುಲೋತ್ಸೇಧಃ ಪಶೂನಾಂ ಕಕುದಸ್ಯ ವೈ ॥ ೧೧ ॥

ಅಂಗುಲಾಷ್ಟಶತಂ ಪೂರ್ಣಮುತ್ಸೇಧಃ ಕರಿಣಾಂ ಸ್ಮೃತಃ ।
ಅಂಗುಲಾನಾಂ ಸಹಸ್ರಂ ತು ಚತ್ವಾರಿಂಶಾಂಗುಲೈರ್ವಿನಾ ॥ ೧೨ ॥

ಪಂಚಾಶತಾ ಯವಾನಾಂ ಚ ಉತ್ಸೇಧಃ ಶಾಖಿನಾಂ ಸ್ಮೃತಃ ।
ಮಾನುಷಸ್ಯ ಶರೀರಸ್ಯ ಸನ್ನಿವೇಶಸ್ತು ಯಾದೃಶಃ ॥ ೧೩ ॥

---

ಲಾಗಿ ಅಷ್ಟತಾಲ ಪ್ರಮಾಣ ಪರಿಮಿತನೆಂದು ಸ್ಮರಿಸಲ್ಪಟ್ಟಿರುವನು. ಆದರೆ ವಿಶೇಷ ಲಕ್ಷಣಗಳಿಂದ ಕೂಡಿದ ಮಹಾತ್ಮನಾದ ಮಾನವನು ಪಾದಾದಿಯಾಗಿ ಶಿರಃಪರ್ಯಂತ ನವತಾಳ ಪ್ರಮಾಣವುಳ್ಳವನೂ ಆಗಿರುತ್ತಾನೆ.

೧೦. ಆ ಶುಭ ಲಕ್ಷಣಗಳಿಂದ ಕೂಡಿದವನು ದೇವತೆಗಳಿಗೂ ಪೂಜ್ಯನಾಗುತ್ತಾನೆ. ಇದೇ ರೀತಿಯಾಗಿ ಗೋವು, ಅಶ್ವ, ಗಜ, ಕೋಣ ಮತ್ತು ಸ್ಥಾವರ ಜಂತುಗಳಿಗೆ ಪರಿಮಾಣವು ಮತ್ತು ಅದರ ಹ್ರಾಸವೃದ್ಧಿಗಳೂ ಇರುವುವು.

೧೧. ಕ್ರಮದಿಂದ ಗೋವು ಅಶ್ವಾದಿಗಳ ಪರಿಮಾಣಕ್ಕೆ ಆಯಾಯ ಯುಗ ಧರ್ಮವನ್ನು ಅನುಸರಿಸಿ ಹ್ರಾಸ ಮತ್ತು ವೃದ್ಧಿಗಳನ್ನು ತಿಳಿಯಬೇಕು. ಪಶು ಶ್ರೇಷ್ಠಕ್ಕೆ ಎಪ್ಪತ್ತಾರು ಅಂಗುಲಗಳಷ್ಟು ಉನ್ನತಿ ಪರಿಮಾಣವು ಇರುವುದು.

೧೨. ಆನೆಗಳ ಶರೀರದ ಉನ್ನತಿಯು ಪೂರ್ತಿಯಾಗಿ ಎಂಟುನೂರು ಅಂಗುಲದ ಪರಿಮಾಣವೆಂದು ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿದೆ. ವೃಕ್ಷಗಳ ಎತ್ತರ ಪರಿಮಾಣದಲ್ಲಿ ಒಂಭೈನೂರ ಅರವತ್ತು ಅಂಗುಲ ಮತ್ತು ಐವತ್ತು ಯವ ಪರಿಮಾಣವು ಇರುವುದೆಂದು ತಿಳಿಯಬೇಕು.

೧೩. ಮನುಷ್ಯರ ದೇಹಕ್ಕೆ ಪ್ರತ್ಯಕ್ಷವಾಗಿ ಕಾಣುವಂತೆ ಯಾವ ಹಸ್ತ-ಪಾದಾದಿ ಸನ್ನಿವೇಶವಿರುವುದೋ ದೇವತೆಗಳಿಗೂ ಅದೇ ಸನ್ನಿವೇಶವು ತತ್ತ್ವದೃಷ್ಟಿಯಲ್ಲಿ ವಿಷಯವಾಗಿ ಕಾಣುವುದು.

ತಲ್ಲಕ್ಷಣಸ್ತು ದೇವಾನಾಂ ದೃಶ್ಯತೇ ತತ್ತ್ವದರ್ಶನಾತ್ ।
ಬುದ್ಧ್ಯಾತಿಶಯಯುಕ್ತಶ್ಚ ದೇವಾನಾಂ ಕಾಯ ಉಚ್ಯತೇ ॥ ೧೪ ॥

ತಥಾ ಸಾತಿಶಯಶ್ಚೈವ ಮಾನುಷಃ ಕಾಯ ಉಚ್ಯತೇ ।
ಇತ್ಯೇತೇ ವೈ ಪರಿಕ್ರಾಂತಾ ಭಾವಾ ಯೇ ದಿವ್ಯಮಾನುಷಾಃ ॥ ೧೫ ॥

ಪಶೂನಾಂ ಪಕ್ಷಿಣಾಂ ಚೈವ ಸ್ಥಾವರಾಣಾಂ ಚ ಸರ್ವಶಃ ।
ಗಾವೋ ಹ್ಯಜಾವಯೋಽಶ್ವಾಶ್ಚ ಹಸ್ತಿನಃ ಪಕ್ಷಿಣೋ ನಗಾಃ ॥ ೧೬ ॥

ಉಪಯುಕ್ತಾಃ ಕ್ರಿಯಾಸ್ವೇತೇ ಯಜ್ಞಿಯಾಸ್ತ್ವಿಹ ಸರ್ವಶಃ ।
ದೇವಸ್ಥಾನೇಷು ಜಾಯಂತೇ ತದ್ರೂಪಾ ಏವ ತೇ ಪುನಃ ॥ ೧೭ ॥

ಯಥಾಶಯೋಪಭೋಗಾಸ್ತು ದೇವಾನಾಂ ಶುಭಮೂರ್ತಯಃ ।
ತೇಷಾಂ ರೂಪಾನುರೂಪೈಸ್ತು ಪ್ರಮಾಣೈಃ ಸ್ಥಾಣುಜಂಗಮೈಃ ॥ ೧೮ ॥

---

೧೪. ದೇವಶರೀರದ ಸಂಘಾತದಲ್ಲಿ ಬುದ್ಧಿಯ ಚೈತನ್ಯಾಂಶವು ಅತಿಶಯವಾಗಿ ಪೂರ್ಣವಾಗಿರುವುದು. ಮಾನವ ಶರೀರದಲ್ಲಿ ಮಾತ್ರ ದೇವತೆಗಳಿಗಿಂತ ನ್ಯೂನವಾಗಿಯೂ ಮತ್ತು ಮಾನವರಲ್ಲಿ ಒಬ್ಬರಿಗಿಂತೊಬ್ಬರಲ್ಲಿ ನ್ಯೂನಾಧಿಕ ಭಾವವೆಂಬ ಆಶಿಶಯದಿಂದ ಕೂಡಿದ್ದಾಗಿಯೂ ಇರುವುದು.

೧೫. ಈ ರೀತಿಯಾಗಿ ದಿವ್ಯ-ಮತ್ತು ಮಾನುಷ ಲೋಕಗಳ ಪಶು, ಪಕ್ಷಿ, ಸ್ಥಾವರ ಪ್ರಾಣಿಗಳ ಭಾವಗಳು ಸರ್ವಪ್ರಕಾರಗಳಿಂದ ಸಂಗ್ರಹವಾಗಿ ವಿವರಿಸಲ್ಪಟ್ಟಿವೆ.

೧೬. ಪಶುಗಳಲ್ಲಿ ಗೋವು, ಆಡು, ಕುರಿ, ಆನೆ, ಪಕ್ಷಿಗಳು ಮತ್ತು ಅನೇಕ ವೃಕ್ಷ ಲತೆಗಳು ಯಜ್ಞಾನುಷ್ಠಾನಗಳಲ್ಲಿ ಉಪಯೋಗವನ್ನು ಹೊಂದುವುದರಿಂದ ಯಜ್ಞಾರ್ಹವಾದ ಪವಿತ್ರಪ್ರಾಣಿಗಳೆಂದೆನಿಸುವುವು.

೧೭. ಯಜ್ಞಗಳಲ್ಲಿ ಉಪಯುಕ್ತಗಳಾದ ಆ ಪ್ರಾಣಿಗಳು ಯಜ್ಞದಲ್ಲಿ ಆತ್ಮಾರ್ಪಣ ಮಾಡಿದ ಸುಕೃತದಿಂದ ಮತ್ತೆ ದೇವಸ್ಥಾನಗಳಲ್ಲಿ ಆ ರೂಪದಿಂದ ಜನಿಸುವುವು.

೧೮. ದೇವಸನ್ನಿಧಿಯಲ್ಲಿ ಶುಭವಾದ ಮೂರ್ತಿಯನ್ನು ಧರಿಸಿದವುಗಳಾಗಿ ತೃಪ್ತಿಯಾಗುವಷ್ಟು ಯಥೇಚ್ಛವಾಗಿ ಸುಖವನ್ನು ಭುಂಜಿಸುತ್ತಲಿರುವುವು.

ಮನೋಜ್ಞೈಸ್ತತ್ರ ಭಾವೈಸ್ತೇ ಸುಖಿನೋ ಹ್ಯುಪಪೇದಿರೇ ।
ಅತಃ ಶಿಷ್ಟಾನ್ ಪ್ರವಕ್ಷ್ಯಾಮಿ ಸತಃ ಸಾಧೂಂಸ್ತಥೈವ ಚ ॥ ೧೯ ॥

ಸದಿತಿ ಬ್ರಹ್ಮಣಃ ಶಬ್ದಸ್ತದ್ವಂತೋ ಯೇ ಭವಂತ್ಯುತ ।
ಸಾಜಾತ್ಯಾದ್ಬ್ರಹ್ಮಣಸ್ತ್ವೇತೇ ತೇನ ಸಂತಃ ಪ್ರಚಕ್ಷತೇ ॥ ೨೦ ॥

ದಶಾತ್ಮಕೇ ಯೇ ವಿಷಯೇ ಕಾರಣೇ ಚಾಷ್ಟಲಕ್ಷಣೇ ।
ನ ಕ್ರುದ್ಧ್ಯಂತಿ ನ ಹೃಷ್ಯಂತಿ ಜಿತಾತ್ಮಾನಸ್ತು ತೇ ಸ್ಮೃತಾಃ ॥ ೨೧ ॥

ಸಾಮಾನ್ಯೇಷು ತು ಧರ್ಮೇಷು ತಥಾ ವೈಶೇಷಿಕೇಷು ಚ ।
ಬ್ರಹ್ಮಕ್ಷತ್ರವಿಶೋ ಯಸ್ಮಾದ್ಯುಕ್ತಾಸ್ತಸ್ಮಾದ್ದ್ವಿಜಾತಯಃ ॥ ೨೨ ॥

ವರ್ಣಾಶ್ರಮೇಷು ಯುಕ್ತಸ್ಯ ಸ್ವರ್ಗತೌ ಸುಖಚಾರಿಣಃ ।
ಶ್ರೌತಸ್ಮಾರ್ತಸ್ಯ ಧರ್ಮಸ್ಯ ಜ್ಞಾನಾದ್ಧರ್ಮಜ್ಞ ಉಚ್ಯತೇ ॥ ೨೩ ॥

---

೧೯. ಆ ಪ್ರಾಣಿಗಳು ತಮ್ಮ ರೂಪಕ್ಕೆ ತಕ್ಕಂತೆ ಸ್ಥಾವರ-ಜಂಗಮರೂಪವಾದ ಸುಂದರವಾದ ಆಕಾರಗಳಿಂದ ಕೂಡಿ ಸಮೃದ್ಧಿಯಿಂದ ಸುಖಭೋಗಿಗಳಾಗುವುವು- ಇನ್ನು ಮುಂದೆ ಸಾಧು-ಶಿಷ್ಟರ ಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ.

೨೦. ಸಾಧು ಜನರನ್ನು ಸತ್ ಎಂಬ ಶಬ್ದದಿಂದ ಕರೆಯುತ್ತಾರೆ. ಸತ್ ಎಂಬುದು ಪರಬ್ರಹ್ಮವಾಚಕವಾದ ನಾಮವು. ಸತ್ಪುರುಷರು ಬ್ರಹ್ಮ ವಸ್ತುವಿಗೆ ಸಮಾನರಾಗಿರುವುದರಿಂದ ಸತ್ ಎಂಬ ಸಂಕೇತವನ್ನು ತಾವು ಹೊಂದುವರು. ಆದ್ದ ರಿಂದ ಸಂತರೆಂದು ಕರೆಯಲ್ಪಡುವರು.

೨೧. ಅಂತಹ ಸಾಧುಗಳು ಹತ್ತು ಇಂದ್ರಿಯಗಳ ನಿಯಮಿತ ವಿಷಯುಗಳ ಲ್ಲಿಯೂ ಮೂಲಪ್ರಕೃತಿ ಮೊದಲಾಗಿ ಪಂಚತನ್ಮಾತ್ರಗಳ ವರೆಗಿನ ಎಂಟು ಪ್ರಕೃತಿ ವಸ್ತುಗಳಲ್ಲಿಯೂ ಕ್ರೋಧ ಹರ್ಷಗಳನ್ನು ಹೊಂದುವುದಿಲ್ಲವಾದ್ದರಿಂದ ಜಿತಾತ್ಮ – ಮನಸ್ಸನ್ನು ನಿಗ್ರಹಿಸಿದವರು ಎಂದು ಕರೆಯಲ್ಪಡುವರು.

೨೨. ಸಾಮಾನ್ಯ ಮತ್ತು ವಿಶೇಷ ಧರ್ಮಗಳಲ್ಲಿ ಮೊದಲಿನ ಕ್ರಮವಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ತ್ರೈವರ್ಣಿಕರು ಶಾಸ್ತ್ರಗಳಿಂದ ನಿಯಮಿತರಾಗಿರು ವುದರಿಂದ ಆ ತ್ರೈವರ್ಣಿಕರು ದ್ವಿಜರೆಂದು ಒಂದು ಶಬ್ದದಿಂದ ಗುಂಪಾಗಿ ಕರೆಯ ಲ್ಪಡುವರು.

೨೩. ವರ್ಣ-ಆಶ್ರಮ ಧರ್ಮಗಳಲ್ಲಿ ಸೇರಿರುವ ಸ್ವರ್ಗವೆಂಬ ಉತ್ತಮ ಲೋಕ

**ವಿದ್ಯಾಯಾಃ ಸಾಧನಾತ್ಸಾಧುರ್ಬ್ರಹ್ಮಚಾರೀ ಗುರೋರ್ಹಿತಃ ।**
**ಗೃಹಾಣಾಂ ಸಾಧನಾಚ್ಚೈವ ಗೃಹಸ್ಥಃ ಸಾಧುರುಚ್ಯತೇ ॥ ೨೪ ॥**

**ಸಾಧನಾತ್ತಪಸೋಽರಣ್ಯೇ ಸಾಧುರ್ವೈಖಾನಸಃ ಸ್ಮೃತಃ ।**
**ಯತಮಾನೋ ಯತಿಃ ಸಾಧುಃ ಸ್ಮೃತೋ ಯೋಗಸ್ಯ ಸಾಧನಾತ್ ॥ ೨೫ ॥**

**ಏವಮಾಶ್ರಮಧರ್ಮಾಣಾಂ ಸಾಧನಾತ್ ಸಾಧವಃ ಸ್ಮೃತಾಃ ।**
**ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋ ಯತಿಸ್ತಥಾ ॥ ೨೬ ॥**

**ಅಥ ದೇವಾ ನ ಪಿತರೋ ಮುನಯೋ ನ ಚ ಮಾನುಷಾಃ ।**
**ಅಯಂ ಧರ್ಮೋ ಹ್ಯಯಂ ನೇತಿ ವಿದಂತೇ ಭಿನ್ನದರ್ಶನಾಃ ॥ ೨೭ ॥**

---

ವನ್ನು ಅನಾಯಾಸವಾಗಿ ಗಳಿಸಿಕೊಡುವ ಶ್ರೌತ-ಸ್ಮಾರ್ತ ಧರ್ಮಗಳನ್ನು ತಿಳಿದ ಸಾಧುವನ್ನು ಧರ್ಮಜ್ಞನೆಂದು ಕರೆಯುವರು.

೨೪. ಇವರಲ್ಲಿ ಬ್ರಹ್ಮಚಾರಿಯು ಗುರುವಿನ ಹಿತದಲ್ಲಿ ಸಂತತವಾಗಿ ನಿರತನಾಗಿ ವೇದವಿದ್ಯೆಯನ್ನು ಸಾಧಿಸುವನಾದ್ದರಿಂದ ಅವನು ಸಾಧುವು. ಹಾಗೆಯೇ ಗೃಹಸ್ಥನು ತನ್ನ ಗಾರ್ಹಸ್ಥ್ಯ ಧರ್ಮವನ್ನು ಸಾಧಿಸುವುದರಿಂದ ಅವನೂ ಸಾಧುವು. ಸಾಧಿಸುವವನು ಎಂಬ ಅರ್ಥದೃಷ್ಟಿಯಿಂದ ಸಾಧು ಶಬ್ದವು ರೂಪಹೊಂದಿದೆ,

೨೫. ಹಾಗೆ ವಾನಪ್ರಸ್ಥಾಶ್ರಮಿಯು ಅರಣ್ಯದಲ್ಲಿ ವಾಸಮಾಡಿ ತಪಸ್ಸನ್ನು ಪ್ರಧಾನವಾಗಿ ಸಾಧಿಸುವುದರಿಂದಲೂ ಯತಿಯು ಯೋಗಾಭ್ಯಾಸದ ಸಾಧನದಲ್ಲಿ ಯತ್ನಿಸಿ ಅದನ್ನು ಸಾಧಿಸುವುದರಿಂದಲೂ ಸಾಧುಗಳೆಂದು ಕರೆಯಲ್ಪಡುವವರಾದರು.

೨೬. ಈ ರೀತಿಯಾಗಿ ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ ಮತ್ತು ಯತಿಗಳು ತಮ್ಮ ತಮ್ಮ ವಿಹಿತ ಆಶ್ರಮ ಧರ್ಮಗಳನ್ನು ವಿಧಿವತ್ತಾಗಿ ಸಾಧಿಸುವುದರಿಂದ ಎಲ್ಲರೂ ಸಾಧುಗಳಾದರು.

೨೭. ಇನ್ನು ಆಶ್ರಮ-ವರ್ಣಗಳ ಧರ್ಮಪಂಕ್ತಿಯ ವಿಷಯದಲ್ಲಿ "ಇದೇ ಧರ್ಮವು, ಇದು ಅಲ್ಲ" ಎಂಬುದನ್ನು ಭಿನ್ನದರ್ಶನದಿಂದ ಕೂಡಿದ ದೇವತೆಗಳು, ಪಿತೃಗಳು, ಮುನಿಗಳು ಮತ್ತು ಮಾನವರು ಯಾರೂ ತಿಳಿಯಲಾರರು.

14

ಧರ್ಮಾಧರ್ಮಾವಿಹ ಪ್ರೋಕ್ತೌ ಶಬ್ದಾವೇತೌ ಕ್ರಿಯಾತ್ಮಕೌ ।
ಕುಶಲಾಕುಶಲಂ ಕರ್ಮ ಧರ್ಮಾಧರ್ಮಾವಿಹ ಸ್ಮೃತಮ್ ॥ ೨೮ ॥

ಧಾರಣಾರ್ಥೋ ಧೃತಿರ್ಹ್ಯೇಷ ಧಾತುಃ ಶಬ್ದೇ ಪ್ರಕೀರ್ತಿತಃ ।
ಅಧಾರಣಾಮಹತ್ತ್ವೇ ಚ ಅಧರ್ಮ ಇತಿ ಚೋಚ್ಯತೇ ॥ ೨೯ ॥

ಅಥೇಷ್ಟಪ್ರಾಪಕೋ ಧರ್ಮ ಆಚಾರ್ಯೈರುಪದಿಶ್ಯತೇ ।
ಅಧರ್ಮಶ್ಚಾನಿಷ್ಟಫಲೋ ಹ್ಯಾಚಾರ್ಯೈರುಪದಿಶ್ಯತೇ ॥ ೩೦ ॥

ವೃದ್ಧಾಶ್ಚಾಲೋಲುಪಾಶ್ಚೈವ ತ್ವಾತ್ಮವಂತೋ ಹ್ಯದಾಂಭಿಕಾಃ ।
ಸಮ್ಯಗ್ವಿನೀತಾ ಋಜವಸ್ತಾನಾಚಾರ್ಯಾನ್ ಪ್ರಚಕ್ಷತೇ ॥ ೩೧ ॥

ಸ್ವಯಮಾಚರತೇ ಯಸ್ಮಾದಾಚಾರಂ ಸ್ಥಾಪಯತ್ಯಪಿ ।
ಆಚಿನೋತಿ ಚ ಶಾಸ್ತ್ರಾಣಿ ಆಚಾರ್ಯಸ್ತೇನ ಚೋಚ್ಯತೇ ॥ ೩೨ ॥

---

೨೮. ಧರ್ಮ-ಅಧರ್ಮ ಎಂಬೀ ಎರಡು ಶಬ್ದಗಳು ಈ ಸಂದರ್ಭದಲ್ಲಿ ಪ್ರಾಣಿಗಳಿಂದ ಕರ್ತವ್ಯವಾದ ಕ್ರಿಯೆಯ ಸ್ವರೂಪವನ್ನು ಹೇಳತಕ್ಕವುಗಳಾಗಿವೆ. ಸಾರವಾಗಿ ಹೇಳುವುದಾದರೆ ಕುಶಲಾತ್ಮಕವಾದ ಕರ್ಮವು ಧರ್ಮವೆಂದೂ ಅಕುಶಲರೂಪವಾದ ಕರ್ಮವು ಅಧರ್ಮವೆಂದೂ ಸ್ಮರಿಸಲ್ಪಟ್ಟಿದೆ.

೨೯. ಶಬ್ದಶಾಸ್ತ್ರದಲ್ಲಿ ಧಾರಣವೆಂಬ ಅರ್ಥದಲ್ಲಿ ಧೃತಿ ಧಾತುವು ಪಠಿಸಲ್ಪಟ್ಟಿರುವುದು. ಜಗತ್ತಿನ ಧಾರಣೆಗೆ ಸಾಧನವು ಧರ್ಮವು. ಅಧಾರಣವನ್ನುಂಟುಮಾಡುವ ಸಂಕುಚಿತ ಸ್ವಭಾವದ ಕರ್ಮವು ಅಧರ್ಮವು.

೩೦. ಆಚಾರ್ಯರು ಧರ್ಮ-ಅಧರ್ಮಗಳ ಲಕ್ಷಣದ ಉಪದೇಶದಲ್ಲಿ ಈ ರೀತಿಯಾಗಿ ಹೇಳುವರು, ಇಷ್ಟಫಲದ ಪ್ರಾಪ್ತಿಯನ್ನು ಉಂಟುಮಾಡುವ ಸಾಧನವು ಧರ್ಮವು. ಹಾಗೆ ಅನಿಷ್ಟಫಲವನ್ನುಂಟುಮಾಡುವ ಸಾಧನವು ಅಧರ್ಮವು.

೩೧. ವೃದ್ಧರೂ, ಲೋಭವರ್ಜಿತರೂ, ಜಿತೇಂದ್ರಿಯರೂ, ದಂಭಶೂನ್ಯರೂ, ನಿಯಮಪೂರ್ವಕವಾದ ವಿದ್ಯಾಧ್ಯಯನವುಳ್ಳವರೂ, ಮತ್ತು ಋಜುವಾದ ಶೀಲವುಳ್ಳವರೂ ಆದ ಜ್ಞಾನಿಗಳು ಆಚಾರ್ಯರೆಂದು ಪೂಜ್ಯಸಂಕೇತದಿಂದ ಸತ್ಕರಿಸಲ್ಪಡುವರು.

೩೨. ಆಚಾರ್ಯ ಶಬ್ದದ ಅರ್ಥದಲ್ಲಿ ತಾನು ಆಚರಿಸುವನು, ಪ್ರಚಾರಮಾಡಿ

ಧರ್ಮಜ್ಞೈರ್ವಿಹಿತೋ ಧರ್ಮಃ ಶ್ರೌತಃ ಸ್ಮಾರ್ತೋ ದ್ವಿಧಾ ದ್ವಿಜೈಃ ।
ದಾರಾಗ್ನಿಹೋತ್ರಸಂಬಂಧಾದ್ದ್ವಿಧಾ ಶ್ರೌತಸ್ಯ ಲಕ್ಷಣಮ್ ॥ ೩೩ ॥

ಸ್ಮಾರ್ತೋ ವರ್ಣಾಶ್ರಮಾಚಾರ್ಯೈರ್ಯಮ್ಯೈಃ ಸನಿಯಮ್ಯೈಃ ಸ್ಮೃತಃ ।
ಪೂರ್ವೇಭ್ಯೋ ವೇಪಯಿತ್ವೇಹ ಶ್ರೌತಂ ಸಪ್ತರ್ಷಯೋಽಬ್ರುವನ್
॥ ೩೪ ॥

ಋಚೋ ಯಜೂಂಷಿ ಸಾಮಾನಿ ಬ್ರಹ್ಮಣೋಽಂಗಾನಿ ಚ ಶ್ರುತಿಃ ।
ಮನ್ವಂತರಸ್ಯಾತೀತಸ್ಯ ಸ್ಮೃತ್ವಾಚಾರಾನ್ಮನುರ್ಜಗೌ ॥ ೩೫ ॥

ತಸ್ಮಾತ್ ಸ್ಮಾರ್ತಃ ಸ್ಮೃತೋ ಧರ್ಮೋ ವರ್ಣಾಶ್ರಮವಿಭಾಜಕಃ ।
ಸ ಏಷ ವಿವಿಧೋ ಧರ್ಮಃ ಶಿಷ್ಟಾಚಾರ ಇಹೋಚ್ಯತೇ ॥ ೩೬ ॥

---

ಮತ್ತೊಬ್ಬರನ್ನು ಆಚಾರವಂತರನ್ನಾಗಿ ಮಾಡುವನು. ಹಾಗು ಅನೇಕ ಶಾಸ್ತ್ರಗಳನ್ನು ಹುಡುಕಿ ಆಚಾರವನ್ನು ಕೂಡಿಹಾಕುವನು-ಎಂಬ ಅಂಶಗಳು ಅಂತರ್ಗತವಾಗಿವೆ. ಇಷ್ಟು ಅರ್ಥಗಳ ಸಮಷ್ಟಿಯುಳ್ಳವನು ಆಚಾರ್ಯನೆಂದು ಕರೆಯಲ್ಪಡುವನು.

೩೩. ಧರ್ಮವನ್ನು ಬಲ್ಲ ದ್ವಿಜರು ಧರ್ಮವನ್ನು ಶ್ರೌತ ಮತ್ತು ಸ್ಮಾರ್ತವೆಂದು ಎರಡು ವಿಧವಾಗಿ ವಿಂಗಡಿಸಿರುತ್ತಾರೆ. ಇವುಗಳಲ್ಲಿ ಆಹಿತಾಗ್ನಿಯೂ ಗೃಹಸ್ಥನೂ ಆಗಿ ಪತ್ನಿಯ ಜೊತೆಯಲ್ಲೇ ಆಚರಿಸಬೇಕಾದ ಧರ್ಮವು ಶ್ರೌತಧರ್ಮಜಾಲಕ್ಕೆ ಸೇರಿದುದು.

೩೪. ವರ್ಣ-ಆಶ್ರಮಗಳ ನಿಮಿತ್ತದಿಂದ ಆಚರಿಸುವ ಯಮ ನಿಯಮಗಳಿಂದ ಕೂಡಿರುವ ಕರ್ಮಗ್ರಂಥಿಗಳು ಸ್ಮಾರ್ತಧರ್ಮವು ಎಂದು ಸ್ಮರಿಸಲ್ಪಟ್ಟಿದೆ. ಇವುಗಳಲ್ಲಿ ಶ್ರೌತಧರ್ಮವನ್ನು ಪ್ರಾಚೀನ ಪರಂಪರೆಯಿಂದ ತಿಳಿದು ಸಪ್ತರ್ಷಿಗಳು ಉಪದೇಶ ಮಾಡಿರುವರು.

೩೫. ಶ್ರೌತವೆಂದರೆ ಶ್ರುತಿಪ್ರಮಾಣದಿಂದ ಸಿದ್ಧವಾದುದು. ಋಗ್ವೇದ, ಯಜುರ್ವೇದ, ಸಾಮವೇದ, ಬ್ರಾಹ್ಮಣ ಮತ್ತು ವೇದಾಂಗಗಳು ಶ್ರುತಿಯೆಂದು ಕರೆಯಬಹುದಾದ ಪ್ರಮಾಣಭೂತವಾದ ವಾಙ್ಮಯವು. ಸ್ಮಾರ್ತಧರ್ಮವನ್ನು ಮನುವು ಹಿಂದಿನ ಮನ್ವಂತರದ ಆಚಾರಗಳನ್ನು ಸ್ಮರಿಸಿ ಅದರಂತೆ ಉಪದೇಶಿಸಿದನು.

೩೬. ಸ್ಮರಿಸಿ ಉಪದೇಶಿಸಿರುವುದರಿಂದ ಸ್ಮಾರ್ತವೆಂದು ಅನ್ವರ್ಥಸಂಜ್ಞೆಯಿಂದ

ಶೇಷಶಬ್ದಃ ಶಿಷ್ಟ ಇತಿ ಶೇಷಂ ಶಿಷ್ಟಂ ಪ್ರಚಕ್ಷತೇ ।
ಮನ್ವಂತರೇಷು ಯೇ ಶಿಷ್ಟಾ ಇಹ ತಿಷ್ಠಂತಿ ಧಾರ್ಮಿಕಾಃ ॥ ೩೭ ॥

ಮನುಃ ಸಪ್ತರ್ಷಯಶ್ಚೈವ ಲೋಕಸಂತಾನಕಾರಣಾತ್ ।
ಧರ್ಮಾರ್ಥಂ ಯೇ ಚ ತಿಷ್ಠಂತಿ ತಾನ್ ಶಿಷ್ಟಾನ್ ವೈ ಪ್ರಚಕ್ಷತೇ ॥ ೩೮ ॥

ಮನ್ವಾದಯಶ್ಚ ಯೇ ಶಿಷ್ಟಾ ಯೇ ಮಯಾ ಪ್ರಾಗುದೀರಿತಾಃ ।
ತೈಃ ಶಿಷ್ಟೈಶ್ಚರಿತೋ ಧರ್ಮಃ ಸಮ್ಯಗೇವ ಯುಗೇ ಯುಗೇ ॥ ೩೯ ॥

ತ್ರಯೀ ವಾರ್ತಾ ದಂಡನೀತಿರಿಜ್ಯಾ ವರ್ಣಾಶ್ರಮಾಸ್ತಥಾ ।
ಶಿಷ್ಟೈರಾಚರ್ಯತೇ ಯಸ್ಮಾನ್ಮನುನಾ ಚ ಪುನಃ ಪುನಃ ॥ ೪೦ ॥

ಪೂರ್ವೈಃ ಪೂರ್ವಗತತ್ವಾಚ್ಚ ಶಿಷ್ಟಾಚಾರಃ ಸ ಸಾತ್ವತಃ ।
ದಾನಂ ಸತ್ಯಂ ತಪೋ ಜ್ಞಾನಂ ವಿದ್ಯೇಜ್ಯಾ ಪ್ರಜನಂ ದಯಾ ॥ ೪೧ ॥

---

ಕರೆಯಲ್ಪಡುವುದು. ಇದು ವರ್ಣಾಶ್ರಮ ವಿಭಾಗವನ್ನು ಒಳಗೊಂಡಿರುವುದು. ವಿವಿಧವಾದ ಈ ಸ್ಮಾರ್ತಧರ್ಮಗಳನ್ನು ಶಿಷ್ಟಾಚಾರವೆಂದು ಹೇಳುವರು.

೩೭. ಶೇಷವೆಂದರೆ-ಮಿಕ್ಕಿರುವುದು ಎಂದು ಅರ್ಥ. ಅಂತಹ ಶೇಷಶಬ್ದದ ರೂಪಾಂತರವು "ಶಿಷ್ಟ" ಎಂದಾಗಿರುವುದು. ಮನ್ವಂತರಗಳಿಂದ ಉಳಿದವರಾಗಿ ಈ ಮನ್ವಂತರದಲ್ಲಿ ಯಾವ ಧಾರ್ಮಿಕರು ಇರುವರೋ ಅವರು ಶಿಷ್ಟರೆಂದೆನಿಸುವರು.

೩೮. ಮನು, ಸಪ್ತರ್ಷಿಗಳು ಮುಂತಾದವರು ಲೋಕದ ಶಾಶ್ವತವಾದ ಪ್ರತಿಷ್ಠೆಗೋಸ್ಕರ ಧರ್ಮವನ್ನು ಉಪದೇಶಿಸಲು ಮನ್ವಂತರಗಳಲ್ಲಿ ಶಾಶ್ವತವಾಗಿ ನೆಲೆಸಿರುವುದರಿಂದ ಅವರನ್ನು ಶಿಷ್ಟರೆಂದು ಕರೆಯುತ್ತಾರೆ.

೩೯. ಮನು ಮುಂತಾದವರು ಯಾರಾರು ನನ್ನಿಂದ ಪೂರ್ವದಲ್ಲಿ ಶಿಷ್ಟರೆಂದು ಪರಿಗಣಿತರಾಗಿರುವರೋ ಅವರಿಂದ ಆಚರಿಸಲ್ಪಟ್ಟ ಧರ್ಮವನ್ನು ಶಿಷ್ಟಾಚಾರವೆಂದು ಹೇಳಲ್ಪಟ್ಟಿದೆ. ಇದು ಪ್ರತಿಯೊಂದು ಯುಗದಲ್ಲಿಯೂ ಸಂತತವಾಗಿರುವುದು.

೪೦. ವೇದತ್ರಯಾಧ್ಯಯನ, ಕೃಷಿವಾಣಿಜ್ಯಾದಿಗಳು, ದಂಡನೀತಿ, ಯಾಗಾದ್ಯನುಷ್ಠಾನ ವರ್ಣಾಶ್ರಮಗಳು-ಇವುಗಳನ್ನು ಹಿಂದೆ ಹೇಳಿರುವ ಶಿಷ್ಟರೂ ಮನುವೂ ಮತ್ತೆ ಮತ್ತೆ ಆದರದಿಂದ ಆಚರಿಸುವರು.

೪೧. ಈ ಶಿಷ್ಟಾಚಾರವೆಂಬುದು ಪೂರ್ವಿಕರಿಗಿಂತಲೂ ಪೂರ್ವಿಕರಿಂದ ಆಚರಿ

ಅಷ್ಟೌ ತಾನಿ ಚರಿತ್ರಾಣಿ ಶಿಷ್ಟಾಚಾರಸ್ಯ ಲಕ್ಷಣಮ್ ।
ಶಿಷ್ಟಾ ಯಸ್ಮಾಚ್ಚರಂತ್ಯೇನಂ ಮನುಃ ಸಪ್ತರ್ಷಯಸ್ತು ವೈ ॥ ೪೨ ॥

ಮನ್ವಂತರೇಷು ಸರ್ವೇಷು ಶಿಷ್ಟಾಚಾರಸ್ತತಃ ಸ್ಮೃತಃ ।
ವಿಜ್ಞೇಯಃ ಶ್ರವಣಾಚ್ಛ್ರೌತಃ ಸ್ಮರಣಾತ್ ಸ್ಮಾರ್ತ ಉಚ್ಯತೇ ॥ ೪೩ ॥

ಇಜ್ಯಾವೇದಾತ್ಮಕಃ ಶ್ರೌತಃ ಸ್ಮಾರ್ತೋ ವರ್ಣಾಶ್ರಮಾತ್ಮಕಃ ।
ಪ್ರತ್ಯಂಗಾನಿ ಚ ವಕ್ಷ್ಯಾಮಿ ಧರ್ಮಸ್ಯೇಹ ತು ಲಕ್ಷಣಮ್ ॥ ೪೪ ॥

ದೃಷ್ಟ್ವಾ ತು ಭೂತಮರ್ಥಂ ಯಃ ಪೃಷ್ಟೋ ವೈ ನ ನಿಗೂಹತಿ ।
ಯಥಾಭೂತಪ್ರವಾದಸ್ತು ಇತ್ಯೇತತ್ ಸತ್ಯಲಕ್ಷಣಮ್ ॥ ೪೫ ॥

---

ಸಲ್ಪಡುತ್ತಲಿದ್ದುದರಿಂದ ಅದು ಅನಾದಿಸಿದ್ಧವಾದ ಸಾತ್ತ್ವತ ಧರ್ಮವೆಂದು ಪ್ರಸಿದ್ಧವಾಗಿರುವುದು.

೪೨. ದಾನ, ಸತ್ಯ, ತಪಸ್ಸು, ಜ್ಞಾನ, ವಿದ್ಯಾ, ಯಜ್ಞ, ಪ್ರಜನ ಮತ್ತು ದಯಾ ಎಂಬುವು ಶಿಷ್ಟಾಚಾರದಲ್ಲಿ ಒಳಗೊಂಡಿರುವ ಮುಖ್ಯ ಚಿಹ್ನೆಗಳಂತಿರುವ ಧರ್ಮಗಳು. ಮನು ಸಪ್ತರ್ಷಿ ಮುಂತಾದ ಶಿಷ್ಟರು ಇವುಗಳನ್ನು ಆಚರಿಸುತ್ತಿರುವರು.

೪೩. ಆದುದರಿಂದ ಈ ಧರ್ಮಸಮೂಹವನ್ನು ಸಕಲ ಮನ್ವಂತರಗಳಲ್ಲಿಯೂ ಶಿಷ್ಟಾಚಾರವೆಂದು ಕರೆಯುವರು. ಈ ಶಿಷ್ಟಾಚಾರದಲ್ಲಿ ಶ್ರೌತ-ಸ್ಮಾರ್ತ ಧರ್ಮಗಳು ಅಂತರ್ಗತವಾಗಿವೆ. ಶ್ರುತಿ ಪ್ರಮಾಣದಿಂದ ಬಂದಿರುವುದನ್ನು ಶ್ರೌತವೆಂದೂ ಸ್ಮೃತಿ ಪ್ರಮಾಣದಿಂದ ಬಂದಿರುವುದನ್ನು ಸ್ಮಾರ್ತವೆಂದೂ ಕರೆಯುತ್ತಾರೆ.

೪೪. ಯಜ್ಞ-ವೇದಾಧ್ಯಯನ ಮುಂತಾದುವುಗಳನ್ನು ಶ್ರೌತಧರ್ಮವೆಂದೂ ವರ್ಣ-ಆಶ್ರಮ ಧರ್ಮಗಳನ್ನು ಸ್ಮಾರ್ತ ಧರ್ಮವೆಂದೂ ತಿಳಿಯಬೇಕು. ಇನ್ನು ಮುಂದೆ ಧರ್ಮಕ್ಕೆ ಲಕ್ಷಣಪ್ರಾಯವಾದ ಪ್ರತ್ಯಂಗಗಳನ್ನು ಹೇಳುತ್ತೇನೆ, ಕೇಳಿರಿ.

೪೫. ಯಾವನು ನಡೆದ ಒಂದು ಸಮಾಚಾರವನ್ನು ನೋಡಿ ಇತರನು ಪ್ರಶ್ನೆಮಾಡಿದ ಸಮಯದಲ್ಲಿ ಮರೆಮಾಚದೆ ಪರಮಾರ್ಥವನ್ನು ತಿಳಿಸುವನೋ ಅವನ ಆ ಪರಮಾರ್ಥದ ನುಡಿಯನ್ನು ಸತ್ಯವಚನವೆಂದು ಅರಿಯಬೇಕು.

ಬ್ರಹ್ಮಚರ್ಯಂ ಜಪೋ ಮೌನಂ ನಿರಾಹಾರತ್ವಮೇವ ಚ ।
ಇತ್ಯೇತತ್ತಪಸೋ ರೂಪಂ ಸುಘೋರಂ ಸುದುರಾಸದಮ್ ॥ ೪೬ ॥

ಪಶೂನಾಂ ದ್ರವ್ಯಹವಿಷಾಮೃಕ್ಸಾಮಯಜುಷಾಂ ತಥಾ ।
ಋತ್ವಿಜಾಂ ದಕ್ಷಿಣಾನಾಂ ಚ ಸಂಯೋಗೋ ಯಜ್ಞ ಉಚ್ಯತೇ ॥ ೪೭ ॥

ಆತ್ಮವತ್ಸರ್ವಭೂತೇಷು ಯಾ ಹಿತಾಯಾಹಿತಾಯ ಚ ।
ಪ್ರವರ್ತತೇ ಸಮಾ ದೃಷ್ಟಿಃ ಕೃತ್ಸ್ನಾ ಹ್ಯೇಷಾ ದಯಾ ಸ್ಮೃತಾ ॥ ೪೮ ॥

ಆಕ್ರುಷ್ಟೋ ನಿಹತೋ ವಾಪಿ ನಾಕ್ರೋಶೇದ್ಯೋ ನ ಹಂತಿ ಚ ।
ವಾಙ್ಮನಃಕರ್ಮಭಿರ್ನೇತ್ತಿ ತಿತಿಕ್ಷೈಷಾ ಕ್ಷಮಾ ಸ್ಮೃತಾ ॥ ೪೯ ॥

ಸ್ವಾಮಿನಾ ರಕ್ಷ್ಯಮಾಣಾನಾಮುತ್ಸೃಷ್ಟಾನಾಂ ಚ ಸಂಭ್ರಮೇ ।
ಪರಸ್ವಾನಾಮನಾದಾನಮಲೋಭ ಇತಿ ಕೀರ್ತ್ಯತೇ ॥ ೫೦ ॥

---

೪೬. ಬ್ರಹ್ಮಚರ್ಯ, ಜಪ, ಮೌನ ಮತ್ತು ಉಪವಾಸಗಳ ಅನುಷ್ಠಾನವು ತಪಶ್ಚರ್ಯೆಯ ರೂಪವು. ಇದು ಅನುಷ್ಠಾನ ಮಾಡಲು ಕ್ಲೇಶಕರವಾದ ಘೋರವಾದ ಸಾಧನವು.

೪೭. ಪಶು ಮುಂತಾದುವುಗಳಿಂದ ಆದ ದ್ರವ್ಯ-ಹವಿಸ್ಸುಗಳು ಋಕ್, ಯಜುಸ್ಸು, ಸಾಮಮಂತ್ರಗಳು, ಋತ್ವಿಜರು, ದಕ್ಷಿಣಾ ದ್ರವ್ಯಗಳು:—ಈ ಎಲ್ಲ ಸಾಧನಗಳ ಸಮಷ್ಟಿಯನ್ನು ಯಜ್ಞವೆಂದು ಕರೆಯುವರು.

೪೮. ಹಿತ ಅಥವಾ ಅಹಿತಗಳ ವಿಷಯದಲ್ಲಿ ತನಗೆ ಇದ್ದಂತೆಯೇ ಇತರ ಸರ್ವ ಭೂತಗಳಲ್ಲಿಯೂ ಹಿತ ಮತ್ತು ಅಹಿತವೆಂಬ ಭಾವನೆಯು ಸಮಾನರೀತಿಯಾಗಿ ಪ್ರವರ್ತಿಸಿದರೆ ಆ ದೃಷ್ಟಿಯು ದಯೆಯೆಂದು ಕರೆಯಲ್ಪಡುವುದು.

೪೯. ಕಾಯ-ವಾಕ್-ಮನಸ್ಸುಗಳ ವ್ಯಾಪಾರಗಳನ್ನು ಸಡೆಸುತ್ತ ಮತ್ತೊಬ್ಬನು ತನ್ನನ್ನು ನಿಂದಿಸಲಿ ಅಥವಾ ಹೊಡೆಯಲಿ, ತಾನುಮಾತ್ರ ಅಂತಹ ಅಪಕಾರಿಯನ್ನು ನಿಂದಿಸದೇ ಮತ್ತು ಹೊಡೆಯದೇ ಸಹಿಸಿರುವುದು "ತಿತಿಕ್ಷಾ" ಎಂಬ ಕ್ಷಮಾ ಗುಣವು.

೫೦. ಪ್ರಭುವು ತನ್ನ ವಸ್ತುವನ್ನು ರಕ್ಷಿಸುತ್ತಲಿದ್ದು ಒಂದು ಗಾಬರಿಯ ಪ್ರಸಂಗದಲ್ಲಿ ಬಿಟ್ಟಾಗ ಆ ಪರವಸ್ತುವನ್ನು ತೆಗೆದುಕೊಳ್ಳದಿರುವುದು ಅಲೋಭವೆಂದು ಕೀರ್ತಿಸಲ್ಪಟ್ಟಿದೆ.

ಮೈಥುನಸ್ಯಾಸಮಾಚಾರೋ ನ ಚಿಂತಾ ನಾನುಜಲ್ಪನಮ್ ।
ನಿವೃತ್ತಿರ್ಬ್ರಹ್ಮಚರ್ಯಂ ತದಚ್ಛಿದ್ರಂ ತಪ ಉಚ್ಯತೇ ॥ ೫೧ ॥

ಆತ್ಮಾರ್ಥಂ ವಾ ಪರಾರ್ಥಂ ವಾ ಚೇಂದ್ರಿಯಾಣೀಹ ಯಸ್ಯ ವೈ ।
ಮಿಥ್ಯಾ ನ ಸಂಪ್ರವರ್ತಂತೇ ಶಮಸ್ಯೈತತ್ತು ಲಕ್ಷಣಮ್ ॥ ೫೨ ॥

ದಶಾತ್ಮಕೇ ಯೋ ವಿಷಯೇ ಕಾರಣೇ ಚಾಷ್ಟಲಕ್ಷಣೇ ।
ನ ಕ್ರುಧ್ಯೇತ ಪ್ರತಿಹತಃ ಸ ಜಿತಾತ್ಮಾ ವಿಭಾವ್ಯತೇ ॥ ೫೩ ॥

ಯದ್ಯದಿಷ್ಟತಮಂ ದ್ರವ್ಯಂ ನ್ಯಾಯೇನೈವಾಗತಂ ಚ ಯತ್
ತತ್ತದ್ಗುಣವತೇ ದೇಯಮಿತ್ಯೇತದ್ದಾನಲಕ್ಷಣಮ್ ॥ ೫೪ ॥

ದಾನಂ ತ್ರಿವಿಧಮಿತ್ಯೇತತ್ಕನಿಷ್ಠಜ್ಯೇಷ್ಠಮಧ್ಯಮಮ್ ।
ತತ್ರ ನೈಶ್ರೇಯಸಂ ಜ್ಯೇಷ್ಠಂ ಕನಿಷ್ಠಂ ಸ್ವಾರ್ಥಸಿದ್ಧಯೇ ॥ ೫೫ ॥

---

೫೧. ಮೈಥುನ ಕರ್ಮವನ್ನು ಆಚರಿಸದಿರುವುದು, ಅದನ್ನು ಚಿಂತಿಸದಿರುವುದು, ಆ ವಿಷಯವನ್ನು ಮಾತನಾಡದಿರುವುದು, ಮೈಥುನ ಸಂಪರ್ಕವನ್ನು ಸರ್ವ ಪ್ರಕಾರದಿಂದಲೂ ವರ್ಜಿಸುವುದು—ಇವೆಲ್ಲವೂ ಮುಖ್ಯವಾದ ಬ್ರಹ್ಮಚರ್ಯವು. ಇದನ್ನು ಸ್ವಲ್ಪವೂ ಛಿದ್ರವಿಲ್ಲದ ತಪಸ್ಸನ್ನಾಗಿ ಹೇಳುತ್ತಾರೆ.

೫೨. ಯಾವನ ಇಂದ್ರಿಯಗಳು ತನ್ನ ಅಥವಾ ಪರರ ಅರ್ಥಕ್ಕೋಸ್ಕರ ಮಿಥ್ಯಾಚಾರದಿಂದ ಪ್ರವರ್ತಿಸುವುದಿಲ್ಲವೋ, ಅಂತಹ ಮಾನವನು ಆಚರಿಸುವ ಆ ಧರ್ಮವನ್ನು ಶಮವೆಂದು ಹೇಳುತ್ತಾರೆ. ಅದು ಶಮದ ಲಕ್ಷಣವು.

೫೩. ದಶೇಂದ್ರಿಯಗಳ ವಿಷಯಗಳಲ್ಲಿಯೂ ಅಷ್ಟಪ್ರಕೃತಿರೂಪವಾದ ಕಾರಣ ವರ್ಗದಲ್ಲಿಯೂ ತನ್ನ ಇಷ್ಟಕ್ಕೆ ವಿಘಾತವನ್ನು ಹೊಂದಿದ್ದರೂ ಕ್ರೋಧವನ್ನು ಹೊಂದದಿರುವನು ಜಿತಾತ್ಮಾ = ಜಿತೇಂದ್ರಿಯನೆಂದು ಕೀರ್ತನ ಮಾಡಲ್ಪಡುವನು.

೫೪. ದಾನವೆಂದರೆ ನ್ಯಾಯಮಾರ್ಗದಿಂದ ಆರ್ಜಿಸಿದ ತನಗೆ ಬಹಳ ಇಷ್ಟವಾಗಿರುವ ದ್ರವ್ಯವನ್ನು ಗುಣವತ್ತಾದ ಸತ್ಪಾತ್ರದಲ್ಲಿ ಅರ್ಪಿಸುವುದು. ಇದು ಉತ್ತಮವಾದ ದಾನಲಕ್ಷಣವು.

೫೫. ಮೇಲೆ ವಿವರಿಸಿರುವ ದಾನವು ಕನಿಷ್ಠ, ಜ್ಯೇಷ್ಠ ಮತ್ತು ಮಧ್ಯಮವೆಂದು ತ್ರಿವಿಧವಾಗಿರುವುದು. ಅವುಗಳಲ್ಲಿ ಮೋಕ್ಷ ಸಾಧನವಾಗಿ ಆಚರಿಸುವ ದಾನವು

ಕಾರುಣ್ಯಾತ್ ಸರ್ವಭೂತೇಷು ಸಂವಿಭಾಗಸ್ತು ಮಧ್ಯಮಃ ।
ಶ್ರುತಿಸ್ಮೃತಿಭ್ಯಾಂ ವಿಹಿತೋ ಧರ್ಮೋ ವರ್ಣಾಶ್ರಮಾತ್ಮಕಃ ॥ ೫೬ ॥

ಶಿಷ್ಟಾಚಾರಾವಿರುದ್ಧಶ್ಚ ಧರ್ಮಃ ಸತ್ಸಾಧುಸಮ್ಮತಃ ।
ಅಪ್ರದ್ವೇಷೋ ಹ್ಯನಿಷ್ಟೇಷು ತಥೇಷ್ಟಸ್ಯಾಭಿನಂದನಮ್ ॥ ೫೭ ॥

ಪ್ರೀತಿತಾಪವಿಷಾದೇಭ್ಯೋ ವಿನಿವೃತ್ತಿರ್ವಿರಕ್ತತಾ ।
ಸನ್ನ್ಯಾಸಃ ಕರ್ಮಣಾಂ ನ್ಯಾಸಃ ಕೃತಾನಾಮಕೃತೈಃ ಸಹ ॥ ೫೮ ॥

ಕುಶಲಾಕುಶಲಾನಾಂ ತು ಪ್ರಹಾಣಂ ನ್ಯಾಸ ಉಚ್ಯತೇ ।
ಅವ್ಯಕ್ತಾ ಯೇ ವಿಶೇಷಾಸ್ತೇ ವಿಕಾರೇಽಸ್ಮಿನ್ನಚೇತನೇ ॥ ೫೯ ॥

---

ಉತ್ತಮವು. ಸ್ವಾರ್ಥಸಿದ್ಧಿಗಾಗಿ ಮಾಡುವ ಕಾಮ್ಯವಾದ ದಾನವು ಕನಿಷ್ಠವಾದುದು.

೫೬. ಭೂತದಯೆಯಿಂದ ಸರ್ವ ಭೂತಗಳಲ್ಲಿಯೂ ತನ್ನ ಸ್ವತ್ತನ್ನು ವಿಹಿತ ಮಾರ್ಗದಿಂದ ಹಂಚುವುದು ಮಧ್ಯಮವಾದ ದಾನವು. ವರ್ಣಾಶ್ರಮಗಳಿಂದ ಆಚರಿಸಬೇಕಾದ ಧರ್ಮವು ಶ್ರುತಿ ಮತ್ತು ಸ್ಮೃತಿಗಳಿಂದ ವಿಹಿತವಾಗಿರುವುದು. ಶಿಷ್ಟಾಚಾರಕ್ಕೆ ವಿರುದ್ಧವಲ್ಲದಿರುವ ಧರ್ಮವು ಮಾತ್ರ ಸಾಧುಗಳಿಗೆ ಸಮ್ಮತವಾದುದು.

೫೭. ಅನಿಷ್ಟವು ಉಂಟಾಗಲು ಅದನ್ನು ದ್ವೇಷಿಸದೆ ಇರುವಿಕೆ, ಹಾಗೆಯೇ ಇಷ್ಟ ಪ್ರಾಪ್ತಿಯನ್ನು ಅಭಿನಂದಿಸದೇ ಇರುವಿಕೆ, ಎಂದರೆ ಇಷ್ಟಾನಿಷ್ಟ ಪ್ರಾಪ್ತಿಗಳಲ್ಲಿ ಮನಸ್ಸು ಸಾಮ್ಯದಿಂದಿದ್ದು ಪ್ರೀತಿ, ತಾಪ, ವಿಷಾದಗಳಿಂದ ರಹಿತವಾಗಿರುವುದೆಂಬ ಸರ್ವ ವಸ್ತುಗಳಿಂದ ನಿವೃತ್ತಿಯು ವೈರಾಗ್ಯವೆಂದು ಹೇಳಲ್ಪಡುವುದು.

೫೮. ತಾನು ಮಾಡಿರುವ ಕರ್ಮಗಳನ್ನೂ ಮಾಡದಿರುವ ಕರ್ಮಗಳನ್ನೂ ತನ್ನಲ್ಲಿ ಕರ್ತೃತ್ವ ಬುದ್ಧಿ ಪರಿತ್ಯಾಗಪೂರ್ವಕವಾಗಿ ಬಿಡುವಿಕೆಯು ಸರ್ವ ಕರ್ಮ ಸನ್ನ್ಯಾಸವು. ಕರ್ತೃತ್ವವು ತನ್ನಲ್ಲಿರುವವರೆಗೆ ಕೃತ-ಅಕೃತಗಳಿಂದ ಪುಣ್ಯ ಪಾಪಗಳು ಜನಿಸುವುವು. ಮತ್ತು ಕುಶಲ-ಅಕುಶಲರೂಪವಾದ ಫಲಾಫಲಗಳನ್ನು ಮನಸ್ಸಿನಿಂದ ತ್ಯಾಗ ಮಾಡುವುದು ಕೂಡ ನ್ಯಾಸ ಶಬ್ದದ ಅರ್ಥದಲ್ಲಿ ಅಂತರ್ಗತವಾಗಿದೆ.

೫೯. ಪಾಂಚಭೌತಿಕವಾದ ಈ ಅಚೇತನ ಶರೀರದಲ್ಲಿ ಅವ್ಯಕ್ತವಾಗಿರುವ

ಚೇತನಾಚೇತನಾನ್ಯಶ್ಚ ವಿಜ್ಞಾನಂ ಜ್ಞಾನಮುಚ್ಯತೇ ।
ಪ್ರತ್ಯಂಗಾನಾಂ ತು ಧರ್ಮಸ್ಯ ತ್ವಿತ್ಯೇತಲ್ಲಕ್ಷಣಂ ಸ್ಮೃತಮ್ ॥ ೬೦ ॥

ಋಷಿಭಿರ್ಧರ್ಮತತ್ತ್ವಜ್ಞೈಃ ಪೂರ್ವಂ ಸ್ವಾಯಂಭುವೇಽಂತರೇ ।
ಅತ್ರ ವೋ ವರ್ಣಯಿಷ್ಯಾಮಿ ವಿಧಿಂ ಮನ್ವಂತರಸ್ಯ ಯಃ ॥ ೬೧ ॥

ತಥೈವ ಚಾತುರ್ಹೋತ್ರಸ್ಯ ಚಾತುರ್ವಿದ್ಯಸ್ಯ ಚೈವ ಹಿ ।
ಪ್ರತಿಮನ್ವಂತರೇ ಚೈವ ಶ್ರುತಿರನ್ಯಾ ವಿಧೀಯತೇ ॥ ೬೨ ॥

ಋಚೋ ಯಜೂಂಷಿ ಸಾಮಾನಿ ಯಥಾ ಚ ಪ್ರತಿದೈವತಮ್ ।
ಆಭೂತಸಂಪ್ಲವಸ್ಯಾಪಿ ವರ್ಜ್ಯೈಕಂ ಶತರುದ್ರಿಯಮ್ ॥ ೬೩ ॥

---

ಆಧ್ಯಾತ್ಮಿಕ ವಿಶೇಷಗಳನ್ನು ವಿಮರ್ಶೆಮಾಡಿ ಕ್ಷೇತ್ರ ಕ್ಷೇತ್ರಜ್ಞಗಳೆಂಬ ಚೇತನ—ಅಚೇತನಗಳಿಗಿಂತ ಆತ್ಮನನ್ನು ವಿಲಕ್ಷಣನೆಂದು ಅರಿಯುವುದು ಜ್ಞಾನವು.

೬೦. ಈ ರೀತಿಯಾಗಿ ಶಿಷ್ಟಾಚಾರದ ಜೊತೆಯಲ್ಲಿರಬೇಕಾದ, ಅತಿ ಮುಖ್ಯವಾದ ದಯಾ ಮುಂತಾದ ಧರ್ಮದ ಪ್ರತ್ಯಂಗಗಳ ಲಕ್ಷಣವು ಪೂರ್ವದಲ್ಲಿ ಕಳೆದ ಸ್ವಾಯಂಭುವ ಮನ್ವಂತರದಲ್ಲಿ ಧರ್ಮತತ್ತ್ವಜ್ಞರಾದ ಮಹರ್ಷಿಗಳಿಂದ ಪ್ರತಿಪಾದಿಸಲ್ಪಟ್ಟಿವೆ.

೬೧. ಮುನಿಗಳೆ! ವರ್ತಮಾನ ಮನ್ವಂತರದಲ್ಲಿ ನಡೆಯುತ್ತಲಿರುವ ಪ್ರಶಸ್ತವಾದ ವಿಧಿಯನ್ನೂ ಚಾತುರ್ಹೋತ್ರ, ಚಾತುರ್ವಿದ್ಯೆಗಳ ವಿಧಿಯನ್ನೂ ನಿಮಗೆ ವರ್ಣಿಸುತ್ತೇನೆ, ಕೇಳಿರಿ.

೬೨. ಪ್ರತಿಯೊಂದು ಮನ್ವಂತರದಲ್ಲಿಯೂ ಶ್ರುತಿಯು ಹಿಂದಿನ ಸಂಪ್ರದಾಯ ಪ್ರವೃತ್ತವಾದ ಅಧ್ಯಯನವು ಲೋಪಹೊಂದಿ ಮತ್ತೆ ಹೊಸದಾಗಿ ಪ್ರವರ್ತಿಸುವುದು. ಋಗ್ವೇದ, ಯಜುರ್ವೇದ, ಸಾಮವೇದಗಳು ಆಯಾಯ ಯುಗದ ದೇವತಾ ಭಾವವನ್ನು ಪ್ರಶಂಸೆ ಮಾಡುವ ವಿಶೇಷ ರೂಪಗಳನ್ನು ಹೊಂದುತ್ತವೆ.

೬೩. ಪ್ರಲಯವು ಪ್ರಾಪ್ತವಾಗುವವರೆಗೂ ಶತರುದ್ರಿಯವನ್ನು ಮಾತ್ರ ಬಿಟ್ಟು ಋಗ್ವೇದದಲ್ಲಿ ಪಠಿತವಾದ ಹೌತ್ರ ವಿಧಿಯು ಸ್ತೋತ್ರಾತ್ಮಕವಾಗಿ ಪೂರ್ವಕ್ರಮದಂತೆ ಮತ್ತೆ ಆರಂಭವಾಗುವುದು.

ವಿಧಿಹೋತ್ರಸ್ತಥಾ ಸ್ತೋತ್ರಂ ಪೂರ್ವವತ್ ಸಂಪ್ರವರ್ತತೇ ।
ದ್ರವ್ಯಸ್ತೋತ್ರಂ ಗುಣಸ್ತೋತ್ರಂ ಫಲಸ್ತೋತ್ರಂ ತಥೈವ ಚ ॥ ೬೪ ॥

ಚತುರ್ಥಮಾಭಿಜನಕಂ ಸ್ತೋತ್ರಮೇತಚ್ಚತುರ್ವಿಧಮ್ ।
ಮನ್ವಂತರೇಷು ಸರ್ವೇಷು ಯಥಾ ದೇವಾ ಭವಂತಿ ಯೇ ॥ ೬೫ ॥

ಪ್ರವರ್ತಯತಿ ತೇಷಾಂ ವೈ ಬ್ರಹ್ಮಾ ಸ್ತೋತ್ರಂ ಚತುರ್ವಿಧಮ್ ।
ಏವಂ ಮಂತ್ರಗಣಾನಾಂ ತು ಸಮುತ್ಪತ್ತಿಶ್ಚತುರ್ವಿಧಾ ॥ ೬೬ ॥

ಅಥರ್ವರ್ಗ್ಯಜುಷಾಂ ಸಾಮ್ನಾಂ ವೇದೇಷ್ವಿಹ ಪೃಥಕ್ ಪೃಥಕ್ ।
ಋಷೀಣಾಂ ತಪ್ಯತಾಮುಗ್ರಂ ತಪಃ ಪರಮದುಷ್ಕರಮ್ ॥ ೬೭ ॥

ಮಂತ್ರಾಃ ಪ್ರಾದುರ್ಬಭೂವುರ್ಹಿ ಪೂರ್ವಮನ್ವಂತರೇಷ್ವಿಹ ।
ಅಸಂತೋಷಾದ್ಭಯಾದ್ದುಃಖಾತ್ ಸುಖಾಚ್ಛೋಕಾಚ್ಚ ಪಂಚಧಾ ॥ ೬೮ ॥

---

೬೪. ಋಙ್ಮಂತ್ರಗಳಲ್ಲಿ ಪ್ರಾಯಶಃ ಕರ್ಮಾಂಗಗಳ ಸ್ತೋತ್ರವು ಅತಿಶಯವಾಗಿ ಬರುವುದು. ಆದುದರಿಂದ ಸ್ತೋತ್ರ ಕರ್ಮವು ಹೌತ್ರವೆಂದು ಹೇಳಲ್ಪಡುವುದು. ಇದು ದ್ರವ್ಯಸ್ತೋತ್ರ, ಗುಣಸ್ತೋತ್ರ, ಫಲಸ್ತೋತ್ರ ಮತ್ತು ನಾಲ್ಕನೆಯದಾದ ಅಭಿಜನಸ್ತೋತ್ರವೆಂದು ನಾಲ್ಕು ವಿಧವಾಗಿರುವುದು. ಕರ್ಮಾಂಗವಾದ ದ್ರವ್ಯ, ಗುಣ, ಫಲಗಳನ್ನೂ ಮತ್ತು ಸಂಪ್ರದಾಯ ಪ್ರವರ್ತಕರ ವಂಶವನ್ನೂ ಮಂತ್ರಗಳು ಪ್ರಶಂಸಿಸುವುವು

೬೫ ಸಕಲ ಮನ್ವಂತರಗಳಲ್ಲಿಯೂ ಯಾವ ದೇವತೆಗಳು ಯಾವ ರೀತಿಯಲ್ಲಿರುವರೋ ಅದನ್ನು ಅನುಸರಿಸಿ ಆಯಾಯ ದೇವತೆಗಳ ಉದ್ದೇಶದಿಂದ ಬ್ರಹ್ಮನು ನಾಲ್ಕು ವಿಧವಾದ ಸ್ತೋತ್ರಗಳನ್ನು ಪ್ರವರ್ತಿಸಿದನು.

೬೬. ಹೀಗೆ ಚತುರ್ವಿಧ ಸ್ತೋತ್ರಗಳನ್ನು ಗರ್ಭೀಕರಿಸಿ ಮಂತ್ರಗಳು ಅಥರ್ವ, ಋಕ್, ಯಜುಸ್ಸು, ಸಾಮವೇದಗಳಲ್ಲಿ ಪ್ರತ್ಯೇಕವಾಗಿ ಉತ್ಪನ್ನವಾಗಿವೆ.

೬೭. ಋಷಿಗಳು, ಬಹುಕ್ಲೇಶ ಸಾಧ್ಯವಾದ ಉಗ್ರ ತಪಸ್ಸನ್ನು ಆಚರಿಸುತ್ತಿರಲು ಪೂರ್ವ ಮನ್ವಂತರಗಳಲ್ಲಿ ವೇದಾಂತರ್ಗತವಾದ ಮಂತ್ರಗಳು ಆ ಮಹರ್ಷಿಗಳಿಂದ ಪ್ರಾದುರ್ಭವಿಸಿದವು.

೬೮. ಪ್ರಾಚೀನ ಮಹರ್ಷಿಗಳಿಗೆ ಅಸಂತೋಷ, ಭಯ, ದುಃಖ, ಸುಖ ಮತ್ತು

**ಋಷೀಣಾಂ ತಾರಕಾಖ್ಯೇನ ದರ್ಶನೇನ ಯದೃಚ್ಛಯಾ ।**
**ಋಷೀಣಾಂ ಯದೃಷಿತ್ವಂ ಹಿ ತದ್ವಕ್ಷ್ಯಾಮೀಹ ಲಕ್ಷಣೈಃ ॥ ೬೯ ॥**

**ಅತೀತಾನಾಗತಾನಾಂ ಚ ಪಂಚಧಾ ತ್ವೃಷಿರುಚ್ಯತೇ ।**
**ಅತಸ್ತ್ವೃಷೀಣಾಂ ವಕ್ಷ್ಯಾಮಿ ತತ್ರ ಹ್ಯಾರ್ಷಸಮುದ್ಭವಮ್ ॥ ೭೦ ॥**

**ಗುಣಸಾಮ್ಯೇ ವರ್ತಮಾನೇ ಸರ್ವಸಂಪ್ರಲಯೇ ತದಾ ।**
**ಅವಿಭಾಗೇ ತು ವೇದಾನಾಮನಿರ್ದೇಶ್ಯೇ ತಮೋಮಯೇ ॥ ೭೧ ॥**

**ಅಬುದ್ಧಿಪೂರ್ವಕಂ ತದ್ವೈ ಚೇತನಾರ್ಥೇ ಪ್ರವರ್ತತೇ ।**
**ಚೇತನಾ ಬುದ್ಧಿಪೂರ್ವಂ ತು ಚೇತನೇನ ಪ್ರವರ್ತತೇ ॥ ೭೨ ॥**

---

ಶೋಕಗಳೆಂಬ ಐದು ನಿಮಿತ್ತಗಳಿಂದ ವೇದ ಮಂತ್ರಗಳ ಪ್ರತಿಭಾಸವು ಉತ್ಪನ್ನವಾಯಿತು. ಅಸಂತೋಷಾದಿಗಳಿಂದಲೂ ಭಯ-ಶೋಕಾದಿ ನಿವೃತ್ತಿಯ ಉದ್ದೇಶದಿಂದಲೂ ಮತ್ತು ಸುಖಪ್ರಾಪ್ತಿ ಅಭಿಲಾಷದಿಂದಲೂ ಆಯಾಯ ಉದ್ದೇಶಗರ್ಭಿತವಾಗಿ ದೇವತಾಸ್ತೋತ್ರರೂಪವಾಗಿ ಮಂತ್ರಗಳು ಆವಿರ್ಭವಿಸಿದವು.

೬೯. ಮಂತ್ರದರ್ಶನದಲ್ಲಿ ಮಹರ್ಷಿಗಳಿಗೆ ಯೋಗಶಾಸ್ತ್ರ ಪ್ರಸಿದ್ಧವಾದ ತಾರಕ ದರ್ಶನವು ಸಾಧನವು. ಲೌಕಿಕವಾದ ದೃಷ್ಟಿಯಿಂದ ಮಂತ್ರಗಳು ಕಾಣುವುದಿಲ್ಲ. ಅಂತಹ ಅಲೌಕಿಕವಾದ ದೃಷ್ಟಿಯಿಂದ ಋಷಿಗಳಿಗೆ ಪ್ರಾಪ್ತವಾಗಿರುವ ಋಷಿತ್ವವನ್ನು ಲಕ್ಷಣಗಳಿಂದ ವಿವರಿಸುತ್ತೇನೆ.

೭೦. ಅತೀತ ಮತ್ತು ಅನಾಗತ ಮಹರ್ಷಿಗಳಲ್ಲಿ ಋಷಿಪದವು ಐದುರೂಪವಾಗಿ ವಿಂಗಡಿಸಲ್ಪಟ್ಟಿದೆ. ಆದುದರಿಂದ ಪ್ರತಿಯೊಂದು ಪಂಗಡದಲ್ಲಿಯೂ ಉಂಟಾದ ಆರ್ಷದರ್ಶನವನ್ನು ವರ್ಣಿಸುತ್ತೇನೆ.

೭೧' ಪೂರ್ವಕಲ್ಪದ ಅವಸಾನದಲ್ಲಿ ಪ್ರಲಯವುಂಟಾಗಲು ಸತ್ತ್ವ-ರಜಸ್ಸು-ತಮಸ್ಸುಗಳೆಂಬ ಗುಣಸಂಘಾತವು ಸಮತ್ವವನ್ನು ಹೊಂದಿ ವೇದ ಮುಂತಾದ ಸಕಲ ವಸ್ತುಗಳು ಅವಿಭಾಗಾವಸ್ಥೆಯನ್ನು ಹೊಂದಿ ವರ್ಣಿಸಲು ಆಗದ ತಮೋಮಯಾವಸ್ಥೆಯು ಉಂಟಾಗುವುದು.

೭೨. ಆಗ ಗುಣಸಂಘಾತರೂಪವಾದ ಪ್ರಧಾನವು ಸಂಕಲ್ಪ ಮುಂತಾದ ಚೇತನಾಲೋಚನೆಯಿಲ್ಲದೇ ಚೇತನಕ್ಕೋಸ್ಕರ ಪ್ರವರ್ತಿಸುವುದು. ಚೇತನಾಂಶವು ಮಾತ್ರ ಚೈತನ್ಯದಿಂದ ಪ್ರವರ್ತಿಸುವುದು.

ಪ್ರವರ್ತತೇ ತಥಾ ದ್ವೌ ತು ಯಥಾ ಮತ್ಸ್ಯೋದಕೇ ಉಭೇ ।
ಚೇತನಾಧಿಷ್ಠಿತಂ ಸತ್ತ್ವಂ ಪ್ರವರ್ತತಿ ಗುಣಾತ್ಮಕಮ್ ॥ ೭೩ ॥

ಕಾರಣತ್ವಾತ್ತಥಾ ಕಾರ್ಯಂ ತದಾ ತಸ್ಯ ಪ್ರವರ್ತತೇ ।
ವಿಷಯೋ ವಿಷಯಿತ್ವಾಚ್ಚ ಅರ್ಥೇsರ್ಥತ್ವಾತ್ತಥೈವ ಚ ॥ ೭೪ ॥

ಕಾಲೇನ ಪ್ರಾಪಣೀಯೇನ ಭೇದಾಸ್ತು ಕರಣಾತ್ಮಕಾಃ ।
ಸಂಸಿಧ್ಯಂತಿ ತದಾವ್ಯಕ್ತಾಃ ಕ್ರಮೇಣ ಮಹದಾದಯಃ ॥ ೭೫ ॥

ಮಹತಶ್ಚಾಪ್ಯಹಂಕಾರಸ್ತಸ್ಮಾದ್ಭೂತೇಂದ್ರಿಯಾಣಿ ಚ ।
ಭೂತಭೇದಾಶ್ಚ ಭೂತೇಭ್ಯೋ ಜಜ್ಞಿರೇ ಸ್ಮ ಪರಸ್ಪರಮ್ ॥ ೭೬ ॥

ಸಂಸಿದ್ಧಕಾರ್ಯಕರಣಃ ಸದ್ಯ ಏವ ವ್ಯವರ್ತತ ।
ಯಥೋಲ್ಮುಕಾತ್ತು ತ್ರುಟಯ ಏಕಕಾಲಾದ್ಭವಂತಿ ಹಿ ॥ ೭೭ ॥

---

೭೩. ಜಲ ಮತ್ತು ಜಲದಲ್ಲಿರುದ ಮತ್ಸ್ಯವು ಎರಡು ವಸ್ತುಗಳು ಪ್ರವರ್ತಿಸಿದಂತೆ ಚೇತನ-ಅಚೇತನಗಳೆರಡು ಪ್ರವರ್ತಿಸುತ್ತವೆ ಗುಣಾತ್ಮಕವಾದ ಅಚೇತನವು ಚೇತನದಿಂದ ನಿಯಮಿಸಲ್ಪಟ್ಟಿರುವುದಾಗಿ ಪ್ರವರ್ತಿಸುವುದು.

೭೪. ಚೇತನಾಚೇತನ ಸಂಪರ್ಕವೆಂಬ ಕಾರಣದಿಂದ ಅನೇಕ ಕಾರ್ಯಗಳು ಉದಯಿಸುತ್ತವೆ. ಚೇತನವು ವಿಷಯಿ ಮತ್ತು ಅರ್ಥಿಯಾಗಿಯೂ ಅಚೇತನವು ಚೇತನ ದೃಷ್ಟಿಗೆ ವಿಷಯ ಮತ್ತು ಅರ್ಥವಾಗಿಯೂ ಇರುವುದು. ಅಚೇತನಾಂಶವಾದ ವಿಷಯ ಅರ್ಥಗಳಿಂದ ಚೇತನವು ಬದ್ಧವಾಗುವುದು.

೭೫. ಸೃಷ್ಟ್ಯಾದಿಯಲ್ಲಿ ವಿಕಾರಾವಸ್ಥೆಯು ಸಂಭವಿಸಿದಂತೆ ಕೆಲವು ಕಾಲಾನಂತರದಲ್ಲಿ ಕ್ರಮವಾಗಿ ಅವ್ಯಕ್ತವಾಗಿರುವ ಮಹತ್ತತ್ತ್ವ ಮುಂತಾದ ಕರಣಗಳ ಪ್ರಭೇದಗಳು ಉಂಟಾಗುವುವು.

೭೬. ಆ ಸೃಷ್ಟಿ ಪ್ರವಾಹದಲ್ಲಿ ಮಹತ್ತತ್ತ್ವದಿಂದ ಅಹಂಕಾರವೂ, ಅಹಂಕಾರದಿಂದ ಭೂತ ಭೌತಿಕೇಂದ್ರಿಯಗಳೂ ಅವುಗಳಿಂದ ವಿಚಿತ್ರವಾದ ಮಹಾಭೂತಗಳೂ ಪರಸ್ಪರ ನಿಮಿತ್ತದಿಂದ ಜನಿಸುವುವು.

೭೭. ಹೀಗೆ ದೇಹ-ಇಂದ್ರಿಯಗಳ ಉತ್ಪತ್ತಿಯಾದ ತರುವಾಯ ಆತ್ಮನು ಕಾರ್ಯ ಕರಣಗಳುಳ್ಳ ಪೂರ್ಣಾಕಾರನಾಗುವನು. ಅವನಿಂದ ಅನೇಕ ಅಂಶ ಜೀವ

ತಥಾ ವಿವೃತ್ತಾಃ ಕ್ಷೇತ್ರಜ್ಞಾಃ ಕಾಲೇನೈಕೇನ ಕಾರಣಾತ್ ।
ಯಥಾಂಧಕಾರೇ ಖದ್ಯೋತಃ ಸಹಸಾ ಸಂಪ್ರದೃಶ್ಯತೇ ॥ ೭೮ ॥

ತಥಾ ವಿವೃತ್ತೋ ಹ್ಯವ್ಯಕ್ತಾತ್ ಖದ್ಯೋತ ಇವ ಸಞ್ಜ್ವಲನ್ ।
ಸ ಮಹಾನ್ ಸಶರೀರಸ್ತು ಯತ್ರೈವಾಯಮವರ್ತತ ॥ ೭೯ ॥

ತತ್ರೈವ ಸಂಸ್ಥಿತೋ ವಿದ್ವಾನ್ ದ್ವಾರಶಾಲಾಮುಖೇ ವಿಭುಃ ।
ಮಹಾಂಸ್ತು ತಮಸಃ ಪಾರೇ ವೈಲಕ್ಷಣ್ಯಾದ್ವಿಭಾವ್ಯತೇ ॥ ೮೦ ॥

ತತ್ರೈವ ಸಂಸ್ಥಿತೋ ವಿದ್ವಾನ್ ತಮಸೋಽಂತ ಇತಿ ಶ್ರುತಿಃ ।
ಬುದ್ಧಿರ್ವಿವರ್ತಮಾನಸ್ಯ ಪ್ರಾದುರ್ಭೂತಾ ಚತುರ್ವಿಧಾ ॥ ೮೧ ॥

---

ಗಳು ಹುಟ್ಟುವುವು. ಬೆಂಕಿಯ ಕೊಳ್ಳಿಯನ್ನು ಬೀಸಲು ಅದರಿಂದ ಒಂದೇ ನಿಮಿಷ ದಲ್ಲಿ ಅನೇಕ ಕಿಡಿಗಳು ಹುಟ್ಟುತ್ತವೆ.

೭೮. ಹಾಗೆಯೇ ಒಬ್ಬ ಪರಮಾತ್ಮನೆಂಬ ಕಾರಣದಿಂದ ಒಂದೇ ಕಾಲದಲ್ಲಿ ಅನೇಕ ಕ್ಷೇತ್ರಜ್ಞರ ರಾಶಿಯು ಉತ್ಪನ್ನವಾಗುವುದು. ಅಂಧಕಾರವು ಗಾಢವಾಗಿ ಪ್ರಸರಿಸಲು ತನ್ಮಧ್ಯದಲ್ಲಿ ಮಿಣುಕು ಹುಳುವು ತನ್ನ ಪುಚ್ಛಾಗ್ರದ ಬೆಳಕನ್ನು ಕೊಡುತ್ತ ಕಾಣುತ್ತಿರುವುದ..

೭೯. ತಮೋಮಯವಾದ ಆ ಪ್ರಲಯಾವಸಾನಕಾಲದಲ್ಲಿ ಶರೀರ ಸಹಿತನಾಗಿ ರೂಪಹೊಂದಿದ ಆ ಮಹತ್ ಎಂಬ ಆತ್ಮನು ತಾನು ನಿಂತ ಸ್ಥಳದಲ್ಲಿಯೇ ಮಿಣುಕು ಹುಳುವಿನಂತೆ ಜ್ವಲಿಸುತ್ತಿದ್ದನು.

೮೦. ಜ್ಞಾನಿಯೂ ವ್ಯಾಪಕನೂ ಆದ ಆ ಮಹತ್ ಆತ್ಮನು ಕಾರ್ಯಕರಣ ಸಂಘಾತವೆಂಬ ದ್ವಾರಗಳಿಂದ ಕೂಡಿದ ಶಾಲೆಯ ಮುಖದಲ್ಲಿ ತಮಸ್ಸಿಗಿಂತ ವಿಲಕ್ಷಣ ರೂಪದಿಂದ ತೋರುತ್ತ ಅಲ್ಲಿಯೇ ನಿಂತುಕೊಂಡನು.

೮೧. ಈ ರೀತಿಯಾಗಿ ಜನಿಸಿರುವ ಚೇತನ ಆತ್ಮನು ತಮೋಗುಣದ ಎಲ್ಲೆಯಲ್ಲಿ ಹಾಗೆಯೇ ನಿಂತನು. ಆಗ ಅವನ ಬುದ್ಧೀಂದ್ರಿಯವು ಪರಿವರ್ತಿಸುತ್ತಿರಲು ನಾಲ್ಕು ವೃತ್ತಿಗಳನ್ನು ಹೊಂದಿ ಚತುರ್ವಿಧವಾಗಿ ಪರಿಣಮಿಸಿತು.

ಜ್ಞಾನಂ ವೈರಾಗ್ಯಮೈಶ್ವರ್ಯಂ ಧರ್ಮಶ್ಚೇತಿ ಚತುಷ್ಟಯಮ್ ।
ಸಾಂಸಿದ್ಧಿಕಾನ್ಯಥೈತಾನಿ ವಿಜ್ಞೇಯಾನಿ ನರಸ್ಯ ವೈ ॥ ೮೨ ॥

ಸ ಮಹಾತ್ಮಾ ಶರೀರಸ್ಯ ವೈವರ್ತಾತ್ ಸಿದ್ಧಿರುಚ್ಯತೇ ।
ಅನುಶೇತೇ ಯತಃ ಸರ್ವಾನ್ ಕ್ಷೇತ್ರಜ್ಞಾನಮಥಾಪಿ ವಾ ॥ ೮೩ ॥

ಪುರಿಷತ್ವಾಚ್ಚ ಪುರುಷಃ ಕ್ಷೇತ್ರಜ್ಞಾನಾತ್ ಸ ಉಚ್ಯತೇ ।
ಯಸ್ಮಾದ್ಬುದ್ಧ್ಯಾನುಶೇತೇ ಚ ತಸ್ಮಾದ್ಬೋಧಾತ್ಮಕಃ ಸ ವೈ ॥ ೮೪ ॥

ಸಂಸಿದ್ಧಯೇ ಪರಿಗತಂ ವ್ಯಕ್ತಾವ್ಯಕ್ತಮಚೇತನಮ್ ।
ಏವಂ ವಿವೃತ್ತಃ ಕ್ಷೇತ್ರಜ್ಞಃ ಕ್ಷೇತ್ರಜ್ಞಾನಾಭಿಸಂಹಿತಃ ॥ ೮೫ ॥

ವಿವೃತ್ತಿಸಮಕಾಲಂ ತು ಬುದ್ಧ್ಯಾವ್ಯಕ್ತಮೃಷಿಃ ಸ್ವಯಮ್ ।
ಪರಂ ಹ್ಯರ್ಷಯತೇ ಯಸ್ಮಾತ್ ಪರಮರ್ಷಿತ್ವಮಸ್ಯ ತತ್ ॥ ೮೬ ॥

---

೮೨. ಬುದ್ಧಿಯಲ್ಲಿ ಹುಟ್ಟಿದ ವೃತ್ತಿಗಳಾದ ಜ್ಞಾನ, ವೈರಾಗ್ಯ, ಐಶ್ವರ್ಯ ಮತ್ತು ಧರ್ಮಗಳು ಪ್ರಥಮ ಶರೀರಿಯಾಗಿ ಜನಿಸದ ಆತ್ಮನಿಗೆ ಜನ್ಮಸಿದ್ಧವಾಗಿ ಬಂದ ಸ್ವಾಭಾವಿಕವಾಗಿರುವುವು.

೮೩. ಆ ಮಹಾತ್ಮನು ತನ್ನ ಶರೀರವನ್ನು ಸ್ವಸಂಕಲ್ಪದಿಂದ ಪರಿಣಾಮವನ್ನುಂಟುಮಾಡಿ ಸಾಧಿಸಿರುವುದರಿಂದ ಸಿದ್ಧಿಯೆಂದು ಕರೆಯಲ್ಪಡುವನು. ಈ ಆದಿ ಪುರುಷನು ಮುಂದೆ ಹುಟ್ಟುವ ಸಕಲ ಕ್ಷೇತ್ರಜ್ಞರನ್ನು ಜ್ಞಾನಾಂಶದಿಂದ ಅನುಸರಿಸಿರುವನು.

೮೪. ಶರೀರವೆಂಬ ಪುರದಲ್ಲಿ ವಾಸಿಸುವುದರಿಂದ ಪುರುಷ ಎಂಬುದಾಗಿಯೂ ಬುದ್ಧಿ ಮೊದಲಾದ ಕ್ಷೇತ್ರ ಸಂಘಾತವನ್ನು ತಿಳಿದಿರುವುದರಿಂದ ಕ್ಷೇತ್ರಜ್ಞ ಎಂಬುದಾಗಿಯೂ ಮತ್ತು ಸಕಲ ವಸ್ತುಗಳಲ್ಲಿಯೂ ಪ್ರತಿಭಾಸರೂಪದಿಂದ ವ್ಯಾಪಿಸಿರುವುದರಿಂದ ಬೋಧರೂಪ ಎಂಬುದಾಗಿಯೂ ಸ್ಮರಿಸಲ್ಪಟ್ಟಿರುವನು.

೮೫. ವ್ಯಕ್ತ ಮತ್ತು ಅವ್ಯಕ್ತರೂಪವಾದ ಅಚೇತನವು ಭೋಗ-ಅಪವರ್ಗಗಳ ಸಿದ್ಧಿಗೋಸ್ಕರ ಚೇತನಾತ್ಮವನ್ನು ಸುತ್ತುವರಿದು ಪ್ರವರ್ತಿಸುತ್ತಿರುವುದು. ಈ ರೀತಿಯಾಗಿ ಕ್ಷೇತ್ರದಲ್ಲಿ ಆತ್ಮೀಯ ಜ್ಞಾನದಿಂದ ಕೂಡಿದ ಕ್ಷೇತ್ರಜ್ಞನು ಸಿದ್ಧನಾದನು.

೮೬. ಹೀಗೆ ತಾನು ವಿಶೇಷರೂಪದಿಂದ ಆವಿರ್ಭಾವ ಹೊಂದಿದ ಕೂಡಲೆ

ಗತ್ಯರ್ಥಾದೃಷತೇರ್ಧಾತೋರ್ನಾಮನಿರ್ವೃತಿರಾದಿತಃ ।
ಯಸ್ಮಾದೇವ ಸ್ವಯಂಭೂತಸ್ತಸ್ಮಾಚ್ಚಾಪ್ಯೃಷಿತಾ ಸ್ಮೃತಾ ॥ ೮೭ ॥

ಈಶ್ವರಾತ್ ಸ್ವಯಮುದ್ಭೂತಾ ಮಾನಸಾ ಬ್ರಹ್ಮಣಃ ಸುತಾಃ ।
ಯಸ್ಮಾದುತ್ಪದ್ಯಮಾನೈಸ್ತೈರ್ಮಹಾನ್ ಪರಿಗತಃ ಪರಃ ॥ ೮೮ ॥

ಯಸ್ಮಾದೃಷಂತಿ ತೇ ಧೀರಾ ಮಹಾಂತಂ ಸರ್ವತೋ ಗುಣೈಃ ।
ತಸ್ಮಾನ್ಮಹರ್ಷಯಃ ಪ್ರೋಕ್ತಾ ಬುದ್ಧೇಃ ಪರಮದರ್ಶಿನಾ ॥ ೮೯ ॥

ಈಶ್ವರಾಣಾಂ ಸುತಾಸ್ತೇಷಾಂ ಮಾನಸಾ ಔರಸಾಶ್ಚ ವೈ ।
ಅಹಂಕಾರಂ ತಪಶ್ಚೈವ ಋಷಂತಿ ಋಷಿತಾಂ ಗತಾಃ ॥ ೯೦ ॥

---

ಮಹಾನ್ ಆತ್ಮನು ತನ್ನಲ್ಲಿ ಸಂಪೃಕ್ತವಾದ ಅವ್ಯಕ್ತವನ್ನು ಬುದ್ಧಿಯಿಂದ ತಿಳಿಯುವನಾದನು. ತನಗಿಂತಲೂ ಪರವಾಗಿ ಅವ್ಯಕ್ತವನ್ನು ತಿಳಿದಿದ್ದರಿಂದ ಆತ್ಮನಿಗೆ ಮಹರ್ಷಿ ಎಂದು ಸಂಕೇತವು ಉಂಟಾಯಿತು.

೮೭. ಮೊದಲು ಋಷಿ ಎಂಬ ಶಬ್ದವು ಗತಿ ಎಂಬ ಅರ್ಥವನ್ನು ಬೋಧಿಸುವ "ಋಷತಿ" ಎಂಬ ಧಾತುವಿನಿಂದ ರೂಪಹೊಂದಿರುವುದು. ತನ್ನಿಂದಲೇ ತಾನು ಉದ್ಭೂತನಾಗಿರುವುದರಿಂದಲೂ ಋಷಿ ಎಂಬ ಶಬ್ದವು ಅನ್ವರ್ಥವಾಗುವುದು.

೮೮. ಜಗದೀಶ್ವರನಾದ ಬ್ರಹ್ಮನಿಂದ ಮಾನಸಪುತ್ರರಾಗಿ ಅನೇಕ ಮಹರ್ಷಿಗಳು ಸ್ವತಂತ್ರರಾಗಿ ಹುಟ್ಟಿರುವರು. ಆ ಋಷಿಗಳು ಹುಟ್ಟಿದ ಮೊದಲುಗೊಂಡು ಪ್ರಥಮ ಶರೀರಿಯಾದ ಮಹಾನ್ ಎಂಬುವನನ್ನು ಉತ್ಕೃಷ್ಟನಾದವನೆಂದು ಅನುಸರಿಸಿದರು.

೮೯. ಬುದ್ಧಿಯ ಪರಾಂಶವನ್ನು ತಿಳಿದ ಮಹಾನ್ ಆತ್ಮನು ಬ್ರಹ್ಮಮಾನಸಪುತ್ರರಾಗಿ ಜನಿಸಿದ ಋಷಿಗಳು ಧೀರರಾಗಿ ತಮ್ಮ ಗುಣಗಳಿಂದ ತನ್ನನ್ನು ಅನುವರ್ತಿಸುತ್ತಿದ್ದುದರಿಂದ ಅವರಿಗೆ ಮಹರ್ಷಿ ಎಂಬ ಸಂಕೇತವನ್ನಿಟ್ಟನು.

೯೦. ಈಶ್ವರನ ಮಾನಸ ಮತ್ತು ಔರಸ ಪುತ್ರರು ಹುಟ್ಟಿದೊಡನೆ ಅಹಂಕಾರ ಎಂಬ ತತ್ತ್ವವನ್ನೂ ತಪಸ್ಸಿನ ಕರ್ತವ್ಯತೆಯನ್ನೂ ಹೊಂದಿರುವುದರಿಂದ ಋಷಿತ್ವವನ್ನು ಹೊಂದಿದರು.

ತಸ್ಮಾತ್ ಸಪ್ತರ್ಷಯಸ್ತೇ ವೈ ಭೂತಾದೌ ತತ್ತ್ವದರ್ಶನಾತ್ ।
ಋಷಿಪುತ್ರಾ ಋಷೀಕಾಸ್ತು ಮೈಥುನಾದ್ಗರ್ಭಸಂಭವಾಃ ॥ ೯೧ ॥

ತನ್ಮಾತ್ರಾಣಿ ಚ ಸತ್ಯಂ ಚ ಋಷಂತೇ ತೇ ಮಹೌಜಸಃ ।
ಸಪ್ತರ್ಷಯಸ್ತತಸ್ತೇ ಚ ಪರಸತ್ಯಸ್ಯ ದರ್ಶನಾಃ ॥ ೯೨ ॥

ಋಷೀಕಾಣಾಂ ಸುತಾಸ್ತೇ ಸ್ಯುರ್ವಿಜ್ಞೇಯಾ ಋಷಿಪುತ್ರಕಾಃ ।
ಋಷಂತಿ ತೇ ಋತಂ ಯಸ್ಮಾದ್ವಿಶೇಷಾಂಶ್ಚೈವ ತತ್ತ್ವತಃ ॥ ೯೩ ॥

ತಸ್ಮಾತ್ ಸಪ್ತರ್ಷಯಸ್ತೇಽಪಿ ಶ್ರುತೇಃ ಪರಮದರ್ಶನಾತ್ ।
ಅವ್ಯಕ್ತಾತ್ಮಾ ಮಹಾನಾತ್ಮಾಹಂಕಾರಾತ್ಮಾ ತಥೈವ ಚ ॥ ೯೪ ॥

ಭೂತಾತ್ಮಾ ಚೇಂದ್ರಿಯಾತ್ಮಾ ಚ ತೇಷಾಂ ತಜ್ಜ್ಞಾನಮುಚ್ಯತೇ ।
ಇತ್ಯೇತಾ ಋಷಿಜಾತೀಸ್ತಾ ನಾಮಭಿಃ ಪಂಚ ವೈ ಶೃಣು ॥ ೯೫ ॥

---

೯೧. ಭೂತ ಸೃಷ್ಟಿಯ ಆದಿಯಲ್ಲಿ ಆ ಮಹರ್ಷಿಗಳು ತತ್ತ್ವವನ್ನು ಸಂದರ್ಶಿಸಿರುವುದರಿಂದ ಸಪ್ತರ್ಷಿಗಳಾದರು. ಆ ಋಷಿಗಳಿಂದ ಮೈಥುನಕರ್ಮದಿಂದ ಜನಿಸಿರುವ ಪ್ರಜೆಗಳು ಋಷೀಕರೆಂಬ ಸಂಜ್ಞೆಯನ್ನು ಹೊಂದಿರುವರು.

೯೨. ಮಹಾ ವೀರ್ಯವಂತರಾದ ಋಷೀಕರು ತನ್ಮಾತ್ರಗಳೆಂಬ ತತ್ತ್ವಗಳನ್ನೂ ಸತ್ಯವಚನವೆಂಬ ಧರ್ಮ ಕರ್ತವ್ಯತೆಯನ್ನೂ ಹೊಂದಿದರು. ಸತ್ಯವನ್ನು ಸಾಕ್ಷಾತ್ಕರಿಸಿರುವುದರಿಂದ ಅವರು ಸಪ್ತರ್ಷಿಗಳಾದರು.

೯೩. ಆ ಋಷೀಕರ ಪುತ್ರರು ಋಷಿಪುತ್ರಕರೆಂದು ಪ್ರಸಿದ್ಧರಾಗಿರುವರೆಂದು ತಿಳಿಯಬೇಕು. ಅವರು ತಾತ್ತ್ವಿಕವಾದ ವಿಶೇಷಗಳನ್ನೂ ಋತವನ್ನೂ ಅರಿತರಾಗಿದ್ದಾರೆ.

೯೪. ಆದುದರಿಂದ ಶ್ರುತಿಯ ಪಾರವನ್ನು ಕಂಡಿರುವ ಆ ಋಷಿಪುತ್ರರೂ ಸಪ್ತರ್ಷಿಗಳಾಗಿರುವರು. ಹೀಗೆ ಆತ್ಮನ ಪ್ರಾದುರ್ಭಾವಗಳಲ್ಲಿ ಅವ್ಯಕ್ತಾತ್ಮಾ, ಮಹಾನಾತ್ಮಾ, ಅಹಂಕಾರಾತ್ಮಾ, ಇಂದ್ರಿಯಾತ್ಮಾ, ಭೂತಾತ್ಮಾ ಎಂದು ಐದು ಬಗೆಗಳು ಇರುವುವು. ಮಹತ್ತತ್ತ್ವ, ಅಹಂಕಾರ, ಇಂದ್ರಿಯ, ತನ್ಮಾತ್ರ ಮತ್ತು ಅವ್ಯಕ್ತಗಳೆಂಬ ಉಪಾಧಿ ಸಂಪರ್ಕದಿಂದ ಆತ್ಮನು ಅನೇಕ ರೂಪಗಳನ್ನು ಹೊಂದಿರುವನು.

೯೫. ಮೇಲೆ ಹೇಳಿದ ಋಷಿಗಳು ಆತ್ಮಜ್ಞಾನವನ್ನು ಹೊಂದಿಕೊಂಡಿರುವರು

ಭೃಗುರ್ಮರೀಚಿರತ್ರಿಶ್ಚ ಹ್ಯಂಗಿರಾಃ ಪುಲಹಃ ಕ್ರತುಃ ।
ಮನುರ್ದಕ್ಷೋ ವಸಿಷ್ಠಶ್ಚ ಪುಲಸ್ತ್ಯಶ್ಚೇತಿ ತೇ ದಶ ॥ ೯೬ ॥

ಬ್ರಹ್ಮಣೋ ಮಾನಸಾ ಹ್ಯೇತೇ ಉದ್ಭೂತಾಃ ಸ್ವಯಮೀಶ್ವರಾಃ ।
ಪರತ್ವೇನರ್ಷಯೋ ಯಸ್ಮಾತ್ ಸ್ಮೃತಾಸ್ತಸ್ಮಾನ್ಮಹರ್ಷಯಃ ॥ ೯೭ ॥

ಈಶ್ವರಾಣಾಂ ಸುತಾ ಹ್ಯೇತೇ ಋಷಯಸ್ತಾನ್ನಿಬೋಧತ ।
ಕಾವ್ಯೋ ಬೃಹಸ್ಪತಿಶ್ಚೈವ ಕಶ್ಯಪಶ್ಚ್ಯವನಸ್ತಥಾ ॥ ೯೮ ॥

ಉತಥ್ಯೋ ವಾಮದೇವಶ್ಚ ಅಪಾಸ್ಯಶ್ಚೋಶಿಜಸ್ತಥಾ ।
ಕರ್ದಮೋ ವಿಶ್ರವಾಃ ಶಕ್ತಿರ್ವಾಲಖಿಲ್ಯಾಸ್ತಥಾರ್ವತಃ ॥ ೯೯ ॥

ಇತ್ಯೇತೇ ಋಷಯಃ ಪ್ರೋಕ್ತಾಸ್ತಪಸಾ ಚರ್ಷಿತಾಂ ಗತಾಃ ।
ಋಷಿಪುತ್ರಾನೃಷೀಕಾಂಸ್ತು ಗರ್ಭೋತ್ಪನ್ನಾನ್ನಿಬೋಧತ ॥ ೧೦೦ ॥

---

ಈ ರೀತಿಯಾಗಿ ಋಷಿಜಾತಿಯು ಆಯಾಯ ತತ್ತ್ವಗಳನ್ನು ಸಾಕ್ಷಾತ್ಕರಿಸಿರುವುದರಿಂದ ಐದು ಬಗೆಯನ್ನು ಹೊಂದಿದೆ.

೯೬. ಭೃಗು, ಮರೀಚಿ, ಅತ್ರಿ, ಅಂಗಿರ, ಪುಲಹ, ಕ್ರತು, ಮನು, ದಕ್ಷ, ವಸಿಷ್ಠ ಮತ್ತು ಪುಲಸ್ತ್ಯ ಎಂಬ ಮಹರ್ಷಿಗಳು ಹಿಂದೆ ಹೇಳಿದಂತೆ ಬ್ರಹ್ಮನ ಮಾನಸ ಪುತ್ರರಾಗಿ ಜನಿಸಿದವರಾಗಿದ್ದಾರೆ.

೯೭. ಇವರು ಸ್ವತಂತ್ರರಾಗಿ ಬ್ರಹ್ಮ ಮಾನಸಪುತ್ರರಾಗಿ ಜನಿಸಿದ್ದರಿಂದಲೂ ಋಷಿಗಳಲ್ಲಿ ಬಹು ಪ್ರಶಸ್ತರಾಗಿರುವುದರಿಂದಲೂ ಮಹರ್ಷಿಗಳಾಗಿರುವರು.

೯೮. ಈಶ್ವರಾಂಶದವರ ಔರಸಪುತ್ರರಾಗಿ ಜನಿಸಿದ ಋಷಿಗಳ ಪರಂಪರೆಯನ್ನು ಕೇಳಿರಿ. ಕಾವ್ಯ, ಬೃಹಸ್ಪತಿ, ಕಶ್ಯಪ ಮತ್ತು ಚ್ಯವನ ಮಹರ್ಷಿಗಳು ಔರಸಪುತ್ರರ ಗುಂಪಿಗೆ ಸೇರಿದವರಾಗಿದ್ದಾರೆ.

೯೯. ಉತಥ್ಯ, ವಾಮದೇವ, ಅಪಾಸ್ಯ, ಉಶಿಜ, ಕರ್ದಮ, ವಿಶ್ರವ, ಶಕ್ತಿ, ವಾಲಖಿಲ್ಯ ಮತ್ತು ಅರ್ವತ ಎಂಬ ಋಷಿಗಳು ಈಶ್ವರರಿಂದ ಜನಿಸಿದ ಔರಸಪುತ್ರರು.

೧೦೦. ಇವರು ತಪೋನುಷ್ಠಾನದಿಂದ ಋಷಿತ್ವವನ್ನು ಹೊಂದಿರುವ ಋಷಿಗಳಾಗಿರುವರು. ಋಷಿಗಳಿಂದ ಗರ್ಭೋತ್ಪನ್ನರಾದ ಋಷೀಕರೆಂಬ ಋಷಿಪುತ್ರರನ್ನು ಕೇಳಿರಿ.

ವತ್ಸರೋ ನಗ್ರೃಹೂಶ್ಚೈವ ಭರದ್ವಾಜಸ್ತಥೈವ ಚ ।
ಋಷಿರ್ದೀರ್ಘತಮಾಶ್ಚೈವ ಬೃಹದುಕ್ಥಃ ಶರದ್ವತಃ ॥ ೧೦೧ ॥

ವಾಜಶ್ರವಾಃ ಶುಚಿಶ್ಚೈವ ವಶ್ಯಾಶ್ವಶ್ಚ ಪರಾಶರಃ ।
ದಧೀಚಃ ಶಂಶಪಾಶ್ಚೈವ ರಾಜಾ ವೈಶ್ರವಣಸ್ತಥಾ ॥ ೧೦೨ ॥

ಇತ್ಯೇತೇ ಋಷಿಕಾಃ ಪ್ರೋಕ್ತಾಸ್ತೇ ಸತ್ಯಾದೃಷಿತಾಂ ಗತಾಃ ।
ಈಶ್ವರಾ ಋಷಯಶ್ಚೈವ ಋಷಿಕಾಶ್ಚೈವ ತೇ ಸ್ಮೃತಾಃ ॥ ೧೦೩ ॥

ಏತೇ ಮಂತ್ರಕೃತಃ ಸರ್ವೇ ಕೃತ್ಸ್ನಶಸ್ತಾನ್ ನಿಬೋಧತ ।
ಭೃಗುಃ ಕಾವ್ಯಃ ಪ್ರಚೇತಾಶ್ಚ ಋಚೀಕೋ ಹ್ಯಾತ್ಮವಾನಪಿ ॥ ೧೦೪ ॥

ಔರ್ವೋಽಥ ಜಮದಗ್ನಿಶ್ಚ ವಿದಃ ಸಾರಸ್ವತಸ್ತಥಾ ।
ಆರ್ಷ್ಟಿಷೇಣೋ ಯುಧಾಜಿಚ್ಚ ವೀತಹವ್ಯಸುವರ್ಚಸೌ ॥ ೧೦೫ ॥

ವೈನ್ಯಃ ಪೃಥುರ್ದಿವೋದಾಸೋ ಬಾಧ್ಯಶ್ವೋ ಗೃತ್ಸಶೌನಕೌ ।
ಏಕೋನವಿಂಶತಿರ್ಹ್ಯೇತೇ ಭೃಗವೋ ಮಂತ್ರವಾದಿನಃ ॥ ೧೦೬ ॥

---

೧೦೧-೧೦೨-೧೦೩. ವತ್ಸರ, ನಗ್ರೃಹು, ಭರದ್ವಾಜ, ದೀರ್ಘತಮ, ಬೃಹದುಕ್ಥ, ಶರದ್ವತ, ವಾಜಶ್ರವ, ಶುಚಿ, ವಶ್ಯಾಶ್ವ, ಪರಾಶರ, ದಧೀಚ, ಶಂಶಪ ಮತ್ತು ವೈಶ್ರವಣರಾಜ ಎಂಬುವರು ಋಷಿಕರೆಂದು ಹೇಳಲ್ಪಟ್ಟಿರುವರು. ಇವರೆಲ್ಲರೂ ಸತ್ಯವಚನವೆಂಬ ಧರ್ಮಾನುಷ್ಠಾನದಿಂದ ಋಷಿತ್ವವನ್ನು ಹೊಂದಿರುವರು. ಇವರು ಲೋಕವ್ಯವಸ್ಥಾಪಕರಾದ ಈಶ್ವರ, ಋಷಿ ಮತ್ತು ಋಷಿಕರೆಂದು ಸ್ಮರಿಸಲ್ಪಟ್ಟಿರುವರು.

೧೦೪-೧೦೫-೧೦೬. ಇನ್ನು ಮುಂದೆ ಹೇಳಲ್ಪಡುವವರೆಲ್ಲರೂ ಮಂತ್ರಕಾರರಾದ ಮಹರ್ಷಿಗಳಾಗಿರುವರು. ಅವರನ್ನು ಸಂಪೂರ್ಣವಾಗಿ ಕೇಳಿ ತಿಳಿಯಿರಿ. ಭೃಗು, ಕಾವ್ಯ, ಪ್ರಚೇತ, ಋಚೀಕ, ಆತ್ಮವಾನ್, ಔರ್ವ, ಜಮದಗ್ನಿ, ವಿದ, ಸಾರಸ್ವತ, ಆರ್ಷ್ಟಿಷೇಣ, ಯುಧಾಜಿತ್, ವೀತಹವ್ಯ, ಸುವರ್ಚಸ, ವೈನ್ಯ, ಪೃಥು, ದಿವೋದಾಸ, ಬಾಧ್ಯಶ್ವ, ಗೃತ್ಸ ಮತ್ತು ಶೌನಕ ಎಂಬ ಹತ್ತೊಂಭತ್ತು ಮಂದಿ ಭೃಗುಮುನಿಯ ವಂಶಸಂಭೂತರಾದ ಮಹರ್ಷಿಗಳು ಮಂತ್ರಗಳನ್ನು ಕಂಡುಹಿಡಿದಿರುವವರಾಗಿರುವರು.

ಅಂಗಿರಾ ವೈದ್ಯಗಶ್ಚೈವ ಭರದ್ವಾಜೋಽಥ ಬಾಷ್ಕಲಿಃ ।
ಋತವಾಕಸ್ತಥಾ ಗರ್ಗಃ ಶಿನಿಃ ಸಂಕೃತಿರೇವ ಚ　॥ ೧೦೭ ॥

ಪುರುಕುತ್ಸಶ್ಚ ಮಾಂಧಾತಾ ಹ್ಯಂಬರೀಷಸ್ತಥೈವ ಚ ।
ಯುವನಾಶ್ವಃ ಪೌರುಕುತ್ಸಸ್ತ್ರಸದಸ್ಯುಶ್ಚ ದಸ್ಯುಮಾನ್　॥ ೧೦೮ ॥

ಆಹಾರ್ಯೋ ಹ್ಯಜಮೀಢಶ್ಚ ತುಕ್ಷಯಃ ಕಪಿರೇವ ಚ ।
ವೃಷಾದರ್ಭೋ ವಿರೂಪಾಕ್ಷಃ ಕಣ್ವಶ್ಚೈವಾಥ ಮುದ್ಗಲಃ　॥ ೧೦೯ ॥

ಉತಥ್ಯಶ್ಚ ಸನದ್ವಾಜಸ್ತಥಾ ವಾಜಶ್ರವಾ ಅಪಿ ।
ಅಯಾಸ್ಯಶ್ಚಕ್ರವರ್ತೀ ಚ ವಾಮದೇವಸ್ತಥೈವ ಚ　॥ ೧೧೦ ॥

ಅಸಿಜೋ ಬೃಹದುಕ್ಥಶ್ಚ ಋಷಿರ್ದೀರ್ಘತಮಾಸ್ತಥಾ ।
ಕಕ್ಷೀವಾಂಶ್ಚ ತ್ರಯಸ್ತ್ರಿಂಶತ್ ಸ್ಮೃತಾ ಹ್ಯಾಂಗಿರಸಾ ವರಾಃ　॥ ೧೧೧ ॥

ಏತೇ ಮಂತ್ರಕೃತಃ ಸರ್ವೇ ಕಾಶ್ಯಪಾಂಸ್ತು ನಿಬೋಧತ ।
ಕಾಶ್ಯಪಶ್ಚೈವ ವತ್ಸಾರೋ ನೈಧ್ರುವೋ ರೈಭ್ಯ ಏವ ಚ　॥ ೧೧೨ ॥

ಅಸಿತೋ ದೇವಲಶ್ಚೈವ ಷಡೇತೇ ಬ್ರಹ್ಮವಾದಿನಃ ।
ಅತ್ರಿರರ್ಧಸನಶ್ಚೈವ ಶ್ಯಾವಾಶ್ವಶ್ಚ ಗವಿಷ್ಠಿರಃ　॥ ೧೧೩ ॥

---

೧೦೭-೧೦೮-೧೦೯-೧೧೦. ಅಂಗಿರಾ, ವೈದ್ಯಗ, ಭರದ್ವಾಜ, ಬಾಷ್ಕಲಿ, ಋತವಾಕ, ಗರ್ಗ, ಶಿನಿ, ಸಂಕೃತಿ, ಪುರುಕುತ್ಸ, ಮಾಂಧಾತಾ, ಅಂಬರೀಷ, ಯುವನಾಶ್ವ, ಪೌರುಕುತ್ಸ, ತ್ರಸದಸ್ಯು, ದಸ್ಯುಮಾನ್, ಆಹಾರ್ಯ, ಅಜಮೀಢ, ತುಕ್ಷಯ, ಕಪಿ, ವೃಷಾದರ್ಭ, ವಿರೂಪಾಕ್ಷ, ಕಣ್ವ, ಮುದ್ಗಲ, ಉತಥ್ಯ, ಸನದ್ವಾಜ, ವಾಜಶ್ರವ, ಅಯಾಸ್ಯ, ಚಕ್ರವರ್ತಿ, ವಾಮದೇವ, ಅಸಿಜ, ಬೃಹದುಕ್ಥ, ದೀರ್ಘತಮಾ ಮತ್ತು ಕಕ್ಷೀವಾನ್ ಎಂಬ ಮೂವತ್ತಮೂರು ಮಂದಿ ಮುನಿಗಳು ಅಂಗಿರಗೋತ್ರೋತ್ಪನ್ನರಾದವರಲ್ಲಿ ಅಗ್ರಗಣ್ಯರಾದ ಮಂತ್ರಜ್ಞರಾಗಿರುವರು.

೧೧೨-೧೧೩. ಇದೇ ರೀತಿಯಾಗಿ ಕಾಶ್ಯಪ ಮುನಿವೃಂದಕ್ಕೆ ಸೇರಿದ ಮಂತ್ರಕಾರ ಮುನಿಗಳನ್ನು ನನ್ನಿಂದ ಕೇಳಿ ತಿಳಿಯಿರಿ. ಕಾಶ್ಯಪ, ವತ್ಸಾರ, ನೈಧ್ರುವ, ರೈಭ್ಯ, ಅಸಿತ, ಮತ್ತು ದೇವಲ ಎಂಬುವರು ಬ್ರಹ್ಮವಾದಿಗಳೂ ಕಾಶ್ಯಪರ ಗುಂಪಿಗೆ ಸೇರಿದವರೂ ಆದ ಆರುಜನ ಮಂತ್ರಕಾರರಾದ ಮುನಿಗಳು.

ಆವಿಹೋತ್ರ ಋಷಿರ್ಧೀಮಾಂಸ್ತಥಾ ಪೂರ್ವಾತಿಥಿಶ್ಚ ಸಃ ।
ಇತ್ಯೇತೇ ಚಾತ್ರಯಃ ಪ್ರೋಕ್ತಾ ಮಂತ್ರಕಾರಾ ಮಹರ್ಷಯಃ॥೧೧೪ ॥

ವಸಿಷ್ಠಶ್ಚೈವ ಶಕ್ತಿಶ್ಚ ತಥೈವ ಚ ಪರಾಶರಃ ।
ಚತುರ್ಥ ಇಂದ್ರಪ್ರಮತಿಃ ಪಂಚಮಶ್ಚ ಭರದ್ವಸುಃ ॥ ೧೧೫ ॥

ಷಷ್ಠಶ್ಚ ಮೈತಾವರುಣಿಃ ಕಂಡಿನಃ ಸಪ್ತಮಸ್ತಥಾ ।
ಇತಿ ಸಪ್ತ ವಸಿಷ್ಠಾಶ್ಚ ವಿಜ್ಞೇಯಾ ಬ್ರಹ್ಮವಾದಿನಃ ॥ ೧೧೬ ॥

ವಿಶ್ವಮಿತ್ರಸ್ತು ಗಾಧೇಯೋ ದೇವರಾತಸ್ತಥೋದ್ಗಲಃ ।
ತಥಾ ವಿದ್ವಾನ್ ಮಧುಚ್ಛಂದಾ ಋಷಿಶ್ಚಾನ್ಯೋಽಘಮರ್ಷಣಃ
॥ ೧೧೭ ॥

ಅಷ್ಟಕೋಲೋಹಿತಶ್ಚೈವ ಕತಃ ಕೊಲಶ್ಚ ತಾವುಭೌ ।
ದೇವಶ್ರವಾಸ್ತಥಾ ರೇಣುಃ ಪೂರಣೋಽಥ ಧನಂಜಯಃ ॥ ೧೧೮ ॥

ತ್ರಯೋದಶೈತೇ ಧರ್ಮಿಷ್ಠಾ ವಿಜ್ಞೇಯಾಃ ಕುಶಿಕಾವರಾಃ ।
ಅಗಸ್ತ್ಯೋ ಯೋ ದೃಢಾಯುಶ್ಚ ವಿಧ್ಮವಾಹಸ್ತಥೈವ ಚ ॥ ೧೧೯ ॥

ಬ್ರಹ್ಮಿಷ್ಠಾಗಸ್ತಪಾ ಹ್ಯೇತೇ ತ್ರಯಃ ಪರಮಕೀರ್ತಯಃ ।
ಮನುರ್ವೈವಸ್ವತಶ್ಚೈವ ಐಲೋ ರಾಜಾ ಪುರೂರವಾಃ ॥ ೧೨೦ ॥

---

೧೧೪. ಅತ್ರಿ, ಅರ್ಚನಸ, ಶ್ಯಾವಾಶ್ವ, ಗವಿಷ್ಠಿರ, ಆವಿಹೋತ್ರ, ಧೀಮಾನ್, ಮತ್ತು ಪೂರ್ವಾತಿಥಿ ಎಂಬುವರು ಆತ್ರೇಯರ ಗುಂಪಿಗೆ ಸೇರಿರುವ ಮಂತ್ರಕಾರ ಮಹರ್ಷಿಗಳಾಗಿರುವರು.

೧೧೫-೧೧೬. ವಸಿಷ್ಠ, ಶಕ್ತಿ, ಪರಾಶರ, ಇಂದ್ರಪ್ರಮತಿ, ಭರದ್ವಸು, ಮೈತ್ರಾವರುಣಿ ಮತ್ತು ಕಂಡಿನ ಎಂಬ ಬ್ರಹ್ಮವಾದಿಗಳಾದ ಏಳುಮಂದಿ ಮಹರ್ಷಿಗಳು ವಾಸಿಷ್ಠಮುನಿಗಣಕ್ಕೆ ಸೇರಿರುವರು.

೧೧೭-೧೧೮. ಗಾಧಿ ಪುತ್ರನಾದ ವಿಶ್ವಾಮಿತ್ರ, ದೇವರಾತ, ಉದ್ಗಲ, ಮಧುಚ್ಛಂದ, ಅಘಮರ್ಷಣ, ಅಷ್ಟಕ, ಲೋಹಿತ, ಕತ, ಕೋಲ, ದೇವಶ್ರವ, ರೇಣು, ಪೂರಣ ಮತ್ತು ಧನಂಜಯ ಎಂಬ ಹದಿಮೂರುಮಂದಿ ಕುಶಿಕ ವಂಶದಲ್ಲಿ ಹುಟ್ಟಿದ ಮುನಿಗಳು ಧರ್ಮಿಷ್ಠರೆಂದು ತಿಳಿಯಬೇಕು.

೧೧೯-೧೨೦. ಅಗಸ್ತ್ಯ, ದೃಢಾಯು ಮತ್ತು ವಿಧ್ಮವಾಹ ಈ ಮೂರುಮಂದಿ

ಕ್ಷತ್ರಿಯಾಣಾಂ ವರಾವೇತೌ ವಿಜ್ಞೇಯೌ ಮಂತ್ರವಾದಿನೌ ।
ಭಲಂದನಶ್ಚ ವತ್ಸಶ್ಚ ಸಂಕೀಲಶ್ಚೈವ ತೇ ತ್ರಯಃ ॥ ೧೨೧ ॥

ಏತೇ ಮಂತ್ರಕೃತಶ್ಚೈವ ವೈಶ್ಯಾನಾಂ ಪ್ರವರಾಃ ಸ್ಮೃತಾಃ ।
ಇತ್ಯೇಷಾನವತಿಃ ಪ್ರೋಕ್ತಾ ಮಂತ್ರಾ ಯೈರ್ಋಷಿಭಿಃ ಕೃತಾಃ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಋಷಿಪುತ್ರಾನ್ನಿಬೋಧತ ॥ ೧೨೨ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ದ್ವಾತ್ರಿಂಶತ್ತಮೋಽಧ್ಯಾಯಃ

---

ಅಗಸ್ತ್ಯವಂಶಕ್ಕೆ ಸೇರಿದ ಬ್ರಹ್ಮವಾದಿಗಳಾದ ಮಹರ್ಷಿಗಳಾಗಿ ಪರಮ ಕೀರ್ತಿ ಸಂಪನ್ನರಾಗಿರುವರು.

೧೨೧. ಸೂರ್ಯಪುತ್ರನಾದ ಮನುರಾಜ, ಇಲಾಪುತ್ರನಾದ ಪುರೂರವರಾಜ ಎಂಬಿಬ್ಬರು ಕ್ಷತ್ರಿಯ ಜಾತಿಯಲ್ಲಿ ಪ್ರವರರಾದ ಮಂತ್ರಜ್ಞ ಮಹರ್ಷಿಗಳಾಗಿರುವರು.

೧೨೨. ಭಲಂದನ, ವತ್ಸ ಮತ್ತು ಸಂಕೀಲರೆಂಬುವರು ವೈಶ್ಯಜಾತಿಯಲ್ಲಿ ಪ್ರವರರಾದ ಮಂತ್ರಜ್ಞರಾಗಿರುವರು. ಈ ರೀತಿಯಾಗಿ ಬ್ರಾಹ್ಮಣ-ಕ್ಷತ್ರಿಯ ಮತ್ತು ವೈಶ್ಯಜಾತಿಗಳಲ್ಲಿ ಪ್ರವರರಾಗಿ ಹುಟ್ಟಿ ಮಂತ್ರಕಾರ ಪದವಿಯಲ್ಲಿದ್ದ ಮಹರ್ಷಿಗಳು ಒಟ್ಟಾಗಿ ಸೇರಿ ತೊಂಭತ್ತು ಮಂದಿ ಇರುವರೆಂದು ತಿಳಿಯಬೇಕು. ಮುಂದೆ ಋಷಿಗಳ ಪುತ್ರರನ್ನು ಕ್ರಮವಾಗಿ ಕೇಳಿರಿ.

ಬ್ರಹ್ಮಾಂಡಪುರಾಣದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

---

# ತ್ರಯಸ್ತ್ರಿಂಶತ್ತಮೋಽಧ್ಯಾಯಃ

**ಸೂತ ಉವಾಚ :—**

**ಋಷಿಕಾಣಾಂ ಸುತಾಶ್ಚಾಪಿ ವಿಜ್ಞೇಯಾ ಋಷಿಪುತ್ರಕಾಃ ।**
**ಬ್ರಾಹ್ಮಣಾನಾಂ ಪ್ರವಕ್ತಾರೋ ನಾಮತಶ್ಚ ನಿಬೋಧತ ॥ ೧ ॥**

**ಸಪ್ರಧಾನಾಃ ಪ್ರವಕ್ಷ್ಯಂತೇ ಸಮಾಸಾಚ್ಚ ಶುತರ್ಷಯಃ ।**
**ಬಹ್ವೃಚೋ ಭಾರ್ಗವಃ ಪೈಲಃ ಸಾಂಕೃತ್ಯೋ ಜಾಜಲಿಸ್ತಥಾ ॥ ೨ ॥**

**ಸಂಧ್ಯಾಸ್ತಿರ್ಮಾಠರಶ್ಚೈವ ಯಾಜ್ಞವಲ್ಕ್ಯಃ ಪರಾಶರಃ ।**
**ಉಪಮನ್ಯುರಿಂದ್ರಪ್ರಮತಿರ್ಮಾಂಡೂಕಿಃ ಶಾಕಲಿಶ್ಚ ಸಃ ॥ ೩ ॥**

**ಬಾಷ್ಕಲಿಃ ಶಾಕಪೂಣಿಶ್ಚ ನೈಲಃ ಪೈಲೋಽಲಕಸ್ತಥಾ ।**
**ಪನ್ನಗಾಃ ಪಕ್ಷಗಂತಾಶ್ಚ ಷಡಶೀತಿಃ ಶ್ರುತರ್ಷಯಃ ॥ ೪ ॥**

---

ಸೂತಮುನಿಯು ಇಂತೆಂದನು :—

೧. ಋಷಿಕರಿಂದ ಜನಿಸಿದ ಪ್ರಜೆಗಳನ್ನು ಋಷಿಪುತ್ರಕರೆಂದು ಅರಿಯಬೇಕು. ಅವರು ವೇದಗಳ ಒಂದು ಭಾಗವಾದ ಬ್ರಾಹ್ಮಣ ಗ್ರಂಥಗಳನ್ನು ಪ್ರವಚನ ಮಾಡಿರುವರು. ಅವರ ಹೆಸರನ್ನು ನನ್ನಿಂದ ಕೇಳಿ ತಿಳಿಯಿರಿ.

೨-೩-೪. ಆ ಮುನಿವೃಂದದಲ್ಲಿ ಪ್ರಧಾನಭೂತರಾಗಿರುವ, ವೇದಗಳನ್ನು ಸಾಂಗವಾಗಿ ಅಧ್ಯಯನ ಮಾಡಿ ಶ್ರುತರ್ಷಿಯೆಂದು ಕರೆಯಲ್ಪಡುವವರನ್ನು ಸಂಗ್ರಹವಾಗಿ ಹೇಳುವೆನು ಕೇಳಿರಿ. ಬಹ್ವೃಚ, ಭಾರ್ಗವ, ಪೈಲ, ಸಾಂಕೃತ್ಯ, ಜಾಜಲಿ, ಸಂಧ್ಯಾಸ್ತಿ, ಮಾಠರ, ಯಾಜ್ಞವಲ್ಕ್ಯ, ಪರಾಶರ, ಉಪಮನ್ಯು, ಇಂದ್ರಪ್ರಮತಿ, ಮಾಂಡೂಕಿ, ಶಾಕಲಿ, ಬಾಷ್ಕಲಿ, ಶಾಕಪೂಣಿ, ನೈಲ, ಪೈಲ, ಅಲಕ, ಪನ್ನಗ ಮತ್ತು ಪಕ್ಷಗಂತ-ಮುಂತಾದ ಎಂಭತ್ತಾರುಮಂದಿ ಮಹರ್ಷಿಗಳು ಶ್ರುತರ್ಷಿಯೆಂದು ಪ್ರಸಿದ್ಧರಾಗಿರುವರು. ಈ ದ್ವಿಜಮುನಿಗಳು ಬಹ್ವೃಚ ಶಾಖೆಯನ್ನು ಅಧ್ಯಯನ-ಪ್ರವಚನ ಮಾಡಿದವರಲ್ಲಿ ಮುಖ್ಯರಾದ ಮಹರ್ಷಿಗಳಾಗಿರುವರು.

ಏತೇ ದ್ವಿಜಾತಯೋ ಮುಖ್ಯಾ ಬಹ್ವೃಚಾನಾಂ ಶ್ರುತರ್ಷಯಃ ।
ವೈಶಂಪಾಯನಲೌಹಿತ್ಯೌ ಕಂಠಕಾಲಾವಶಾವಥ ॥ ೫ ॥

ಶ್ಯಾಮಾಪತಿಃ ಪಲಾಂಡುಶ್ಚ ಆಲಂಬಿಃ ಕಮಲಾಪತಿಃ ।
ತೇಷಾಂ ಶಿಷ್ಯಾಃ ಪ್ರಶಿಷ್ಯಾಶ್ಚ ಷಡಶೀತಿಃ ಶ್ರುತರ್ಷಯಃ ॥ ೬ ॥

ಏತೇ ದ್ವಿಜರ್ಷಯಃ ಪ್ರೋಕ್ತಾಶ್ಚರಕಾಧ್ವರ್ಯವೋ ದ್ವಿಜಾಃ ।
ಜೈಮಿನಿಃ ಸಭರದ್ವಾಜಃ ಕಾವ್ಯಃ ಪೌಷ್ಯಂಜಿರೇವ ಚ ॥ ೭ ॥

ಹಿರಣ್ಯನಾಭಃ ಕೌಶಿಲ್ಯೋ ಲೌಗಾಕ್ಷಿಃ ಕುಸುಮಿಸ್ತಥಾ ।
ಲಾಂಗಲೀ ಶಾಲಿಹೋತ್ರಶ್ಚ ಶಕ್ತಿರಾಜಶ್ಚ ಭಾರ್ಗವಃ ॥ ೮ ॥

ಸಾಮಗಾನಾಮಥಾಚಾರ್ಯ ಐಲೋ ರಾಜಾ ಪುರೂರವಾಃ ।
ಷಟ್ಚತ್ವಾರಿಂಶದನ್ಯೇ ವೈ ತೇಷಾಂ ಶಿಷ್ಯಾಃ ಶ್ರುತರ್ಷಯಃ ॥ ೯ ॥

ಕೌಶೀತಿಃ ಕಂಕಮುದ್ಗಶ್ಚ ಕುಂಡಕಃ ಸಪರಾಶರಃ ।
ಲೋಭಾಲೋಭಶ್ಚ ಧರ್ಮಾತ್ಮಾ ತಥಾ ಬ್ರಹ್ಮಬಲಶ್ಚ ಸಃ ॥ ೧೦ ॥

ಕ್ರಂಥಲೋಽಥೋ ಮದಗಲೋ ಮಾರ್ಕಂಡೇಯೋಽಥ ಧರ್ಮವಿತ್ ।
ಇತ್ಯೇತೇ ನವತಿಜ್ಞೇಯಾ ಹೋತ್ರವದ್ಬ್ರಹ್ಮಚಾರಿಣಃ ॥ ೧೧ ॥

---

೫-೬. ವೈಶಂಪಾಯನ, ಲೌಹಿತ್ಯ, ಕಂಠಕಾಲ, ಅವಶ, ಶ್ಯಾಮಾಪತಿ, ಪಲಾಂಡು, ಆಲಂಬಿ ಮತ್ತು ಕಮಲಾಪತಿ ಎಂಬುವರೂ ಮತ್ತು ಅವರ ಶಿಷ್ಯ, ಪ್ರಶಿಷ್ಯರೂ ಸೇರಿ ಎಂಭತ್ತಾರುಮಂದಿಯು ಶ್ರುತರ್ಷಿ ಎಂಬ ಸಂಕೇತವನ್ನು ಹೊಂದಿರುವರು. ದ್ವಿಜರೆ! ಈ ದ್ವಿಜಶ್ರೇಷ್ಠರಾದ ಮುನಿಗಳು ಚರಕಾಧ್ವರ್ಯುಗಳೆಂದು ಹೇಳಲ್ಪಟ್ಟಿರುವರು.

೭-೮-೯. ಜೈಮಿನಿ, ಭರದ್ವಾಜ, ಕಾವ್ಯ, ಪೌಷ್ಯಂಜಿ, ಹಿರಣ್ಯನಾಭ, ಕೌಶಿಲ್ಯ, ಲೌಗಾಕ್ಷಿ, ಕುಸುಮಿ, ಲಾಂಗಲಿ, ಶಾಲಿಹೋತ್ರ, ಶಕ್ತಿರಾಜ, ಭಾರ್ಗವ ಮತ್ತು ಐಲ ಪುರೂರವರಾಜ—ಇವರು ಸಾಮವೇದಪ್ರವರ್ತಕರಾದ ಆಚಾರ್ಯರಾಗಿರುವರು. ಮತ್ತು ಇತರ ಅನೇಕ ಶಿಷ್ಯರು ಸೇರಿ ನಲವತ್ತಾರು ಮಂದಿಯು ಶ್ರುತರ್ಷಿಗಳೆಂದೆನಿಸಿರುವರು.

೧೦-೧೧. ಕೌಶೀತಿ, ಕಂಕಮುದ್ಗ, ಕುಂಡಕ, ಪರಾಶರ, ಲೋಭ, ಅಲೋಭ,

ಚರಕಾಧ್ವರ್ಯವಶ್ಚಾಪಿ ಹ್ಯನುಮಂತ್ರಂ ತು ಬ್ರಾಹ್ಮಣಮ್ ।
ಚಲೂಭಿಃ ಸುಮತಿಶ್ಚೈವ ತಥಾ ದೇವವರಶ್ಚ ಯಃ ॥ ೧೨ ॥

ಅನುಕೃಷ್ಣಸ್ತಥಾಯುಶ್ಚ ಅನುಭೂಮಿಸ್ತಥೈವ ಚ ।
ತಥಾಪ್ರೀತಃ ಕೃಶಾಶ್ವಶ್ಚ ಸುಮಾಲಿರ್ಬಾಷ್ಕಲಿಸ್ತಥಾ ॥ ೧೩ ॥

ಚರಕಾಧ್ವರ್ಯುಕಾಧ್ವರ್ಯುರ್ನಮಸ್ಯು ಬ್ರಹ್ಮಚಾರಿಣಃ ।
ವೈಯಾಸಕಿಃ ಶುಕೋ ವಿದ್ವಾಂಲ್ಲೌಕಿರ್ಭೂರಿಶ್ರವಾಸ್ತಥಾ ॥ ೧೪ ॥

ಸೋಮಾವಿರತುನಾಂತಕ್ಯಸ್ತಥಾ ಧೌಮ್ಯಶ್ಚ ಕಾಶ್ಯಪಃ ।
ಆರಣ್ಯಾ ಇಲಕಶ್ಚೈವ ಉಪಮನ್ಯುರ್ವಿದಸ್ತಥಾ ॥ ೧೫ ॥

ಭಾರ್ಗವೋ ಮಧುಕಃ ಪಿಂಗಃ ಶ್ವೇತಕೇತುಸ್ತಥೈವ ಚ ।
ಪ್ರಜಾದರ್ಪಃ ಕಹೋಡಶ್ಚ ಯಾಜ್ಞವಲ್ಕ್ಯೋಽಥ ಶೌನಕಃ ॥ ೧೬ ॥

---

ಧರ್ಮಾತ್ಮಾ, ಬ್ರಹ್ಮಬಲ, ಕ್ರಂಥಲ, ಮದಗಲ, ಮಾರ್ಕಂಡೇಯ ಮತ್ತು ಧರ್ಮವಿತ್ ಎಂಬ ಆದಿಯಿಂದ ಗಣಿಸಲ್ಪಟ್ಟ ತೊಂಭತ್ತುಮಂದಿಯು ಹೌತ್ರವೇದವನ್ನು ಅಧ್ಯಯನ-ಪ್ರವಚನ ಮಾಡುವ ಬ್ರಹ್ಮಚಾರಿಗಳೆಂದು ಹೇಳಲ್ಪಟ್ಟಿರುವರು.

೧೨-೧೩. ಮುಂದೆ ಚರಕಾಧ್ವರ್ಯುಗಳೆಂಬ ಅನುಮಂತ್ರಣ ಬ್ರಾಹ್ಮಣಗ್ರಂಥದ ಪ್ರವಚನಕಾರರನ್ನು ಕೇಳಿರಿ. ಚಲೂಭಿ, ಸುಮತಿ, ದೇವವರ, ಅನುಕೃಷ್ಣ, ಆಯು, ಅನುಭೂಮಿ, ಆಪ್ರೀತ, ಕೃಶಾಶ್ವ, ಸುಮಾಲಿ ಮತ್ತು ಬಾಷ್ಕಲಿ ಎಂಬುವರು ಅಧ್ವರ್ಯು ಕರ್ಮವನ್ನು ಪ್ರತಿಪಾದಿಸುವ ವೇದ ಪ್ರವಚನಾಧಿಕಾರಿಗಳಾದ ಚರಕಾಧ್ವರ್ಯುಗಳೆಂಬ ಬ್ರಹ್ಮಚಾರಿಗಳೆಂದು ಸ್ಮರಿಸಲ್ಪಟ್ಟಿರುವರು.

೧೪-೧೫-೧೬. ವ್ಯಾಸಪುತ್ರನಾದ ಶುಕಋಷಿ, ಲೋಕವೆಂಬುವನ ಪುತ್ರನಾದ ಭೂರಿಶ್ರವ, ಸೋಮಾವಿ, ರತುನಾಂತಕ್ಯ, ಧೌಮ್ಯ, ಕಾಶ್ಯಪ, ಆರಣ್ಯಾ, ಇಲಕ ಉಪಮನ್ಯು, ವಿದ, ಭಾರ್ಗವ, ಮಧುಕ, ಪಿಂಗ, ಶ್ವೇತಕೇತು, ಪ್ರಜಾದರ್ಪ, ಕಹೋಡ, ಯಾಜ್ಞವಲ್ಕ್ಯ, ಶೌನಕ, ಅನಂಗ ಮತ್ತು ನಿರತಾಲ ಎಂಬುವರು ಮಧ್ಯಮಾಧ್ವರ್ಯುಗಳೆಂದು ಸಂಕೇತವನ್ನು ಹೊಂದಿರುವರು.

ಅನಂಗೋ ನಿರಕಾಲಶ್ಚ ಮಧ್ಯಮಾಧ್ವರ್ಯವಸ್ತು ತೇ ।
ಅದಿತಿರ್ದೇವಮಾತಾ ಚ ಜಲಾಪಾ ಚೈವ ಮಾನವೀ ॥ ೧೭ ॥

ಉರ್ವಶೀ ವಿಶ್ವಯೋಷಾ ಚ ಹ್ಯಪ್ಸರಃಪ್ರವರೇ ಶುಭೇ ।
ಮುದ್ಗಲಾ ಚಾತುಜೀವ್ಯೈವ ತಾರಾ ಚೈವ ಯಶಸ್ವಿನೀ ॥ ೧೮ ॥

ಪ್ರಾತಿಮೇಧೀ ಚ ಮಾರ್ಗಾ ಚ ಸುಜಾತಾ ಚ ಮಹಾತಪಾ ।
ಲೋಪಾಮುದ್ರಾ ಚ ಧರ್ಮಜ್ಞಾ ಯಾ ಚ ಕೋಶೀತಿಕಾ ಸ್ಮೃತಾ ॥ ೧೯ ॥

ಏತಾಶ್ಚ ಬ್ರಹ್ಮವಾದಿನ್ಯ ಅಪ್ಸರೋರೂಪಸಮ್ಮತಾಃ ।
ಇತ್ಯೇತಾ ಮುಖ್ಯಶಃ ಪ್ರೋಕ್ತಾ ಮಯಾ ಚ ಋಷಿಪುತ್ರಕಾಃ ॥ ೨೦ ॥

ವೇದಶಾಖಾಪ್ರಣಯನಾಸ್ತತಸ್ತೇ ಋಷಯಃ ಸ್ಮೃತಾಃ ।
ಈಶ್ವರಾ ಮಂತ್ರವಕ್ತಾರ ಋಷಯೋ ಹ್ಯೃಷಿಕಾಸ್ತಥಾ ॥ ೨೧ ॥

ಋಷಿಪುತ್ರಾಃ ಪ್ರವಕ್ತಾರಃ ಕಲ್ಪಾನಾಂ ಬ್ರಾಹ್ಮಣಸ್ಯ ತು ।
ಈಶ್ವರಾಣಾಮೃಷೀಣಾಂ ಚ ಋಷಿಕಾಣಾಂ ಸಹಾತ್ಮಜೈಃ ॥ ೨೨ ॥

---

೧೭-೧೮-೧೯-೨೦. ಅದಿತಿ, ದೇವಮಾತಾ, ಜಲಾಪಾ, ಮಾನವೀ, ಉರ್ವಶೀ, ವಿಶ್ವಯೋಷಾ, ಮುದ್ಗಲಾ, ಚಾತುಜೀವಾ, ತಾರಾ, ಯಶಸ್ವಿನೀ, ಪ್ರಾತಿಮೇಧೀ, ಮಾರ್ಗಾ, ಸುಜಾತಾ, ಮಹಾತಪಾ, ಲೋಪಾಮುದ್ರಾ, ಧರ್ಮಜ್ಞಾ ಮತ್ತು ಕೋಶೀತಿಕಾ ಮುಂತಾದವರು ಅಪ್ಸರ ಸ್ತ್ರೀಯರ ರೂಪದಿಂದ ಆವಿರ್ಭವಿಸಿರುವ ಬ್ರಹ್ಮವಾದಿನಿಯರಾದ ಋಷಿಪುತ್ರಿಯರೆಂದು ತಿಳಿಯಬೇಕು. ಈ ರೀತಿಯಾಗಿ ಋಷಿಪುತ್ರರಲ್ಲಿ ಮುಖ್ಯರಾದವರನ್ನು ನಾನು ಹೇಳಿರುವೆನು.

೨೧. ಪ್ರಸಿದ್ಧವಾದ ವೇದಗಳ ನಾನಾ ಶಾಖೆಗಳನ್ನು ಪ್ರಣಯನ ಮಾಡಿರುವುದರಿಂದ ಆ ಮಹಾತ್ಮರು ಋಷಿ ಎಂದು ಸ್ಮರಿಸಲ್ಪಟ್ಟಿರುವರು. ಮಂತ್ರಗಳನ್ನು ಪ್ರವಚನ ಮಾಡುವ ಪ್ರಭಾವವುಳ್ಳ ಋಷಿಗಳು ಋಷಿಕರೆಂದು ಕರೆಯಲ್ಪಡುವರು.

೨೨. ಋಷಿಪುತ್ರರು ಕಲ್ಪವೆಂಬ ವೇದಾಂಗಗಳನ್ನೂ ಬ್ರಾಹ್ಮಣ ಗ್ರಂಥಗಳನ್ನೂ ಪ್ರವಚನ ಮಾಡಿರುವರು. ಈಶ್ವರ-ಋಷಿ-ಮತ್ತು ಋಷಿಕರ ವಂಶೀಕರಾದ ಪುತ್ರರೊಡಗೂಡಿ ಎಲ್ಲರೂ ವೇದ ವಾಙ್ಮಯ ಪ್ರವರ್ತಕರಾಗಿರುವರು.

ತಥಾ ವಾಕ್ಯಾನಿ ಜಾನೀಷ್ವ ಯಥೈಷಾಂ ಮಂತ್ರದೃಷ್ಟಯಃ ।
ತತ್ರಾಜ್ಞಾಯುಕ್ತಮದ್ವೈತಂ ದೀಪ್ತಂ ಗಂಭೀರಶಬ್ದವತ್ ॥ ೨೩ ॥

ಅತ್ಯಂತಮಪರೋಕ್ಷಂ ಚ ಲಿಂಗಂ ನಾಮ ತಥೈವ ಚ ।
ಸರ್ವಭೂತಾನ್ಯಭೂತಂ ಚ ಪರಿದಾನಂ ಚ ಯದ್ಭವೇತ್ ॥ ೨೪ ॥

ಕ್ವಚಿನ್ನಿರುಕ್ತಪ್ರೋಕ್ತಾರ್ಥಂ ವಾಕ್ಯಂ ಸ್ವಾಯಂಭುವಂ ವಿದುಃ ।
ಯತ್ಕಿಂಚಿನ್ಮಂತ್ರಸಂಯುಕ್ತಂ ತತ್ರ ನಾಮವಿಭಕ್ತಿಭಿಃ ॥ ೨೫ ॥

ಪ್ರತ್ಯಕ್ಷಾಭಿಹಿತಂ ಚೈವಮೃಷೀಣಾಂ ವಚನಂ ಮತಮ್ ।
ನೈಗಮೈರ್ವಿವಿಧೈಃ ಶಬ್ದೈರ್ನಿಪಾತೈರ್ಬಹುಲಂ ಚ ಯತ್ ॥ ೨೬ ॥

ಯಚ್ಚಾಪ್ಯಸ್ತಿ ಮಹದ್ವಾಕ್ಯಮೃಷಿಕಾಣಾಂ ವಚಃ ಸ್ಮೃತಮ್ ।
ಅವಿಸ್ಪಷ್ಟಪದಂ ಯಚ್ಚ ಯಚ್ಚ ಸ್ಯಾದ್ಬಹುಸಂಶಯಮ್ ॥ ೨೭ ॥

---

೨೩. ಋಷಿಗಳ ಮಂತ್ರದರ್ಶನದಿಂದ ಪ್ರಾದುರ್ಭವಿಸಿದ ವೇದವಾಕ್ಯಗಳ ನಾನಾ ಗತಿವಿಶೇಷವನ್ನು ಕೇಳಿರಿ. ಅವುಗಳಲ್ಲೆಲ್ಲ ಅದ್ವೈತಾತ್ಮ ಪ್ರತಿಪಾದಕವಾದ ವಾಕ್ಯ ಜಾಲವು ಗಂಭೀರವಾದ ಶಬ್ದಗಳಿಂದ ಕೂಡಿ ಪ್ರಕಾಶಮಯವಾಗಿರುವುದು.

೨೪. ಕೆಲವು ಮಂತ್ರವಾಕ್ಯಗಳು ಅತ್ಯಂತ ಅಪರೋಕ್ಷವಾದ ಲಿಂಗ-ನಾಮಗ ಳಿಂದ ಕೂಡಿರುವುದಾಗಿಯೂ ಸರ್ವ ಭೂತಗಳ ವಿಭೇದವನ್ನು ಪ್ರಕಟಗೊಳಿಸುವು ದಾಗಿಯೂ ಇರುವುವು. ಅವು ಆಯಾಯ ಭೂತವಸ್ತುವಿನ ಅಸಾಧಾರಣವಾದ ಧರ್ಮವನ್ನು ಪ್ರತಿಪಾದಿಸುವುದರಿಂದ ಬಹು ಸ್ಪಷ್ಟಾರ್ಥವಾಗಿರುವುವು.

೨೫. ಬ್ರಹ್ಮನಿಂದ ಉಪದಿಷ್ಟವಾದ ವೇದವಾಕ್ಯಗಳಲ್ಲಿ ಕೆಲವು ನಾಮಪದಗಳ ಮೇಲಿನ ವಿಭಕ್ತಿಗಳ ವ್ಯತ್ಯಾಸದಿಂದ ಕೂಡಿದ ಮಂತ್ರಗಳು ನಿರುಕ್ತವೆಂಬ ವೇದಾಂಗ ದಿಂದ ಹೇಳಲ್ಪಟ್ಟ ಅರ್ಥವನ್ನು ಪ್ರತಿಪಾದಿಸುವುದು ಎಂದು ಹೇಳುವರು.

೨೬. ಋಷಿಗಳ ವಚನರೂಪವಾದ ಮಂತ್ರಗಳು ಪ್ರತ್ಯಕ್ಷವಾದ ಅರ್ಥಾಭಿ ಧಾನದಿಂದ ಕೂಡಿರುವುದೂ ಮತ್ತು ನಿಗಮರೂಪವಾದ ವಿವಿಧ ಶಬ್ದಗಳ ಮತ್ತು ನಿಪಾತಶಬ್ದಗಳ ಸಂಘಟನೆಯಿಂದಲೂ ಕೂಡಿರುವುದು.

೨೭. ಸ್ಪಷ್ಟವಾದ ಅರ್ಥವನ್ನು ಬೋಧಿಸದಿರುವ ಅಥವಾ ಬಹು ಸಂಶಯ ಗರ್ಭಿತವಾದ ಅರ್ಥಗಳನ್ನು ನಿರ್ದೇಶಿಸುವ ಮಹತ್ತಾದ ವಾಕ್ಯಜಾತವು ಋಷಿಕರ ಮಂತ್ರದರ್ಶನದಿಂದ ಉಂಟಾದ ಮಂತ್ರವಾಕ್ಯಜಾತವೆಂದು ಸ್ಮರಿಸಲ್ಪಟ್ಟಿದೆ.

ಋಷಿಪುತ್ರವಚಸ್ತದ್ವೈ ಸರ್ವಾಶ್ಚ ಪರಿದೇವತಾಃ ।
ಹೇತುದೃಷ್ಟಾಂತಬಹುಲಂ ಚಿತ್ರಶಬ್ದಮಪಾರ್ಥಕಮ್ ॥ ೨೮ ॥

ಸರ್ವಾಸ್ತು ತಮಶಕ್ತಂ ಚ ವಾಕ್ಯಮೇತತ್ತು ಮಾನುಷಮ್ ।
ಮಿಶ್ರಾ ಇತಿ ಸಮಾಖ್ಯಾತಾಃ ಪ್ರಭಾವಾದೃಷಿತಾಂ ಗತಾಃ ॥ ೨೯ ॥

ಸಮುತ್ಕರ್ಷಾಪಕರ್ಷಾಭ್ಯಾಂ ಜಾತಿವ್ಯತ್ಯಾಸಸಂಭವಾಃ ।
ಭೂತಭವ್ಯಭವಜ್ಞಾನಂ ಜನ್ಮದುಃಖಚಿಕಿತ್ಸನಮ್ ॥ ೩೦ ॥

ಮಿಶ್ರಾಣಾಂ ತದ್ಭವೇದ್ವಾಕ್ಯಂ ಗುರೋರ್ಬಲಪ್ರವರ್ತನಮ್ ।
ಧರ್ಮಶಾಸ್ತ್ರಪ್ರಣೇತಾರೋ ಮಹಿಮ್ನಾ ಸರ್ವಗಾಶ್ಚ ವೈ ॥ ೩೧ ॥

ತಪಃಪ್ರಕರ್ಷಃ ಸುಮಹಾನ್ ಯೇಷಾಂ ತೇ ಋಷಯಃ ಸ್ಮೃತಾಃ ।
ಬೃಹಸ್ಪತಿಶ್ಚ ಶುಕ್ರಶ್ಚ ವ್ಯಾಸಃ ಸಾರಸ್ವತಸ್ತಥಾ ॥ ೩೨ ॥

---

೨೮. ಸಾಧನಯುಕ್ತಿ, ದೃಷ್ಟಾಂತಗಳಿಂದ ಪೂರ್ಣವೂ ಅಪಾರ್ಥವಾದ ಚಿತ್ರ ಶಬ್ದಗಳ ಭಂಗಿಯಿಂದ ಕೂಡಿರುವುದೂ ಆದ ಸರ್ವ ದೇವತಾ ಚರಿತ್ರ ಪ್ರತಿಪಾದಕವಾದ ವಚನಗಳು ಋಷಿಪುತ್ರರಿಂದ ರಚಿತವಾಗಿರುವುವು.

೨೯. ಅಂತಹ ವಾಕ್ಯಗಳು ಮಾನುಷ ವಾಕ್ಯಗಳಂತೆ ಅತೀಂದ್ರಿಯವಾದ ಅರ್ಥವನ್ನು ಪ್ರತಿಪಾದಿಸುವ ಶಕ್ತಿಯಿಂದ ರಹಿತವಾಗಿರುವುವು. ಮಿಶ್ರ ಎಂಬ ನಾಮಾಂಕನವುಳ್ಳ ಪ್ರಜೆಗಳು ತಪಃಪ್ರಭಾವದಿಂದ ಮಂತ್ರದರ್ಶನರೂಪವಾದ ಋಷಿತ್ವವನ್ನು ಹೊಂದಿರುವರು.

೩೦. ಮಿಶ್ರರೆಂಬ ಸಂಕೇತವುಳ್ಳ ಋಷಿಗಳು ತಮ್ಮ ಕರ್ಮಾಚರಣೆಯ ಉತ್ಕರ್ಷ-ಅಪಕರ್ಷಗಳಿಂದ ಬೇರೆ ವರ್ಣಗಳ ಸಂಕ್ರಮರೂಪವಾದ ಸಂಭವವುಳ್ಳವರಾಗಿಯೂ ಭೂತ-ಭಾವಿ-ವರ್ತಮಾನವೆಂಬ ತ್ರಿಕಾಲಜ್ಞಾನ, ಹಾಗು ಜನ್ಮ-ದುಃಖಗಳೆಂಬ ವ್ಯಾಧಿ ಚಿಕಿತ್ಸೋಪಾಯವಾದ ಜ್ಞಾನಗಳಿಂದ ಸಂಪನ್ನರಾಗಿಯೂ ಇರುವರು.

೩೧. ಮಾನುಷರೂಪವಾದ ವಾಕ್ಯವು ಗುರುಪ್ರಭಾವದಿಂದ ಪ್ರವೃತ್ತಿಸಿರುವ ಮಿಶ್ರ ಮಹರ್ಷಿಗಳ ವಾಕ್ಯವೆಂದು ಅರಿಯಬೇಕು. ಅವರು ತಮ್ಮ ಮಹಿಮೆಯಿಂದ ವ್ಯಾಪಕರೂ ಧರ್ಮಶಾಸ್ತ್ರಗಳನ್ನು ರಚಿಸುವವರೂ ಆಗಿರುವರು.

೩೨. ಯಾರಲ್ಲಿ ತಪಃಸಂಪತ್ತಿಯು ಅಧಿಕವಾಗಿರುವುದೋ ಅವರು ಋಷಿಗ

ವ್ಯಾಸಾಃ ಶಾಸ್ತ್ರಪ್ರಣಯನಾ ವೇದವ್ಯಾಸ ಇತಿ ಸ್ಮೃತಃ ।
ಯಸ್ಮಾದವರಜಾಃ ಸಂತಃ ಪೂರ್ವೇಭ್ಯೋ ಮೇಧಯಾಧಿಕಾಃ ॥ ೩೩ ॥

ಐಶ್ವರ್ಯೇಣ ಚ ಸಂಪನ್ನಾಸ್ತತಸ್ತೇ ಋಷಯಃ ಸ್ಮೃತಾಃ ।
ಯಸ್ಮಿನ್ ಕಾಲೋ ನ ಚ ವಯಃ ಪ್ರಮಾಣಮೃಷಿಭಾವನೇ ॥ ೩೪ ॥

ದೃಶ್ಯತೇ ಹಿ ಪುಮಾನ್ ಕಶ್ಚಿತ್ ಕಶ್ಚಿತ್ ಜ್ಯೇಷ್ಠತಮೋ ಧಿಯಾ ।
ಯಸ್ಮಾದ್ಬುದ್ಧ್ಯಾ ಚ ವರ್ಷೀಯಾನ್ ಬಾಲೋಽಪಿ ಶ್ರುತವಾನ್ ಋಷಿಃ ॥ ೩೫ ॥

ಯಃ ಕಶ್ಚಿತ್ಪಾದವಾನ್ ಮಧ್ಯೇ ಪ್ರಯುಕ್ತೋಽಕ್ಷರಸಂಪದಾ ।
ವಿನಿಯುಕ್ತಾವಸಾನಾಂ ತುತಾಮೃಚಂ ಪರಿಚಕ್ಷತೇ ॥ ೩೬ ॥

---

ಳಿಂದು ಸ್ಮರಿಸಲ್ಪಟ್ಟಿರುವರು. ಬೃಹಸ್ಪತಿ, ಶುಕ್ರ, ವ್ಯಾಸ ಮತ್ತು ಸಾರಸ್ವತ ಮುಂತಾದವರು ತಪೋಮಹಿಮೆಯಿಂದ ಕೂಡಿದ ಉಜ್ಜ್ವಲ ಜನ್ಮವುಳ್ಳವರಾಗಿರುವರು.

೩೩. ಶಾಸ್ತ್ರವನ್ನು ರಚಿಸಿದ ಮಹರ್ಷಿಗಳು ವ್ಯಾಸ ಎಂಬ ಸಂಕೇತವನ್ನುಳ್ಳವರಾದರು. ವೇದಗಳನ್ನು ವಿಭಾಗ ಮಾಡಿದ ಮುನಿಯು ವೇದವ್ಯಾಸ ಎಂದು ಸ್ಮರಿಸಲ್ಪಟ್ಟಿರುವನು. ಮುಂದೆ ಜನ್ಮವೆತ್ತುವವರೂ ಕೂಡ ಹಿಂದಿನವರಿಗಿಂತ ವಿಶಾಲವಾದ ಪ್ರಜ್ಞೆಯನ್ನು ಹೊಂದಿ ಶಾಸ್ತ್ರಾರ್ಥ ಪ್ರಚಾರವನ್ನು ಮಾಡಿರುವರು.

೩೪. ಮತ್ತು ಕಿರಿಯವರು ಈಶ್ವರತ್ವ ಶಕ್ತಿಯಿಂದಲೂ ಹೆಚ್ಚಾಗಿ ಸಂಪನ್ನರಾಗಿರಬಹುದು. ಆದ್ದರಿಂದ ಅವರು ಋಷಿಗಳೆಂದು ಸ್ಮರಿಸಲ್ಪಟ್ಟಿರುವರು. ಋಷಿಗಳಾಗುವುದರಲ್ಲಿ ಕಾಲ, ವಯಸ್ಸು ಮುಂತಾದುವುಗಳು ಕಾರಣವಾಗಿರುವುದಿಲ್ಲ.

೩೫. ಪ್ರಜಾವರ್ಗದಲ್ಲಿ ಒಬ್ಬ ಮನುಷ್ಯನು ವಯಸ್ಸಿನಲ್ಲಿ ಕಿರಿಯವನಾದರೂ ಬುದ್ಧಿಶಕ್ತಿಯಿಂದ ಜ್ಯೇಷ್ಠನಾಗಿರುವುದು ಕಾಣುತ್ತಿದೆ. ಆದುದರಿಂದ ಜ್ಞಾನದಿಂದ ವೃದ್ಧನಾದವನು ವಯಸ್ಸಿನಲ್ಲಿ ಬಾಲಕನಾದರೂ ಶ್ರುತಾಧ್ಯಯನ ಸಂಪತ್ತಿಯಿಂದ ಅವನು ಋಷಿಯೆಂದು ಗಣನೆಗೆ ಅರ್ಹನು.

೩೬. ಯಾವ ಮಂತ್ರವು ಪಾದಬದ್ಧವಾಗಿಯೂ ಅಕ್ಷರಗಳ ಸಂಖ್ಯಾ ನಿಯಮದಿಂದ ಕೂಡಿದ ಛಂದೋಮಯವಾಗಿಯೂ ಮತ್ತು ಕರ್ಮಾಂಗವಾಗಿ ವಿನಿಯೋಗವನ್ನು ಹೊಂದಿರುವ ಆದ್ಯಂತ ಅವಯವಗಳಿಂದ ಸಹಿತವಾಗಿಯೂ ಇರುವುದೋ ಆ ಮಂತ್ರಜಾತಿಯನ್ನು ಋಙ್ಮಂತ್ರವೆಂದು ಕರೆಯುವರು.

ಯಃ ಕಶ್ಚಿತ್ಕರಣೈರ್ಮಂತ್ರೋ ನ ಚ ಪಾದಾಕ್ಷರೈರ್ಮಿತಃ ।
ಅನಿಯುಕ್ತಾವಸಾನಂ ಚ ತದ್ಯಜುರ್ನ್ಯೈ ಪ್ರಚಕ್ಷತೇ ॥ ೩೭ ॥

ಹ್ರೀಂಕಾರಃ ಪ್ರಣವೋ ಗೀತಃ ಪ್ರಸ್ತಾವಶ್ಚ ಚತುರ್ಥಕಮ್ ।
ಪಂಚಮಃ ಪ್ರತಿಹೋತ್ರಶ್ಚ ಷಷ್ಠಮಾಹುರುಪದ್ರವಮ್ ॥ ೩೮ ॥

ನಿಧನಂ ಸಪ್ತಮಂ ಸಾಮ್ನಃ ಸಾಪ್ತವಿಧ್ಯಮಿದಂ ಸ್ಮೃತಮ್ ।
ಪಂಚವಿಧ್ಯ ಇತಿ ಪ್ರೋಕ್ತಂ ಹ್ರೀಂಕಾರಪ್ರಣವಾದೃತೇ ॥ ೩೯ ॥

ಬ್ರಹ್ಮಣೇ ಧರ್ಮಮಿತ್ಯುಕ್ತೌ ಯತ್ತದಾ ಜ್ಞಾಪ್ಯತೇಽರ್ಥತಃ ।
ಆಶಾಸ್ತಿಸ್ತು ಪ್ರಸಂಖ್ಯಾತಾ ವಿಲಾಪಃ ಪರಿದೇವನಾ ॥ ೪೦ ॥

ಕ್ರೋಧಾದ್ವಾ ದ್ವೇಷಣಾಚ್ಚೈವ ಪ್ರಶ್ನಾಖ್ಯಾನಂ ತಥೈವ ಚ ।
ಏತತ್ತು ಸರ್ವವಿದ್ಯಾನಾಂ ವಿಹಿತಂ ಮಂತ್ರಲಕ್ಷಣಮ್ ॥ ೪೧ ॥

---

೩೭. ಅನುಷ್ಠಾನ ಮಾಡಬೇಕಾದ ಕ್ರಿಯಾಸ್ವರೂಪವನ್ನು ಬೋಧಿಸುವ ಉತ್ತಮಪುರುಷ ಧಾತುರೂಪದಿಂದ ಕೂಡಿರುವ, ಪಾದಾಕ್ಷರ ಸಂಖ್ಯಾ ನಿಯಮವಿಲ್ಲದ ಮತ್ತು ಸಮಾಪ್ತಿ ನಿಯಮವಿಲ್ಲದ ಮಂತ್ರರಾಶಿಯನ್ನು ಯಜುರ್ಮಂತ್ರವೆಂದು ಹೇಳುತ್ತಾರೆ.

೩೮-೩೯. ಸಾಮವೇದ ಮಂತ್ರಗಳು ಹ್ರೀಂಕಾರ, ಪ್ರಣವ, ಉದ್ಗೀಥ, ಪ್ರಸ್ತಾವ, ಪ್ರತಿಹೋತ್ರ, ಉಪದ್ರವ ಮತ್ತು ನಿಧನವೆಂಬ ಸಂಜ್ಞೆಗಳಿಂದ ಅಂಕಿತವಾದ ಏಳು ಭಕ್ತಿಗಳಿಂದ ಕೂಡಿರುತ್ತವೆ. ಇದು ಸಾಪ್ತ ವಿಧ್ಯ (ಏಳು ಭಕ್ತಿ) ಎಂಬ ಒಂದುಪಕ್ಷಾವನ್ನು ಅವಲಂಬಿಸಿರುವುದು, ಪಾಂಚವಿಧ್ಯ (ಐದು ಭಕ್ತಿ) ಎಂಬ ಪಕ್ಷಾಂತರದಲ್ಲಿ ಹ್ರೀಂಕಾರ, ಪ್ರಣವಗಳೆಂಬ ಎರಡು ಭಕ್ತಿಗಳು ನ್ಯೂನವಾಗುತ್ತವೆ.

೪೦. ಬ್ರಹ್ಮಾದಿ ಋತ್ವಿಜರಿಗೆ ಕರ್ತವ್ಯಧರ್ಮವನ್ನು ತನ್ನ ಅರ್ಥ ಪ್ರತಿಪಾದನದಿಂದ ಬೋಧಿಸುವುದೂ, ಇಷ್ಟಾಶಂಸನೆಯೂ, ವಿಲಾಪ ಮತ್ತು ದುಃಖದಿಂದ ರೋದನ ಮುಂತಾದುವುಗಳೂ ಮಂತ್ರವಾಕ್ಯಗಳ ಲಕ್ಷಣವಾಗಿರುವುವು.

೪೧. ಕ್ರೋಧ-ದ್ವೇಷಗಳ ನಿಮಿತ್ತದಿಂದ ಪ್ರಶ್ನಗರ್ಭವಾದ ಆಖ್ಯಾನಗಳಿಂದ ಕೂಡಿರುವುದೂ ಮಂತ್ರಗಳ ಲಕ್ಷಣವೆಂದು ಸರ್ವ ಶಾಸ್ತ್ರಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ.

ಮಂತ್ರಾ ನವವಿಧಾಃ ಪ್ರೋಕ್ತಾ ಋಗ್ಯಜುಃಸಾಮಲಕ್ಷಣಾಃ ।
ಸ್ತುತಿರ್ನಿಂದಾ ಪ್ರಶಂಸಾ ಚಾಕ್ರೋಶಸ್ತೋಷಸ್ತಥೈವ ಚ ॥ ೪೨ ॥

ಪ್ರಶ್ನಾನುಜ್ಞಾಸ್ತಥಾಖ್ಯಾನಮಾಶಾಸ್ತಿವಿಧಯೋ ಮತಾಃ ।
ಮಂತ್ರಭೇದಾಂಶ್ಚ ವಕ್ಷ್ಯಾಮಿ ಚತುರ್ವಿಂಶತಿಲಕ್ಷಣಾನ್ ॥ ೪೩ ॥

ಪ್ರಶಂಸಾ ಸ್ತುತಿರಾಕ್ರೋಶೋ ನಿಂದಾ ಚ ಪರಿದೇವನಾ ।
ಅಭಿಶಾಪೋ ವಿಶಾಪಶ್ಚ ಪ್ರಶ್ನಃ ಪ್ರತಿವಚಸ್ತಥಾ ॥ ೪೪ ॥

ಆಶೀರ್ಯಜ್ಞಸ್ತಥಾಕ್ಷೇಪ ಅರ್ಥಾಖ್ಯಾನಂ ಚ ಸಂಕಥಾ ।
ವಿಯೋಗಾ ಹ್ಯಭಿಯೋಗಶ್ಚ ಕಥಾ ಸಂಸ್ಥಾ ವರಶ್ಚ ವೈ ॥ ೪೫ ॥

ಪ್ರತಿಷೇಧೋಪದೇಶೌ ಚ ನಮಸ್ಕಾರಃ ಸ್ಪೃಹಾ ತಥಾ ।
ವಿಲಾಪಶ್ಚೇತಿ ಮಂತ್ರಾಣಾಂ ಚತುರ್ವಿಂಶತಿರುದ್ಧೃತಾಃ ॥ ೪೬ ॥

ಋಷಿಭಿರ್ಯಜ್ಞತತ್ತ್ವಜ್ಞೈರ್ವಿಹಿತಂ ಬ್ರಾಹ್ಮಣಂ ಪುರಾ ।
ಹೇತುರ್ನಿರ್ವಚನಂ ನಿಂದಾ ಪ್ರಶಸ್ತಿಃ ಸಂಶಯೋ ವಿಧಿಃ ॥ ೪೭ ॥

---

೪೨-೪೩. ಋಕ್, ಯಜುಸ್ಸು ಮತ್ತು ಸಾಮವೇದಗಳಲ್ಲಿ ಅಂತರ್ಗತವಾದ ಮಂತ್ರಗಳು ಒಂಭತ್ತು ವಿಧಗಳಾಗಿವೆ. ಅವು ಯಾವುವೆಂದರೆ :—ಸ್ತುತಿ, ನಿಂದಾ, ಪ್ರಶಂಸಾ, ಆಕ್ರೋಶ, ತೋಷ, ಪ್ರಶ್ನ, ಅನುಜ್ಞಾ, ಆಖ್ಯಾನ ಮತ್ತು ಆಶಾಸ್ತಿ ವಿಧಾನಗಳೆಂಬುವು ಒಂಭತ್ತು ವಿಧಗಳು. ಇವುಗಳಲ್ಲಿ ಇಪ್ಪತ್ತನಾಲ್ಕು ಲಕ್ಷಣಗಳ ಪ್ರಭೇದಗಳನ್ನು ಒಳಗೊಂಡಿರುವ ಮಂತ್ರಗಳನ್ನು ಹೇಳುತ್ತೇನೆ.

೪೪-೪೫-೪೬. ಇಪ್ಪತ್ತನಾಲ್ಕು ವಿಧದ ಮಂತ್ರ ಲಕ್ಷಣಗಳಲ್ಲಿ ಪ್ರಶಂಸೆ, ಸ್ತುತಿ, ಆಕ್ರೋಶ, ನಿಂದಾ, ಪರಿದೇವನಾ, ಅಭಿಶಾಪ, ವಿಶಾಪ, ಪ್ರಶ್ನ, ಪ್ರತಿವಚನ, ಆಶೀ, ಯಜ್ಞ, ಆಕ್ಷೇಪ, ಅರ್ಥಾಖ್ಯಾನ, ಸಂಕಥಾ, ವಿಯೋಗ, ಅಭಿಯೋಗ, ಕಥಾ, ಸಂಸ್ಥಾ, ವರ, ಪ್ರತಿಷೇಧ, ಉಪದೇಶ, ನಮಸ್ಕಾರ, ಸ್ಪೃಹಾ ಮತ್ತು ವಿಲಾಪ ವೆಂದು ಇಪ್ಪತ್ತನಾಲ್ಕು ಬಗೆಗಳು ಅಂತರ್ಗತವಾಗಿವೆ. ಇವುಗಳಲ್ಲಿರುವ ಹೆಸರು ಪ್ರಾಯಶಃ ಪ್ರಸಿದ್ಧ ಅರ್ಥವನ್ನು ಸೂಚಿಸಿ ಅನ್ವರ್ಥಗಳಾಗಿವೆ.

೪೭-೪೮. ಯಜ್ಞಗಳ ತತ್ತ್ವಗಳನ್ನು ತಿಳಿದ ಋಷಿಗಳಿಂದ ಪೂರ್ವದಲ್ಲಿ

ಪುರಾಕೃತಿಪುರಾಕಲ್ಪೌ ವ್ಯವಧಾರಣಕಲ್ಪನಾ ।
ಉಪಮಾ ಚ ದಶೈತೇ ವೈ ವಿಧಯೋ ಬ್ರಾಹ್ಮಣಸ್ಯ ತು　　॥ ೪೮ ॥

ಲಕ್ಷಣಂ ಬ್ರಾಹ್ಮಣಸ್ಯೈತದ್ವಿಹಿತಂ ಸರ್ವಶಾಖಿನಾಮ್ ।
ಹೇತುರ್ಹಂತೇಃ ಸ್ಮೃತೋ ಧಾತೋರ್ಯನ್ನಿಹಂತ್ಯುದಿತಂ ಪರೈಃ
॥ ೪೯ ॥

ಅಥವಾರ್ಥೇ ಪರಿಪ್ರಾಪ್ತೇ ಹಿನೋತೇರ್ಗತಿಕರ್ಮಣಾ ।
ತಥಾ ನಿರ್ವಚನಂ ಬ್ರೂಯಾದ್ವಾಕ್ಯಾರ್ಥಸ್ಯಾವಧಾರಣಮ್　　॥ ೫೦ ॥

ನಿಂದಾಂ ತಾಮಾಹುರಾಚಾರ್ಯಾ ಯದ್ದೋಷೇ ನಿಂದನಂ ವಚಃ ।
ಪ್ರಪೂರ್ವಾಚ್ಛಂಸತೇರ್ಧಾತೋಃ ಪ್ರಶಂಸಾ ಗುಣವತ್ತಯಾ　॥ ೫೧ ॥

---

ಬ್ರಾಹ್ಮಣ ಗ್ರಂಥವು ರಚಿಸಲ್ಪಟ್ಟಿದೆ. ಹೇತು, ನಿರ್ವಚನ, ನಿಂದಾ, ಪ್ರಶಂಸಾ, ಸಂಶಯ, ವಿಧಿ, ಪುರಾಕೃತಿ, ಪುರಾಕಲ್ಪ, ವ್ಯವಧಾರಣ ಕಲ್ಪನಾ ಮತ್ತು ಉಪಮಾ ಎಂಬುವ ಹತ್ತು ವಿಧಿಗಳು ಬ್ರಾಹ್ಮಣ ಗ್ರಂಥಗಳಲ್ಲಿರುವುವು.

೪೯. ಪೂರ್ವೋಕ್ತವಾದ ಹತ್ತು ವಿಧಿ ಪ್ರಭೇದಗಳು ಸರ್ವಶಾಖೆಗಳ ಬ್ರಾಹ್ಮಣ ಗ್ರಂಥಗಳ ಲಕ್ಷಣಗಳಾಗಿ ವಿಹಿತವಾಗಿವೆ. ಇವುಗಳಲ್ಲಿ ಹೇತು ಎಂಬ ಶಬ್ದವು "ಹನ್ತಿ" ಎಂಬ ಧಾತುವಿನಿಂದ ಪರಾಭಿಪ್ರಾಯವನ್ನು ಖಂಡಿಸುವ ಯುಕ್ತಿ ಎಂಬ ಅರ್ಥವನ್ನು ಬೋಧಿಸುವಂತೆ ರೂಪವನ್ನು ಹೊಂದಿರುವುದು.

೫೦. ಅಥವಾ ಗತಿ ಎಂಬ ಅರ್ಥವನ್ನು ಬೋಧಿಸುವ ಹಿನೋತಿ ಎಂಬ ಧಾತುವಿನ ರೂಪಾಂತರವೆಂದು ಪ್ರತಿಪಾದಿಸಬಹುದು. ಅರ್ಥವನ್ನು ಸಾಧಿಸುವುದು ಎಂಬ ಅರ್ಥವನ್ನು ಈ ಪಕ್ಷದಲ್ಲಿ ಬೋಧಿಸುವುದು, ಹಾಗೆಯೇ ಒಂದು ವಾಕ್ಯದ ಅರ್ಥವನ್ನು ನಿಶ್ಚಯವಾಗಿ ಬೋಧಿಸುವುದನ್ನು ನಿರ್ವಚನವೆಂದು ತಿಳಿಯಬೇಕು.

೫೧. ವಸ್ತುವಿನಲ್ಲಿದ್ದ ದೋಷವನ್ನು ಹೇಳುವುದು ನಿಂದೆಯೆಂಬುದಾಗಿ ಆಚಾರ್ಯರು ನಿಂದಾಸ್ವರೂಪವನ್ನು ಹೇಳುವರು. ಹಾಗೆಯೇ ವಸ್ತುವಿನಲ್ಲಿರುವ ಗುಣವನ್ನು ಕೀರ್ತನ ಮಾಡುವುದು ಪ್ರಶಂಸೆಯು. "ಪ್ರ" ಎಂಬ ಉಪಸರ್ಗದಿಂದ ಕೂಡಿದ "ಶಂಸ್" ಎಂಬ ಧಾತುವಿನಿಂದ "ಪ್ರಶಂಸಾ" ಎಂಬ ಶಬ್ದವು ನಿಷ್ಪತ್ತಿಯನ್ನು ಹೊಂದಿದೆ.

ಇದಂ ತ್ವಿದಮಿದಂ ನೇದಮಿತ್ಯನಿಶ್ಚಿತ್ಯ ಸಂಶಯಮ್ ।
ಇದಮೇವಂ ವಿಧಾತವ್ಯಮಿತ್ಯಯಂ ವಿಧಿರುಚ್ಯತೇ ॥ ೫೨ ॥

ಅನ್ಯಸ್ಯಾನ್ಯಸ್ಯ ಚೋಕ್ತಿರ್ಯಾ ಬುಧೈಃ ಸೋಕ್ತಾ ಪುರಾಕೃತಿಃ ।
ಯೋ ಹ್ಯತ್ಯಂತಪರೋಕ್ಷಾರ್ಥಃ ಸ ಪುರಾಕಲ್ಪ ಉಚ್ಯತೇ ॥ ೫೩ ॥

ಪುರಾತಿಕ್ರಾಂತವಾಚಿತ್ವಾತ್ ಪುರಾಕಲ್ಪಸ್ಯ ಕಲ್ಪನಾಮ್ ।
ಮಂತ್ರಬ್ರಾಹ್ಮಣಕಲ್ಪೈಶ್ಚ ನಿಗಮೈಃ ಶುದ್ಧವಿಸ್ತರೈಃ ॥ ೫೪ ॥

ಅನಿಶ್ಚಿತ್ಯ ಕೃತಾಮಾಹುರ್ವ್ಯವಧಾರಣಕಲ್ಪನಾಮ್ ।
ಯಥಾ ಹೀದಂ ತಥಾ ತದ್ವೈ ಇದಂ ಚೈವ ತಥೈವ ತತ್ ॥ ೫೫ ॥

ಇತ್ಯೇವಮೇಷಾ ಹ್ಯುಪಮಾ ದಶಮೋ ಬ್ರಾಹ್ಮಣಸ್ಯ ತು ।
ಇತ್ಯೇತದ್ಬ್ರಾಹ್ಮಣಸ್ಯಾದೌ ವಿಹಿತಂ ಲಕ್ಷಣಂ ಬುಧೈಃ ॥ ೫೬ ॥

---

೫೨. ಇದು ಹೀಗಿರುವುದೋ? ಇಲ್ಲವೋ? ಎಂಬ ನಿಶ್ಚಯವಿಲ್ಲದ ಜ್ಞಾನವು ಸಂಶಯದ ಆಕಾರವು. ಇದನ್ನು ಈ ರೀತಿಯಾಗಿ ಮಾಡಬೇಕೆಂದು ವಿಧಿಸುವುದು ವಿಧಿಯೆಂದು ಹೇಳಲ್ಪಟ್ಟಿದೆ.

೫೩. ಅನ್ಯಪುರುಷನ ಉಕ್ತಿಯನ್ನು ಬುಧರು ಪುರಾಕೃತಿಯೆಂದು ಹೇಳುವರು. ಅತ್ಯಂತವಾಗಿ ಪರೋಕ್ಷವಾದ ಅರ್ಥವನ್ನು ಪುರಾಕಲ್ಪವೆಂದು ಕರೆಯುವರು.

೫೪. ಪುರಾಕಲ್ಪ ಎಂಬ ಶಬ್ದವು ಬಹಳ ಹಿಂದೆ ನಡೆದ ಅರ್ಥವನ್ನು ಪ್ರತಿಪಾದಿಸುವುದರಿಂದ ಅನ್ವರ್ಥ ಕಲ್ಪನೆಯನ್ನು ಹೊಂದಿಕೊಂಡಿದೆ. ಮಂತ್ರ-ಬ್ರಾಹ್ಮಣರೂಪವಾದ, ವಿಸ್ತಾರವಾದ ನಿಗಮ ಶಬ್ದಗಳಿಂದ ಅನಿಶ್ಚಯವನ್ನು ಹೋಗಲಾಡಿಸಿ ಮಾಡಿರುವ, ಅರ್ಥ ತೀರ್ಮಾನವು ವ್ಯವಧಾರಣ ಕಲ್ಪನೆಯೆಂದು ಹೇಳಲ್ಪಡುವುದು.

೫೫-೫೬. ಇದು ಹೇಗೆ ಇರುವುದೋ ಅದರಂತೆ ಮತ್ತೊಂದು ವಸ್ತುವು ಇರುವುದು ಎಂಬ ಉಕ್ತಿಯು ಬ್ರಾಹ್ಮಣ ಲಕ್ಷಣಗಳಲ್ಲಿ ಹತ್ತನೆಯ ಧರ್ಮವಾದ ಉಪಮೆಯು. ಈ ರೀತಿಯಾಗಿ ಬ್ರಾಹ್ಮಣ ಗ್ರಂಥಗಳಿಗೆ ಹತ್ತು ವಿಧವಾದ ಲಕ್ಷಣಗಳು ಬುಧರಿಂದ ಹೇಳಲ್ಪಟ್ಟಿವೆ.

ತಸ್ಯ ತಿದ್ವಿಧ್ಬಿರುದ್ದಿಷ್ಟಾ ವ್ಯಾಖ್ಯಾನ್ಯನುಪದಂ ದ್ವಿಜೈಃ ।
ಮಂತ್ರಾಣಾಂ ಕಲ್ಪನಾ ಚೈವ ವಿಧಿದೃಷ್ಟೇಷು ಕರ್ಮಸು ॥ ೫೭ ॥

ಮಂತ್ರೋ ಮಂತ್ರಯತೇರ್ಧಾತೋರ್ಬ್ರಾಹ್ಮಣೋ ಬ್ರಾಹ್ಮಣೇನ ತು।
ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥ ೫೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ತ್ರಯಸ್ತ್ರಿಂಶತ್ತಮೋಽಧ್ಯಾಯಃ

---

೫೭. ಆ ಲಕ್ಷಣಗಳ ವ್ಯಾಖ್ಯಾನವು ಹಿಂದೆ ಹೇಳಿದಂತೆ ಪ್ರಾಜ್ಞರಾದ ಮುನಿಗಳಿಂದ ನಿರ್ದೇಶಿಸಲ್ಪಟ್ಟಿದೆ. ವಿಧಿ ವಾಕ್ಯದಿಂದ ವಿಧಿಸಲ್ಪಟ್ಟ ಕರ್ಮಗಳಲ್ಲಿ ಮಂತ್ರಗಳ ಪ್ರಯೋಗ ಕಲ್ಪನೆಯು ಆವಶ್ಯಕವಾಗಿರುವುದು.

೫೮. "ಮಂತ್ರಯತಿ" ಎಂಬ ಧಾತುವಿನಿಂದ ಮಂತ್ರಶಬ್ದವು ರೂಪವನ್ನು ಪಡೆದಿದೆ. ಬ್ರಾಹ್ಮಣ ಎಂಬುದು "ಬೃಹಿ" ಎಂಬ ಧಾತುವಿನಿಂದ ನಿಷ್ಪನ್ನವಾದ ಬ್ರಹ್ಮಶಬ್ದದ ಸಂಬಂಧದಿಂದ ಸಿದ್ಧವಾಗಿರುವುದು. ಅಲ್ಪ ಅಕ್ಷರಗಳಿಂದ ಕೂಡಿ ಸಂದೇಹಶೂನ್ಯವಾದ, ಸಾರವತ್ತಾದ ಮತ್ತು ಸರ್ವತೋಮುಖವಾದ ಅರ್ಥವನ್ನು ಪ್ರತಿಪಾದಿಸುವ, ನಿರರ್ಥಕವಾದ ಸ್ತೋಭಾಕ್ಷರಗಳಿಂದ ಶೂನ್ಯವಾದ ಮತ್ತು ನಿರ್ದುಷ್ಟವಾದ ವಾಕ್ಯವನ್ನು ಸೂತ್ರಲಕ್ಷಣವೇತ್ತರು ಸೂತ್ರವೆಂದು ಹೇಳುವರು.

ಬ್ರಹ್ಮಾಂಡಪುರಾಣದಲ್ಲಿ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.

---

# ಚತುಸ್ತ್ರಿಂಶತ್ತಮೋಽಧ್ಯಾಯಃ

ವಾಯುರುವಾಚ :—

ಋಷಯಸ್ತದ್ವಚಃ ಶ್ರುತ್ವಾ ಸೂತಮಾಹುಸ್ತದುತ್ತರಮ್ ।
ಕಥಂ ವೇದಾಃ ಪುನರ್ವ್ಯಸ್ತಾಸ್ತನ್ನೋ ಬ್ರೂಹಿ ಮಹಾಮತೇ ॥ ೧ ॥

ಸೂತ ಉವಾಚ :—

ದ್ವಾಪರೇ ತು ಪುರಾವೃತ್ತೇ ಮನೋಃ ಸ್ವಾಯಂಭುವಾಂತರೇ ।
ಬ್ರಹ್ಮಾ ಮನುಮುವಾಚೇದಂ ರಕ್ಷ ವೇದಂ ಮಹಾಮತೇ ॥ ೨ ॥

ಪರಿವೃತ್ತಂ ಯುಗಂ ತಾತ ಸ್ವಲ್ಪವೀರ್ಯಾ ದ್ವಿಜಾತಯಃ ।
ಸಂವೃತಾ ಯುಗದೋಷೇಣ ಸರ್ವೇ ಚೈವ ಯಥಾಕ್ರಮಮ್ ॥ ೩ ॥

ತಸ್ಯ ಮಾನಂ ಯುಗವಶಾದಲ್ಪಂ ಚೈವ ಹಿ ದೃಶ್ಯತೇ ।
ದಶಸಾಹಸ್ರಭಾಗೇನ ಹ್ಯವಶಿಷ್ಟಂ ಕೃತೋದಿತಮ್ ॥ ೪ ॥

---

ವಾಯುದೇವನು ಇಂತೆಂದನು :—

೧. ಸೂತಮುನಿಯ ಈ ಉಪದೇಶವನ್ನು ಕೇಳಿ ಅನಂತರ ಎಲ್ಲ ಋಷಿಗಳು ಮಹಾಮತಿಯಾದ ಸೂತಮುನಿಯೆ! ವೇದಗಳು ವ್ಯಾಸವನ್ನು ಹೊಂದಿರುವುದು ಏತಕ್ಕೆ ? ಎಂಬುದನ್ನು ನಮಗೆ ಹೇಳು ಎಂದು ಕೇಳಿದರು.

ಸೂತಮುನಿಯು ಈ ಪ್ರಶ್ನೆಗೆ ಉತ್ತರವಾಗಿ ಇಂತೆಂದನು :—

೨. ಸ್ವಾಯಂಭುವ ಮನ್ವಂತರ ಕಾಲದಲ್ಲಿ ದ್ವಾಪರ ಯುಗವು ಪೂರ್ಣವಾಗಿ ಕಳೆಯಲು ಬ್ರಹ್ಮನು ಮನುವನ್ನು ನೋಡಿ ಮಹಾಮತಿಯಾದ ಮನುವೆ, ವೇದಗಳನ್ನು ರಕ್ಷಿಸು ಎಂದು ಹೇಳಿದನು.

೩. ಪ್ರಿಯನಾದ ಮನುರಾಜನೆ, ಯುಗವು ಪರಿವೃತ್ತಿಯನ್ನು ಹೊಂದಿದೆ. ದ್ವಿಜರು ಎಲ್ಲರೂಕೂಡ ಕ್ರಮಕ್ರಮವಾಗಿ ಯುಗದ ದೋಷಗಳಿಂದ ಬದ್ಧರಾಗಿ ಅಲ್ಪವಾದ ವೀರ್ಯವುಳ್ಳವರಾಗಿರುವರು.

೪. ಯುಗದ ಪ್ರಭಾವದಿಂದ ಎಲ್ಲ ಗುಣಿವಸ್ತುಗಳ ಮಾನವು ಅತಿಯಾಗಿ ಅಲ್ಪ

**ವೀರ್ಯಂ ತೇಜೋ ಬಲಂ ಚಾಲ್ಪಂ ಸರ್ವಂ ಚೈವ ಪ್ರಣಶ್ಯತಿ ।**
**ವೇದಕ್ರಿಯಾ ಹಿ ಕಾರ್ಯಾಃ ಸ್ಯುರ್ಮಾಭೂದ್ವೇದವಿನಾಶನಮ್ ॥ ೫ ॥**

**ವೇದೇ ನಾಶಮನುಪ್ರಾಪ್ತೇ ಯಜ್ಞೋ ನಾಶಂ ಗಮಿಷ್ಯತಿ ।**
**ಯಜ್ಞೇ ನಷ್ಟೇ ವೇದನಾಶಸ್ತತಃ ಸರ್ವಂ ಪ್ರಣಶ್ಯತಿ ॥ ೬ ॥**

**ಆದ್ಯೋ ವೇದಶ್ಚತುಷ್ಪಾದಃ ಶತಸಾಹಸ್ರಸಮ್ಮಿತಃ ।**
**ಪುನರ್ದಶಗುಣಃ ಕೃಷ್ಣೋ ಯಜ್ಞೋ ವೈ ಸರ್ವಕಾಮಧುಕ್ ॥ ೭ ॥**

**ಏವಮುಕ್ತಸ್ತಥೇತ್ಯುಕ್ತ್ವಾ ಮನುರ್ಲೋಕಹಿತೇ ರತಃ ।**
**ವೇದಮೇಕಂ ಚತುಷ್ಪಾದಂ ಚತುರ್ಧಾ ವ್ಯಭಜತ್ ಪ್ರಭುಃ ॥ ೮ ॥**

---

ವಾಗುತ್ತ ಬಂದಿರುವುದು. ಕೃತಯುಗದಲ್ಲಿ ಉದಿತವಾದ ವಸ್ತು ಸಮೃದ್ಧಿಯಲ್ಲಿರುವ ಸಾರವು ಹತ್ತು ಸಹಸ್ರ ಭಾಗವು ಮಾತ್ರ ಅವಶಿಷ್ಟವಾಗಿರುವುದು.

೫. ವೀರ್ಯ, ತೇಜಸ್ಸು, ಬಲಗಳೆಲ್ಲವೂ ಅಲ್ಪವಾಗುತ್ತ ಬಂದು ಸಂಪೂರ್ಣವಾಗಿ ನಾಶವಾಗುತ್ತಿವೆ. ಆದುದರಿಂದ ವೇದಗಳ ವಿಕಾರ ವಿವರಣಗಳನ್ನು ಮಾಡಿ ವೇದಗಳು ಸಂಪೂರ್ಣ ನಾಶವನ್ನು ಹೊಂದದೆ ಶಾಶ್ವತವಾಗಿರುವಂತೆ ಮಾಡಬೇಕು.

೬. ವೇದವು ನಾಶವನ್ನು ಹೊಂದಿದರೆ ತನ್ಮೂಲಕವಾದ ಯಜ್ಞಾದಿ ಅನುಷ್ಠಾನವು ನಶಿಸಿಹೋಗುವುದು. ಯಜ್ಞದ ನಾಶದಿಂದ ಸ್ವಲ್ಪವೂ ಶೇಷವಿಲ್ಲದಂತೆ ಕರ್ಮಕಾಂಡವು ನಾಶವಾಗಿ ಅದರಿಂದ ಎಲ್ಲವೂ ನಾಶಹೊಂದುವುದು.

೭. ಮೊದಲನೆಯ ವೇದವು ಒಂದು ಲಕ್ಷ ಗ್ರಂಥದ ಮಹಾಪರಿಮಾಣದಿಂದಲೂ ಮತ್ತು ಅದಕ್ಕಿಂತ ದಶಗುಣ ಪರಿಮಾಣದಿಂದಲೂ ಕೂಡಿ ಸರ್ವ ಕಾಮಪ್ರದವಾದ ಯಜ್ಞಕರ್ಮಗಳನ್ನು ವಿಧಿಸುತ್ತ ಕೃಷ್ಣಯಜುರ್ವೇದವೆಂಬ ಹೆಸರಿನಿಂದ ನಾಲ್ಕು ಪಾದಗಳನ್ನು ಹೊಂದಿಕೊಂಡಿದೆ.

೮. ಈ ರೀತಿಯಾಗಿ ಬ್ರಹ್ಮನಿಂದ ಹೇಳಲ್ಪಟ್ಟ, ಲೋಕ ಹಿತದ ಆಚರಣೆಯಲ್ಲಿ ಆಸಕ್ತನಾದ, ಮತ್ತು ಸರ್ವಜ್ಞನಾದ ಮನುವು ಚತುಷ್ಪಾದಗಳಿಂದ ಕೂಡಿದ ವೇದವನ್ನು ನಾಲ್ಕು ಭಾಗವಾಗಿ ವಿಂಗಡಿಸಿದನು.

ಬ್ರಹ್ಮಣೋ ವಚನಾತ್ತಾತ ಲೋಕಾನಾಂ ಹಿತಕಾಮ್ಯಯಾ ।
ತದಹಂ ವರ್ತಮಾನೇನ ಯುಷ್ಮಾಕಂ ವೇದಕಲ್ಪನಮ್ ॥ ೯ ॥

ಮನ್ವಂತರೇಣ ವಕ್ಷ್ಯಾಮಿ ವ್ಯತೀತಾನಾಂ ಪ್ರಕಲ್ಪನಮ್ ।
ಪ್ರತ್ಯಕ್ಷೇಣ ಪರೋಕ್ಷಂ ವೈ ತನ್ನಿಬೋಧತ ಸತ್ತಮಾಃ ॥ ೧೦ ॥

ಅಸ್ಮಿನ್ ಯುಗೇ ತದಾ ವ್ಯಾಸಃ ಪಾರಾಶರ್ಯಃ ಪರಂತಪಃ ।
ದ್ವೈಪಾಯನ ಇತಿ ಖ್ಯಾತೋ ವಿಷ್ಣೋರಂಶಃ ಸನಾತನಃ ॥ ೧೧ ॥

ಬ್ರಹ್ಮಣಾ ಚೋದಿತಃ ಸೋಽಸ್ಮಿನ್ ವೇದಂ ವಕ್ತುಂ ಪ್ರಚಕ್ರಮೇ ।
ಅಥ ಶಿಷ್ಯಾನ್ ಸ ಜಗ್ರಾಹ ಚತುರೋ ವೇದಕಾರಣಾತ್ ॥ ೧೨ ॥

ಜೈಮಿನಿಂ ಚ ಸುಮಂತುಂ ಚ ವೈಶಂಪಾಯನಮೇವ ಚ ।
ಚತುರ್ಥಂ ಪೈಲಮೇತೇಷಾಂ ಪಂಚಮಂ ಲೋಮಹರ್ಷಣಮ್ ॥೧೩॥

---

೯. ಮನುರಾಜನು ಬ್ರಹ್ಮನ ಆದೇಶದಿಂದಲೂ ಪ್ರಪಂಚದ ಹಿತದೃಷ್ಟಿಯಿಂದಲೂ ನಾಲ್ಕು ವಿಧವಾಗಿ ವಿಂಗಡಿಸಿರುವುದನ್ನು ಅನುಸರಿಸಿ ನಾನು ನಿಮಗೆ ವೇದಕಲ್ಪನವನ್ನು ಉಪದೇಶಿಸುವೆನು.

೧೦. ವರ್ತಮಾನ ಮನ್ವಂತರದ ವೇದ ವಿಭಾಗವನ್ನು ಪ್ರತ್ಯಕ್ಷವಾಗಿ ನಿದರ್ಶನ ಕೊಟ್ಟು ಅತೀತವಾದ ಮನ್ವಂತರಗಳಲ್ಲಿನ ವೇದ ವಿಭಾಗಗಳ ಕಲ್ಪನವನ್ನು ಹೇಳುವೆನು. ಸಾಧು ಮುನಿಗಳೆ! ಅದನ್ನು ಕೇಳಿರಿ.

೧೧. ಈ ಯುಗದಲ್ಲಿ ವೇದ ವಿಭಾಗಾವಸ್ಥೆಯಲ್ಲಿ ಶತ್ರು ತಾಪಕವಾದ ಜ್ಯೋತಿರ್ಮಯನಾದ, ದ್ವೈಪಾಯನ ಎಂಬ ನಾಮ ಪ್ರಸಿದ್ಧಿಯುಳ್ಳ, ಪರಾಶರ ಪುತ್ರನಾದ ವ್ಯಾಸಮುನಿಯು ಅನಾದಿಯಾದ ವಿಷ್ಣು ಪರಮಾತ್ಮನ ಅಂಶದಿಂದ ಜನಿಸಿದನು.

೧೨. ಆ ವ್ಯಾಸಮುನಿಯು ಬ್ರಹ್ಮದೇವನಿಂದ ಪ್ರೇರೇಪಿಸಲ್ಪಟ್ಟವನಾಗಿ ಈ ಯುಗದಲ್ಲಿ ವೇದವನ್ನು ಪ್ರವಚನಮಾಡಲು ಪ್ರಾರಂಭಿಸಿದನು. ಅನಂತರದಲ್ಲಿ ವೇದೋಪದೇಶಕ್ಕೋಸ್ಕರ ನಾಲ್ವರು ಶಿಷ್ಯರನ್ನು ಪರಿಗ್ರಹಿಸಿದನು.

೧೩. ಜೈಮಿನಿ, ಸುಮಂತು, ವೈಶಂಪಾಯನ, ಪೈಲ ಮತ್ತು ಲೋಮಹರ್ಷಣರೆಂಬ ಐದು ಮಂದಿಗೆ ವ್ಯಾಸಮುನಿಯು ವೇದ-ಪುರಾಣಗಳನ್ನು ಉಪದೇಶಿಸಿದನು.

ಋಗ್ವೇದಶ್ರಾವಕಂ ಪೈಲಮನುಗ್ರಹೀದ್ವಿಧಿವದ್ದ್ವಿಜಾಃ ।
ಯಜುರ್ವೇದಪ್ರವಕ್ತಾರಂ ವೈಶಂಪಾಯನಮೇವ ಚ || ೧೪ ||

ಜೈಮಿನಿಂ ಸಾಮವೇದಾರ್ಥಶ್ರಾವಕಂ ಸೋಽನ್ವಪದ್ಯತ ।
ತಥೈವಾಥರ್ವವೇದಸ್ಯ ಸುಮಂತುಮೃಷಿಸತ್ತಮಮ್ || ೧೫ ||

ಇತಿಹಾಸಪುರಾಣಸ್ಯ ಕಲ್ಪವಾಕ್ಯಸ್ಯ ಚೈವ ಹಿ ।
ಮಾಂ ಚೈವ ಪ್ರತಿಜಗ್ರಾಹ ಭಗವಾನೀಶ್ವರಃ ಪ್ರಭುಃ || ೧೬ ||

ಏಕ ಆಸೀದ್ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯತ್ ।
ಚಾತುರ್ಹೋತ್ರಮಭೂತ್ತಸ್ಮಿಂಸ್ತೇನ ಯಜ್ಞಮಕಲ್ಪಯತ್ || ೧೭ ||

ಆಧ್ವರ್ಯವಂ ಯಜುರ್ಭಿಸ್ತು ಋಗ್ಭಿರ್ಹೋತ್ರಂ ತಥೈವ ಚ ।
ಔದ್ಗಾತ್ರಂ ಸಾಮಭಿಶ್ಚಕ್ರೇ ಬ್ರಹ್ಮತ್ವಂ ಚಾಪ್ಯಥರ್ವಭಿಃ || ೧೮ ||

---

೧೪. ದ್ವಿಜರೆ! ವ್ಯಾಸಮುನಿಯು ಈ ಶಿಷ್ಯಮಂಡಲಿಯಲ್ಲಿ ಪೈಲ ಮುನಿಯನ್ನು ಋಗ್ವೇದಾಧ್ಯಯನಕ್ಕೋಸ್ಕರ ಮತ್ತು ವೈಶಂಪಾಯನ ಮುನಿಯನ್ನು ಯಜುರ್ವೇದಾಧ್ಯಯನಕ್ಕೋಸ್ಕರ ಶಿಷ್ಯರನ್ನಾಗಿ ಸ್ವೀಕರಿಸಿದನು.

೧೫. ಮತ್ತು ವ್ಯಾಸಮಹರ್ಷಿಯು ಸಾಮವೇದಾಧ್ಯಯನ ಮಾಡಲು ಜೈಮಿನಿಯೆಂಬ ಶಿಷ್ಯನನ್ನು ಹಾಗೆ ಅಥರ್ವ ವೇದವನ್ನು ಅಧ್ಯಯನ ಮಾಡಲು ಶ್ರೇಷ್ಠಮುನಿಯಾದ ಸುಮಂತು ಎಂಬ ಶಿಷ್ಯನನ್ನು ಹೊಂದಿದನು.

೧೬. ಪೂಜ್ಯನೂ ಸರ್ವಜ್ಞೇಶ್ವರ ಸ್ವರೂಪನೂ ಆದ ವ್ಯಾಸಮುನಿಯು ಇತಿಹಾಸ, ಪುರಾಣ, ಮತ್ತು ಕಲ್ಪ ಗ್ರಂಥಗಳನ್ನು ಉಪದೇಶಿಸಲು ನನ್ನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದನು.

೧೭. ವೇದ ವ್ಯಾಸಮುನಿಯು ಮೊದಲು ಯಜುರ್ವೇದ ರೂಪವಾಗಿದ್ದ ಒಂದು ವೇದವನ್ನು ನಾಲ್ಕು ವಿಧವಾಗಿ ವಿಂಗಡಿಸಿದನು. ಅದರಿಂದ ನಾಲ್ಕು ಮಂದಿ ಋತ್ವಿಜರು ಮಾಡಬೇಕಾದ ಕರ್ತವ್ಯಾರ್ಥಗಳು ಒಂದೊಂದು ಭಾಗದಿಂದ ಪ್ರತಿಪಾದಿಸಲ್ಪಟ್ಟವು. ಒಟ್ಟಾಗಿ ಅವುಗಳ ಸಮಷ್ಟಿಯಿಂದ ಯಜ್ಞಸ್ವರೂಪವನ್ನು ಕಲ್ಪಿಸಿದನು.

೧೮. ಯಜುರ್ವೇದ, ಋಗ್ವೇದ, ಸಾಮವೇದ, ಮತ್ತು ಅಥರ್ವ ವೇದಗಳಿಂದ

ತತಃ ಸ ಋಚ ಉದ್ಧೃತ್ಯ ಋಗ್ವೇದಂ ಸಮಕಲ್ಪಯತ್ ।
ಹೋತೃಕಂ ಕಲ್ಪಯತ್ತೇನ ಯಜುರ್ವೇದಂ ಜಗತ್ಪತಿಃ ॥ ೧೯ ॥

ಸಾಮಭಿಃ ಸಾಮವೇದಂ ಚ ತೇನೌದ್ಗಾತ್ರಮಕಲ್ಪಯತ್ ।
ರಾಜ್ಞಸ್ತ್ವಥರ್ವವೇದೇನ ಸರ್ವಕರ್ಮಾಣ್ಯಕಾರಯತ್ ॥ ೨೦ ॥

ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಭಿಃ ಕಲ್ಪಜೋಕ್ತಿಭಿಃ ।
ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ॥ ೨೧ ॥

ಯಚ್ಛಿಷ್ಟಂ ತು ಯಜುರ್ವೇದೇ ತೇನ ಯಜ್ಞಮಯುಂಜತ ।
ಯಜನಾತ್ ಸ ಯಜುರ್ವೇದ ಇತಿ ಶಾಸ್ತ್ರವಿನಿಶ್ಚಯಃ ॥ ೨೨ ॥

---

ಪ್ರತಿಪಾದಿಸಲ್ಪಟ್ಟ ಆಧ್ವರ್ಯವ, ಹೌತ್ರ, ಔದ್ಗಾತ್ರ, ಮತ್ತು ಬ್ರಹ್ಮತ್ವಗಳೆಂಬ ನಾಲ್ಕು ವಿಧ ಋತ್ವಿಕ್ಕರ್ಮಗಳಿಂದ ಯಜ್ಞವು ನಿಷ್ಪನ್ನವಾಯಿತು.

೧೯. ಅನಂತರದಲ್ಲಿ ಜಗನ್ನಿಯಾಮಕನಾದ ವಿಷ್ಣುವಿನ ಅಂಶಸಂಭೂತನಾದ ವ್ಯಾಸಮುನಿಯು ಋಙ್ಮಂತ್ರಗಳನ್ನು ಒಟ್ಟುಗೂಡಿಸಿ ಋಗ್ವೇದವನ್ನೂ ಅದರಿಂದ ಹೋತಾ ಎಂಬ ಋತ್ವಿಜನು ಮಾಡಬೇಕಾದ ಯಜ್ಞಾಂಗಕರ್ಮಗಳನ್ನೂ ಕಲ್ಪಿಸಿದನು. ಮತ್ತು ಯಜುರ್ವೇದವನ್ನೂ ಕಲ್ಪಿಸಿದನು.

೨೦. ಸಾಮ ಮಂತ್ರವಾಕ್ಯಗಳಿಂದ ಸಾಮವೇದವನ್ನು ಕಲ್ಪಿಸಿ ಅದರಿಂದ ಉದ್ಗಾತೃ ಎಂಬ ಋತ್ವಿಜನು ಮಾಡಬೇಕಾದ ಯಜ್ಞಾಂಗ ಕರ್ಮಗಳನ್ನು ಏರ್ಪಡಿಸಿದನು. ಹಾಗು ಅಥರ್ವವೇದದಿಂದ ರಾಜನು ಮಾಡಬೇಕಾದ ಶಾಂತಿಕ ಪೌಷ್ಟಿಕ ಮುಂತಾದ ಸಕಲ ಕರ್ಮಗಳನ್ನು ವಿಧಿಸಿದನು.

೨೧. ಪುರಾಣಗಳ ಅರ್ಥದಲ್ಲಿ ವಿಶಾರದನಾದ ಮುನಿಯು ಅನೇಕ ಆಖ್ಯಾನ, ಚರಿತ್ರ, ಗಾಥಾ, ಮತ್ತು ಕಲ್ಪ ಪ್ರಯೋಗಗಳ ಪರಿಪಾಟಿಯ ಉಕ್ತಿಗಳನ್ನು ಸಂಗ್ರಹಿಸಿ ಬಹ್ವರ್ಥಗರ್ಭಿತವಾದ ಪುರಾಣ ಸಂಹಿತೆಯನ್ನು ಮಾಡಿದನು.

೨೨. ಹಿಂದೆ ಹೇಳಿದ ಋತ್ವಿಕ್ಕರ್ಮಗಳಲ್ಲದೇ ಮಿಕ್ಕಿರುವ ಸಮಸ್ತಾಂಗಗಳನ್ನು ಯಜುರ್ವೇದದಲ್ಲಿ ಬೋಧಿಸಿ ಯಜ್ಞ ಸ್ವರೂಪನ್ನು ಪೂರ್ಣಮಾಡಿದನು. ಶಾಸ್ತ್ರ ಪರ್ಯಾಲೋಚನೆಯಿಂದ ಯಜ್ಞವನ್ನು ಬೋಧಿಸುವ ನಿಮಿತ್ತದಿಂದ ಯಜುರ್ವೇದವೆಂಬ ನಾಮದ ಅನ್ವರ್ಥತೆಯು ತಿಳಿಯುವುದು.

ಪಾದಾನಾಮುದ್ಧತತ್ವಾಚ್ಚ ಯಜೂಂಷಿ ವಿಷಮಾಣಿ ಚ ।
ಶತೇನೋದ್ಧತವೀರ್ಯೈಸ್ತು ಋತ್ವಿಗ್ಭಿರ್ವೇದಪಾರಗೈಃ　॥ ೨೩ ॥

ಪ್ರಯುಜ್ಯತೇ ಹ್ಯಶ್ವಮೇಧಸ್ತೇನ ನಾ ಪುಷ್ಯತೇ ತು ಸಃ ।
ಋಚೋ ಗೃಹೀತ್ವಾ ಪೈಲಸ್ತು ವ್ಯಭಜತ್ತು ದ್ವಿಧಾ ಪುನಃ　॥ ೨೪ ॥

ದ್ವೇ ಕೃತ್ವಾ ಸಂಹಿತೇ ಚೈವ ಶಿಷ್ಯಾಭ್ಯಾಮುದದಾದ್ವಿಭುಃ ।
ಇಂದ್ರಪ್ರಮತಯೇ ಚೈಕಾಂ ದ್ವಿತೀಯಾಂ ಬಾಷ್ಕಲಾಯ ಚ　॥ ೨೫ ॥

ಚತಸ್ರಃ ಸಂಹಿತಾಃ ಕೃತ್ವಾ ಬಾಷ್ಕಲೋ ದ್ವಿಜಸತ್ತಮಃ ।
ಶಿಷ್ಯಾನಧ್ಯಾಪಯಾಮಾಸ ಶುಶ್ರೂಷಾಭಿರತಾನ್ ಹಿತಾನ್　॥ ೨೬ ॥

ಬೋಧ್ಯಾಂ ತು ಪ್ರಥಮಾಂ ಶಾಖಾಂ ದ್ವಿತೀಯಾಮಗ್ನಿಮಾತರಮ್ ।
ಪಾರಾಶರೀಂ ತೃತಿಯಾಂ ತು ಯಾಜ್ಞ್ಯವಲ್ಕ್ಯಾಮಥಾಪರಾಮ್ ॥೨೭॥

---

೨೩. ಯಜುರ್ವೇದವು ಪಾದ ಸಂಖ್ಯಾರಹಿತವಾಗಿ ಸ್ವಚ್ಛಂದವಾಗಿ ಉಪಕ್ರಮೋಪಸಂಹಾರಗಳನ್ನು ಹೊಂದಿರುವ ವಾಕ್ಯಗಳಿಂದ ವಿಷಮಗತಿಯನ್ನು ಹೊಂದಿದೆ. ಹೀಗೆ ಅನೇಕ ವೇದ ಪಾರಂಗತರಾದ ಋತ್ವಿಜರ ವ್ಯಾಪಾರಗಳಿಂದ ಯಜುರ್ವೇದ ವಿಹಿತವಾದ ನೂರಾರು ಯಜ್ಞಕರ್ಮಗಳು ಸಂಖ್ಯಾತೀತವಾದುವು.

೨೪. ಅಶ್ವಮೇಧಯಾಗದ ಪ್ರಯೋಗವು, ಮತ್ತು ಆ ಕರ್ಮದಲ್ಲಿ ಮಿಳಿತವಾದ ಇತರ ಅನೇಕ ಕರ್ಮಪ್ರಯೋಗಗಳು ವೇದಗಳಿಂದ ಪ್ರಚುರಪಡಿಸಲ್ಪಟ್ಟಿವೆ. ಪೈಲ ಮುನಿಯು ಋಗ್ವೇದವನ್ನು ಸಂಗ್ರಹಿಸಿ ಅದನ್ನು ಮತ್ತೆ ಎರಡಾಗಿ ವಿಭಜಿಸಿದನು.

೨೫. ಸಮರ್ಥನಾದ ಪೈಲಮುನಿಯು ಸಮಷ್ಟಿಯಾಗಿದ್ದ ಋಗ್ವೇದವನ್ನು ಎರಡು ಸಂಹಿತೆಗಳ ರೂಪದಿಂದ ವಿಭಾಗಮಾಡಿ ಇಂದ್ರ ಪ್ರಮತಿ, ಮತ್ತು ಬಾಷ್ಕಲ ಎಂಬ ಇಬ್ಬರು ಶಿಷ್ಯರಿಗೆ ಎರಡು ಸಂಹಿತೆಗಳನ್ನು ಉಪದೇಶಿಸಿದನು.

೨೬. ದ್ವಿಜಶ್ರೇಷ್ಠನಾದ ಬಾಷ್ಕಲ ಮುನಿಯು ತನ್ನ ಸಂಹಿತೆಯನ್ನು ಮತ್ತೆ ನಾಲ್ಕು ಭಾಗವಾದ ಸಂಹಿತೆಗಳನ್ನು ಮಾಡಿ ಗುರು ಶುಶ್ರೂಷಾಪರರೂ ಹಿತಕರರೂ ಆದ ನಾಲ್ಕು ಮಂದಿ ಶಿಷ್ಯರಿಗೆ ಅಧ್ಯಾಪನ ಮಾಡಿಸಿದನು.

೨೭. ಬಾಷ್ಕಲ ಮುನಿಯು ಪ್ರಣಯನ ಮಾಡಿದ ನಾಲ್ಕು ಶಾಖೆಗಳು

ಇಂದ್ರಪ್ರಮತಿರೇಕಾಂ ತು ಸಂಹಿತಾಮೃಷಿಸತ್ತಮಃ ।
ಅಧ್ಯಾಪಯನ್ ಮಹಾಭಾಗಂ ಮಾಂಡೂಕೇಯಂ ಯಶಸ್ವಿನಮ್ ॥ ೨೮ ॥

ಸತ್ಯಸ್ರವಸಮುಗ್ರ್ಯಂ ತು ಪುತ್ರಂ ಸ ತು ಮಹಾಯಶಾಃ ।
ಸತ್ಯಸ್ರವಾಃ ಸತ್ಯಹಿತಂ ಪುತ್ರಮಧ್ಯಾಪಯದ್ವಿಭುಃ ॥ ೨೯ ॥

ಸೋಽಪಿ ಸತ್ಯಹಿತಃ ಪುತ್ರಂ ಪುನರಧ್ಯಾಪಯದ್ದ್ವಿಜಾಃ ।
ಸತ್ಯಶ್ರಿಯಂ ಮಹಾತ್ಮಾನಂ ಸತ್ಯಧರ್ಮಪರಾಯಣಮ್ ॥ ೩೦ ॥

ಅಭವಂಸ್ತಸ್ಯ ಶಿಷ್ಯಾ ವೈ ತ್ರಯಸ್ತು ಸುಮಹೌಜಸಃ ।
ಸತ್ಯಶ್ರಿಯಾಶ್ಚ ವಿದ್ವಾಂಸಃ ಶಾಸ್ತ್ರಗ್ರಹಣತತ್ಪರಾಃ ॥ ೩೧ ॥

ಶಾಕಲ್ಯಃ ಪ್ರಥಮಸ್ತೇಷಾಂ ತಸ್ಮಾದನ್ಯೋ ರಥೀತರಃ ।
ಬಾಷ್ಕಲಿಶ್ಚ ಭರದ್ವಾಜ ಇತಿ ಶಾಖಾಪ್ರವರ್ತಕಾಃ ॥ ೩೨ ॥

---

ಬೋಧ್ಯಾ, ಅಗ್ನಿ ಮಾತಾ, ಪಾರಾಶರೀ, ಮತ್ತು ಯಾಜ್ಞ್ಯವಲ್ಕ್ಯಶಾಖಾ ಎಂದು ಬೇರೆ ಬೇರೆಯಾಗಿ ಪ್ರಸಿದ್ಧಿಯನ್ನು ಹೊಂದಿದುವು.

೨೮. ಋಷಿಶ್ರೇಷ್ಠನಾದ ಇಂದ್ರಪ್ರಮತಿಯು ಒಂದು ಸಂಹಿತೆಯನ್ನು ಮಹಾಭಾಗನಾದ ಮತ್ತು ಯಶಸ್ವಿಯಾದ ಮಾಂಡೂಕೇಯನೆಂಬ ಶಿಷ್ಯನಿಗೆ ಪ್ರವಚನ ಮಾಡಿದನು.

೨೯. ಮಹಾಯಶಸ್ವಿಯಾದ ಮಾಂಡೂಕೇಯನು ಸತ್ಯಶ್ರವಾ ಎಂಬ ತನ್ನ ಪುತ್ರನಿಗೆ ಅಧ್ಯಯನ ಮಾಡಿಸಿದನು. ವಿಭುವಾದ ಸತ್ಯಶ್ರವಾ ಎಂಬುವನು ತನ್ನ ಸತ್ಯಹಿತನೆಂಬ ಪುತ್ರನಿಗೆ ಉಪದೇಶಿಸಿದನು.

೩೦. ದ್ವಿಜರೆ! ಆ ಸತ್ಯ ಹಿತನು ಮತ್ತೆ ಮಹಾತ್ಮನೂ, ಸತ್ಯಸ್ವರೂಪವಾದ ಧರ್ಮ ಅನುಷ್ಠಾನದಲ್ಲಿ ತತ್ಪರನೂ ಆದ ಸತ್ಯಶ್ರೀ ಎಂಬ ತನ್ನ ಪುತ್ರನಿಗೆ ಆ ಸಂಹಿತೆಯನ್ನು ಉಪದೇಶ ಮಾಡಿದನು.

೩೧. ಮಹಾ ವೀರ್ಯವಂತರೂ, ಜ್ಞಾನಿಗಳೂ, ಮತ್ತು ಶಾಸ್ತ್ರಾರ್ಥಗಳನ್ನು ಗ್ರಹಿಸುವುದರಲ್ಲಿ ನಿರತರೂ ಆದ ಮೂರು ಮಂದಿ ಶಿಷ್ಯರು ಆ ಸತ್ಯಶ್ರೀ ಎಂಬುವ ಮುನಿಯಲ್ಲಿ ವೇದಗ್ರಹಣಮಾಡಿದರು.

೩೨. ಆ ಮೂರು ಶಿಷ್ಯರಲ್ಲಿ ಮೊದಲನೆಯವನು ಶಾಕಲ್ಯ ಮುನಿಯು.

ದೇವಮಿತ್ರಸ್ತು ಶಾಕಲ್ಯೋ ಜ್ಞಾನಾಹಂಕಾರಗರ್ವಿತಃ ।
ಜನಕಸ್ಯ ಸ ಯಜ್ಞೇ ವೈ ವಿನಾಶಮಗಮದ್ದ್ವಿಜಾಃ ॥ ೩೩ ॥

ಶಾಂಶಪಾಯನ ಉವಾಚ :—
ಕಥಂ ವಿನಾಶಮಗಮತ್ ಸ ಮುನಿರ್ಜ್ಞಾನಗರ್ವಿತಃ ।
ಜನಕಸ್ಯಾಶ್ವಮೇಧೇ ತು ಕಥಂ ವಾದೋಽಭ್ಯಜಾಯತ ॥ ೩೪ ॥

ಕಿಮರ್ಥಂ ವಾಭವದ್ವಾದಃ ಕೇನ ಸಾರ್ಧಮಥಾಪಿ ವಾ ।
ಏತತ್ ಸರ್ವಂ ಯಥಾವೃತ್ತಮಾಚಕ್ಷ್ವ ವಿದಿತಂ ತವ ॥ ೩೫ ॥

ಸೂತ ಉವಾಚ :—
ಜನಕಸ್ಯಾಶ್ವಮೇಧೇ ತು ಮಹಾನಾಸೀತ್ ಸಮಾಗಮಃ ।
ಋಷೀಣಾಂ ಹಿ ಸಹಸ್ರಾಣಿ ತತ್ರಾಜಗ್ಮುರನೇಕಶಃ ॥ ೩೬ ॥

---

ಎರಡನೆಯವನು ರಥೀತರ ಮುನಿಯು, ಮತ್ತು ಬಾಷ್ಕಲ ವಂಶಸಂಭೂತನಾದ ಭರದ್ವಾಜ ಮುನಿಯು ಮೂರನೆಯವನು. ಹೀಗೆ ಈ ಮೂವರು ಶಾಖಾಪ್ರವರ್ತಕರಾದರು.

೩೩. ದ್ವಿಜರೆ! ಶಾಕಲಪುತ್ರನಾದ ದೇವಮಿತ್ರನು ಈ ಕ್ರಮದಿಂದ ವೇದಾಧ್ಯಯನವನ್ನು ಮಾಡಿ ಜ್ಞಾನ ಅಹಂಕಾರಗಳಿಂದ ಕೂಡಿದವನಾಗಿ ಜನಕರಾಜನ ಯಜ್ಞಸಮಾರಂಭದಲ್ಲಿ ಅಹಂಕಾರದಿಂದ ನಾಶಹೊಂದಿದನು.

೩೪. ಸೂತಮುನಿಯಿಂದ ಈ ಕಥಾನಕವನ್ನು ಕೇಳಿದ ಕೂಡಲೆ ಶಾಂಶಪಾಯನ ಮುನಿಯು ಈ ರೀತಿಯಾಗಿ ಪ್ರಶ್ನಿಸಿದನು :—ದೇವಮಿತ್ರ ಮುನಿಯು ಜ್ಞಾನದಿಂದ ಅಹಂಕಾರಪಟ್ಟು ವಿನಾಶವನ್ನು ಹೊಂದಿದುದು ಹೇಗೆ? ಜನಕರಾಜನ ಅಶ್ವಮೇಧಯಾಗದಲ್ಲಿ ವಾದವು ಹೇಗೆ ಪ್ರಾಪ್ತವಾಯಿತು?

೩೫. ಯಜ್ಞಶಾಲೆಯಲ್ಲಿ ವಾದವು ಯಾರಿಗೆ ಯಾರೊಂದಿಗೆ ಏತಕ್ಕೆ ಪ್ರಾಪ್ತವಾಯಿತು? ಈ ಎಲ್ಲ ಚರಿತ್ರವನ್ನು ಹೇಳಬೇಕು. ನೀನು ಎಲ್ಲವನ್ನೂ ಅರಿತ ಮಹಾತ್ಮನಾಗಿರುತ್ತೀ.

೩೬. ಈ ಪ್ರಶ್ನೆಯನ್ನು ಲಾಲಿಸಿ ಸೂತ ಮುನಿಯು ಪ್ರತಿವಚನವನ್ನು ಆಡಿದನು. ಜನಕರಾಜನ ಅಶ್ವಮೇಧ ಯಾಗದಲ್ಲಿ ಅನೇಕ ವಿದ್ವಾಂಸರ ಸಮಾಗಮವು

ರಾಜರ್ಷೇರ್ಜನಕಸ್ಯಾಥ ತಂ ಯಜ್ಞಂ ಹಿ ದಿದೃಕ್ಷವಃ ।
ಆಗತಾನ್ ಬ್ರಾಹ್ಮಣಾನ್ ದೃಷ್ಟ್ವಾ ಜಿಜ್ಞಾಸಾಸ್ಯಾಭವತ್ಪ್ರನಃ ॥ ೩೭ ॥

ಕೋ ನ್ವೇಷಾಂ ಬ್ರಾಹ್ಮಣಶ್ರೇಷ್ಠಃ ಕಥಂ ಮೇ ನಿಶ್ಚಯೋ ಭವೇತ್ ।
ಇತಿ ನಿಶ್ಚಿತ್ಯ ಮನಸಾ ಬುದ್ಧಿಂ ಚಕ್ರೇ ಜನಾಧಿಪಃ ॥ ೩೮ ॥

ಗವಾಂ ಸಹಸ್ರಮಾದಾಯ ಸುವರ್ಣಮಧಿಕಂ ತತಃ ।
ಗ್ರಾಮಾನ್ ರತ್ನಾನಿ ದಾಸೀಶ್ಚ ಮುನೀನ್ ಪ್ರಾಹ ನರಾಧಿಪಃ ॥ ೩೯ ॥

ಸರ್ವಾನಹಂ ಪ್ರಪನ್ನೋ ವಃ ಶಿರಸಾ ಶ್ರೇಷ್ಠಭಾಗಿನಃ ।
ಯದೇತದಾಹೃತಂ ವಿತ್ತಂ ಯೋ ವಾ ಶ್ರೇಷ್ಠತಮೋ ಭವೇತ್ ॥ ೪೦ ॥

---

ಮಹತ್ತಾಗಿ ಜರುಗಿತು. ಆಗ ಅಲ್ಲಿಗೆ ಅನೇಕ ಸಹಸ್ರ ಸಂಖ್ಯೆಯ ಋಷಿಗಳು ಬಂದಿದ್ದರು.

೩೭. ರಾಜರ್ಷಿಯಾದ ಜನಕನು ಮಾಡುವ ಯಜ್ಞದ ವೈಭವವನ್ನು ನೋಡಲು ಅನೇಕ ಮಂದಿಯು ಗುಂಪು ಸೇರಿ ಬಂದರು. ಅನಂತರವಲ್ಲಿ ಬಂದಿರುವ ಬ್ರಾಹ್ಮಣರ ಸಂಘವನ್ನು ಕಂಡು ಜನಕರಾಜನಿಗೆ ಈ ರೀತಿಯಾಗಿ ಜಿಜ್ಞಾಸೆಯು ಉಂಟಾಯಿತು.

೩೮. ಈ ಸಮೂಹದಲ್ಲಿ ಯಾರು ಶ್ರೇಷ್ಠನಾದ ಬ್ರಾಹ್ಮಣನಾಗಿರುವನು ? ಇದು ನನಗೆ ತಿಳಿಯುವುದು ಹೇಗೆ? ಎಂದು ಮನಸ್ಸಿನಲ್ಲಿ ಯೋಚಿಸಿ ರಾಜನು ಕಡೆಯಲ್ಲಿ ಮನಸ್ಸಿನಲ್ಲಿ ಇದನ್ನು ಕಂಡುಹಿಡಿಯುವ ಒಂದು ತೀರ್ಮಾನವನ್ನು ಮಾಡಿದನು.

೩೯. ಆ ಮುನಿಗಳ ಸಂಘದಲ್ಲಿ ಜನಾಧಿಪನಾದ ರಾಜನು ಸಾವಿರ ಗೋವುಗಳನ್ನೂ ಅಧಿಕವಾದ ಸುವರ್ಣ, ಗ್ರಾಮ, ರತ್ನ, ಮತ್ತು ದಾಸೀಗಣವನ್ನೂ ನಿರ್ದೇಶಿಸಿ ಮುನಿಗಳನ್ನು ನೋಡಿ ಈ ರೀತಿಯಾಗಿ ಹೇಳಿದನು.

೪೦. ಮುನಿಗಳೇ! ನಿಮ್ಮಲ್ಲಿ ಅತಿಶಯವಾದ ಯೋಗ್ಯತೆಯನ್ನು ಹೊಂದಿರುವ ಮಹಾತ್ಮರಾಗಿರುವವರನ್ನು ಭಕ್ತಿಯಿಂದ ಗೌರವಿಸುವವನಾಗಿರುವೆನು, ನಿಮ್ಮಲ್ಲಿ ಶ್ರೇಷ್ಠನಾಗಿರುವವನಿಗೋಸ್ಕರ ಈ ವಿತ್ತವನ್ನು ಶೇಖರಿಸಿ ಇಟ್ಟಿರುವೆನು.

**ತಸ್ಮೈ ತದುಪನೀತಂ ವೋ ವಿತ್ತ ವಿತ್ತಂ ದ್ವಿಜೋತ್ತಮಾಃ ।**
**ಜನಕಸ್ಯ ವಚಃ ಶ್ರುತ್ವಾ ಋಷಯಸ್ತೇ ಶ್ರುತಿಕ್ಷಮಾಃ ॥ ೪೧ ॥**

**ದೃಷ್ಟ್ವಾ ಧನಂ ಮಹಾಸಾರಂ ಧನಗೃಧ್ನಾ ಜಿಘೃಕ್ಷವಃ ।**
**ಆಹ್ವಯಾಂಚಕ್ರಿರೇಽನ್ಯೋನ್ಯಂ ವೇದಜ್ಞಾನಮದೋಲ್ಬಣಾನ್ ॥೪೨॥**

**ಮನಸಾಗತವಿತ್ತಾಸ್ತೇ ಮಮೈತದ್ಧನಮಿತ್ಯುತ ।**
**ಮಮೈತನ್ನ ತವೇತ್ಯನ್ಯೋ ಬ್ರೂಹಿ ವಾ ಕಿಂ ವಿಕತ್ಥಸೇ ॥ ೪೩ ॥**

**ಇತ್ಯೇವಂ ಧನದೋಷೇಣ ವಾದಾಂಶ್ಚಕ್ರುರನೇಕಶಃ ।**
**ಅಥಾನ್ಯಸ್ತತ್ರ ವೈ ವಿದ್ವಾನ್ ಬ್ರಹ್ಮಣಸ್ತು ಸುತಃ ಕವಿಃ ॥ ೪೪ ॥**

**ಯಾಜ್ಞವಲ್ಕ್ಯೋ ಮಹಾತೇಜಾಸ್ತಪಸ್ವೀ ಬ್ರಹ್ಮವಿತ್ತಮಃ ।**
**ಬ್ರಹ್ಮಣೋಽಂಶಸಮುತ್ಪನ್ನೋ ವಾಕ್ಯಂ ಪ್ರೋವಾಚ ಸುಸ್ವರಮ್॥೪೫॥**

---

೪೧. ದ್ವಿಜೋತ್ತಮರೆ! ಶ್ರೇಷ್ಠನೆನಿಸಿದವನು ಸ್ವೀಕರಿಸುವುದಕ್ಕೋಸ್ಕರ ಈ ವಿತ್ತವನ್ನು ಸಿದ್ಧಪಡಿಸಿರುವುದನ್ನಾಗಿ ತಿಳಿಯಿರಿ. ಶ್ರುತಿ ವ್ಯಾಸಂಗದಲ್ಲಿ ನಿರತರಾದ ಮಹರ್ಷಿಗಳು ಜನಕನ ಈ ಮಾತನ್ನು ಕೇಳಿದರು.

೪೨. ಅಮೂಲ್ಯ ವಸ್ತುಗಳ ರಾಶಿಯಿಂದ ತುಂಬಿದ ಧನನಿಚಯವನ್ನು ನೋಡಿ ಬ್ರಾಹ್ಮಣರು ಅದನ್ನು ತೆಗೆದುಕೊಳ್ಳಬೇಕೆಂಬ ಲೋಭದಿಂದ ಆವಿಷ್ಟರಾಗಿ ವೇದ ಜ್ಞಾನದ ಮದದಿಂದ ಉಲ್ಬಣರಾದ ವ್ಯಕ್ತಿಗಳನ್ನು ಅನ್ಯೋನ್ಯವಾಗಿ ಸ್ಪರ್ಧೆಯಿಂದ ವಾದಕ್ಕೆ ಆಹ್ವಾನಿಸಿದರು.

೪೩. ಸರ್ವ ಮುನಿಗಳು ಆ ಧನರಾಶಿಯನ್ನು ತೆಗೆದುಕೊಳ್ಳಲು ನಾನು ಅರ್ಹನು, ನನಗೆ ಆ ಹಣವು ಸಲ್ಲಬೇಕಾದ್ದು, ನಿನಗೆ ಇದನ್ನು ಸ್ವಾಧೀನಪಡಿಸಿ ಕೊಳ್ಳುವ ಅರ್ಹತೆಯಿಲ್ಲವು. ವ್ಯರ್ಥವಾಗಿ ಏಕೆ ಹೊಗಳಿಕೊಳ್ಳುತ್ತಿ.

೪೪. ಈ ರೀತಿಯಾಗಿ ಎಲ್ಲ ಮುನಿಗಳು ಧನಲೋಭಕ್ಕೆ ವಶರಾಗಿ ಅನೇಕ ವಾದಗಳನ್ನು ಬೆಳೆಸಿದರು. ಅವರಲ್ಲಿ ತ್ರಿಕಾಲಜ್ಞಾನಿಯೂ ಬ್ರಹ್ಮಮಾನಸ ಪುತ್ರನೂ ಆದ ಜ್ಞಾನಿಯಾದ ಮಹಾತ್ಮನಿದ್ದನು.

೪೫. ಮಹಾ ತೇಜಸ್ವಿಯೂ, ತಪಸ್ವಿಯೂ, ಬ್ರಹ್ಮಜ್ಞಾನಿಯೂ, ಮತ್ತು ಬ್ರಹ್ಮನ ಅಂಶದಿಂದ ಕೂಡಿದವನೂ ಆದ ಆ ಯಾಜ್ಞವಲ್ಕ್ಯನೆಂಬ ಮುನಿಯು ಸುಸ್ವರದಿಂದ ಕೂಡಿ ಈ ವಚನವನ್ನು ಆಡಿದನು.

ಶಿಷ್ಯಂ ಬ್ರಹ್ಮವಿದಾಂ ಶ್ರೇಷ್ಠಂ ಧನಮೇತದ್ಗೃಹಾಣ ವೈ ।
ನಯಸ್ವ ಚ ಗೃಹಂ ವತ್ಸ ಮಮ್ಯೈತನ್ನಾತ್ರ ಸಂಶಯಃ ॥ ೪೬ ॥

ಸರ್ವವಾದೇಷ್ವಹಂ ವಕ್ತಾ ನಾನ್ಯಃ ಕಶ್ಚಿತ್ತು ಮತ್ಸಮಃ ।
ಯೋ ವಾ ನ ಪ್ರೀಯತೇ ವಿದ್ವಾನ್ ಸಮಾಹ್ವಯತು ಮಾ ಚಿರಮ್ ।
ತತೋ ಬ್ರಹ್ಮಾರ್ಣವಃ ಕ್ಷುಬ್ಧಃ ಸಮುದ್ರ ಇವ ಸಂಪ್ಲವೇ ॥ ೪೭ ॥

ತಾನುವಾಚ ತತಃ ಸ್ವಸ್ಥೋ ಯಾಜ್ಞವಲ್ಕ್ಯೋ ಹಸನ್ನಿವ ॥ ೪೮ ॥

ಕ್ರೋಧಂ ಮಾ ಕಾರ್ಷ್ಟ ವಿದ್ವಾಂಸೋ ಭವಂತಃ ಸತ್ಯವಾದಿನಃ ।
ವದಾಮಹ ಯಥಾಶಕ್ತಿ ಜಿಜ್ಞಾಸಂತಃ ಪರಸ್ಪರಮ್ ॥ ೪೯ ॥

ತತೋಽಭ್ಯುಪಾಗತಾಸ್ತೇಷಾಂ ವಾದಾಃ ಶಬ್ದೈರನೇಕಶಃ ।
ಸಹಸ್ರಧಾ ಶುಭೈರರ್ಥೈಃ ಸೂಕ್ಷ್ಮದರ್ಶನಸಂಭವೈಃ ॥ ೫೦ ॥

---

೪೬. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ತನ್ನ ಒಬ್ಬ ಶಿಷ್ಯನನ್ನು ಕುರಿತು ವತ್ಸನೆ! ಈ ಧನ ರಾಶಿಯನ್ನು ನಮ್ಮ ಮನೆಗೆ ತೆಗೆದುಕೊಂಡು ಹೋಗು, ಈ ಧನವೆಲ್ಲವೂ ನನಗೆ ಸೇರತಕ್ಕದ್ದು. ಈ ವಿಷಯದಲ್ಲಿ ಸಂಶಯವಿಲ್ಲ.

೪೭. ಸಮಸ್ತ ಶಾಸ್ತ್ರಾರ್ಥವಾದಗಳಲ್ಲಿ ನಾನು ವಾಗ್ಮಿಯಾಗಿ ಸಿದ್ಧಾನ್ತವನ್ನು ಸಾಧಿಸುವೆನು. ನನಗೆ ಸಮನಾದ ವಾದಿಯು ಯಾರೊಬ್ಬನೂ ಇಲ್ಲ. ಈ ನನ್ನ ವಚನದಲ್ಲಿ ವಿಶ್ವಾಸವಿಲ್ಲದವನು ಬೇಗ ನನ್ನನ್ನು ವಾದಕ್ಕೆ ಕರೆಯಲಿ, ಎಂಬುದಾಗಿ ಹೇಳಿದನು.

೪೮. ಯಾಜ್ಞವಲ್ಕ್ಯ ಮುನಿಯ ಈ ವಚನವನ್ನು ಕೇಳಿ ಪ್ರಲಯ ಕಾಲದಲ್ಲಿ ಸಮುದ್ರವು ಕ್ಷೋಭಗೊಂಡಂತೆ ಬ್ರಾಹ್ಮಣವೃಂದವೆಂಬ ಸಮುದ್ರವು ಕೋಪದಿಂದ ಅತಿಯಾಗಿ ಕ್ಷೋಭಗೊಂಡಿತು. ಆಗ ಯಾಜ್ಞವಲ್ಕ್ಯ ಮುನಿಯು ನಗುನಗುತ್ತ ಸ್ವಸ್ಥತೆಯಿಂದ ಅವರನ್ನು ಕುರಿತು ಹೀಗೆ ಹೇಳಿದನು.

೪೯. ಸತ್ಯವಾದಿಗಳಾದ ವಿದ್ವಾಂಸರೆ! ಜ್ಞಾನಿಗಳಾದ ನೀವು ಕೋಪಮಾಡ ಬೇಡಿ. ನಮ್ಮೆಲ್ಲರಲ್ಲಿ ಪರಸ್ಪರ ಯೋಗ್ಯತಾತಿಶಯವನ್ನು ಜಿಜ್ಞಾಸೆಯಿಂದ ತೀರ್ಮಾನಿಸಲು ಯಥಾಶಕ್ತಿಯಾಗಿ ವಾದ ಮಾಡೋಣ.

೫೦. ತರುವಾಯ ಅವರಲ್ಲಿ ಸೂಕ್ಷ್ಮದರ್ಶನಗಳಿಂದ ಕಂಡ ಅನೇಕ ಶುಭಕರ

ಲೋಕೇ ವೇದೇ ತಥಾಧ್ಯಾತ್ಮವಿದ್ಯಾಸ್ಥಾನೈರಲಂಕೃತೈಃ ।
ಸಂತ್ಯುತ್ತಮಗುಣೈರ್ಯುಕ್ತಾ ನೃಪಸ್ಯಾಪಿ ಪರೀಕ್ಷಕಾಃ ॥ ೫೧ ॥

ವಾದಾಃ ಸಮಭವನ್ ತತ್ರ ಧನಹೇತೋರ್ಮಹಾತ್ಮನಾಮ್ ।
ಋಷಯಸ್ತ್ವೇಕತಃ ಸರ್ವೇ ಯಾಜ್ಞವಲ್ಕ್ಯಸ್ತಥೈಕತಃ ॥ ೫೨ ॥

ಸರ್ವೇ ತೇ ಮುನಯಸ್ತೇನ ಯಾಜ್ಞವಲ್ಕ್ಯೇನ ಧೀಮತಾ ।
ಏಕೈಕಶಸ್ತತಃ ಪೃಷ್ಟಾ ನೈವೋತ್ತರಮಥಾಬ್ರುವನ್ ॥ ೫೩ ॥

ಸ ವಿಜಿತ್ಯ ಮುನೀನ್ ಸರ್ವಾನ್ ಬ್ರಹ್ಮರಾಶಿರ್ಮಹಾಮತಿಃ ।
ಶಾಕಲ್ಯಮಿತಿ ಹೋವಾಚ ವಾದಕರ್ತಾರಮಂಜಸಾ ॥ ೫೪ ॥

ಶಾಕಲ್ಯ ವದ ವಕ್ತವ್ಯಂ ಕಿಂ ಧ್ಯಾಯನ್ನವತಿಷ್ಠಸೇ ।
ಪಣಸ್ತು ಯಜಮಾನೇನ ಬದ್ಧೋ ನೀತೋ ಯಥಾ ಧೃತಃ ॥ ೫೫ ॥

---

ವಾದ ಅರ್ಥಗಳ ವಿಷಯದಲ್ಲಿ ಅನೇಕ ಶಬ್ದಕೋಲಾಹಲದಿಂದ ಕೂಡಿದ ಸಾವಿರಾರು ಬಗೆಯ ವಾದ ವಿವಾದಗಳು ಜರುಗಿದವು.

೫೧. ರಾಜನು ಉತ್ತಮ ವಿದ್ವಾಂಸರನ್ನು ಪರೀಕ್ಷಿಸಲು ಅನುಕೂಲಿಸುವಂತೆ ಲೋಕ, ವೇದ ಮತ್ತು ಅಧ್ಯಾತ್ಮವಿದ್ಯಾ ವಿಷಯಗಳಲ್ಲಿ ಅಲಂಕರಿಸಲ್ಪಟ್ಟ ಉತ್ತಮ ಗುಣಗಳಿಂದ ಕೂಡಿದ ವಾದಗಳು ಅತಿಯಾಗಿ ನಡೆದವು.

೫೨. ಧನದ ಲೋಭದಿಂದ ಮಹಾತ್ಮರಿಗೆ ಆ ಯಜ್ಞಶಾಲೆಯಲ್ಲಿ ವಿವಿಧವಾದ ವಾದಗಳು ನಡೆದುವು. ಒಂದು ಪಕ್ಷದಲ್ಲಿ ಅನೇಕ ಮಹರ್ಷಿಗಳೂ ಮತ್ತೊಂದು ಪಕ್ಷದಲ್ಲಿ ಯಾಜ್ಞವಲ್ಕ್ಯ ಮುನಿಯೂ ವಾದ ಮಾಡಿದರು.

೫೩. ಅನಂತರದಲ್ಲಿ ಜ್ಞಾನಿಯಾದ ಯಾಜ್ಞವಲ್ಕ್ಯ ಮುನಿಯಿಂದ ಪ್ರತಿಯೊಬ್ಬ ಮಹರ್ಷಿಯು ಪ್ರತ್ಯೇಕವಾಗಿ ಪ್ರಶ್ನಿಸಲ್ಪಟ್ಟವನಾಗಿ ಉತ್ತರವನ್ನು ಹೇಳಲು ಶಕ್ತನಾಗಲಿಲ್ಲ.

೫೪. ಬ್ರಹ್ಮಜ್ಞಾನಕ್ಕೆ ರಾಶಿಯಂತಿರುವ ಮಹಾಮುನಿಯಾದ ಯಾಜ್ಞವಲ್ಕ್ಯನು ಸಕಲ ಮಹರ್ಷಿಗಳನ್ನೂ ಗೆದ್ದು ತಕ್ಷಣದಲ್ಲಿ ವಾದ ಮಾಡಲು ಬಂದ ಶಾಕಲ್ಯ ಮುನಿಯನ್ನು ಕಂಡು ಈ ರೀತಿಯಾಗಿ ಹೇಳಿದನು.

೫೫. ಶಾಕಲ್ಯ ಮುನಿಯೇ! ಸುಮ್ಮನೆ ಧ್ಯಾನಿಸುತ್ತ ಏತಕ್ಕೆ ನಿಂತಿರುವಿ.

ಏವಂ ಸ ಧರ್ಷಿತಸ್ತೇನ ರೋಷಾತ್ತಾಮ್ರಾಸ್ಯಲೋಚನಃ ।
ಪ್ರೋವಾಚ ಯಾಜ್ಞವಲ್ಕ್ಯಂ ಸ ಪರುಷಂ ಮುನಿಸನ್ನಿಧೌ ॥ ೫೬ ॥

ತ್ವಮಸ್ಮಾಂಸ್ತೃಣವತ್ಕೃತ್ವಾ ತಥೈವಾನ್ಯಾನ್ ದ್ವಿಜೋತ್ತಮಾನ್ ।
ವಿದ್ಯಾಧನಂ ಮಹಾಸಾರಂ ಸ್ವಯಂಗ್ರಾಹಂ ಜಿಘೃಕ್ಷಸಿ ॥ ೫೭ ॥

ಶಾಕಲ್ಯೇನೈವಮುಕ್ತಸ್ತು ಯಾಜ್ಞವಲ್ಕ್ಯಸ್ತಮಬ್ರವೀತ್ ।
ಬ್ರಹ್ಮಿಷ್ಠಾನಾಂ ಬಲಂ ವಿದ್ಧಿ ವಿದ್ಯಾತತ್ತ್ವಾರ್ಥದರ್ಶನಮ್ ॥ ೫೮ ॥

ಕಾಮಸ್ಯಾರ್ಥೇನ ಸಂಬಂಧಸ್ತೇನಾರ್ಥಂ ಕಾಮಯಾಮಹೇ ।
ಕಾಮಪ್ರಶ್ನಧನಾ ವಿಪ್ರಾಃ ಕಾಮಪ್ರಶ್ನಂ ವದಾಮಹೇ ॥ ೫೯ ॥

ಪಣಶ್ಚೈವಾಸ್ಯ ರಾಜರ್ಷೇಸ್ತಸ್ಮಾನ್ನೀತಂ ಧನಂ ಮಯಾ ।
ಏತಚ್ಛ್ರುತ್ವಾ ವಚಸ್ತಸ್ಯ ಶಾಕಲ್ಯಃ ಕ್ರೋಧಮೂರ್ಛಿತಃ ॥ ೬೦ ॥

---

ಹೇಳಬೇಕಾದುದನ್ನು ಹೇಳು, ಯಜಮಾನನಿಂದ ಇರಿಸಲ್ಪಟ್ಟ ಪಣವು ನನ್ನಿಂದ ಬಂಧಿಸಿ ಒಯ್ಯಲ್ಪಟ್ಟಿತು.

೫೬. ಈ ರೀತಿಯಾಗಿ ಯಾಜ್ಞವಲ್ಕ್ಯ ಮುನಿಯಿಂದ ತಿರಸ್ಕರಿಸಲ್ಪಟ್ಟ ಶಾಕಲ್ಯ ಮುನಿಯು ಕೋಪದಿಂದ ಕೆಂಪಾದ ಮುಖ ಮತ್ತು ಕಣ್ಣುಗಳುಳ್ಳವನಾಗಿ ಯಾಜ್ಞವಲ್ಕ್ಯನನ್ನು ಕುರಿತು ಮುನಿಗಳ ಸನ್ನಿಧಿಯಲ್ಲಿ ಕಠಿನವಾಗಿ ಮಾತನಾಡಿದನು.

೫೭. ಮುನಿಯೆ ! ನೀನು ನಮ್ಮನ್ನೂ ಮತ್ತು ಇತರ ಸಮಸ್ತ ದ್ವಿಜೋತ್ತಮರನ್ನೂ ತೃಣದಂತೆ ಭಾವಿಸಿ ಮಹತ್ತಾದ ಸಾರದಿಂದ ಕೂಡಿದ ವಿದ್ಯಾಧನವನ್ನು ಸ್ವಂತವಾಗಿ ಅಪಹರಿಸಿ ಗ್ರಹಿಸಲು ಇಚ್ಛಿಸುತ್ತೀ.

೫೮. ಶಾಕಲ್ಯನಿಂದ ಈ ರೀತಿಯಾಗಿ ಹೇಳಲ್ಪಟ್ಟ ಯಾಜ್ಞವಲ್ಕ್ಯಮುನಿಯು ಬ್ರಹ್ಮಿಷ್ಠರಾದ ದ್ವಿಜರಿಗೆ ಇರುವ ತತ್ತ್ವಜ್ಞಾನಮಯವಾದ ಅಸಾಧಾರಣವಾದ ಬಲವನ್ನು ತಿಳಿದುಕೊ, ಎಂಬುದಾಗಿ ಶಾಕಲ್ಯನಿಗೆ ಪ್ರತ್ಯುತ್ತರ ಕೊಟ್ಟನು.

೫೯. ಮತ್ತು ಕಾಮಕ್ಕೂ ಅರ್ಥಕ್ಕೂ ಪರಸ್ಪರವಾಗಿ ಸಂಬಂಧವಿರುವುದು. ಆದುದರಿಂದ ಅರ್ಥವನ್ನ ನಾವು ಕಾಮಿಸುವೆವು. ಅರ್ಥ ಸಂಪಾದನಕ್ಕೋಸ್ಕರ ಕಾಮಪ್ರಶ್ನಗಳನ್ನು ಧನದಂತೆ ಸತ್ಕರಿಸಿ ಕಾಮಪ್ರಶ್ನಗಳ ಉತ್ತರವನ್ನು ಹೇಳುವೆವು.

೬೦. ರಾಜರ್ಷಿಯಾದ ಜನಕನು ಈ ಧನವನ್ನು ಪಣವಾಗಿ ಇಟ್ಟಿರುವನು.

ಯಾಜ್ಞವಲ್ಕ್ಯಮಥೋವಾಚ ಕಾಮಪ್ರಶ್ನಾರ್ಥಕೃದ್ವಚಃ
ಬ್ರೂಹೀದಾನೀಂ ಮಯೋದ್ದಿಷ್ಟಾನ್ ಕಾಮಪ್ರಶ್ನಾನ್ ಯಥಾರ್ಥತಃ
|| ೬೧ ||
ತತಃ ಸಮಭವದ್ವಾದಸ್ತಯೋರ್ಬ್ರಹ್ಮವಿದೋರ್ಮಹಾನ್ ।
ಸಾಗ್ರಂ ಪ್ರಶ್ನಸಹಸ್ರಂ ತು ಶಾಕಲ್ಯಃ ಸೋಽಕರೋತ್ತದಾ || ೬೨ ||

ಯಾಜ್ಞವಲ್ಕ್ಯೋಽಬ್ರವೀತ್ ಸರ್ವಮೃಷೀಣಾಂ ಶೃಣ್ವತಾಂ ತದಾ ।
ಶಾಕಲ್ಯಸ್ತ್ವಸ ನಿರ್ವಾದೋ ಯಾಜ್ಞವಲ್ಕ್ಯಸ್ತಮಬ್ರವೀತ್ || ೬೩ ||

ಪ್ರಶ್ನಮೇಕಂ ಮಮಾಪಿ ತ್ವಂ ಶಾಕಲ್ಯ ವದ ಕಾಮಿಕಮ್ ।
ಪಣಪ್ರಾಪ್ತಸ್ಯ ವಾದಸ್ಯ ಬ್ರುವತೋರ್ಮೃತ್ಯುರತ್ರ ವೈ || ೬೪ ||

---

ಆದುದರಿಂದ ನಾನು ಆ ಧನವನ್ನು ಸ್ವೀಕರಿಸಿರುವೆನು. ಈ ಮಾತನ್ನು ಕೇಳಿ ಶಾಕಲ್ಯ ಮುನಿಯು ಕ್ರೋಧದಿಂದ ಬಲುವಾಗಿ ದೀಪ್ತನಾದನು.

೬೧. ಆಗ ಯಾಜ್ಞವಲ್ಕ್ಯಮುನಿಯನ್ನು ಕುರಿತು ಕಾಮ ಪ್ರಶ್ನಮಾಡುವ ಉದ್ದೇಶವನ್ನು ತೋರಿಸಿ ಮಾತನಾಡಿದನು. ಮುನಿಯೆ! ಈಗ ನಾನು ಉದ್ದೇಶ ಮಾಡಿರುವ ಕಾಮ ಪ್ರಶ್ನಗಳಿಗೆ ಯಥಾರ್ಥವಾದ ಉತ್ತರವನ್ನು ಕೊಡು ಎಂದು ಹೇಳಿದನು.

೬೨. ಅನಂತರ ಬ್ರಹಜ್ಞಾನಿಗಳಾದ ಆ ಇಬ್ಬರು ಮಹಾಮುನಿಗಳಿಗೆ ದೊಡ್ಡ ವಾದವು ಉಂಟಾಯಿತು. ಆ ಸಂದರ್ಭದಲ್ಲಿ ಶಾಕಲ್ಯಮುನಿಯು ಪೂರ್ಣವಾಗಿ ಒಂದು ಸಹಸ್ರ ಪ್ರಶ್ನಗಳನ್ನು ಮಾಡಿದನು.

೬೩. ಯಾಜ್ಞವಲ್ಕ್ಯ ಮುನಿಯು ಋಷಿಗಳೆಲ್ಲರೂ ಕೇಳುತ್ತಿರುವ ಹಾಗೆಯೇ ಎಲ್ಲ ಪ್ರಶ್ನಗಳಿಗೂ ಉತ್ತರ ಕೊಟ್ಟನು. ಕಡೆಗೆ ಶಾಕಲ್ಯ ಮುನಿಯು ವಾದವನ್ನು ಬಿಟ್ಟು ಸುಮ್ಮನಾದನು. ಆಗ ಯಾಜ್ಞವಲ್ಕ್ಯ ಮುನಿಯು ಶಾಕಲ್ಯನನ್ನು ಕುರಿತು ಹೀಗೆ ಹೇಳಿದನು.

೬೪. ಶಾಕಲ್ಯ ಮುನಿಯೆ! ನೀನು ನನ್ನ ಒಂದು ಕಾಮಪ್ರಶ್ನೆಗೆ ಉತ್ತರವನ್ನು ಹೇಳು. ಪಣವನ್ನು ಗೆಲ್ಲಬೇಕೆಂಬ ಉದ್ದೇಶದಿಂದ ಹೂಡಿರುವ ವಾದ ಸಂದರ್ಭದಲ್ಲಿ ವಾದಿಗಳಲ್ಲಿ ಪರಾಜಿತರಾದವರು ಮೃತ್ಯುಗ್ರಸ್ತರಾಗುವೆವು.

ಸುಸೂಕ್ಷ್ಮಜ್ಞಾನಸಂಯುಕ್ತಂ ಸಾಂಖ್ಯಂ ಯೋಗಮಥಾಪಿ ವಾ ।
ಅಧ್ಯಾತ್ಮಸ್ಯ ಗತಿಂ ಮುಖ್ಯಾಂ ಧ್ಯಾನಮಾರ್ಗಮಥಾಪಿ ವಾ ॥ ೬೫ ॥

ಅಥ ಸಂಚೋದಿತಃ ಪ್ರಶ್ನೋ ಯಾಜ್ಞವಲ್ಕ್ಯೇನ ಧೀಮತಾ ।
ಶಾಕಲ್ಯಸ್ತಮವಿಜ್ಞಾಯ ತಥಾ ಮೃತ್ಯುಮವಾಪ್ತವಾನ್ ॥ ೬೬ ॥

ಏವಂ ಸ್ಮೃತಃ ಸ ಶಾಕಲ್ಯಃ ಪ್ರಶ್ನವ್ಯಾಖ್ಯಾನಪೀಡಿತಃ ।
ಏವಂ ವಿವಾದಃ ಸುಮಹಾನಾಸೀತ್ತೇಷಾಂ ಧನಾರ್ಥಿನಾಮ್ ॥ ೬೭ ॥

ಋಷೀಣಾಮೃಷಿಭಿಃ ಸಾರ್ಧಂ ಯಾಜ್ಞವಲ್ಕ್ಯಸ್ಯ ಚೈವ ಹಿ ।
ಯಾಜ್ಞವಲ್ಕ್ಯೋ ಧನಂ ಗೃಹ್ಯ ಯಶೋ ವಿಖ್ಯಾಯ ಚಾತ್ಮನಃ॥೬೮ ॥
ಜಗಾಮ ವೈ ಗೃಹಂ ಸ್ವಚ್ಛಂ ಶಿಷ್ಯೈಃ ಪರಿವೃತೋ ವಶೀ ।

ಇತಿ ಶ್ರೀ ಬ್ರಹ್ಮಾಂಡಪುರಾಣೇ ಚತುಸ್ತ್ರಿಂಶತ್ತಮೋಽಧ್ಯಾಯಃ

---

೬೫. ಸೂಕ್ಷ್ಮಬುದ್ಧಿಗೆ ವೇದ್ಯವಾದ ಜ್ಞಾನಾಂಶಗಳಿಂದ ಕೂಡಿದ ಸಾಂಖ್ಯ. ಯೋಗ, ಅಧ್ಯಾತ್ಮದರ್ಶನ, ಅಥವಾ ಧ್ಯಾನ ಮಾರ್ಗಗಳೆಲ್ಲವೂ ನಾವು ಮಾಡುವ ವಾದಕ್ಕೆ ವಿಷಯಗಳಾಗಿವೆ. ಯಾವುದರಲ್ಲಾದರೂ ಪ್ರಶ್ನೋತ್ತರಗಳು ನಡೆಯ ಬಹುದು.

೬೬. ಅನಂತರದಲ್ಲಿ ಯಾಜ್ಞವಲ್ಕ್ಯಮುನಿಯಿಂದ ಕೇಳಲ್ಪಟ್ಟ ಪ್ರಶ್ನದ ವಿಷಯದಲ್ಲಿ ಶಾಕಲ್ಯಮುನಿಯು ಉತ್ತರವನ್ನು ಅರಿಯದವನಾಗಿ ಮೊದಲು ಮಾಡಿ ರುವ ಪ್ರತಿಜ್ಞೆಯಂತೆ ಮೃತ್ಯುವನ್ನು ಹೊಂದಿದನು.

೬೭. ಈ ರೀತಿಯಾಗಿ ಆ ಶಾಕಲ್ಯಮುನಿಯು ಪ್ರಶ್ನಕ್ಕೆ ಪ್ರತ್ಯುತ್ತರ ಕೊಡು ವುದರಲ್ಲಿ ಪೀಡಿತನಾಗಿ ಮೃತ್ಯುಹೊಂದಿದನೆಂದು ಸ್ಮರಿಸಲ್ಪಟ್ಟಿರುವನು. ಹೀಗೆ ಧನ ಲೋಭಿಗಳಾದ ಆ ಮುನಿಗಳಿಗೆ ಪರಸ್ಪರವಾಗಿ ಮಹತ್ತಾದ ವಾದವು ನಡೆಯಿತು.

೬೮ ಈ ರೀತಿಯಾಗಿ ಋಷಿಗಳಿಗೆ ಪರಸ್ಪರವಾಗಿಯೂ ಯಾಜ್ಞವಲ್ಕ್ಯ ಮುನಿಯ ಸಂಗಡವೂ ವಾದವು ನಡೆಯಲಾಗಿ ಮಾನಿಯೂ ಜಿತೇಂದ್ರಿಯನೂ ಆದ ಯಾಜ್ಞವಲ್ಕ್ಯ ಮುನಿಯು ವಾದದಲ್ಲಿ ಜಯಿಸಿ ಎಲ್ಲ ಧನವನ್ನು ಸ್ವಾಧೀನಮಾಡಿ ಕೊಂಡು ಮತ್ತು ತನ್ನ ಕೀರ್ತಿಯನ್ನು ವಿಸ್ತಾರಮಾಡಿ ಶಿಷ್ಯ ಜನರೊಡನೆ ತನ್ನ ಪವಿತ್ರವಾದ ಮನೆಗೆ ಹೋದನು.

ಬ್ರಹ್ಮಾಂಡ ಪುರಾಣದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

# ಪಂಚತ್ರಿಂಶತ್ತಮೋಽಧ್ಯಾಯಃ

**ಸೂತ ಉವಾಚ :—**

ದೇವಮಿತ್ರಶ್ಚ ಶಾಕಲ್ಯೋ ಮಹಾತ್ಮಾ ದ್ವಿಜಪುಂಗವಃ ।
ಚಕಾರ ಸಂಹಿತಾಃ ಪಂಚ ಬುದ್ಧಿಮಾನ್ ವೇದವಿತ್ತಮಃ ॥ ೧ ॥

ಪಂಚ ತಸ್ಯಾಭವನ್ ಶಿಷ್ಯಾ ಮುದ್ಗಲೋ ಗೋಖಲಸ್ತಥಾ ।
ಖಲೀಯಾನ್ ಸುತಪಾ ವತ್ಸಃ ಶೈಶಿರೇಯಶ್ಚ ಪಂಚಮಃ ॥ ೨ ॥

ಪ್ರೋವಾಚ ಸಂಹಿತಾಸ್ತಿಸ್ರಃ ಶಾಕಪೂರ್ಣೋ ರಥೀತರಃ ।
ನಿರುಕ್ತಂ ಚ ಪುನಶ್ಚಕ್ರೇ ಚತುರ್ಥಂ ದ್ವಿಜಸತ್ತಮಃ ॥ ೩ ॥

ತಸ್ಯ ಶಿಷ್ಯಾಸ್ತು ಚತ್ವಾರಃ ಪೈಲಶ್ಚೇಕ್ಷಲಕಸ್ತಥಾ ।
ಧೀಮಾನ್ ಶತಬಲಾಕಶ್ಚ ಗಜಶ್ಚೈವ ದ್ವಿಜೋತ್ತಮಾಃ ॥ ೪ ॥

---

೧. ಮಹಾತ್ಮನೂ ದ್ವಿಜಶ್ರೇಷ್ಠನೂ ಅತ್ಯಂತ ಪ್ರಜ್ಞಾಶಾಲಿಯೂ ಮತ್ತು ವೇದಾರ್ಥ ಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ದೇವಮಿತ್ರನು ಐದು ಸಂಹಿತೆಗಳನ್ನು ರಚಿಸಿದನು.

೨. ಆ ದೇವಮಿತ್ರನಿಗೆ ಮುದ್ಗಲ, ಗೋಖಲ, ಖಲೀಯಾನ್, ಸುತಪ, ಮತ್ತು ಶೈಶಿರೇಯ ಎಂಬುದಾಗಿ ಐದು ಮಂದಿಯು ಆ ಐದು ಸಂಹಿತೆಗಳನ್ನು ಅಧ್ಯಯನ ಮಾಡುವ ಶಿಷ್ಯರಾಗಿದ್ದರು.

೩. ಶಾಕಪೂರ್ಣಿ ಪುತ್ರನಾದ ರಥೀತರನು ಮೂರು ಸಂಹಿತಾ ಗ್ರಂಥಗಳನ್ನು ರಚಿಸಿ ಪ್ರವಚನ ಮಾಡಿದನು. ಮತ್ತು ಬ್ರಾಹ್ಮಣ ಶ್ರೇಷ್ಠನಾದ ಆ ರಥೀತರನೂ ನಾಲ್ಕನೆಯದಾಗಿ ನಿರುಕ್ತವೆಂಬ ವೇದಾಂಗವನ್ನು ರಚಿಸಿದನು.

೪. ದ್ವಿಜೋತ್ತಮರೆ! ಆ ರಥೀತರನಿಗೆ ಪೈಲ, ಇಕ್ಷಲಕ, ಶಶಬಲಾಕ, ಮತ್ತು ಗಜ ಎಂಬ ನಾಮಾಂಕಿತರಾದ ನಾಲ್ಕು ಮಂದಿಯು ಮೇಧಾವಿಗಳಾದ ಶಿಷ್ಯರಾಗಿದ್ದು ಸಂಹಿತಾ ಮತ್ತು ನಿರುಕ್ತಗಳ ಅಧ್ಯಯನವನ್ನು ಮಾಡಿದರು.

17

ಬಾಷ್ಕಲಿಸ್ತು ಭರದ್ವಾಜಸ್ತಿಸ್ರಃ ಪ್ರೋವಾಚ ಸಂಹಿತಾಃ ।
ತ್ರಯಸ್ತಸ್ಯಾಭವನ್ ಶಿಷ್ಯಾ ಮಹಾತ್ಮಾನೋ ಗುಣಾನ್ವಿತಾಃ ॥ ೫ ॥

ಧೀಮಾಂಶ್ಚ ತ್ವಾಪಸನಾಪಶ್ಚ ಪಾನ್ನಗಾರಿಶ್ಚ ಬುದ್ಧಿಮಾನ್ ।
ತೃತೀಯಶ್ಚಾರ್ಜವಸ್ತೇ ಚ ತಪಸಾ ಶಂಸಿತವ್ರತಾಃ ॥ ೬ ॥

ವೀತರಾಗಾ ಮಹಾತೇಜಾಃ ಸಂಹಿತಾಜ್ಞಾನಪಾರಗಾಃ
ಇತ್ಯೇತೇ ಬಹ್ವೃಚಾಃ ಪ್ರೋಕ್ತಾಃ ಸಂಹಿತಾ ಯೈಃ ಪ್ರವರ್ತಿತಾಃ ॥ ೭ ॥

ವೈಶಂಪಾಯನಶಿಷ್ಯೋಽಸೌ ಯಜುರ್ವೇದಮಕಲ್ಪಯತ್ ।
ಷಡಶೀತಿಸ್ತು ತೇನೋಕ್ತಾಃ ಸಂಹಿತಾ ಯಜುಷಾಂ ಶುಭಾಃ ॥ ೮ ॥

ಶಿಷ್ಯೇಭ್ಯಃ ಪ್ರದದೌ ತಾಶ್ಚ ಜಗೃಹುಸ್ತೇ ವಿಧಾನತಃ ।
ಏಕಸ್ತತ್ರ ಪರಿತ್ಯಕ್ತೋ ಯಾಜ್ಞವಲ್ಕ್ಯೋ ಮಹಾತಪಾಃ ॥ ೯ ॥

---

೫. ಬಾಷ್ಕಲಪುತ್ರನಾದ ಭರದ್ವಾಜನು ಮೂರು ಸಂಹಿತಾ ಗ್ರಂಥಗಳನ್ನು ನಿರ್ಮಿಸಿ ಪ್ರವಚನ ಮಾಡಿದನು. ಅವರಲ್ಲಿ ಸಂಹಿತಾಧ್ಯಯನಕ್ಕೆ ಮಹಾತ್ಮರೂ ಶಿಷ್ಯ ಗುಣ ಸಂಪನ್ನರೂ ಆದ ಮೂರು ಮಂದಿ ಶಿಷ್ಯರಿದ್ದರು.

೬. ಆ ಶಿಷ್ಯರು ಬುದ್ಧಿಶಾಲಿಯಾದ ಆಪನಾಪ, ಮೇಧಾವಿಯಾದ ಪಾನ್ನಗಾರಿ, ಮತ್ತು ಆರ್ಜವ ಎಂಬ ನಾಮಾಂಕಿತರಾಗಿ ತಪೋನಿಯಮದಿಂದ ಕೂಡಿದ ದೃಢವಾದ ವ್ರತಾಚರಣೆಯುಳ್ಳವರಾಗಿ ಇದ್ದರು.

೭. ಹಿಂದೆ ಹೇಳಿರುದ ಶಿಷ್ಯಮಂಡಲಿಯವರೆಲ್ಲರೂ ರಾಗ-ದ್ವೇಷ ಶೂನ್ಯರಾಗಿಯೂ, ಮಹಾ ತೇಜಸ್ವಿಗಳಾಗಿಯೂ ಸಂಹಿತೆಗಳ ಜ್ಞಾನದಲ್ಲಿ ಪಾರಂಗತರಾಗಿಯೂ ಇದ್ದರು. ಇವರೆಲ್ಲರೂ ಬಹ್ವೃಚ ಶಾಖೆಯ ಸಂಹಿತೆಗಳ ಪ್ರವರ್ತಕರಾಗಿದ್ದರು.

೮. ವೈಶಂಪಾಯನನೆಂಬ ವ್ಯಾಸಶಿಷ್ಯನು ಯಜುರ್ವೇದವನ್ನು ಪ್ರಚಾರ ಮಾಡಿದನು. ಅವನಿಂದ ಯಜುರ್ವೇದದಲ್ಲಿ ಮಂಗಳಕರಗಳಾದ ಎಂಭತ್ತಾರು ಸಂಹಿತೆಗಳು ಪ್ರವಚನಮಾಡಲ್ಪಟ್ಟವು.

೯. ಅವುಗಳನ್ನು ಆಚಾರವಂತರಾದ ಶಿಷ್ಯರಿಗೆ ಉಪದೇಶಮಾಡಲು ಅವರು ನಿಯಮಪೂರ್ವಕವಾಗಿ ವೇದಗಳನ್ನು ಗ್ರಹಿಸಿದರು. ಅವರಲ್ಲಿ ಮಹಾತಪಸ್ವಿಯಾದ ಯಾಜ್ಞವಲ್ಕ್ಯನೆಂಬ ಮುನಿಯು ಮಾತ್ರ ತ್ಯಜಿಸಲ್ಪಟ್ಟನು.

ಷಡಶೀತಿಸ್ತಥಾ ಶಿಷ್ಯಾಃ ಸಂಹಿತಾನಾಂ ವಿಕಲ್ಪಕಾಃ ।
ಸರ್ವೇಷಾಮೇವ ತೇಷಾಂ ವೈ ತ್ರಿಧಾ ಭೇದಾಃ ಪ್ರಕೀರ್ತಿತಾಃ ॥ ೧೦ ॥

ತ್ರಿಧಾ ಭೇದಾಸ್ತು ತೇ ವೇದಭೇದೇಽಸ್ಮಿನ್ನವಮೇ ಶುಭೇ ।
ಉದೀಚ್ಯಾ ಮಧ್ಯದೇಶ್ಯಾಶ್ಚ ಪ್ರಾಚ್ಯಾಶ್ಚೈವ ಪೃಥಗ್ವಿಧಾಃ ॥ ೧೧ ॥

ಶ್ಯಾಮಾಯನಿರುದೀಚ್ಯಾನಾಂ ಪ್ರಧಾನಃ ಸಂಬಭೂವ ಹ ।
ಮಧ್ಯದೇಶಪ್ರತಿಷ್ಠಾತಾ ಚಾಸುರಿಃ ಪ್ರಥಮಃ ಸ್ಮೃತಃ ॥ ೧೨ ॥

ಆಲಂಬಿರಾದಿಃ ಪ್ರಾಚ್ಯಾನಾಂ ತ್ರಯೋ ದೇಶ್ಯಾದಯಸ್ತು ತೇ ।
ಇತ್ಯೇತೇ ಚರಕಾಃ ಪ್ರೋಕ್ತಾಃ ಸಂಹಿತಾವಾದಿನೋ ದ್ವಿಜಾಃ ॥ ೧೩ ॥

ಋಷಯ ಊಚುಃ :—

ಚರಕಾಧ್ವರ್ಯವಃ ಕೇನ ಕಾರಣಂ ಬ್ರೂಹಿ ತತ್ತ್ವತಃ
ಕಿಂ ಚೀರ್ಣಂ ಕಸ್ಯ ವಾ ಹೇತೋಶ್ಚರಕತ್ವಂ ಚ ಭೇಜಿರೇ ॥ ೧೪ ॥

---

೧೦. ಮಿಕ್ಕ ತೊಂಭತ್ತಾರು ಮಂದಿ ಶಿಷ್ಯರು ಪ್ರತ್ಯೇಕವಾಗಿ ಸಂಹಿತೆಗಳನ್ನು ಕಲ್ಪಿಸಿದರು. ಎಲ್ಲ ಶಿಷ್ಯವರ್ಗದಲ್ಲಿ ಮೂರು ಪಂಗಡಗಳು ಉಂಟಾದವು.

೧೧. ಉತ್ತಮವೂ ಮಂಗಳಕರವೂ ಆದ ಈ ವೇದಭಾಗದಲ್ಲಿ ಉದೀಚ್ಯ, ಮಧ್ಯದೇಶ್ಯ, ಮತ್ತು ಪ್ರಾಚ್ಯರೆಂದು ಪ್ರತ್ಯೇಕ ಪ್ರಕಾರಗಳಿಂದ ಕೂಡಿದ ಮೂರು ಪ್ರಭೇದಗಳು ಪ್ರವರ್ತಿಸಿದವು.

೧೨. ಉದೀಚ್ಯರಾದ ಶಿಷ್ಯವರ್ಗದಲ್ಲಿ ಶ್ಯಾಮಾಯನಿ ಎಂಬುವನು ಪ್ರಧಾನ ಶಿಷ್ಯನಾದನು. ಹಾಗೆಯೆ ಆಸುರಿ ಎಂಬುವನು ಮಧ್ಯದೇಶದ ಶಿಷ್ಯರಲ್ಲಿ ಪ್ರಧಾನನಾದನು.

೧೩. ಪ್ರಾಚ್ಯಶಿಷ್ಯ ಮಂಡಲದಲ್ಲಿ ಆಲಂಬಿ ಎಂಬುವನು ಪ್ರಥಮಗಣ್ಯನಾದನು. ಈ ರೀತಿಯಾಗಿ ಇವರು ಆಯಾಯ ದೇಶದ ಪ್ರಧಾನಶಿಷ್ಯರಾದರು. ಈ ದ್ವಿಜರೆಲ್ಲರೂ ಸಂಹಿತೆಯನ್ನು ಪ್ರವಚನಮಾಡಿದ ಚರಕ ಎಂಬ ನಾಮಾಂಕನವುಳ್ಳ ಶಿಷ್ಯರಾದರು.

೧೪. ಇದನ್ನು ಕೇಳಿ ಋಷಿಗಳು ಪ್ರಶ್ನೆ ಮಾಡಿದರು - ಮುನಿಯೆ! ಆ ದ್ವಿಜರಿಗೆ ಚರಕಾಧ್ವರ್ಯು ಎಂಬ ಹೆಸರು ಬರಲು ಕಾರಣವೇನು! ಇದನ್ನು ತಾತ್ತ್ವಿಕವಾಗಿ ಹೇಳಬೇಕು. ಅವರು ಯಾವುದನ್ನು ಏತಕ್ಕಾಗಿ ಆಚರಿಸಿ ಚರಕ ಎಂಬ ಪ್ರಸಿದ್ಧಿಯನ್ನು ಹೊಂದಿರುವರು?

**ಸೂತ ಉವಾಚ :—**

**ಕಾರ್ಯಮಾಸೀದೃಷೀಣಾಂ ಚ ಕಿಂಚಿದ್ಬ್ರಾಹ್ಮಣಸತ್ತಮಾಃ ।**
**ಮೇರುಪೃಷ್ಠಂ ಸಮಾಸಾದ್ಯ ತೈಸ್ತದಾ ತ್ವಿತಿ ಮಂತ್ರಿತಮ್ ॥ ೧೫ ॥**

**ಯೋ ಽತ್ರ ಸಪ್ತರಾತ್ರೇಣ ನಾಗಚ್ಛೇದ್ದ್ವಿಜಸತ್ತಮಃ ।**
**ಸ ಕುರ್ಯಾದ್ಬ್ರಹ್ಮಹತ್ಯಾಂ ವೈ ಸಮಯೋ ನಃ ಪ್ರಕೀರ್ತಿತಃ ॥ ೧೬ ॥**

**ತತಸ್ತೇ ಸಗಣಾಃ ಸರ್ವೇ ವೈಶಂಪಾಯನವರ್ಜಿತಾಃ ।**
**ಪ್ರಯಯುಃ ಸಪ್ತರಾತ್ರೇಣ ಯತ್ರ ಸಂಧಿಃ ಕೃತೋಽಭವತ್ ॥ ೧೭ ॥**

**ಬ್ರಾಹ್ಮಣಾನಾಂ ತು ವಚನಾದ್ಬ್ರಹ್ಮಹತ್ಯಾಂ ಚಕಾರ ಸಃ ।**
**ಶಿಷ್ಯಾನಥ ಸಮಾನೀಯ ಸ ವೈಶಂಪಾಯನೋಽಬ್ರವೀತ್ ॥ ೧೮ ॥**

**ಬ್ರಹ್ಮಹತ್ಯಾಂ ಚರಧ್ವಂ ವೈ ಮತ್ಕೃತೇ ದ್ವಿಜಸತ್ತಮಾಃ ।**
**ಸರ್ವೇ ಯೂಯಂ ಸಮಾಗಮ್ಯ ಬ್ರೂತ ಕಾಮಂ ಹಿತಂ ವಚಃ ॥ ೧೯ ॥**

---

೧೫. ಈ ಪ್ರಶ್ನವನ್ನು ಕೇಳಿದ ಸೂತಮುನಿಯು ಇಂತೆಂದನು :—ಶ್ರೇಷ್ಠರಾದ ಬ್ರಾಹ್ಮಣರೆ! ಋಷಿಗಳು ಒಂದಾನೊಂದು ಕಾರ್ಯವಿಶೇಷವನ್ನು ಕೈಗೊಂಡರು, ಅದಕ್ಕೋಸ್ಕರ ಎಲ್ಲರೂ ಮೇರುಪರ್ವತದ ತಪ್ಪಲನ್ನು ಹೊಂದಿ ಅವರು ಈ ರೀತಿಯಾಗಿ ಮಂತ್ರಾಲೋಚನೆಯನ್ನು ಮಾಡಿದರು.

೧೬. ನಮ್ಮ ಉದ್ದಿಷ್ಟಕಾರ್ಯಕ್ಕೋಸ್ಕರ ಯಾವ ದ್ವಿಜಶ್ರೇಷ್ಠನು ಏಳು ದಿನಗಳೊಳಗೆ ಇಲ್ಲಿಗೆ ಬರುವುದಿಲ್ಲವೋ, ಅವನು ಬ್ರಹ್ಮಹತ್ಯೆಯನ್ನು ಮಾಡಿದ ಮಹಾ ಪಾತಕಕ್ಕೆ ಪಾತ್ರನಾಗುವನು ಈ ನಮ್ಮ ಪ್ರತಿಜ್ಞೆಯು ಅಲಂಘನೀಯವಾದುದು.

೧೭. ಅನಂತರದಲ್ಲಿ ವೈಶಂಪಾಯನ ಮುನಿಯನ್ನು ಹೊರತಾಗಿ ಎಲ್ಲರೂ ಗುಂಪುಗೂಡಿ ಸಂಕೇತವನ್ನು ಮಾಡಿಕೊಂಡ ಸ್ಥಳಕ್ಕೆ ಏಳು ದಿನಗಳೊಳಗೆ ಬಂದು ಸೇರಿದರು.

೧೮. ಆದರೆ ವೈಶಂಪಾಯನ ಮುನಿಯು ಮಾತ್ರ ಬ್ರಾಹ್ಮಣರ ವಚನವನ್ನು ಉಲ್ಲಂಘಿಸಿ ಅದರಂತೆ ಬ್ರಹ್ಮಹತ್ಯಾ ದೋಷವನ್ನು ಹೊಂದಿದನು. ಆಗ ತನ್ನ ಶಿಷ್ಯರನ್ನು ಕರೆದು ಆ ವೈಶಂಪಾಯನ ಮುನಿಯು ಹೇಳಿದನು.

೧೯. ಪ್ರಶಸ್ತರಾದ ದ್ವಿಜರೆ! ನನಗೋಸ್ಕರ ನನಗೆ ಪ್ರಾಪ್ತವಾದ ಬ್ರಹ್ಮಹತ್ಯಾ

ಯಾಜ್ಞವಲ್ಕ್ಯ ಉವಾಚ :—

ಅಹಮೇಕಶ್ಚರಿಷ್ಯಾಮಿ ತಿಷ್ಠಂತು ಮುನಯಸ್ತ್ವಮೇ ।
ಬಲೇನೋತ್ಥಾಪಯಿಷ್ಯಾಮಿ ತಪಸಾ ಸ್ವೇನ ಭಾವಿತಃ ॥ ೨೦ ॥

ಏವ ಮುಕ್ತಸ್ತತಃ ಕ್ರುದ್ಧೋ ಯಾಜ್ಞವಲ್ಕ್ಯಮಥಾತ್ಯಜತ್ ।
ಉವಾಚ ಯತ್ತ್ವಯಾಧೀತಂ ಸರ್ವಂ ಪ್ರತ್ಯರ್ಪಯಸ್ವ ಮೇ ॥ ೨೧ ॥

ಏವಮುಕ್ತಃ ಸರೂಪಾಣಿ ಯಜೂಂಷಿ ಗುರವೇ ದದೌ ।
ರುಧಿರೇಣ ತಥಾಕ್ತಾನಿ ಛರ್ದಿತ್ವಾ ಬ್ರಹ್ಮವಿತ್ತಮಾಃ ॥ ೨೨ ॥

ತತಃ ಸ ಧ್ಯಾನಮಾಸ್ಥಾಯ ಸೂರ್ಯಮಾರಾಧಯದ್ದ್ವಿಜಃ ।
ಸೂರ್ಯೇ ಬ್ರಹ್ಮ ಯದುತ್ಪನ್ನಂ ತಂ ಗತ್ವಾ ಪ್ರತಿತಿಷ್ಠತಿ ॥ ೨೩ ॥

---

ಕರ್ಮವನ್ನು ನೀವು ಅನುಭವಿಸಿ ಕಳೆಯಿರಿ, ಈ ವಿಷಯದಲ್ಲಿ ನೀವು ಸೇರಿ ಆಲೋಚಿಸಿ ನಿಮಗೆ ಹಿತವೆಂದು ತೋರುವ ಅಭಿಪ್ರಾಯವನ್ನು ಹೇಳಿರಿ, ಎಂದು ವೈಶಂಪಾಯನ ಮುನಿಯು ಹೇಳಿದನು.

೨೦. ಇದನ್ನು ಕೇಳಿದ ಶಿಷ್ಯವರ್ಗದಲ್ಲಿ ಯಾಜ್ಞವಲ್ಕ್ಯ ಮುನಿಯು ಇಂತೆಂದನು :—ನಾನು ಒಬ್ಬನು ಬ್ರಹ್ಮಹತ್ಯಾ ಕರ್ಮವನ್ನು ಆಚರಿಸುತ್ತೇನೆ. ಈ ಮುನಿಗಳು ಸುಮ್ಮನಿರಲಿ. ತಪೋಮಹಿಮೆಯಿಂದ ಕೂಡಿದ ನಾನು ನನ್ನ ತಪಃಶಕ್ತಿಯಿಂದ ಬಲಾತ್ಕಾರದಿಂದ ಬ್ರಹ್ಮಹತ್ಯಾ ಕರ್ಮವನ್ನು ಮುಗಿಸುವೆನು.

೨೧. ಯಾಜ್ಞವಲ್ಕ್ಯ ಮುನಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ಗುರುವು ಕೂಡಲೇ ಕುಪಿತನಾಗಿ ಶಿಷ್ಯನನ್ನು ಪರಿತ್ಯಾಗಮಾಡಿದನು. ಮತ್ತು ನೀನು ನನ್ನಿಂದ ಅಭ್ಯಾಸಮಾಡಿರುವ ವಿದ್ಯೆಯನ್ನು ನನಗೆ ಪ್ರತ್ಯರ್ಪಣಮಾಡೆಂದು ಕೇಳಿದನು.

೨೨. ಬ್ರಹ್ಮಜ್ಞಾನಿಗಳೆ! ಗುರುವು ಹೀಗೆ ವಿದ್ಯೆಯನ್ನು ಪ್ರತ್ಯರ್ಪಣಮಾಡಬೇಕೆಂದು ಕೇಳಲು ಆ ಶಿಷ್ಯನು ತಾನು ಅಧ್ಯಯನಮಾಡಿರುವ ಸುಂದರಾಕಾರದಿಂದ ಕೂಡಿದ ವೇದಗಳನ್ನು ರಕ್ತದಿಂದ ಸಹಿತವಾಗಿ ವಮನಮಾಡಿ ಅರ್ಪಿಸಿದನು.

೨೩. ಅನಂತರದಲ್ಲಿ ಆ ಯಾಜ್ಞವಲ್ಕ್ಯ ಮುನಿಯು ಧ್ಯಾನಾರೂಢನಾಗಿ ಸೂರ್ಯಮಂಡಲವೆಂಬ ಉಪಾಧಿಯನ್ನು ಹೊಂದಿ ಅಲ್ಲಿ ಪ್ರತಿಷ್ಠಿತವಾಗಿರುವ ಬ್ರಹ್ಮವಸ್ತುವನ್ನು ಆರಾಧಿಸಿದನು.

ತತೋ ಯಾನಿ ಗತಾನ್ಯೂರ್ಧ್ವಂ ಯಜೂಂಷ್ಯಾದಿತ್ಯಮಂಡಲಮ್ ।
ತಾನಿ ತಸ್ಮೈ ದದೌ ತುಷ್ಟಃ ಸೂರ್ಯೋ ವೈ ಬ್ರಹ್ಮರಾತಯೇ ॥ ೨೪ ॥

ಅಶ್ವರೂಪಾಯ ಮಾರ್ತಂಡೋ ಯಾಜ್ಞವಲ್ಕ್ಯಾಯ ಧೀಮತೇ ।
ಯಜೂಂಷ್ಯಧೀಯತೇ ತಾನಿ ಬ್ರಾಹ್ಮಣಾ ಯೇನ ಕೇನಚಿತ್ ॥ ೨೫ ॥

ಅಶ್ವರೂಪಾಯ ದತ್ತಾನಿ ತತಸ್ತೇ ವಾಜಿನೋಽಭವನ್ ।
ಬ್ರಹ್ಮಹತ್ಯಾ ತು ಯೈಶ್ಚೀರ್ಣಾ ಚರಣಾಚ್ಚರಕಾಃ ಸ್ಮೃತಾಃ ॥ ೨೬ ॥

ವೈಶಂಪಾಯನಶಿಷ್ಯಾಸ್ತೇ ಚರಕಾಃ ಸಮುದಾಹೃತಾಃ ।
ಇತ್ಯೇತೇ ಚರಕಾಃ ಪ್ರೋಕ್ತಾ ವಾಜಿನಸ್ತು ನಿಬೋಧತ ॥ ೨೭ ॥

ಯಾಜ್ಞವಲ್ಕ್ಯಸ್ಯ ಶಿಷ್ಯಾಸ್ತೇ ಕಣ್ವೋ ಬೌಧೇಯ ಏವ ಚ ।
ಮಧ್ಯಂದಿನಸ್ತು ಸಾಪತ್ಯೋ ವೈಧೇಯಶ್ಚಾದ್ಧಬೌದ್ಧಕೌ ॥ ೨೮ ॥

---

೨೪. ಅನಂತರದಲ್ಲಿ ಯಾವ ಯಜುರ್ವೇದಗಳು ಊರ್ಧ್ವಭಾಗವನ್ನು ವ್ಯಾಪಿಸಿ ಆದಿತ್ಯನೆಂಬ ಅಭಿಮಾನಿದೇವತೆಯನ್ನು ಹೊಂದಿದ್ದುವೋ,ಅವುಗಳನ್ನು ಆರಾಧನದಿಂದ ಸಂತುಷ್ಟನಾದ ಸೂರ್ಯನು ಬ್ರಹ್ಮಪುತ್ರನಾದ ಯಾಜ್ಞವಲ್ಕ್ಯನಿಗೆ ಉಪದೇಶಿಸಿದನು.

೨೫. ಸೂರ್ಯ ಪರಮಾತ್ಮನು ಅಶ್ವರೂಪದಿಂದ ಇರುವ ಜ್ಞಾನಿಯಾದ ಯಾಜ್ಞವಲ್ಕ್ಯನಿಗೆ ಉಪದೇಶಮಾಡಿದನು. ಆ ವೇದಶಾಖೆಯನ್ನು ಶಿಷ್ಯ ಪರಂಪರೆ ಯಿಂದ ಅನೇಕ ಬ್ರಾಹ್ಮಣರು ಅಧ್ಯಯನಮಾಡುತ್ತಲಿರುವರು.

೨೬. ಈ ಶಾಖೆಯನ್ನು ಅಶ್ವರೂಪವನ್ನು ಸ್ವೀಕರಿಸಿದ ಯಾಜ್ಞವಲ್ಕ್ಯನಿಗೆ ಸೂರ್ಯನು ದಾನಮಾಡಿರುವುದರಿಂದ ಅದನ್ನು ಅಧ್ಯಯನಮಾಡುವವರು "ವಾಜಿ" ಎಂಬ ಅಶ್ವನಾಮದಿಂದ ಸಂಕೇತಿತರಾದರು. ಅನಂತರ ಬ್ರಹ್ಮಹತ್ಯಾ ಕರ್ಮವನ್ನು ಆಚರಿಸಿದವರು "ಚರಕ" ಎಂಬ ಅನ್ವರ್ಥನಾಮವನ್ನು ಹೊಂದಿದರು.

೨೭. ಆ ಚರಕ ಎಂಬುವರೆಲ್ಲರೂ ವೈಶಂಪಾಯನ ಮುನಿಯ ಶಿಷ್ಯರಾಗಿ ಪ್ರಸಿದ್ಧರಾದರು. ಮುಂದೆ ವಾಜಿ ಶಾಖೆಯನ್ನು ಅಧ್ಯಯನಮಾಡಿ ಪ್ರಚಾರಪಡಿಸಿದ ಶಿಷ್ಯ ಪರಂಪರೆಯನ್ನು ಕೇಳಿರಿ.

೨೮. ಕಾಣ್ವ, ಬೌಧೇಯ, ಮಧ್ಯಂದಿನ, ಸಾಪತ್ಯ, ವೈಧೇಯ, ಆದ್ಧ, ಬೌದ್ಧಕ ಎಂಬುವರು ಆಯಾಜ್ಞವಲ್ಕ್ಯ ಮುನಿಯ ಶಿಷ್ಯವೃಂದದಲ್ಲಿ ಸೇರಿದವರಾಗಿದ್ದರು.

ತಾಪನೀಯಾಶ್ಚ ವತ್ಸಾಶ್ಚ ತಥಾ ಜಾಬಾಲಕೇವಲೌ ।
ಆವಟೀ ಚ ತಥಾ ಪುಂಡ್ರೋ ವೈಣೋಯಃ ಸಪರಾಶರಃ ॥ ೨೯ ॥

ಇತ್ಯೇತೇ ವಾಜಿನಃ ಪ್ರೋಕ್ತಾ ದಶ ಪಂಚ ಚ ಸತ್ತಮಾಃ ।
ಶತಮೇಕಾಧಿಕಂ ಜ್ಞೇಯಂ ಯಜುಷಾಂ ಯೇ ವಿಕಲ್ಪಕಾಃ ॥ ೩೦ ॥

ಪುತ್ರಮಧ್ಯಾಪಯಾಮಾಸ ಸುಮಂತುಮಥ ಜೈಮಿನಿಃ ।
ಸುಮಂತುಶ್ಚಾಪಿ ಸುತ್ವಾನಂ ಪುತ್ರಮಧ್ಯಾಪಯತ್ಪ್ರಭುಃ ॥ ೩೧ ॥

ಸುಕರ್ಮಾಣಂ ತತಃ ಸುತ್ವಾನ್ ಪುತ್ರಮಧ್ಯಾಪಯತ್ಪ್ರಭುಃ ।
ಸ ಸಹಸ್ರಮಧೀತ್ಯಾಶು ಸುಕರ್ಮಾಪ್ಯಥ ಸಂಹಿತಾಃ ॥ ೩೨ ॥

ಪ್ರೋವಾಚಾಥ ಸಹಸ್ರಸ್ಯ ಸುಕರ್ಮಾ ಸೂರ್ಯವರ್ಚಸಃ ।
ಅನಧ್ಯಾಯೇಷ್ವಧೀಯಾನಾಂಸ್ತಾಞ್ಜಘಾನ ಶತಕ್ರತುಃ ॥ ೩೩ ॥

---

೨೯. ಮತ್ತು ತಾಪನೀಯ, ವತ್ಸ, ಜಾಬಾಲ, ಕೇವಲ, ಆವಟೀ, ಪುಂಡ್ರ, ವೈಣೋಯ ಮತ್ತು ಪರಾಶರರೆಂಬುವರು ಆ ಶಿಷ್ಯಗಣದಲ್ಲಿ ಸೇರಿ ವಾಜಿ ಶಾಖೆಯನ್ನು ಅಧ್ಯಯನಮಾಡಿದರು.

೩೦. ಸಾಧು ಮುನಿಗಳೆ! ಈ ರೀತಿಯಾಗಿ ವಾಜಿ ಶಾಖೆಯನ್ನು ಅಧ್ಯಯನ ಮಾಡಿರುವವರು ಹದಿನೈದು ಸಂಖ್ಯೆಯಿಂದ ಕೂಡಿದ ಮುನಿಗಳಿರುವರು. ಒಂದುನೂರು ಒಂದು ಮಂದಿಯು ಒಟ್ಟಾಗಿ ಯಜುರ್ವೇದ ವಿಭಾಗಗಳನ್ನು ಅವಾಂತರ ಶಾಖಾ ರೂಪವಾಗಿ ಕಲ್ಪಿಸಿರುವರು.

೩೧. ಸಾಮವೇದದಲ್ಲಿ ಶಿಷ್ಯನಾದ ಜೈಮಿನಿಯು ಸುಮಂತು ಎಂಬ ಶಿಷ್ಯನಿಗೆ ಸಾಮವೇದವನ್ನು ಉಪದೇಶಿಸಿದನು, ಮತ್ತೆ ಆ ಸುಮಂತುವು ತನ್ನ ಪುತ್ರನಾದ ಸುತ್ವಾನ್ ಎಂಬುವನಿಗೆ ಉಪದೇಶವಿತ್ತನು.

೩೨. ಸುತ್ವಾನ್ ಎಂಬುವನು ತನ್ನ ಪುತ್ರನಾದ ಸುಕರ್ಮ ಎಂಬುವನಿಗೆ ಮತ್ತೆ ಸಾಮೋಪದೇಶವನ್ನು ಕೊಟ್ಟನು. ಆ ಸುಕರ್ಮನು ಶಾಖೋಪಶಾಖೆಗಳ ರೂಪದಿಂದ ಒಂದು ಸಹಸ್ರ ಸಂಹಿತೆಗಳನ್ನು ಕಲ್ಪಿಸಿ ಅಧ್ಯಯನಮಾಡಿದನು.

೩೩. ಅನಂತರದಲ್ಲಿ ಸುಕರ್ಮ ಎಂಬುವನು ಸೂರ್ಯವರ್ಚಸ್ವಿಗಳಾದ ಸಹಸ್ರ

ಪ್ರಾಯೋಪವೇಶಮಕರೋತ್ತತೋಽಸೌ ಶಿಷ್ಯಕಾರಣಾತ್ ।
ಕ್ರುದ್ಧಂ ದೃಷ್ಟ್ವಾ ತತಃ ಶಕ್ರೋ ವರಂ ಸೋಽಥ ಪುನರ್ದದೌ ॥ ೩೪ ॥

ಭವಿಷ್ಯತೋ ಮಹಾವೀರ್ಯೌ ಶಿಷ್ಯೌ ತೇಽತುಲವರ್ಚಸೌ ।
ಅಧೀಯಾತಾಂ ಮಹಾಪ್ರಾಜ್ಞೌ ಸಹಸ್ರಂ ಸಂಹಿತಾ ಉಭೌ ॥ ೩೫ ॥

ಏತೇ ಸುರಾ ಮಹಾಭಾಗಾಃ ಸಂಕ್ರುದ್ಧಾ ದ್ವಿಜಸತ್ತಮ ।
ಇತ್ಯುಕ್ತ್ವಾ ವಾಸವಃ ಶ್ರೀಮಾನ್ ಸುಕರ್ಮಾಣಂ ಯಶಸ್ವಿನಮ್ ॥ ೩೬ ॥

ಶಾಂತಕ್ರೋಧಂ ದ್ವಿಜಂ ದೃಷ್ಟ್ವಾ ಕ್ಷಿಪ್ರಮಂತರಧಾತ್ ಪ್ರಭುಃ ।
ತಸ್ಯ ಶಿಷ್ಯೋಽಭವದ್ಧೀಮಾನ್ ಪೌಷ್ಯಾಂಜಿ ರ್ದ್ವಿಜಸತ್ತಮಾಃ ॥ ೩೭ ॥

---

ಶಿಷ್ಯರಿಗೆ ಅವುಗಳನ್ನು ಉಪದೇಶಿಸಿದನು. ಆದರೆ ಆ ಶಿಷ್ಯರು ಅನಧ್ಯಾಯ ದಿನಗಳಲ್ಲಿ ಅಧ್ಯಯನಮಾಡಿದ ದೋಷದಿಂದ ಇಂದ್ರನು ಅವರನ್ನು ಸಂಹರಿಸಿದನು.

೩೪. ಅನಂತರದಲ್ಲಿ ಗುರುವು ತನ್ನ ಶಿಷ್ಯವರ್ಗದ ವಿಪತ್ತನ್ನು ಕಂಡು ಪ್ರಾಯೋಪ ವೇಶವನ್ನು ಉಪಕ್ರಮಿಸಿದನು. ಆಗ ಸುಕರ್ಮ ಮುನಿಯು ಕೋಪಗೊಂಡಿರುವುದನ್ನು ತಿಳಿದು ಅದರ ಶಾಂತಿಗೋಸ್ಕರ ಇಂದ್ರನು ವರದಾನವನ್ನು ಮಾಡಿದನು.

೩೫. ಸಕರ್ಮ ಮುನಿಯೆ! ನಿರುಪಮವಾದ ತೇಜಸ್ಸಿನಿಂದ ದೀಪ್ತರೂ, ಮಹಾವೀರ್ಯಸಂಪನ್ನರೂ ಆದ ಇಬ್ಬರು ಶಿಷ್ಯರು ನಿನಗೆ ಲಭಿಸುವರು. ಪ್ರಜ್ಞಾ ಶಾಲಿಗಳಾದ ಅವರಿಬ್ಬರು ಈ ಎಲ್ಲ ಸಂಹಿತೆಗಳನ್ನು ಅಧ್ಯಯನಮಾಡುವರು.

೩೬. ದ್ವಿಜಶ್ರೇಷ್ಠನೆ! ಇವರು ಅನಧ್ಯಾಯ ದಿನಗಳಲ್ಲಿ ಅಧ್ಯಯನಮಾಡಿರು ವುದರಿಂದ ಈ ಮಹಾಭಾಗರಾದ ದೇವತೆಗಳು ಕ್ರುದ್ಧರಾಗಿರುವರು, ಎಂಬುದಾಗಿ ಯಶಸ್ವಿಯಾದ ಸುಕರ್ಮನಿಗೆ ಪೂಜ್ಯನಾದ ಇಂದ್ರನು ವರವನ್ನು ಕೊಟ್ಟನು

೩೭. ಮತ್ತು ದ್ವಿಜನಿಗೆ ಕೋಪವು ಶಾಂತವಾದುದನ್ನು ತಿಳಿದು ಪ್ರಭುವಾದ ಇಂದ್ರನು ಬೇಗ ಅದೃಶ್ಯನಾದನು. ಬ್ರಾಹ್ಮಣಶ್ರೇಷ್ಠರೆ! ಅನಂತರದಲ್ಲಿ ಆ ಸುಕರ್ಮ ನಿಗೆ ಬುದ್ಧಿಶಾಲಿಯಾದ ಪೌಷ್ಯಂಜಿ ಎಂಬ ಶಿಷ್ಯನಿದ್ದನು.

ಹಿರಣ್ಯನಾಭಃ ಕೌಶಲ್ಯೋ ದ್ವಿತೀಯೋಽಭೂನ್ನರಾಧಿಪಃ ।
ಅಧ್ಯಾಪಯತ ಪೌಷ್ಯಾಞ್ಜಿಃ ಸಹಸ್ರಾರ್ಧಂ ತು ಸಂಹಿತಾಃ ॥ ೩೮ ॥

ತೇ ನಾಮ್ನೋದೀಚ್ಯಸಾಮಾನಃ ಶಿಷ್ಯಾಃ ಪೌಷ್ಯಂಜಿನಃ ಶುಭಾಃ ।
ಶತಾನಿ ಪಂಚ ಕೌಶಲ್ಯಃ ಸಂಹಿತಾನಾಮಧೀತವಾನ್ ॥ ೩೯ ॥

ಶಿಷ್ಯಾ ಹಿರಣ್ಯನಾಭಸ್ಯ ಸ್ಮೃತಾಸ್ತ್ರಪ್ರಾಚ್ಯಸಾಮಗಾಃ ।
ಲೌಗಾಕ್ಷಿಃ ಕುಶುಮಿಶ್ಚೈವ ಕುಶೀದಿರ್ಲಾಂಗಲಿಸ್ತಥಾ ।
ಪೌಷ್ಯಂಜಿಶಿಷ್ಯಾಶ್ಚತ್ವಾರಸ್ತೇಷಾಂ ಭೇದಾನ್ನಿಬೋಧತ ॥ ೪೦ ॥

ನಾಡಾಯನೀಯಃ ಸಹತಂಡಿಪುತ್ರ—
ಸ್ತಸ್ಮಾದನೋವೈನಸಾಮಾ ಸುವಿದ್ವಾನ್ ।
ಸ ಕೋತಿಪುತ್ರಃ ಸುಸಹಾಃ ಸುನಾಮಾ
ಚೈತಾನ್ ಭೇದಾನ್ ವಿತ್ತ ಲೌಗಾಕ್ಷಿಣಸ್ತು ॥ ೪೧ ॥

---

೩೮. ಹಾಗೆಯೆ! ಕೋಶಲ ವಂಶದಲ್ಲಿ ಹುಟ್ಟಿರುವ ಹಿರಣ್ಯನಾಭನೆಂಬುವ ರಾಜನು ಎರಡನೆಯ ಶಿಷ್ಯನಾಗಿದ್ದನು, ಅವರಲ್ಲಿ ಪೌಷ್ಯಂಜಿಯು ಐದುನೂರು ಸಂಹಿತೆಗಳನ್ನು ಅಧ್ಯಯನಮಾಡಿಸಿದನು.

೩೯. ಆ ಪೌಷ್ಯಂಜಿಯ ಮಂಗಳಕರವಾದ ಶಿಷ್ಯರು ಉದೀಚ್ಯಸಾಮ ಎಂದು ಪ್ರಸಿದ್ಧಿಯನ್ನು ಹೊಂದಿದರು. ಕೌಶಲ್ಯರಾಜನು ಮಿಕ್ಕ ಐದುನೂರು ಸಂಹಿತೆಗಳನ್ನು ಅಧ್ಯಯನಮಾಡಿದನು.

೪೦. ಹಿರಣ್ಯನಾಭನ ಶಿಷ್ಯರು ಪ್ರಾಚ್ಯಸಾಮಗರೆಂಬ ನಾಮಾಂಕಿತರಾಗಿ ಸ್ಮರಿಸಲ್ಪಟ್ಟಿರುವರು. ಹಿಂದೆ ಹೇಳಿರುವ ಪೌಷ್ಯಂಜಿ ಎಂಬುವನಿಗೆ ಲೌಗಾಕ್ಷಿ, ಕುಶುಮಿ, ಕುಶೀದಿ ಮತ್ತು ಲಾಂಗಲಿ ಹಿಂದೆ ನಾಲ್ಕು ಮಂದಿ ಶಿಷ್ಯಜನರಿದ್ದರು, ಅವರಿಂದ ಮುಂದುವರಿದಿರುವ ಶಿಷ್ಯ ಪರಂಪರೆಯನ್ನು ಕೇಳಿರಿ.

೪೧. ನಾಡಾಯನೀಯ, ಸಹತಂಡಿಯ ಪುತ್ರ, ಅನೋವೈನ, ಸಕೋತಿಯ ಪುತ್ರ, ಸುಸಹ, ಸುನಾಮ ಎಂಬುವರನ್ನು ಲೌಗಾಕ್ಷಿಯ ಪರಂಪರೆಯಲ್ಲಿ ವೇದಾಧ್ಯಯನ ಮಾಡಿರುವ ಶಿಷ್ಯರನ್ನಾಗಿ ತಿಳಿಯಿರಿ.

ತ್ರಯಸ್ತು ಕುಶುಮೇಃ ಶಿಷ್ಯಾ ಔರಸಃ ಸ ಪರಾಶರಃ ॥ ೪೨ ॥

ನಾಭಿರ್ವಿತ್ತಸ್ತು ತೇಜಸ್ವೀ ತ್ರಿವಿಧಾಃ ಕೌಶುಮಾಃ ಸ್ಮೃತಾಃ ।
ಶೌರಿಷುಃ ಶೃಂಗಿಪುತ್ರಶ್ಚ ದ್ವಾವೇತೌ ತು ಚಿರವ್ರತೌ ॥ ೪೩ ॥

ರಾಣಾಯನೀಯಿಃ ಸೌಮಿತ್ರಿಃ ಸಾಮವೇದವಿಶಾರದೌ ।
ಪ್ರೋವಾಚ ಸಂಹಿತಾಸ್ತಿಸ್ರಃ ಶೃಂಗಿಪುತ್ರೋ ಮಹಾತಪಾಃ ॥ ೪೪ ॥

ವೈನಃ ಪ್ರಾಚೀನಯೋಗಶ್ಚ ಸುರಾಲಶ್ಚ ದ್ವಿಜೋತ್ತಮಃ ।
ಪ್ರೋವಾಚ ಸಂಹಿತಾಃ ಷಟ್ ತು ಪಾರಾಶರ್ಯಸ್ತು ಕೌಥುಮಃ ॥ ೪೫ ॥

ಆಸುರಾಯಣವೈಶಾಖ್ಯೌ ವೇದವೃದ್ಧಪರಾಯಣೌ ।
ಪ್ರಾಚೀನಯೋಗಪುತ್ರಶ್ಚ ಬುದ್ಧಿಮಾಂಶ್ಚ ಪತಂಜಲಿಃ ॥ ೪೬ ॥

---

೪೨. ಹಿರಣ್ಯನಾಭನ ಶಿಷ್ಯರಲ್ಲಿ ಒಬ್ಬನಾದ ಕುಶುಮಿ ಎಂಬುವನಿಗೆ ಮೂರು ಮಂದಿ ಶಿಷ್ಯರಿದ್ದರು. ಅವರು ಔರಸನಾದ ಪರಾಶರ, ನಾಭಿ ಮತ್ತು ವಿತ್ತ ಎಂಬುದಾಗಿ ಪ್ರಸಿದ್ಧಿಯನ್ನು ಹೊಂದಿದ್ದರು.

೪೩. ಹೀಗೆ ಕುಶುಮಿಯ ಮೂವರು ಶಿಷ್ಯರು ಅತಿತೇಜಸ್ವಿಗಳೆಂದು ಸ್ಮರಿಸಲ್ಪಟ್ಟಿರುವರು, ಮತ್ತು ಶೌರಿಷು, ಶೃಂಗಿ ಪುತ್ರರೆಂಬ ಬಹುಕಾಲ ವೇದಾಧ್ಯಯನ ವ್ರತದಿಂದ ಕೂಡಿಕೊಂಡಿರುವ ಇಬ್ಬರು ಶಿಷ್ಯರಿದ್ದರು.

೪೪. ರಾಣಾಯನೀಯಿ ಮತ್ತು ಸೌಮಿತ್ರಿ ಎಂಬುವರು ಸಾಮವೇದಾಧ್ಯಯನದಲ್ಲಿ ನಿಷ್ಣಾತರಾದ ಮತ್ತಿಬ್ಬರು ಶಿಷ್ಯರಾಗಿದ್ದರು. ಮಹಾತಪಸ್ವಿಯಾದ ಶೃಂಗಿ ಪುತ್ರನು ಮೂರು ಸಂಹಿತೆಗಳನ್ನು ಪ್ರವಚನಮಾಡಿದನು.

೪೫. ಶೃಂಗಿ ಪುತ್ರನಾದ ವೈನ, ಪ್ರಾಚೀನಯೋಗ ಮತ್ತು ಸುರಾಲ ಎಂಬ ಮೂರು ಮಂದಿ ಶಿಷ್ಯರು ಮೂರು ಸಂಹಿತೆಗಳನ್ನು ಅಧ್ಯಯನಮಾಡಿದರು. ಪರಾಶರನಿಂದ ಸಂಭೂತನಾದ ಕೌಥುಮನು ಆರು ಸಂಹಿತೆಗಳನ್ನು ಪ್ರವಚನಮಾಡಿದನು.

೪೬. ಆಸುರಾಯಣ, ವೈಶಾಖ್ಯ, ವೇದವೃದ್ಧ, ಪರಾಯಣ, ಪ್ರಾಚೀನಯೋಗ ಪುತ್ರ ಮತ್ತು ಪತಂಜಲಿ ಎಂಬ ಬುದ್ಧಿಶಾಲಿಗಳಾದ ಆರು ಮಂದಿಯು ಸಾಮವೇದ ಶಾಖಾಧ್ಯಾಯಿಗಳ ಗುಂಪಾಗಿದ್ದರು.

ಕೌಥುಮಸ್ಯ ತು ಭೇದಾಶ್ಚ ಪಾರಾಶರ್ಯಸ್ಯ ಷಟ್ ಸ್ಮೃತಾಃ ।
ಲಾಂಗಲಃ ಶಾಲಿಹೋತ್ರಶ್ಚ ಷಡುವಾಚಾಥ ಸಂಹಿತಾಃ ॥ ೪೭ ॥

ಹಾಲಿನಿರ್ಜ್ಯಾಮಹಾನಿಶ್ಚ ಜೈಮಿನಿರ್ಲೋಮಗಾಯನಿಃ ।
ಕಂಡುಶ್ಚ ಕೋಹಲಶ್ಚೈವ ಷಡೇತೇ ಲಾಂಗಲಾಃ ಸ್ಮೃತಾಃ ॥ ೪೮ ॥

ಏತೇ ಲಾಂಗಲಿನಃ ಶಿಷ್ಯಾಃ ಸಂಹಿತಾ ಯೈಃ ಪ್ರವರ್ತಿತಾಃ ।
ಏಕೋ ಹಿರಣ್ಯನಾಭಸ್ಯ ಕೃತಃ ಶಿಷ್ಯೋ ನೃಪಾತ್ಮಜಃ ॥ ೪೯ ॥

ಸೋಽಕರೋತ್ತು ಚತುರ್ವಿಂಶಸಂಹಿತಾ ದ್ವಿಪದಾಂ ವರಃ ।
ಪ್ರೋವಾಚ ಚೈವ ಶಿಷ್ಯೇಭ್ಯೋ ಯೇಭ್ಯಸ್ತಾಂಶ್ಚ ನಿಯೋಧತ ॥ ೫೦ ॥

ರಾಡಿಶ್ಚ ರಾಡವೀಯಶ್ಚ ಪಂಚಮೋ ವಾಹನಸ್ತಥಾ ।
ತಲಕೋ ಮಾಂಡುಕಶ್ಚೈವ ಕಾಲಿಕೋ ರಾಜಿಕಸ್ತಥಾ ॥ ೫೧ ॥

---

೪೭. ಹಿಂದೆ ಹೇಳಿರುವ ಆರು ಮಂದಿಯು ಪಾರಾಶರ್ಯನಾದ ಕೌಥುಮನ ಶಾಖಾಪ್ರಭೇದವನ್ನು ಅಧ್ಯಯನಮಾಡಿರುವರೆಂದು ಸ್ಮರಿಸಲ್ಪಟ್ಟಿರುವರು, ಶಾಲಿ ಹೋತ್ರ ಅಥವಾ ಲಾಂಗಲನು ಆರು ಸಂಹಿತಾ ಶಾಖೆಗಳನ್ನು ಅಧ್ಯಯನಮಾಡಿಸಿದನು.

೪೮. ಹಾಲಿನಿ, ಜ್ಯಾಮಹಾನಿ, ಜೈಮಿನಿ, ಲೌಮಗಾಯನಿ, ಕಂಡು ಮತ್ತು ಕೋಹಲ ಎಂಬುವ ಆರು ಮಂದಿ ಶಿಷ್ಯರು ಲಾಂಗಲನಿಂದ ಸಂಹಿತಾಧ್ಯಯನವನ್ನು ಮಾಡಿರುವರು.

೪೯. ಇವರು ಲಾಂಗಲಿಯ ಶಿಷ್ಯರೆಂದು ಪ್ರಸಿದ್ಧರಾಗಿ ಸಂಹಿತೆಗಳ ಪ್ರವಚನ ಸಂಪ್ರದಾಯವನ್ನು ಪ್ರಚಾರಕ್ಕೆ ತಂದರು. ಹಿರಣ್ಯನಾಭನಿಗೆ ರಾಜಪುತ್ರನೊಬ್ಬನು ಶಿಷ್ಯನಾಗಿದ್ದನು.

೫೦. ಆ ರಾಜಪುತ್ರನು ಇಪ್ಪತ್ತನಾಲ್ಕು ಸಂಹಿತೆಗಳನ್ನು ರಚಿಸಿದನು. ಮತ್ತು ಅವುಗಳನ್ನು ಶಿಷ್ಯರಿಗೆ ಉಪದೇಶಮಾಡಿದನು. ಅವುಗಳನ್ನು ಪಠಿಸಿದ ಶಿಷ್ಯರ ಹೆಸರನ್ನು ಕೇಳಿರಿ.

೫೧, ೫೨, ೫೩, ೫೪. ರಾಡಿ, ರಾಡವೀಯ, ಪಂಚಮ, ವಾಹನ, ತಲಕ, ಮಾಂಡುಕ, ಕಾಲಿಕ, ರಾಜಕ, ಗೌತಮ, ಅಜಬಸ್ತ, ಸೋಮರಾಜಾಯನ, ಪುಷ್ಟಿ,

ಗೌತಮಶ್ಚಾಜಬಸ್ತ್ರಶ್ಚ ಸೋಮರಾಜಾಯನಸ್ತತಃ ।
ಪುಷ್ಟಿಶ್ಚ ಪರಿಕೃಷ್ಟಶ್ಚ ಉಲೂಖಲಕ ಏವ ಚ ॥ ೫೨ ॥

ಯವೀಯಸಸ್ತು ವೈ ಶಾಲೀರಂಗುಲೀಯಶ್ಚ ಕೌಶಿಕಃ ।
ಶಾಲಿಮಂಜರಿಪಾಕಶ್ಚ ಶಧೀಯಃ ಕಾನಿನಿಶ್ಚ ಯಃ ॥ ೫೩ ॥

ಪಾರಾಶರ್ಯಸ್ತು ಧರ್ಮಾತ್ಮಾ ಇತಿ ಕ್ರಾಂತಾಸ್ತು ಸಾಮಗಾಃ ।
ಸಾಮಗಾನಾಂ ತು ಸರ್ವೇಷಾಂ ಶ್ರೇಷ್ಠೌ ದ್ವೌ ಪರಿಕೀರ್ತಿತೌ ॥ ೫೪ ॥

ಪೌಷ್ಯಂಜಿಶ್ಚ ಕೃತಶ್ಚೈವ ಸಂಹಿತಾನಾಂ ವಿಕಲ್ಪಕೌ ।
ಅಥರ್ವಾಣಂ ದ್ವಿಧಾ ಕೃತ್ವಾ ಸುಮಂತುರದದಾದ್ದ್ವಿಜಾಃ ॥ ೫೫ ॥

ಕಬಂಧಾಯ ಪುನಃ ಕೃಷ್ಣಂ ಸ ಚ ವಿದ್ವಾನ್ ಯಥಾಶ್ರುತಮ್ ।
ಕಬಂಧಸ್ತು ದ್ವಿಧಾ ಕೃತ್ವಾ ಪಥ್ಯಾಯೈಕಂ ಪುನರ್ದದೌ ॥ ೫೬ ॥

ದ್ವಿತೀಯಂ ದೇವದರ್ಶಾಯ ಸ ಚತುರ್ಧಾಕರೋತ್ ಪ್ರಭುಃ ।
ಮೋದೋ ಬ್ರಹ್ಮಬಲಶ್ಚೈವ ಪಿಪ್ಪಲಾದಸ್ತಥೈವ ಚ ॥ ೫೭ ॥

---

ಪರಿಕೃಷ್ಟ, ಉಲೂಖಲ, ಯವೀಯಸ, ಶಾಲೀ, ಅಂಗುಲೀಯ, ಕೌಶಿಕ, ಶಾಲಿ, ಮಂಜರಿಪಾಕ, ಶಧೀಯ, ಕಾನೀನಿ, ಪಾರಾಶರ್ಯ, ಮತ್ತು ಧರ್ಮಾತ್ಮಾ ಎಂಬ ಇಪ್ಪತ್ತನಾಲ್ಕು ಮಂದಿ ಶಿಷ್ಯರು ರಾಜಪುತ್ರನು ರಚಿಸಿರುವ ಇಪ್ಪತ್ತನಾಲ್ಕು ಸಂಹಿತಾ ಶಾಖೆಗಳನ್ನು ಕ್ರಮವಾಗಿ ಅಧ್ಯಯನಮಾಡಿರುವರು. ಈ ಎಲ್ಲ ಸಾಮಶಾಖಾಧ್ಯಾಯಿಗಳಲ್ಲಿ ಇಬ್ಬರು ಬಹುಮುಖ್ಯರಾಗಿ ಗಣಿಸಲ್ಪಟ್ಟಿರುವರು.

೫೫. ಪೌಷ್ಯಂಜಿ, ಕೃತ ಎಂಬ ಇಬ್ಬರು ಮುಖ್ಯ ಸಾಮಶಾಖಾಧ್ಯೇತೃಗಳು ಅನೇಕ ಸಂಹಿತೆಗಳನ್ನು ಕಲ್ಪಿಸಿರುವರು. ದ್ವಿಜರೆ! ಸುಮಂತುವು ಅಥರ್ವವೇದವನ್ನು ಎರಡು ಭಾಗವಾಗಿ ವಿಂಗಡಿಸಿ ಉಪದೇಶಿಸಿದನು.

೫೬. ಅವುಗಳಲ್ಲಿ ಕೃಷ್ಣವೆಂಬ ಸಂಕೇತವುಳ್ಳ ಒಂದು ಭಾಗವನ್ನು ಕಬಂಧನಿಗೆ ಉಪದೇಶಿಸಿದನು. ಜ್ಞಾನಿಯಾದ ಕಬಂಧನು ಮತ್ತೆ ಎರಡಾಗಿ ವಿಭಜಿಸಿ ಪಥ್ಯ ಎಂಬ ಶಿಷ್ಯನಿಗೆ ಒಂದು ಭಾಗವನ್ನು ಪ್ರವಚನಮಾಡಿದನು.

೫೭. ಎರಡನೆಯ ಭಾಗವನ್ನು ದೇವದರ್ಶನಿಗೆ ಉಪದೇಶಮಾಡಿದನು. ಆ

ಶೌಲ್ಕಾಯನಿಶ್ಚ ಧರ್ಮಜ್ಞಶ್ಚತುರ್ಥಸ್ತಪಸಿ ಸ್ಥಿತಃ ।
ದೇವದರ್ಶಸ್ಯ ಚತ್ವಾರಃ ಶಿಷ್ಯಾ ಹ್ಯೇತೇ ದೃಢವ್ರತಾಃ ॥ ೫೮ ॥

ಪುನಶ್ಚ ತ್ರಿವಿಧಂ ವಿದ್ಧಿ ಪಥ್ಯಾನಾಂ ಭೇದಮುತ್ತಮಮ್ ।
ಜಾಜಲಿಃ ಕುಮುದಾದಿಶ್ಚ ತೃತೀಯಃ ಶೌನಕಃ ಸ್ಮೃತಃ ॥ ೫೯ ॥

ಶೌನಕಸ್ತು ದ್ವಿಧಾ ಕೃತ್ವಾ ದದಾವೇಕಾಂ ತು ಬಭ್ರವೇ ।
ದ್ವಿತೀಯಾಂ ಸಂಹಿತಾಂ ಧೀಮಾನ್ ಸೈಂಧವಾಯನಸಂಜ್ಞಿತೇ॥ ೬೦ ॥

ಸೈಂಧವೋ ಮುಂಜಿಕೇಶ್ಯಶ್ಚ ಭಿನ್ನಾ ಮಾಧಾದ್ದ್ವಿಧಾ ಪುನಃ ।
ನಕ್ಷತ್ರಕಲ್ಪೋ ವೈತಾನಸ್ತೃತೀಯಃ ಸಂಹಿತಾವಿಧಿಃ ॥ ೬೧ ॥

---

ಪ್ರಭುವಾದ ದೇವದರ್ಶನು ಮತ್ತೆ ನಾಲ್ಕು ರೂಪದಿಂದ ವಿಂಗಡಿಸಿ ಶಿಷ್ಯರಿಗೆ ಅಧ್ಯಯನ ಮಾಡಿಸಿದನು. ಅವುಗಳನ್ನು ಅಧ್ಯಯನಮಾಡಿದವರಲ್ಲಿ ಮೋದ, ಬ್ರಹ್ಮಬಲ ಮತ್ತು ಪಿಪ್ಪಲಾದ ಎಂಬುವರು ಮೂವರಾಗಿದ್ದರು.

೫೮. ಧರ್ಮಜ್ಞನೂ ತಪೋಽನುಷ್ಠಾನತತ್ಪರನೂ ಆದ ಶೌಲ್ಕಾಯನಿ ಎಂಬುವನು ನಾಲ್ಕನೆಯ ಶಿಷ್ಯನಾಗಿದ್ದನು. ಹೀಗೆ ಈ ನಾಲ್ಕು ಮಂದಿಯು ದೃಢವಾದ ವ್ರತಗಳಿಂದ ಕೂಡಿದ ದೇವದರ್ಶನ ಶಿಷ್ಯರಾಗಿದ್ದರು.

೫೯. ಪಥ್ಯನಿಂದ ಮತ್ತೆ ಉತ್ತಮವಾದ ಮೂರು ಭೇದಗಳು ಪ್ರವೃತ್ತವಾದುವು. ಅವುಗಳನ್ನು ಕ್ರಮವಾಗಿ ಜಾಜಲಿ, ಕುಮುದಾದಿ ಮತ್ತು ಶೌನಕ ಎಂಬ ಮೂರು ಮಂದಿ ಶಿಷ್ಯರು ಅಧ್ಯಯನಮಾಡಿದರು.

೬೦. ಅವರಲ್ಲಿ ಶೌನಕಮುನಿಯು ಸಂಹಿತೆಯನ್ನು ಮತ್ತೆ ಎರಡಾಗಿ ವಿಂಗಡಿಸಿ ಒಂದನ್ನು ಬಭ್ರು ಎಂಬ ಶಿಷ್ಯನಿಗೆ ಪ್ರದಾನಮಾಡಿದನು. ಹಾಗೆಯೇ ಬುದ್ಧಿಶಾಲಿಯಾದ ಶೌನಕನು ಮತ್ತೊಂದನ್ನು ಸೈಂಧವಾಯನ ಎಂಬ ಶಿಷ್ಯನಿಗೆ ಪ್ರದಾನಮಾಡಿದನು.

೬೧. ಅಲ್ಲಿಂದ ಮುಂದೆ ಸೈಂಧವ, ಮುಂಜಿಕೇಶ್ಯ ಎಂಬವರಿಬ್ಬರಿಂದ ಎರಡು ಭಾಗಗಳಾದುವು. ಹಾಗೆಯೇ ಯಜ್ಞಕರ್ಮಗಳನ್ನು ಪ್ರತಿಪಾದಿಸುವ ನಕ್ಷತ್ರಕಲ್ಪ ಎಂಬುದು ಮೂರನೆಯ ಸಂಹಿತಾ ಪ್ರಕಾರವು ಉಂಟಾಯಿತು.

ಚತುರ್ಥೋऽಂಗಿರಸಃ ಕಲ್ಪಃ ಶಾಂತಿಕಲ್ಪಶ್ಚ ಪಂಚಮಃ ।
ಶ್ರೇಷ್ಠಾಸ್ತ್ವಥರ್ವಣಾಮೇತೇ ಸಂಹಿತಾನಾಂ ವಿಕಲ್ಪಕಾಃ ॥ ೬೨ ॥

ಖಡ್ಗಃ ಕೃತ್ವಾ ಮಯಾ ಯುಕ್ತಂ ಪುರಾಣಮೃಷಿಸತ್ತಮಾಃ ।
ಆತ್ರೇಯಃ ಸುಮತಿರ್ಧೀಮಾನ್ ಕಾಶ್ಯಪೋ ಹ್ಯಕೃತವ್ರಣಃ ॥ ೬೩ ॥

ಭಾರದ್ವಾಜೋऽಗ್ನಿವಚಾಶ್ಚ ವಾಸಿಷ್ಠೋ ಮಿತ್ರಯುಶ್ಚ ಯಃ ।
ಸಾವರ್ಣಿಃ ಸೋಮದತ್ತಿಶ್ಚ ಸುಶರ್ಮಾ ಶಾಂಶಪಾಯನಃ ॥ ೬೪ ॥

ಏತೇ ಶಿಷ್ಯಾ ಮಮ ಪ್ರೋಕ್ತಾಃ ಪುರಾಣೇಷು ಧೃತವ್ರತಾಃ ।
ತ್ರಿಭಿಸ್ತತ್ರ ಕೃತಾಸ್ತಿಸ್ರಃ ಸಂಹಿತಾಃ ಪುನರೇವ ಹಿ ॥ ೬೫ ॥

ಕಾಶ್ಯಪಃ ಸಂಹಿತಾಕರ್ತಾ ಸಾವರ್ಣಿಃ ಶಾಂಶಪಾಯನಃ ।
ಮಾಮಿಕಾ ತು ಚತುರ್ಥೀ ಸ್ಯಾತ್ ಚತಸ್ರೋ ಮೂಲಸಂಹಿತಾಃ ॥ ೬೬ ॥

---

೬೨. ಅಂಗಿರೋಮುನಿಯ ಪ್ರಚಾರದಿಂದ ಬಂದಿರುವುದು ನಾಲ್ಕನೆಯ ಪ್ರಕಾರವು. ಮತ್ತು ಐದನೆಯ ಪ್ರಕಾರವು ಶಾಂತಿಕಲ್ಪವು. ಅಥರ್ವವೇದದಲ್ಲಿ ಸಂಹಿತಾ ಶಾಖೆಗಳನ್ನು ಪ್ರಚಾರಪಡಿಸಿರುವವರಲ್ಲಿ ಇವರು ಮುಖ್ಯರಾದ ಮುನಿಗಳಾಗಿರುವರು.

೬೩. ಮುನಿಶ್ರೇಷ್ಠರೆ! ನನ್ನಿಂದ ಪುರಾಣಖಂಡವು ರಚಿಸಲ್ಪಟ್ಟು ಶಿಷ್ಯರಿಗೆ ಉಪದಿಷ್ಟವಾಯಿತು. ಪುರಾಣೋಪದೇಶಕ್ಕೆ ಪಾತ್ರರಾದ ಜ್ಞಾನಿಗಳಾದ ಋಷಿಗಳಲ್ಲಿ ಆತ್ರೇಯ, ಸುಮತಿ, ಕಾಶ್ಯಪ ಮತ್ತು ಅಕೃತವ್ರಣರೆಂಬುವರು ಶಿಷ್ಯರಾಗಿದ್ದರು.

೬೪. ಮತ್ತು ಆ ಗುಂಪಿಗೆ ಭರದ್ವಾಜ, ಅಗ್ನಿವಚ, ವಾಸಿಷ್ಠ, ಮಿತ್ರಯು, ಸಾವರ್ಣಿ, ಸೋಮದತ್ತಿ, ಸುಶರ್ಮಾ ಮತ್ತು ಶಾಂಶಪಾಯನ ಎಂಬುವರು ಪುರಾಣ ಪ್ರವಚನ ತತ್ಪರರಾದ ಶಿಷ್ಯರಾಗಿದ್ದರು.

೬೫. ಇವರೆಲ್ಲರೂ ಪುರಾಣಗಳಲ್ಲಿ ದೃಢವಾದ ನಿಶ್ಚಯವುಳ್ಳ ನನ್ನ ಶಿಷ್ಯರೆಂದು ಹೇಳಲ್ಪಟ್ಟಿರುವರು. ಇವರಲ್ಲಿ ಮೂವರಿಂದ ಮೂರು ಪುರಾಣಸಂಹಿತೆಗಳು ರಚಿಸಲ್ಪಟ್ಟಿರುತ್ತವೆ.

೬೬. ಆ ಮೂರು ಕಾಶ್ಯಪ, ಸಾವರ್ಣಿ ಮತ್ತು ಶಾಂಶಪಾಯನ ಎಂದು ಪ್ರಖ್ಯಾತರಾಗಿರುವರು. ಅವರಿಂದ ರಚಿತವಾದ ಸಂಹಿತೆಗಳು ಕಾಶ್ಯಪ ಸಂಹಿತೆ,

**ಸರ್ವಾಸ್ತಾ ಹಿ ಚತುಷ್ಪಾದಾಃ ಸರ್ವಾಶ್ಚೈಕಾರ್ಥವಾಚಿಕಾಃ ।**
**ಪಾಠಾಂತರೇ ವೃಥಾ ಭೂತಾ ವೇದಶಾಖಾ ಯಥಾ ತಥಾ ॥ ೬೭ ॥**

**ಚತುಃ ಸಾಹಸ್ರಿಕಾಃ ಸರ್ವಾಃ ಶಾಂಶಪಾಯನಿಕಾಮೃತೇ ।**
**ಲೌಮಹರ್ಷಣಿಕಾ ಮೂಲಾ ತತಃ ಕಾಶ್ಯಪಿಕಾ ಸ್ಮೃತಾ ॥ ೬೮ ॥**

**ಸಾವರ್ಣಿಕಾ ತೃತೀಯಾಸಾವೃಜುವಾಕ್ಯಾರ್ಥಮಂಡಿತಾ ।**
**ಶಾಂಶಪಾಯನಿಕಾ ಚಾನ್ಯಾ ನೋದನಾರ್ಥವಿಭೂಷಿತಾ ॥ ೬೯ ॥**

**ಸಹಸ್ರಾಣಿ ಋಚಾಂ ಚಾಷ್ಟೌ ಷಟ್ ಶತಾನಿ ತಥೈವ ಚ ।**
**ಏತಾಃ ಪಂಚದಶಾನ್ಯಾಶ್ಚ ದಶಾನ್ಯಾ ದಶಭಿಸ್ತಥಾ ॥ ೭೦ ॥**

---

ಸಾವರ್ಣಿ ಸಂಹಿತೆ ಮತ್ತು ಶಾಂಶಪಾಯನ ಸಂಹಿತೆಯೆಂದು ಸಂಕೇತಿತಗಳಾಗಿವೆ. ನಾಲ್ಕನೆಯದಾಗಿ ನನ್ನಿಂದ ರಚಿತವಾದ ಸಂಹಿತೆಯಿರುವುದು. ಒಟ್ಟು ಸೇರಿ ನಾಲ್ಕು ಮೂಲಸಂಹಿತೆಗಳು ಪ್ರಸಿದ್ಧವಾಗಿವೆ.

೬೭. ಎಲ್ಲ ಸಂಹಿತೆಗಳು ನಾಲ್ಕು ಪಾದಗಳಿಂದ ಕೂಡಿರುವುವುಗಳಾಗಿಯೂ ಒಂದೇ ಅರ್ಥವನ್ನು ಪ್ರತಿಪಾದಿಸುವುವುಗಳಾಗಿಯೂ ಇರುವುವು. ಇವು ವೇದಶಾಖೆಗಳಲ್ಲಿ ಸಮಾನವಾದ ಅರ್ಥವನ್ನು ಹೇಳುವುದರಿಂದ ಒಂದು ಶಾಖೆಯನ್ನು ಅಧ್ಯಯನ ಮಾಡಿದವರಿಗೆ ಮತ್ತೊಂದು ಶಾಖೆಯು ವ್ಯರ್ಥವಾಗಿರುವಂತೆ ಇರುವುವು.

೬೮. ಶಾಂಶಪಾಯನಿಕಾ ಸಂಹಿತೆಯನ್ನು ಹೊರತಾಗಿ ಎಲ್ಲ ಸಂಹಿತೆಗಳು ನಾಲ್ಕು ಸಹಸ್ರ ಸಂಖ್ಯೆಯ ಗ್ರಂಥರಾಶಿಯಾಗಿವೆ. ಇವುಗಳಲ್ಲಿ ಲೌಮಹರ್ಷಣ (ಸೂತ) ಸಂಹಿತೆಯು ಮೂಲವಾದುದು. ಕಾಶ್ಯಪ ಸಂಹಿತೆಯು ದ್ವಿತೀಯವಾಗಿದೆ.

೬೯. ಸಾವರ್ಣಿ ಸಂಹಿತೆಯೆಂಬ ಮೂರನೆಯ ಸಂಹಿತೆಯು ಸರಳವಾದ ವಾಕ್ಯಾರ್ಥಗಳಿಂದ ಅಲಂಕರಿಸಲ್ಪಟ್ಟಿದೆ. ನಾಲ್ಕನೆಯ ಶಾಂಶಪಾಯನಿ ಸಂಹಿತೆಯು ಸುಖವಾದ ಪ್ರತಿಪತ್ತಿಯನ್ನುಂಟುಮಾಡುವ ವಾಕ್ಯಗಳಿಂದ ಪೂರ್ಣವಾಗಿದೆ.

೭೦. ಋಙ್ಮಂತ್ರಗಳ ಸಂಹಿತೆಗಳಲ್ಲಿ ಎಂಟುಸಹಸ್ರ, ಆರುನೂರು ಮತ್ತು ಒಂದುನೂರು ಆರವತ್ತು ಋಙ್ಮಂತ್ರಗಳು ಒಟ್ಟಾಗಿ ಸೇರಿವೆ.

**ಸವಾಲಖಿಲ್ಯಾಃ ಸಪ್ತೈತಾಃ ಸಸುಪರ್ಣಾಃ ಪ್ರಕೀರ್ತಿತಾಃ ।**
**ಅಷ್ಟೌ ಸಾಮಸಹಸ್ರಾಣಿ ಸಾಮಾನಿ ಚ ಚತುರ್ದಶ ॥ ೭೧ ॥**

**ಸಾರಣ್ಯಕಂ ಸಹೋಽಹಂ ಚ ಏತದ್ಗಾಯಂತಿ ಸಾಮಗಾಃ ।**
**ದ್ವಾದಶೈವ ಸಹಸ್ರಾಣಿ ಛಂದ ಆಧ್ವರ್ಯವಂ ಸ್ಮೃತಮ್ ॥ ೭೨ ॥**

**ಯಜುಷಾಂ ಬ್ರಾಹ್ಮಣಾನಾಂ ಚ ತಥಾ ವ್ಯಾಸೋ ವ್ಯಕಲ್ಪಯತ್ ।**
**ಸಗ್ರಾಮ್ಯಾರಣ್ಯಕಂ ತಸ್ಮಾತ್ ಸಮಂತ್ರಕರಣಂ ತಥಾ ॥ ೭೩ ॥**

**ಅತಃ ಪರಂ ಕಥಾಸಂ ತು ಪೂರ್ವಾ ಇತಿ ವಿಶೇಷಣಮ್ ।**
**ಗ್ರಾಮ್ಯಾರಣ್ಯಂ ಸಮಂತ್ರಂ ತದೃಗ್ಬ್ರಾಹ್ಮಣಯಜುಃ ಸ್ಮೃತಮ್ ॥೭೪॥**

**ತಥಾ ಹಾರಿದ್ರವೀಯಾಣಾಂ ಖಿಲಾನ್ಯುಪಖಿಲಾನಿ ತು ।**
**ತಥೈವ ತೈತ್ತಿರೀಯಾಣಾಂ ಪರಕ್ಷುದ್ರಾ ಇತಿ ಸ್ಮೃತಮ್ ॥ ೭೫ ॥**

---

೭೧. ಮತ್ತು ವಾಲಖಿಲ್ಯ ಮಂತ್ರಗಳಿಂದಲೂ ಸುಪರ್ಣ ಸೂಕ್ತರೂಪವಾದ ಮಂತ್ರಗಳಿಂದಲೂ ಸೇರಿ ಮತ್ತೆ ಏಳು ಮಂತ್ರಸಂಹಿತೆಗಳು ಹೆಚ್ಚುವುವು. ಎಂಟುಸಾವಿರ ಹದಿನಾಲ್ಕು ಸಂಖ್ಯೆಯ ಸಾಮಮಂತ್ರಗಳು ಇರುವುವು.

೭೨. ಆರಣ್ಯಕ ಗ್ರಂಥ ಮತ್ತು ಊಹ ಗ್ರಂಥಗಳ ಸಹಿತವಾಗಿ ಸಾಮವೇದಿಗಳು ಸಾಮಗಾಯನಮಾಡುವರು, ಅಧ್ವರ್ಯುವೇದಕ್ಕೆ ಸಂಬಂಧಿಸಿ ಹನ್ನೆರಡು ಸಹಸ್ರ ಛಂದಸ್ಸುಗಳು ಇರುವುವು.

೭೩. ವ್ಯಾಸಮುನಿಯು ಮಂತ್ರ ಬ್ರಾಹ್ಮಣಗಳ ವಿಭಾಗವನ್ನು ಕಲ್ಪಿಸಿದನು. ಅವುಗಳಲ್ಲಿ ಗ್ರಾಮ್ಯಕಾಂಡ, ಆರಣ್ಯಕಕಾಂಡ ಮತ್ತು ಮಂತ್ರವಿಭಾಗ ಮುಂತಾದುವು ಸೇರಿರುವುವು.

೭೪. ಅವುಗಳಲ್ಲಿ ಪೂರ್ವವೆಂದು ಸಂಕೇತಿತವಾದ ಕಥಾನಕಗಳಿಂದ ಕೂಡಿರುವುದೊಂದು ವಿಶೇಷ ಭಾಗವಿರುವುದು, ಋಗ್ಬ್ರಾಹ್ಮಣ, ಯಜುಸ್ಸುಗಳಲ್ಲಿ ಗ್ರಾಮ್ಯ, ಆರಣ್ಯ, ಮಂತ್ರಗಳೆಂದು ನಾನಾಭಾಗಗಳು ಒಳಗೊಂಡಿವೆಯೆಂದು ಸ್ಮರಿಸಲ್ಪಟ್ಟಿದೆ.

೭೫. ಹಾಗೆಯೇ ಹಾರಿದ್ರವೀಯ ಶಾಖೆಯ ಖಿಲ ಮತ್ತು ಉಪಖಿಲ ಮಂತ್ರಗಳೂ ತೈತ್ತಿರೀಯ ಶಾಖೆಗಳ ಪರಕ್ಷುದ್ರವೆಂದು ಸಂಕೇತಿತಗಳಾದ ಮಂತ್ರಗಳೂ ವೇದ ರಾಶಿಯಲ್ಲಿ ಅಂತರ್ಗತವೆಂದು ಸ್ಮರಿಸಲ್ಪಟ್ಟಿದೆ.

ದ್ವೇ ಸಹಸ್ರೇ ಶತನ್ಯೂನೇ ವೇದೇ ವಾಜಸನೇಯಕೇ ।
ಋಗ್ಗಣಃ ಪರಿಸಂಖ್ಯಾತೋ ಬ್ರಾಹ್ಮಣಂ ತು ಚತುರ್ಗುಣಮ್ ॥ ೭೬ ॥

ಅಷ್ಟೌ ಸಹಸ್ರಾಣಿ ಶತಾನಿ ವಾಷ್ಟೌ
ಅಶೀತಿರನ್ಯಾನ್ಯಧಿಕಾನಿ ವಾ ಚ ।
ಏತತ್ಪ್ರಮಾಣಂ ಯಜುಷಾಮೃಚಾಂ ಚ
ಸಶುಕ್ರಿಯಂ ಸಖಿಲಂ ಯಾಜ್ಞವಲ್ಕ್ಯಮ್ ॥ ೭೭ ॥

ತಥಾ ಚಾರಣವಿದ್ಯಾನಾಂ ಪ್ರಮಾಣಂ ಸಹಿತಂ ಶೃಣು ।
ಷಟ್ ಸಹಸ್ರಮೃಚಾಮುಕ್ತಮೃಚಃ ಷಡ್ವಿಂಶತಿಂ ಪುನಃ ॥ ೭೮ ॥

ಏತಾವದಧಿಕಂ ತೇಷಾಂ ಯಜುಃ ಕಿಮಪಿ ವಕ್ಷ್ಯತೇ ।
ಏಕಾದಶ ಸಹಸ್ರಾಣಿ ಋಚಶ್ಚಾದ್ಯಾ ದಶೋತ್ತರಾಃ ॥ ೭೯ ॥

ಋಚಾಂ ದಶಸಹಸ್ರಾಣಿ ಹ್ಯಶೀತಿಸ್ತ್ರಿಂಶದೇವ ತು ।
ಸಹಸ್ರಮೇಕಂ ಮಂತ್ರಾಣಾ ಮೃಚಾಮುಕ್ತಂ ಪ್ರಮಾಣತಃ ॥ ೮೦ ॥

---

೭೬. ವಾಜಸನೇಯ ಶಾಖೆಯಲ್ಲಿ ಒಂದು ಸಾವಿರದ ಒಂಭೈನೂರು ಋಙ್ಮಂತ್ರಗಳ ಗಣವು ಎಣಿಸಲ್ಪಟ್ಟಿರುವುದು. ಹಾಗೆಯೇ ಆ ಶಾಖೆಯ ಬ್ರಾಹ್ಮಣವು ಮಾತ್ರ ಅದಕ್ಕೆ ಚತುರ್ಗುಣ ವಾಗಿರುವುದು.

೭೭. ಯಜುರ್ವೇದದಲ್ಲಿ ಶುಕ್ರಿಯ, ಖಿಲ, ಮತ್ತು ಯಾಜ್ಞವಲ್ಕ್ಯವೆಂಬ ಸಕಲ ಖಂಡ ಗಳಿಂದ ಸೇರಿ ಋಙ್ಮಂತ್ರ,ಯಾಜುಷಮಂತ್ರಗಣವು ಎಂಟುಸಾಸಿರ ಎಂಟುನೂರು ಎಂಭತ್ತು ಸಂಖ್ಯೆಯ ಪರಿಮಾಣದಿಂದ ಕೂಡಿರುವುದು.

೭೮. ಹಾಗೆಯೇ ಚಾರಣ್ಯವಿದ್ಯೆಯ ಸರಿಯಾದ ಸಂಖ್ಯೆಯನ್ನು ಒಟ್ಟಾಗಿ ಕೇಳು, ಆರುಸಹಸ್ರ ಇಪ್ಪತ್ತಾರು ಸಂಖ್ಯೆಯ ಋಙ್ಮಂತ್ರಗಳು ಇವೆ.

೭೯. ಇದು ಅಧಿಕಭಾಗವೆಂದು ಅರಿಯಬೇಕು. ಮುಂದೆ ಯಜುರ್ವೇದವಾಕ್ಯ ಗಳ ಗಣವು ಹೇಳಲ್ಪಡುವುದು, ಹನ್ನೊಂದುಸಾವಿರದ ಹತ್ತು ಋಕ್ಕುಗಳು ಇವೆಯೆಂದು ತಿಳಿಯಬೇಕು.

೮೦. ಅವುಗಳಲ್ಲಿ ಋಕ್ಕಿನ ರೂಪವಾಗಿರುವ ಮಂತ್ರಗಳು ಹನ್ನೊಂದುಸಾವಿರದ ಒಂದುನೂರಹತ್ತು ಸಂಖ್ಯಾಪರಿಮಾಣವನ್ನು ಹೊಂದಿರುವುವು.

ಏತಾವಾನೃಚಿ ವಿಸ್ತಾರೋ ಹ್ಯನ್ಯಚ್ಚಾಥರ್ವಿಕಂ ಬಹು ।
ಋಚಾಮಥರ್ವಣಾಂ ಪಂಚಸಹಸ್ರಾಣೀತಿ ನಿಶ್ಚಯಃ ॥ ೮೧ ॥

ಸಹಸ್ರಮನ್ಯದ್ವಿಜ್ಞೇಯಮೃಷಿಭಿರ್ವಿಂಶತಿಂ ವಿನಾ ।
ಏತದಂಗಿರಸಾಂ ಪ್ರೋಕ್ತಂ ತೇಷಾಮಾರಣ್ಯಕಂ ಪುನಃ ॥ ೮೨ ॥

ಇತಿ ಸಂಖ್ಯಾ ಪ್ರಸಂಖ್ಯಾತಾ ಶಾಖಾಭೇದಾಸ್ತಥೈವ ತು ।
ಕರ್ತಾರಶ್ಚೈವ ಶಾಖಾನಾಂ ಭೇದಹೇತೂಂಸ್ತಥೈವ ಚ ॥ ೮೩ ॥

ಸರ್ವಮನ್ವಂತರೇಷ್ವೇವಂ ಶಾಖಾಭೇದಾಃ ಸಮಾಶ್ರಿತಾಃ ।
ಪ್ರಜಾಪತ್ಯಾ ಶ್ರುತಿರ್ನಿತ್ಯಾ ತದ್ವಿಕಲ್ಪಾಸ್ತ್ವಿಮೇ ಸ್ಮೃತಾಃ ॥ ೮೪ ॥

ಅನಿತ್ಯಭಾವಾದ್ದೇವಾನಾಂ ಮಂತ್ರೋತ್ಪತ್ತಿಃ ಪುನಃ ಪುನಃ ।
ದ್ವಾಪರೇಷು ಪುನರ್ಭೇದಾಃ ಶ್ರುತೀನಾಂ ಪರಿಕೀರ್ತಿತಾಃ ॥ ೮೫ ॥

---

೮೧. ಋಗ್ವೇದದಲ್ಲಿರುವ ಮಂತ್ರಪರಿಮಾಣದ ವಿಸ್ತಾರವು ಇಷ್ಟೇ ಆಗಿರುವುದು. ಅಥರ್ವವೇದ ಸಂಬಂಧಿಯಾದ ಮಂತ್ರಸ್ತೋಮವು ಅಧಿಕವಾಗಿದೆ. ಅಥರ್ವವೇದದ ಋಕ್ಕುಗಳು ಒಟ್ಟಾಗಿ ಐದುಸಹಸ್ರ ಸಂಖ್ಯೆಯಿಂದ ಇವೆಯೆಂಬುದು ತೀರ್ಮಾನವನ್ನು ಹೊಂದಿದೆ.

೮೨. ಅಂಗಿರಸಶಾಖೆಯಾದ ಅಥರ್ವವೇದದ ಆರಣ್ಯಕವು ಇಪ್ಪತ್ತರಿಂದ ನ್ಯೂನವಾದ ಒಂದುಸಹಸ್ರ ಅಥವಾ ಒಂಭೈನೂರು ಎಂಭತ್ತು ಸಂಖ್ಯೆಯಿಂದಿರುವುದೆಂದು ಋಷಿಗಳಿಂದ ಹೇಳಲ್ಪಟ್ಟಿದೆಯೆಂದು ತಿಳಿಯಬೇಕು.

೮೩. ಈ ರೀತಿಯಾಗಿ ವೇದಶಾಖೆಗಳ ಸಂಖ್ಯೆ, ಒಂದೊಂದು ವೇದದಲ್ಲಿಯೂ ಪ್ರಚಾರವಾದ ಅನೇಕ ಶಾಖಾಭೇದ, ಶಾಖಾಕರ್ತೃ, ಮತ್ತು ಅವುಗಳ ವಿಭಾಗಕ್ಕೆ ಕಾರಣಗಳನ್ನು ಹೇಳಿರುವೆನು.

೮೪. ಸಕಲ ಮನ್ವಂತರಗಳಲ್ಲಿಯೂ ಇರುವಂತೆ ಅನೇಕ ಶಾಖೆಗಳು ಪ್ರವರ್ತಿಸುತ್ತವೆ. ಅವುಗಳನ್ನು ಆಯಾಯ ಪ್ರಜೆಗಳು ಆಶ್ರಯಿಸುತ್ತಾರೆ. ಪ್ರಜಾಪತಿಯಿಂದ ಸಾಕ್ಷಾತ್ತಾಗಿ ಉಪದೇಶಿಸಲ್ಪಟ್ಟ ಶ್ರುತಿಯು ನಿತ್ಯವಾದುದು. ಆ ಶ್ರುತಿಯ ವಿಕಲ್ಪಗಳು ಇಲ್ಲಿ ಹೇಳಲ್ಪಟ್ಟಿವೆ.

೮೫. ದೇವತೆಗಳು ಅಶಾಶ್ವತರಾಗಿರುವುದರಿಂದ ಆಯಾಯ ದೇವತಾ ಪ್ರಾದು

ಏವಂ ವೇದಂ ತದಾವ್ಯಸ್ಯ ಭಗವಾನೃಷಿಸತ್ತಮಃ ।
ಶಿಷ್ಯೇಭ್ಯಶ್ಚ ಪ್ರದತ್ವಾ ತು ತಪಸ್ತಪ್ತುಂ ವನಂ ಗತಃ ॥ ೮೬ ॥

ತಸ್ಯ ಶಿಷ್ಯ ಪ್ರಶಿಷ್ಯೈಸ್ತು ಶಾಖಾಭೇದಾಸ್ತ್ವಿಮೇ ಕೃತಾಃ ।
ಅಂಗಾನಿ ವೇದಾ ಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ॥ ೮೭ ॥

ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾಶ್ಚೇಮಾಶ್ಚತುರ್ದಶ ।
ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತಿ ತೇ ತ್ರಯಃ ॥ ೮೮ ॥

ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ಹಿ ।
ಜ್ಞೇಯಾ ಬ್ರಹ್ಮರ್ಷಯಃ ಪೂರ್ವಂ ತೇಭ್ಯೋ ದೇವರ್ಷಯಃ ಪುನಃ ॥ ೮೯ ॥

---

ಭಾವವನ್ನು ಅನುಸರಿಸಿ ಮಂತ್ರಗಳು ಮತ್ತೆ ಮತ್ತೆ ಉತ್ಪನ್ನವಾಗುತ್ತವೆ, ಶ್ರುತಿಗಳಿಗೆ ಮತ್ತೆ ದ್ವಾಪರಯುಗದಲ್ಲಿ ಅನೇಕ ವಿಭಾಗಗಳು ಕೀರ್ತನಮಾಡಲ್ಪಟ್ಟವೆ.

೮೬. ಈ ರೀತಿಯಾಗಿ ಭಗವಂತನೂ ಮತ್ತು ಋಷಿಶ್ರೇಷ್ಠನೂ ಆದ ವೇದ ವ್ಯಾಸ ಮುನಿಯು ವೇದವನ್ನು ತನ್ನ ಶಿಷ್ಯರಿಗೆ ಉಪದೇಶಿಸಿ ತಪಸ್ಸನ್ನು ಆಚರಿಸಲು ವನಕ್ಕೆ ತೆರಳಿದನು.

೮೭. ಅವನ ಶಿಷ್ಯ-ಪ್ರಶಿಷ್ಯರು ಆ ಮೂಲಗ್ರಂಥದ ಶಾಖಾ ವಿಭಾಗಗಳನ್ನು ರಚಿಸಿದರು. ಅವುಗಳೆಲ್ಲವೂ ವಿದ್ಯಾಸ್ಥಾನಗಳಲ್ಲಿ ಸೇರಿಕೊಂಡವು, ಶಿಕ್ಷಾ ಮುಂತಾದ ಆರು ವೇದಾಂಗಗಳು,ನಾಲ್ಕು ವೇದಗಳು ಮತ್ತು ಮೀಮಾಂಸಾ-ನ್ಯಾಯ ಶಾಸ್ತ್ರಗಳೆಂಬ ಎರಡು ಶಾಸ್ತ್ರಗಳು ವಿದ್ಯಾಸ್ಥಾನಗಳಲ್ಲಿ ಸೇರಿದ ಹನ್ನೆರಡುಗ್ರಂಥಗಳಾಗಿವೆ.

೮೮. ಹಾಗೆಯೇ ಧರ್ಮಶಾಸ್ತ್ರ, ಪುರಾಣ ಗ್ರಂಥಗಳಿಂದ ಸೇರಿ ಒಟ್ಟಾಗಿ ಚತುರ್ದಶ ವಿದ್ಯೆಗಳು ಪ್ರಸಿದ್ಧವಾಗಿವೆ. ಮತ್ತು ಆಯುರ್ವೇದ, ಧನುರ್ವೇದ, ಮತ್ತು ಗಾಂಧರ್ವವೆಂಬ ಮೂರು ಪ್ರತ್ಯೇಕ ವಿದ್ಯೆಗಳಾಗಿವೆ.

೮೯. ಹಾಗೆ ನಾಲ್ಕನೆಯ ಅರ್ಥಶಾಸ್ತ್ರವು ಅತಿರಿಕ್ತವಾಗಿ ಸೇರಿ ಹದಿನೆಂಟು ವಿದ್ಯೆಗಳು ಪರಿಣಮಿಸುವುವು. ಈ ಎಲ್ಲ ವಿದ್ಯಾ ಪ್ರವರ್ತಕರಾದ ಋಷಿಗಳು ವಿವಿಧ ಜಾತಿಗಳನ್ನು ಹೊಂದಿರುವರು. ಅವರಲ್ಲಿ ಬ್ರಹ್ಮರ್ಷಿ, ಮತ್ತು ದೇವರ್ಷಿಗಳೆಂಬುವರು ಎರಡು ಜಾತಿಗಳಾಗಿರುವರು.

ರಾಜರ್ಷಯಃ ಪುನಸ್ತೇಭ್ಯ ಋಷಿಪ್ರಕೃತಯಸ್ತ್ರಿಧಾ ।
ಕಾಶ್ಯಪೇಷು ವಸಿಷ್ಠೇಷು ತಥಾ ಭೃಗ್ವಂಗಿರೋಽತ್ರಿಷು ॥ ೯೦ ॥

ಪಂಚಸ್ವೇತೇಷು ಜಾಯಂತೇ ಗೋತ್ರೇಷು ಬ್ರಹ್ಮವಾದಿನಃ ।
ಯಸ್ಮಾದೃಷಂತಿ ಬ್ರಹ್ಮಾಣಂ ತತೋ ಬ್ರಹ್ಮರ್ಷಯಃ ಸ್ಮೃತಾಃ॥ ೯೧ ॥

ಧರ್ಮಸ್ಯಾಥ ಪುಲಸ್ತ್ಯಸ್ಯ ಕ್ರತೋಶ್ಚ ಪುಲಹಸ್ಯ ಚ ।
ಪ್ರತ್ಯೂಷಸ್ಯ ಚ ದೇವಸ್ಯ ಕಶ್ಯಪಸ್ಯ ತಥಾ ಪುನಃ ॥ ೯೨ ॥

ದೇವರ್ಷಯಃ ಸುತಾಸ್ತೇಷಾಂ ನಾಮತಸ್ತಾನ್ನಿಬೋಧತ ।
ದೇವರ್ಷೀ ಧರ್ಮಪುತ್ರೌ ತು ನರನಾರಾಯಣಾವುಭೌ ॥ ೯೩ ॥

ವಾಲಖಿಲ್ಯಾಃ ಕ್ರತೋಃ ಪುತ್ರಾಃ ಕರ್ದಮಃ ಪುಲಹಸ್ಯ ತು ।
ಕುಬೇರಶ್ಚೈವ ಪೌಲಸ್ತ್ಯಃ ಪ್ರತ್ಯೂಷಸ್ಯ ದಲಃ ಸುತಃ ॥ ೯೪ ॥

---

೯೦. ಮೂರನೆಯ ಜಾತಿಗೆ ರಾಜರ್ಷಿಗಳು ಸೇರಿರುವರು. ಒಟ್ಟುಸೇರಿ ಋಷಿ ಪ್ರಕೃತಿಗಳು ಮೂರು ಸಂಖ್ಯೆಯಿಂದ ಇವೆ. ಇವರಲ್ಲಿ ಕಾಶ್ಯಪ, ವಸಿಷ್ಠ, ಭೃಗು, ಅಂಗಿರ, ಮತ್ತು ಅತ್ರಿ ಎಂಬ ಮಹರ್ಷಿವಂಶಗಳು ಪ್ರಸಿದ್ಧವಾಗಿವೆ.

೯೧. ಹಿಂದೆ ಹೇಳಿರುವ ಐದು ಋಷಿವಂಶಗಳಲ್ಲಿ ಬ್ರಹ್ಮವಾದಿಗಳಾದ ಬ್ರಹ್ಮರ್ಷಿಗಳು ಜನಿಸುವರು. ಬ್ರಹ್ಮವನ್ನು ಹೊಂದುವರು ಎಂಬ ಅರ್ಥದಿಂದ ಅವರು ಬ್ರಹ್ಮರ್ಷಿ ಎಂಬ ಅನ್ವರ್ಥ ನಾಮವನ್ನು ಹೊಂದಿರುವರು.

೯೨. ಧರ್ಮ, ಪುಲಸ್ತ್ಯ, ಕ್ರತು ಪುಲಹ, ಪ್ರತ್ಯೂಷ, ಮತ್ತು ಕಶ್ಯಪ ಎಂಬ ಮುನಿಗಳು ದೇವರ್ಷಿ ವಂಶದ ಕೂಟ ಪುರುಷರಾಗಿರುವರು.

೯೩. ಧರ್ಮ ಮುಂತಾದ ಮಹನೀಯ ಮುನಿಗಳ ಪ್ರಜೆಗಳು ದೇವರ್ಷಿಗಳೆಂದು ಪ್ರಸಿದ್ಧರಾಗಿರುವರು. ಅಂತಹ ದೇವರ್ಷಿಗಳ ಹೆಸರನ್ನು ಕೇಳಿರಿ, ಧರ್ಮ ಎಂಬ ಮುನಿಯ ಪುತ್ರರು ನರನಾರಾಯಣರೆಂಬ ಇಬ್ಬರು ದೇವರ್ಷಿಗಳು.

೯೪. ವಾಲಖಿಲ್ಯ ಮುನಿಗಳು ಕ್ರತು ಮಹರ್ಷಿಯ ಪುತ್ರರು. ಕರ್ದಮ ಮುನಿಯು ಪುಲಹನೆಂಬುವನ ಪುತ್ರನು, ಕುಬೇರನು ಪುಲಸ್ತ್ಯಮುನಿ ಪುತ್ರನು ಮತ್ತು ದಲ ಎಂಬ ಮುನಿಯು ಪ್ರತ್ಯೂಷದೇವನ ಪುತ್ರನಾಗಿ ಜನಿಸಿರುವನು.

**ನಾರದಃ ಪರ್ವತಶ್ಚೈವ ಕಶ್ಯಪಸ್ಯಾತ್ಮಜಾವುಭೌ ।**
**ಋಷಂತಿ ವೇದಾನ್ ಯಸ್ಮಾತ್ತೇ ತಸ್ಮಾದ್ದೇವರ್ಷಯಃ ಸ್ಮೃತಾಃ ॥೯೫॥**

**ಮಾನವೇ ಚೈವ ಯೇ ವಂಶೇ ಐಲವಂಶೇ ಚ ಯೇ ನೃಪಾಃ ।**
**ಯೇ ಚ ಐಕ್ಷ್ವಾಕನಾಭಾಗಾ ಜ್ಞೇಯಾ ರಾಜರ್ಷಯಸ್ತು ತೇ ॥ ೯೬ ॥**

**ಋಷಂತಿ ರಂಜನಾದ್ಯಸ್ಮಾತ್ ಪ್ರಜಾ ರಾಜರ್ಷಯಸ್ತತಃ**
**ಬ್ರಹ್ಮಲೋಕಪ್ರತಿಷ್ಠಾಸ್ತು ಸ್ಮೃತಾ ಬ್ರಹ್ಮರ್ಷಯೋಽಮಲಾಃ ॥ ೯೭ ॥**

**ದೇವಲೋಕಪ್ರತಿಷ್ಠಾಸ್ತು ಜ್ಞೇಯಾ ದೇವರ್ಷಯಃ ಶುಭಾಃ ।**
**ಇಂದ್ರಲೋಕಪ್ರತಿಷ್ಠಾಸ್ತು ಸರ್ವೇ ರಾಜರ್ಷಯೋ ಮತಾಃ ॥ ೯೮ ॥**

**ಅಭಿಜಾತ್ಯಾಽಥ ತಪಸಾ ಮಂತ್ರವ್ಯಾಹರಣೈಸ್ತಥಾ ।**
**ಯೇ ಚ ಬ್ರಹ್ಮರ್ಷಯಃ ಪ್ರೋಕ್ತಾ ದಿವ್ಯಾ ದೇವರ್ಷಯಶ್ಚ ಯೇ**
**॥ ೯೯ ॥**

---

೯೫. ನಾರದ, ಪರ್ವತರೆಂಬೀರ್ವರು ಕಶ್ಯಪ ಪುತ್ರರಾಗಿರುವರು. ಇವರೆಲ್ಲರೂ ದೇವರ್ಷಿಗಳು. ಇವರು ದೇವತೆಗಳನ್ನು ವಿಜ್ಞಾನದಿಂದ ಹೊಂದುವರಾದ್ದರಿಂದ ದೇವ ಋಷಿ ಎಂಬ ಅನ್ವರ್ಥನಾಮದಿಂದ ಅಂಕಿತರಾಗಿರುವರು-

೯೬. ಮನುಚಕ್ರವರ್ತಿ, ಐಲರಾಜ, ಇಕ್ಷ್ವಾಕುರಾಜ, ಮತ್ತು ನಾಭಾಗರಾಜ ನೆಂಬ ಪ್ರಸಿದ್ಧ ನೃಪತಿ ವಂಶದಲ್ಲಿ ಹುಟ್ಟಿದ ರಾಜರೆಲ್ಲರೂ ರಾಜರ್ಷಿಗಳೆಂದು ಪ್ರಸಿದ್ಧಿ ಯನ್ನು ಹೊಂದಿರುವರು.

೯೭. ರಾಜರ್ಷಿ ಎಂಬ ನಾಮವು ರಂಜನಮಾಡುತ್ತ ಮಂತ್ರಗಳನ್ನು ರಚಿಸಿರು ವರು ಎಂಬ ಅರ್ಥವನ್ನು ಸೂಚಿಸುವುದು. ಆದರಿಂದ ಇವರು ಅನ್ವರ್ಥನಾಮಾಂಕಿತ ರಾಗಿರುವರು. ಬ್ರಹ್ಮರ್ಷಿಗಳು ಬ್ರಹ್ಮಲೋಕದಲ್ಲಿ ಶಾಶ್ವತ ಪ್ರತಿಷ್ಠೆಯನ್ನು ಹೊಂದಿ ರುವರು.

೯೮. ಮಂಗಳಕರರಾದ ದೇವರ್ಷಿಗಳು ದೇವಲೋಕದಲ್ಲಿ ಪ್ರತಿಷ್ಠೆಯನ್ನು ಹೊಂದಿರುವರು ಹಾಗೆ ರಾಜರ್ಷಿಗಳಿಗೆ ಇಂದ್ರಲೋಕದಲ್ಲಿ ಶಾಶ್ವತವಾದ ಪ್ರತಿಷ್ಠೆಯು ಲಭಿಸಿರುವುದು.

೯೯. ಈ ಸಮಸ್ತ ಋಷೀಶ್ವರರು ಪವಿತ್ರವಾದ ವಂಶದಲ್ಲಿ ಉತ್ಪತ್ತಿ, ತಪಸ್ಸು, ಮತ್ತು ಪ್ರವಚನಗಳಿಂದ ಋಷಿಪದವನ್ನು ಹೊಂದಿರುತ್ತಾರೆ. ಒಂದೆ ಹೇಳಿದ ಬ್ರಹ್ಮರ್ಷಿಗಳು ಅಥವಾ ದೇವರ್ಷಿಗಳು ವಿಶೇಷ ಲಕ್ಷಣಗಳಿಂದ ಸಂಪನ್ನರಾಗಿರುವರು.

ರಾಜರ್ಷಯಸ್ತಥಾ ಚೈವ ತೇಷಾಂ ವಕ್ಷ್ಯಾಮಿ ಲಕ್ಷಣಮ್ ।
ಭೂತಂ ಭವ್ಯಂ ಭವಜ್ಞಾನಂ ಸತ್ಯಾಭಿವ್ಯಾಹೃತಂ ತಥಾ ॥ ೧೦೦ ॥

ಸಂತುಷ್ಟಾಶ್ಚ ಸ್ವಯಂ ಯೇ ತು ಸಂಬುದ್ಧಾ ಯೇ ಚ ವೈ ಸ್ವಯಮ್ ।
ತಪಸೇಹ ಪ್ರಸಿದ್ಧಾ ಯೇ ಗರ್ಭೇ ಯೈಶ್ಚ ಪ್ರವೇದಿತಮ್ ॥ ೧೦೧ ॥

ಮಂತ್ರವ್ಯಾಹಾರಿಣೋ ಯೇ ಚ ಐಶ್ವರ್ಯಾತ್ ಸರ್ವಗಾಶ್ಚ ಯೇ ।
ಏತೇ ರಾಜರ್ಷಯೋ ಯುಕ್ತಾ ದೇವದ್ವಿಜನೃಪಾಶ್ಚ ಯೇ ॥ ೧೦೨ ॥

ಏತಾನ್ ಭಾವಾನಧಿಗತಾ ಯೇ ವೈ ತ ಋಷಯೋ ಮತಾಃ ।
ಸಪ್ತೈತೇ ಸಪ್ತಭಿಶ್ಚೈವ ಗುಣೈಃ ಸಪ್ತರ್ಷಯಃ ಸ್ಮೃತಾಃ ॥ ೧೦೩ ॥

ದೀರ್ಘಾಯುಷೋ ಮಂತ್ರಕೃತ ಈಶ್ವರಾದ್ದಿವ್ಯಚಕ್ಷುಷಃ ।
ಬುದ್ಧಾಃ ಪ್ರತ್ಯಕ್ಷಧರ್ಮಾಣೋ ಗೋತ್ರಪ್ರಾವರ್ತಕಾಶ್ಚ ತೇ ॥ ೧೦೪ ॥

---

೧೦೦. ಅದರಂತೆ ರಾಜರ್ಷಿಗಳಲ್ಲಿಯೂ ಕೂಡ ಋಷಿ ಲಕ್ಷಣವು ಸಮನ್ವಯವನ್ನು ಹೊಂದಿದೆ. ಸಾಮಾನ್ಯವಾಗಿ ಋಷಿಲಕ್ಷಣವನ್ನು ಹೇಳುತ್ತೇನೆ. ಅವರಲ್ಲಿ ಭೂತ, ಭವಿಷ್ಯ, ಮತ್ತು ವರ್ತಮಾನವೆಂಬ ತ್ರಿಕಾಲಜ್ಞಾನ ಮತ್ತು ಸತ್ಯವಚನಗಳು ಋಷಿಗಳಲ್ಲಿರುವ ಲಕ್ಷಣ ಧರ್ಮವು.

೧೦೧. ಮತ್ತು ಮುನಿಗಳು ಸ್ವಯಂ ಸಂತುಷ್ಟರೂ ಸ್ವಯಂ ಜ್ಞಾನಿಗಳೂ ತಪೋನುಷ್ಠಾನದಿಂದ ಪ್ರಸಿದ್ಧರೂ ಮತ್ತು ಗರ್ಭಾವಸ್ಥೆಯಲ್ಲಿ ಸಮಸ್ತ ಪರಮಾರ್ಥ ಜ್ಞಾನವುಳ್ಳವರೂ ಆಗಿರುವರು.

೧೦೨. ಮಂತ್ರಗಳ ಪಾಠವನ್ನು ಮಾಡುವವರೂ, ಐಶ್ವರ್ಯ ರೂಪವಾದ ಶಕ್ತಿಯಿಂದ ಸರ್ವಗತರೂ ಮತ್ತು ಯೋಗಿಗಳೂ ಆದ ದೇವ, ದ್ವಿಜ, ನೃಪರು ಋಷಿ ಪದವನ್ನು ಹೊಂದಿರುವರು.

೧೦೩. ಈ ರೀತಿಯಾದ ಲಕ್ಷಣ ಧರ್ಮಗಳನ್ನು ಆಚರಿಸುವವರು ಋಷಿಗಳೆಂದು ಜ್ಞಾನಿಗಳ ಸಮ್ಮತವು. ಸಪ್ತ ಋಷಿಗಳೆಂಬ ನಾಮವು ಈ ಧರ್ಮಗಳಲ್ಲಿ ಏಳು ಗುಣಗಳನ್ನು ಹೊಂದಿರುವ ನಿಮಿತ್ತದಿಂದ ರೂಢಿಯಿಂದ ಬಂದಿರುವುದು.

೧೦೪. ಮಂತ್ರ ಪ್ರವಚನಕಾರರಾದ ಋಷಿಗಳು ದೀರ್ಘಾಯುಷ್ಯ, ಈಶ್ವರಾಧೀ

**ಷಟ್ಕರ್ಮನಿರತಾ ನಿತ್ಯಂ ಶಾಲೀನಾ ಗೃಹಮೇಧಿನಃ ।**
**ತುಲ್ಯೈರ್ವ್ಯವಹರಂತಿ ಸ್ಮ ಹ್ಯದೃಷ್ಟೈಃ ಕರ್ಮಹೇತುಭಿಃ　　॥ ೧೦೫ ॥**

**ಅಗ್ರಾಮ್ಯೈರ್ವರ್ತಯಂತಿ ಸ್ಮ ರಸೈಶ್ಚೈವ ಸ್ವಯಂಕೃತೈಃ ।**
**ಕುಟುಂಬಿನೋ ಬುದ್ಧಿಮಂತೋ ವನಾಂತರನಿವಾಸಿನಃ　　॥ ೧೦೬ ॥**

**ಕೃತಾದಿಷು ಯುಗಾಖ್ಯಾಸು ಸರ್ವೈರೇವ ಪುನಃ ಪುನಃ ।**
**ವರ್ಣಾಶ್ರಮವ್ಯವಸ್ಥಾನಂ ಕ್ರಿಯತೇ ಪ್ರಥಮಂ ತು ವೈ　　॥ ೧೦೭ ॥**

**ಪ್ರಾಪ್ತೇ ತ್ರೇತಾಯುಗಮುಖೇ ಪುನಃ ಸಪ್ತರ್ಷಯಸ್ತ್ವಿಹ ।**
**ಪ್ರವರ್ತಯಂತಿ ಯೇ ವರ್ಣಾನಾಶ್ರಮಾಂಶ್ಚೈವ ಸರ್ವಶಃ　　॥ ೧೦೮ ॥**

**ತೇಷಾಮೇವಾನ್ವಯೇ ವೀರಾ ಉತ್ಪದ್ಯಂತೇ ಪುನಃ ಪುನಃ ।**
**ಜಾಯಮಾನೇ ಪಿತಾಪುತ್ರೇ ಪುತ್ರಃ ಪಿತರಿ ಚೈವ ಹಿ　　॥ ೧೦೯ ॥**

---

ನವಾದ ದಿವ್ಯಜ್ಞಾನ, ಪರಮಾರ್ಥ ತತ್ತ್ವಜ್ಞಾನ, ಯೋಗಸಿದ್ಧಿಯಿಂದ ಪ್ರತ್ಯಕ್ಷವಾದ ಜ್ಞಾನ, ಮತ್ತು ಗೋತ್ರಪ್ರವರ್ತಕತ್ವಗಳಿಂದ ಕೂಡಿರುವರು.

೧೦೫. ಯಜನ ಮುಂತಾದ ಪ್ರಸಿದ್ಧ ದ್ವಿಜಷಟ್ಕರ್ಮಗಳಲ್ಲಿ ನಿರತರೂ, ಪ್ರತಿನಿತ್ಯವೂ ಯಜ್ಞಾದಿಕರ್ಮದಕ್ಷರೂ, ಮತ್ತು ಗೃಹಸ್ಥಾಶ್ರಮಿಗಳೂ ಆಗಿ ನಿರ್ದಿಷ್ಟವಾದ ಕರ್ಮನಿಮಿತ್ತಗಳಿಂದ ಪ್ರವೃತ್ತಿ ಮುಂತಾದ ವ್ಯವಹಾರದಲ್ಲಿ ತೊಡಗಿರುವರು.

೧೦೬. ಗ್ರಾಮ್ಯವಲ್ಲದಿರುವ ಮತ್ತು ಸ್ವಂತವಾಗಿ ರಚಿಸಲ್ಪಟ್ಟಿರುವ ರಸಗಳಿಂದ ಜೀವಿಕಾವೃತ್ತಿಯನ್ನು ಅವಲಂಬಿಸಿದ್ದರು. ಅವರು ಕುಟುಂಬಿಗಳೂ, ಬುದ್ಧಿಶಾಲಿಗಳೂ, ಮತ್ತು ವನಮಧ್ಯದಲ್ಲಿ ವಾಸಮಾಡುವವರೂ ಆಗಿದ್ದರು.

೧೦೭. ಕೃತಮುಂತಾದ ಯುಗಪರ್ಯಯದಲ್ಲಿ ಎಲ್ಲರಿಂದಲೂ ಮೊದಲು ವರ್ಣ—ಆಶ್ರಮಗಳ ಧರ್ಮವ್ಯವಸ್ಥೆಯು ಮತ್ತೆ ಮತ್ತೆ ರಚಿಸಲ್ಪಡುವುದು.

೧೦೮. ತ್ರೇತಾಯುಗವು ಪ್ರಾಪ್ತವಾದ ಕೂಡಲೆ ಮತ್ತೆ ಸಪ್ತರ್ಷಿಗಳು ಸರ್ವಲೋಕಗಳಲ್ಲಿಯೂ ವರ್ಣಧರ್ಮಗಳನ್ನೂ ಆಶ್ರಮಧರ್ಮಗಳನ್ನೂ ಪ್ರವರ್ತಿಸುವರು.

೧೦೯. ಅಂತಹಜ್ಞಾನಿಗಳ ವಂಶದಲ್ಲಿ ಕರ್ಮಠರಲ್ಲಿ ಮಹಾವೀರರಾದವರು ಜನಕನು ಪುತ್ರನಲ್ಲಿಯೂ ಪುತ್ರನು ಜನಕನಲ್ಲಿಯೂ ಮತ್ತೆ ಮತ್ತೆ ಜನಿಸುವರು.

ಏವಂ ಸಂತತ್ಯವಿಚ್ಛೇದಾದ್ವರ್ತಯಂತ್ಯಾಯುಗಕ್ಷಯಾತ್ ।
ಅಷ್ಟಾಶೀತಿಸಹಸ್ರಾಣಿ ಪ್ರೋಕ್ತಾನಿ ಗೃಹಮೇಧಿನಾಮ್ ॥ ೧೧೦ ॥

ಅರ್ಯಮ್ಣೋ ದಕ್ಷಿಣಂ ಯೇ ತು ಪಿತೃಯಾಸಂ ಸಮಾಶ್ರಿತಾಃ ।
ದಾರಾಗ್ನಿಹೋತ್ರಿಣಸ್ತೇ ವೈ ಯೇ ಪ್ರಜಾಹೇತವಃ ಸ್ಮೃತಾಃ ॥ ೧೧೧ ॥

ಗೃಹಮೇಧಿನಸ್ತ್ವ ಸಂಖ್ಯೇಯಾಃ ಶ್ಮಶಾನಾನ್ಯಾಶ್ರಯಂತಿ ತೇ ।
ಅಷ್ಟಾಶೀತಿಸಹಸ್ರಾಣಿ ನಿಹಿತಾ ಉತ್ತರಾಪಥೇ ॥ ೧೧೨ ॥

ಯೇ ಶ್ರೂಯಂತಿ ದಿವಂ ಪ್ರಾಪ್ತಾ ಋಷಯೋ ಹ್ಯೂರ್ಧ್ವರೇತಸಃ ।
ಮಂತ್ರಬ್ರಾಹ್ಮಣಕರ್ತಾರೋ ಜಾಯಂತೇ ಚ ಯುಗಕ್ಷಯಾತ್
॥ ೧೧೩ ॥

ಏವಮಾವರ್ತಮಾನಾಸ್ತೇ ದ್ವಾಪರೇಷು ಪುನಃ ಪುನಃ ।
ಕಲ್ಪಾನಾಮಾರ್ಷವಿದ್ಯಾನಾಂ ನಾನಾ ಶಾಸ್ತ್ರಕೃತಶ್ಚ ಯೇ ॥ ೧೧೪ ॥

---

೧೧೦. ಈ ರೀತಿಯಾಗಿ ಯುಗವು ಸಮಾಪ್ತಿಯಾಗುವವರೆಗೂ ಸಂತತಿಗೆ ವಿಚ್ಛೇದವಿಲ್ಲದಿರುವಂತೆ ವಂಶಾವಳಿಯನ್ನು ನಡೆಸಿಕೊಂಡು ಬರುವರು. ಅಂತಹ ಗೃಹಮೇಧಿಗಳು ಎಂಭತ್ತೆಂಟು ಸಹಸ್ರ ಸಂಖ್ಯೆಯಿಂದ ಇರುವರು.

೧೧೧. ಸೂರ್ಯದೇವನ ದಕ್ಷಿಣಭಾಗದಲ್ಲಿರುವ ಪಿತೃಯಾನವೆಂಬಮಾರ್ಗವನು ಆಶ್ರಯಿಸಿಕೊಂಡಿರುವವರಾಗಿ ಗೃಹಸ್ಥರಾಗಿ ಅಗ್ನಿಹೋತ್ರಾದಿಕರ್ಮಗಳಿಂದ ಅಗ್ನಿ ಪರಿಚರ್ಯೆಯನ್ನು ಮಾಡುತ್ತ ಪ್ರಜಾಸಂತತಿಗೆ ಕಾರಣರಾಗಿರುವರು.

೧೧೨. ಅಂತಹ ಗೃಹಮೇಧಿಗಳು ಅಸಂಖ್ಯಾತರಾಗಿ ಕರ್ಮಗಳನ್ನು ಅನುಷ್ಠಾನ ಮಾಡುತ್ತ ಜೀವಿತಾವಸಾನದಲ್ಲಿ ಶ್ಮಶಾನವನ್ನು ಹೊಂದುವರು, ಮತ್ತು ಇನ್ನು ಎಂಭತ್ತೆಂಟುಸಹಸ್ರ ಮಂದಿಯು ಸೂರ್ಯನ ಉತ್ತರ ದಿಗ್ಭಾಗದ ದೇವಯಾನ ಮಾರ್ಗವನ್ನು ಹೊಂದಿರುವರು.

೧೧೩. ಅವರು ಊರ್ಧ್ವರೇತಸ್ಸುಗಳಾದ ಮಹರ್ಷಿಗಳಾಗಿದ್ದು ಸ್ವರ್ಗವನ್ನು ಸೇರಿದರು. ಅವರು ಯುಗಾವೃತ್ತಿಯು ಕ್ಷಯಿಸುವವರೆಗೆ ಮಂತ್ರ-ಬ್ರಾಹ್ಮಣಗಳೆಂಬ ವೇದವಿಭಾಗಗಳ ಪ್ರವರ್ತಕರಾಗಿರುವರು.

೧೧೪. ಹೀಗೆ ಕಲ್ಪ-ಆರ್ಷವಿದ್ಯೆ, ನಾನಾ ಶಾಸ್ತ್ರಗ್ರಂಥವಿದ್ಯೆಗಳನ್ನು ರಚಿಸಿದ

ಕ್ರಿಯತೇ ಯೈರ್ವ್ಯವಹೃತಿರ್ವೈದಿಕಾನಾಂ ಚ ಕರ್ಮಣಾಮ್ ।
ವೈವಸ್ವತೇಽಂತರೇ ತಸ್ಮಿನ್ ದ್ವಾಪರೇಷು ಪುನಃ ಪುನಃ ॥ ೧೧೫ ॥

ಅಷ್ಟಾವಿಂಶತಿಕೃತ್ವೋ ವೈ ವೇದಾ ವ್ಯಸ್ತಾ ಮಹರ್ಷಿಭಿಃ ।
ಪ್ರಥಮೇ ದ್ವಾಪರೇ ವ್ಯಸ್ತಾಃ ಸ್ವಯಂ ವೇದಾಃ ಸ್ವಯಂಭುವಾ ॥ ೧೧೬ ॥

ದ್ವಿತೀಯೇ ದ್ವಾಪರೇ ಚೈವ ವೇದವ್ಯಾಸಃ ಪ್ರಜಾಪತಿಃ ।
ತೃತೀಯೇ ಚೋಶನಾ ವ್ಯಾಸಶ್ಚತುರ್ಥೇ ತು ಬೃಹಸ್ಪತಿಃ ॥ ೧೧೭ ॥

ಸವಿತಾ ಪಂಚಮೋ ವ್ಯಾಸೋ ಮೃತ್ಯುಃ ಷಷ್ಠೇ ಸ್ಮೃತಃ ಪ್ರಭುಃ ।
ಸಪ್ತಮೇ ಚ ತಥೈವೇಂದ್ರೋ ವಸಿಷ್ಠಶ್ಚಾಷ್ಟಮೇ ಸ್ಮೃತಃ ॥ ೧೧೮ ॥

ಸಾರಸ್ವತಸ್ತು ನವಮೇ ತ್ರಿಧಾಮಾ ದಶಮೇ ಸ್ಮೃತಃ ।
ಏಕಾದಶೇ ತು ತ್ರಿವರ್ಷಾ ಸನದ್ವಾಜಸ್ತತಃ ಪರಮ್ ॥ ೧೧೯ ॥

---

ಮಹಾತಪಸ್ವಿಗಳು ಹೀಗೆಯೇ ಚಕ್ರದಂತೆ ಆವೃತ್ತಿಯುಳ್ಳವರಾಗಿ ಮತ್ತೆ ದ್ವಾಪರ ಯುಗಗಳಲ್ಲಿ ಜನಿಸುವರು.

೧೧೫. ಮತ್ತು ಅಂತಹವರು ವೈವಸ್ವತ ಮನ್ವಂತರದಲ್ಲಿ ದ್ವಾಪರಯುಗಗಳಲ್ಲಿ ಅವತರಿಸಿ ವೈದಿಕ ಕರ್ಮಗಳವ್ಯವಹಾರ ಪ್ರಚಾರವನ್ನು ನಡೆಸುವರು.

೧೧೬. ಹಿಗೆಯೇ ಇದುವರೆಗೆ ಇಪ್ಪತ್ತೆಂಟುಆವೃತ್ತಿಯಾಗಿ ಮಹರ್ಷಿಗಳು ವೇದ ಗಳನ್ನು ವಿಂಗಡಿಸಿಟ್ಟಿರುವರು. ಆದರೆ ಮೊದಲನೆಯ ದ್ವಾಪರಯುಗದಲ್ಲಿ ಮಾತ್ರ ಸ್ವಯಂಭುವು ಸಾಕ್ಷಾತ್ತಾಗಿ ವೇದಗಳನ್ನು ವಿಂಗಡಿಸಿದನು.

೧೧೭. ಎರಡನೆಯ ದ್ವಾಪರಯುಗದಲ್ಲಿ ವೇದವಿಭಜನೆಯ ಅಧಿಕಾರವನ್ನು ಪ್ರಜಾಪತಿಯು ಹೊಂದಿ ವೇದವ್ಯಾಸನೆಂದೆನಿಸಿಕೊಂಡಿದ್ದನು. ಮೂರನೆಯ ದ್ವಾಪರ ಯುಗದಲ್ಲಿ ಶುಕ್ರಾಚಾರ್ಯನೂ, ನಾಲ್ಕನೆಯ ದ್ವಾಪರಯುಗದಲ್ಲಿ ಬೃಹಸ್ಪತಿಯೂ ವೇದವ್ಯಾಸರಾಗಿದ್ದರು .

೧೧೮. ಅದರಂತೆಯೇ ಮುಂದೆಬರುವ ಐದು, ಆರು, ಏಳು ಮತ್ತು ಎಂಟನೆಯ ಸಂಖ್ಯೆಯ ದ್ವಾಪರಯುಗಗಳಲ್ಲಿ ಸವಿತಾ, ಮೃತ್ಯು, ಇಂದ್ರ, ಮತ್ತು ವಸಿಷ್ಠರು ವೇದ ವ್ಯಾಸರಾಗಿ ಅವತರಿಸಿದರು.

೧೧೯. ಮತ್ತು ಸಾರಸ್ವತನು ಒಂಭತ್ತನೆಯ ಯುಗದಲ್ಲಿಯೂ ತ್ರಿಧಾಮ ಹತ್ತ

ತ್ರಯೋದಶೇ ಚಾಂತರಿಕ್ಷೋ ಧರ್ಮಶ್ಚಾಪಿ ಚತುರ್ದಶೇ ।
ತ್ರ್ಯಾರ್ಯ್ಯಾರುಣಿಃ ಪಂಚದಶೇ ಷೋಡಶೇ ತು ಧನಂಜಯಃ ॥ ೧೨೦ ॥

ಕೃತಂಜಯಃ ಸಪ್ತದಶೇ ಋಜೀಷೋಽಷ್ಟಾದಶೇ ಸ್ಮೃತಃ ।
ಋಜೀಷಾತ್ತು ಭರದ್ವಾಜೋ ಭರದ್ವಾಜಾತ್ತು ಗೌತಮಃ ॥ ೧೨೧ ॥

ಗೌತಮಾದುತ್ತಮಶ್ಚೈವ ತತೋ ಹರ್ಯವನಃ ಸ್ಮೃತಃ ।
ಹರ್ಯವನಾತ್ ಪರೋ ವೇನಃ ಸ್ಮೃತೋ ವಾಜಶ್ರವಾಸ್ತತಃ ॥೧೨೨॥

ಅರ್ವಾಕ್ ಚ ವಾಜಶ್ರವಸಃ ಸೋಮಮುಖ್ಯಾಯನಸ್ತತಃ ।
ತೃಣಬಿಂದುಸ್ತತಸ್ತಸ್ಮಾತ್ತತಜಸ್ತೃಣಬಿಂದುತಃ ॥ ೧೨೩ ॥

---

ನೆಯ ಯುಗದಲ್ಲಿಯೂ ತ್ರಿವರ್ಷನು ಹನ್ನೊಂದನೆಯ ಯುಗದಲ್ಲಿಯೂ ಮತ್ತು ಸನದ್ವಾಜನು ಹನ್ನೆರಡನೆಯ ಯುಗದಲ್ಲಿಯೂ ವೇದವ್ಯಾಸರಾಗಿದ್ದರು.

೧೨೦. ಅಂತರಿಕ್ಷ, ಧರ್ಮ, ತ್ರ್ಯೈಯ್ಯಾರುಣಿ ಮತ್ತು ಧನಂಜಯನು ಹದಿಮೂರು, ಹದಿನಾಲ್ಕು, ಹದಿನೈದು, ಮತ್ತು ಹದಿನಾರನೆಯ ದ್ವಾಪರ ಯುಗಗಳಲ್ಲಿ ವೇದವ್ಯಾಸ ಪದವಿಯನ್ನು ಅಲಂಕರಿಸಿದರು.

೧೨೧. ಮತ್ತು ಹದಿನೇಳನೆಯ ಯುಗದಲ್ಲಿ ಕೃತಂಜಯ, ಹದಿನೆಂಟನೆಯ ಯುಗದಲ್ಲಿ ಋಜೀಷ, ಹತ್ತೊಂಭತ್ತನೆಯ ಯುಗದಲ್ಲಿ ಭರದ್ವಾಜ ಮತ್ತು ಇಪ್ಪತ್ತನೆಯ ಯುಗದಲ್ಲಿ ಗೌತಮನು ವೇದಗಳನ್ನು ವ್ಯಾಸಮಾಡಿದರು.

೧೨೨. ಅನಂತರದಲ್ಲಿ ಗೌತಮನ ಮುಂದೆ ಉತ್ತಮ. ಉತ್ತಮನ ಮುಂದೆ ಹರ್ಯವನ, ಅವನ ಅನಂತರದಲ್ಲಿ ವೇನ, ಮತ್ತು ಆತನ ಮುಂದೆ ವಾಜಶ್ರವ ಎಂಬ ಕ್ರಮದಿಂದ ಮುಂದಿನ ಯುಗಗಳಲ್ಲಿ ವೇದವ್ಯಾಸರಾದರು,

೧೨೩. ಮತ್ತು ವಾಜಶ್ರವಸ್ಸಿನ ಮುಂದೆ ಸೋಮಮುಖ್ಯಾಯನ, ತದನಂತರದಲ್ಲಿ ತೃಣಬಿಂದು ಅವನ ಮುಂದೆ ತತಜ ಎಂಬುವರು ವೇದವ್ಯಾಸಕಾರ್ಯದಲ್ಲಿ ನಿರತರಾದರು.

ತತಜಾಚ್ಚ ಸ್ಮೃತಃ ಶಕ್ತಿಃ ಶಕ್ತೇಶ್ಚಾಪಿ ಪರಾಶರಃ ।
ಜಾತೂಕರ್ಣ್ಯೋಽಭವತ್ತಸ್ಮಾತ್ತಸ್ಮಾದ್ದ್ವೈಪಾಯನಃ ಸ್ಮೃತಃ ॥ ೧೨೪ ॥

ಅಷ್ಟಾವಿಂಶತಿರಿತ್ಯೇತೇ ವೇದವ್ಯಾಸಾಃ ಪುರಾತನಾಃ ।
ಭವಿಷ್ಯೇ ದ್ವಾಪರೇ ಚೈವ ದ್ರೌಣಿರ್ದ್ವೈಪಾಯನೋಽಪಿ ಚ ॥ ೧೨೫ ॥

ವೇದವ್ಯಾಸೇ ಹ್ಯತೀತೇಽಸ್ಮಿನ್ ಭವಿತಾ ಸುಮಹಾತಪಾಃ ।
ಭವಿಷ್ಯಂತಿ ಭವಿಷ್ಯೇಷು ಶಾಖಾಪ್ರಣಯನಾನಿ ತು ॥ ೧೨೬ ॥

ತಸ್ಯೈವ ಬ್ರಹ್ಮಣೋ ಬ್ರಹ್ಮ ತಪಸಃ ಪ್ರಾಪ್ತಮವ್ಯಯಮ್ ।
ತಪಸಾ ಕರ್ಮ ಚ ಪ್ರಾಪ್ತಂ ಕರ್ಮಣಾ ಹ್ಯಾಪಿ ತೇ ಯಶಃ ॥ ೧೨೭ ॥

ಪುನಶ್ಚ ತೇಜಸಾ ಸತ್ಯಂ ಸತ್ಯೇನಾನಂದಮವ್ಯಯಮ್ ।
ವ್ಯಾಪ್ತಂ ಬ್ರಹ್ಮಾಮೃತಂ ಶುಕ್ರಂ ಬ್ರಹ್ಮೈವಾಮೃತಮುಚ್ಯತೇ ॥ ೧೨೮ ॥

---

೧೨೪. ತತಜನಿಂದ ಮುಂದೆ ಶಕ್ತಿ, ಶಕ್ತಿಯ ಮುಂದೆ ಪರಾಶರ, ಪರಾಶರನಿಂದ ಜಾತೂಕರ್ಣ್ಯ, ಮತ್ತು ಅವನಿಂದ ಮುಂದೆ ದ್ವೈಪಾಯನ ಮುನಿಯು ವೇದವ್ಯಾಸರಾದರೆಂದು ಸ್ಮರಿಸಲ್ಪಟ್ಟಿರುವರು.

೧೨೫. ಈ ರೀತಿಯಾಗಿ ಒಟ್ಟು ಸೇರಿ ಪ್ರಾಚೀನ ವೇದವ್ಯಾಸರು ಇಪ್ಪತ್ತೆಂಟು ಮಂದಿ ಕಳೆದಿರುವರು. ಮುಂದಿನ ದ್ವಾಪರಯುಗದಲ್ಲಿ ದ್ರೌಣಿ ಎಂಬುವನು ವೇದವ್ಯಾಸನಾಗುವನು.

೧೨೬. ಈಗಿರುವ ದ್ವೈಪಾಯನನೆಂಬ ವೇದವ್ಯಾಸಮುನಿಯ ಅಧಿಕಾರವು ಸಮಾಪ್ತಿಯಾದ ಬಳಿಕ ಬರುವ ದ್ರೌಣಿಯು ಮಹಾ ತಪಸ್ವಿಯಾದ ವೇದವ್ಯಾಸಮುನಿಯಾಗುವನು. ಆ ಯುಗದಲ್ಲಿಯೂ ಅನೇಕ ಶಾಖಾರಚನೆಗಳು ಸಂಭವಿಸುತ್ತವೆ.

೧೨೭. ಮೂಲಭೂತವಾದ ಬ್ರಹ್ಮವಸ್ತುವಿನಿಂದ ತಪೋನುಷ್ಠಾನ ಬಲದಿಂದ ಸಕಲ ಮಹರ್ಷಿಗಳು ವ್ಯಯವಿಲ್ಲದ ವೇದರಾಶಿಯನ್ನೂ ಕರ್ಮವನ್ನೂ ಮತ್ತು ಕರ್ಮಾಚರಣೆಯಿಂದ ಕೀರ್ತಿಯನ್ನೂ ಹೊಂದಿದರು.

೧೨೮. ಮತ್ತೆ ಆ ಅನುಷ್ಠಾನ ವಿಶೇಷದಿಂದ ಸತ್ಯಸ್ವರೂಪವನ್ನೂ ಅದರಿಂದ ಶಾಶ್ವತವಾದ ಆನಂದವನ್ನೂ ಹೊಂದಿದರು. ಹೀಗೆ ಮೂಲವಾದ ಬ್ರಹ್ಮವು ಪರಿ

ಧ್ರುವಮೇಕಾಕ್ಷರಮಿದಮೋಮಿತ್ಯೇವ ವ್ಯವಸ್ಥಿತಮ್ ।
ಬೃಹತ್ತ್ವಾದ್ಬೃಂಹಣಾಚ್ಚೈವ ತದ್ಬ್ರಹ್ಮೇತ್ಯಭಿಧೀಯತೇ ॥ ೧೨೯ ॥

ಪ್ರಣವಾವಸ್ಥಿತಂ ಭೂಯೋ ಭೂರ್ಭುವಃಸ್ವರಿತಿಸ್ಮೃತಮ್ ।
ಅಥರ್ವಋಗ್ಯಜುಃಸಾಮ್ನಿ ಯತ್ತಸ್ಮೈ ಬ್ರಹ್ಮಣೇ ನಮಃ ॥ ೧೩೦ ॥

ಜಗತಃ ಪ್ರಲಯೋತ್ಪತ್ತೌ ಯತ್ತತ್ಕಾರಣಸಂಜ್ಞಿತಮ್ ।
ಮಹತಃ ಪರಮಂ ಗುಹ್ಯಂ ತಸ್ಮೈ ಸುಬ್ರಹ್ಮಣೇ ನಮಃ ॥ ೧೩೧ ॥

ಅಗಾಧಾಪಾರಮಕ್ಷಯ್ಯಂ ಜಗತ್ಸಮ್ಮೋಹಸಂಭವಮ್ ।
ಸಂಪ್ರಕಾಶಪ್ರವೃತ್ತಿಭ್ಯಾಂ ಪುರುಷಾರ್ಥಪ್ರಯೋಜನಮ್ ॥ ೧೩೨ ॥

---

ಪೂರ್ಣವಾದ ವ್ಯಾಪ್ತಿಯನ್ನು ಹೊಂದಿದೆ. ಆ ಬ್ರಹ್ಮವು ಅಮೃತಸ್ವರೂಪವೂ ದೀಪ್ತಿಯಿಂದ ಕೂಡಿರುವುದೂ ಎಂದು ಹೇಳಲ್ಪಟ್ಟಿದೆ.

೧೨೯. ಆ ಬ್ರಹ್ಮವಸ್ತುವು ಶಾಶ್ವತವು. ಅದು ಪ್ರಣವಸ್ವರೂಪವಾದ " ಓಂ " ಎಂಬ ಏಕಾಕ್ಷರದಿಂದ ಪ್ರತಿಪಾದ್ಯವಾಗಿ ವ್ಯವಸ್ಥಿತವಾಗಿರುವುದು. ಅದು ಪರಿಮಾಣದಿಂದ ಬೃಹದ್ರೂಪ, ಸತ್ತಾ- ಸ್ಫುರಣಗಳಿಂದ ಪ್ರಪಂಚವನ್ನು ಬೆಳೆಸುವಿಕೆಗಳಿಂದ " ಬೃಹ " ಧಾತುವಿನಿಂದ ರೂಪಗೊಂಡ ಬ್ರಹ್ಮ ಎಂಬ ಸಂಕೇತವನ್ನು ಹೊಂದಿದೆ.

೧೩೦. ಪ್ರಣವದಲ್ಲಿ ಸ್ಥಿತಿಯನ್ನು ಹೊಂದಿರುವ ಬ್ರಹ್ಮವು ಮತ್ತೆ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳಲ್ಲಿಯೂ ಮತ್ತು ಋಕ್, ಯಜುಸ್ಸು, ಸಾಮ ಮತ್ತು ಅಥರ್ವ ವೇದಗಳಲ್ಲಿಯೂ ಪ್ರತಿಪಾದ್ಯವಾಗಿರುವುದು. ಅಂತಹ ಬ್ರಹ್ಮವಸ್ತುವಿಗೆ ನಮಸ್ಕಾರವು.

೧೩೧. ಪ್ರಪಂಚದ ಪ್ರಳಯ ಮತ್ತು ಉತ್ಪತ್ತಿಗಳಲ್ಲಿ ಕಾರಣವೆಂದು ವರ್ಣಿಸಲ್ಪಟ್ಟಿರುವುದೂ ಮಹತ್ತತ್ತ್ವಕ್ಕಿಂತ ಶ್ರೇಷ್ಠ ಮತ್ತು ಗುಹ್ಯವೂ ಆದ ಬ್ರಹ್ಮವಸ್ತುವಿಗೆ ನಮಸ್ಕಾರವು.

೧೩೨. ಅಗಾಧವೂ ಪಾರಶೂನ್ಯವೂ ಮತ್ತು ನಾಶವಿಲ್ಲದೆಯೂ ಇರುವ, ಆ ಬ್ರಹ್ಮವಸ್ತುವು ಜಗತ್ತೆಂಬ ಮೋಹಕ್ಕೆ ಕಾರಣವಾಗಿ ಪ್ರಕಾಶ ಮತ್ತು ಪ್ರವೃತ್ತಿಗಳಿಂದ ಆಯಾಯ ಪುರುಷಾರ್ಥಗಳನ್ನು ನೀಡುವುದು.

ಸಾಂಖ್ಯ ಜ್ಞಾನವತಾಂ ನಿಷ್ಠಾ ಗತಿಃ ಶಮದಮಾತ್ಮನಾಮ್ ।
ಯತ್ತದವ್ಯಕ್ತಮಮೃತಂ ಪ್ರಕೃತಿರ್ಬ್ರಹ್ಮಶಾಶ್ವತಮ್ ॥ ೧೩೩ ॥

ಪ್ರಧಾನಮಾತ್ಮಯೋನಿಶ್ಚ ಗುಹ್ಯಂ ಸತ್ತ್ವಂ ಚ ಶಸ್ಯತೇ ।
ಅವಿಭಾಗಸ್ತಥಾ ಶುಕ್ರಮಕ್ಷರಂ ಬಹುಧಾತ್ಮಕಮ್ ॥ ೧೩೪ ॥

ಪರಮಬ್ರಹ್ಮಣೇ ತಸ್ಮೈ ನಿತ್ಯಮೇವ ನಮೋ ನಮಃ ।
ಕೃತೇ ಪುನಃ ಕ್ರಿಯಾ ನಾಸ್ತಿ ಕುತ ಏವಾಕೃತಕ್ರಿಯಾಃ ॥ ೧೩೫ ॥

ಸಕೃದೇವ ಕೃತಂ ಸರ್ವಂ ಯದ್ವೈ ಲೋಕೇ ಕೃತಾಕೃತಮ್ ।
ಶ್ರೋತವ್ಯಂ ಚಾ ಶ್ರುತಂ ಚಾಪಿ ತಥೈವಾಸಾಧು ಸಾಧು ವಾ ॥ ೧೩೬ ॥

ಜ್ಞಾತವ್ಯಂ ವಾಪ್ಯಮಂತವ್ಯಂ ಸ್ಪ್ರಷ್ಟವ್ಯಂ ಭೋಜ್ಯಮೇವ ಚ ।
ದೃಷ್ಟವ್ಯಂ ವಾಥ ಶ್ರೋತವ್ಯಂ ಘ್ರಾತವ್ಯಂ ಚಾ ಕಥಂ ಚನ ॥ ೧೩೭ ॥

---

೧೩೩. ಸಾಂಖ್ಯ ಮಾರ್ಗದಲ್ಲಿ ಜ್ಞಾನಾಭ್ಯಾಸ ಉಳ್ಳ ಮುನಿಗಳಿಗೆ ನಿಷ್ಠೆಯೂ ಶಮ-ದಮಾದಿ ಸಂಪನ್ನರಿಗೆ ಪರಮಗತಿ ಸ್ವರೂಪವೂ ಶಾಶ್ವತವೂ ಮತ್ತು ಅಮೃತ ರೂಪವೂ ಆದ ಆ ಬ್ರಹ್ಮವಸ್ತುವು ಜಗತ್ತಿಗೆ ಅವ್ಯಕ್ತವಾದ ಪ್ರಕೃತಿಯಾಗಿರುವುದು.

೧೩೪. ಆ ಪ್ರಕೃತಿಯು ತನ್ನಿಂದಲೇ ಅನಾದಿಯಾಗಿ ಪ್ರಾದುರ್ಭಾವ ಹೊಂದಿ ಗುಹ್ಯವಾದ ಸತ್ತ್ವ ಗುಣದಿಂದ ಪ್ರಧಾನವೆಂದು ಹೊಗಳಲ್ಪಡುತ್ತಿದೆ. ಸ್ವಚ್ಛವಾಗಿ ಅವಿಭಾಗ ಅವಸ್ಥೆಯನ್ನು ಹೊಂದಿರುವ ಅಕ್ಷರ ರೂಪವಾದ ಬ್ರಹ್ಮವು ಅನೇಕ ರೂಪ ಗಳನ್ನು ಹೊಂದಿದೆ.

೧೩೫. ಅಂತಹ ಪರಬ್ರಹ್ಮರೂಪಕ್ಕೆ ಸಂತತವೂ ನಮಸ್ಕಾರ ಮಾಡುವೆವು. ಕೃತಯುಗದಲ್ಲಿ ಕರ್ಮವನ್ನು ಅಭ್ಯಾಸಮಾಡುವ ಆವಶ್ಯಕತೆಯು ಇಲ್ಲ. ಕರ್ಮಾ ನುಷ್ಠಾನ ಶೂನ್ಯರು ಹೇಗಿರುವರು ?

೧೩೬. ಲೋಕದಲ್ಲಿ ಕರ್ತವ್ಯ ಅಕರ್ತವ್ಯಗಳೂ, ಶ್ರೋತವ್ಯ ಶ್ರುತವಸ್ತುಗಳೂ ಮತ್ತು ಅಸಾಧು ಅಥವಾ ಸಾಧುಕರ್ಮಗಳೂ ಒಂದು ಆವರ್ತಿಯಿಂದ ಮಾಡಲ್ಪಟ್ಟಂ ತಾಗುವುವು.

೧೩೭. ಹಾಗೆ ತಿಳಿಯಬೇಕಾದ್ದು, ಮನನಮಾಡಬೇಕಾದ್ದು, ಮುಟ್ಟುವುದು,

ದರ್ಶಿತಂ ಯದನೇನೈವ ಜ್ಞಾತಂ ತದ್ವೈ ಸುರರ್ಷಿಭಿಃ ।
ಯಸ್ಸ್ನ ದರ್ಶಿತವಾನೇಷ ಕಸ್ತದನ್ವೇಷ್ಟುಮರ್ಹತಿ ॥ ೧೩೮ ॥

ಸರ್ವಾಣಿ ಸರ್ವಂ ಸರ್ವಾಂಶ್ಚ ಭಗವಾನೇವ ಸೋಽಬ್ರವೀತ್ ।
ಯದಾ ಯತ್ ಕ್ರಿಯತೇ ಯೇನ ತದಾ ತತ್ ಸೋಽಭಿಮನ್ಯತೇ ॥ ೧೩೯ ॥

ಯತ್ರೇದಂ ಕ್ರಿಯತೇ ಪೂರ್ವಂ ನ ತದನ್ಯೇನ ಭಾಷಿತಮ್ ।
ಯದಾ ಚ ಕ್ರಿಯತೇ ಕಿಂಚಿತ್ ಕೇನಚಿದ್ವಾ ಕಥಂ ಕ್ವಚಿತ್ ॥ ೧೪೦ ॥

ತೇನೈವ ತತ್ ಕೃತಂ ಕೃತ್ಯಂ ಕರ್ತೄಣಾಂ ಪ್ರತಿಭಾತಿ ವೈ ।
ವಿರಿಕ್ತಂ ಚಾತಿರಿಕ್ತಂ ಚ ಜ್ಞಾನಾಜ್ಞಾನೇ ಪ್ರಿಯಾಪ್ರಿಯೇ ॥ ೧೪೧ ॥

ಧರ್ಮಾಧರ್ಮೌ ಸುಖಂ ದುಃಖಂ ಮೃತ್ಯುಶ್ಚಾಮೃತಮೇವ ಚ ।
ಊರ್ಧ್ವಂ ತಿರ್ಯಗಧೋಭಾವಸ್ತಸ್ಯೈವಾದೃಷ್ಟಕಾರಿಣಃ ॥ ೧೪೨ ॥

---

ಭುಂಜಿಸುವುದು, ನೋಡುವುದು, ಕೇಳುವುದು, ಮೂಸಿನೋಡುವುದು ಮುಂತಾದ ಇಂದ್ರಿಯವ್ಯಾಪಾರಗಳೆಲ್ಲವೂ ಪರಬ್ರಹ್ಮವಸ್ತುವಿನಿಂದಲೇ ನಡೆಯುವುವು.

೧೩೮. ಈ ವ್ಯಾಪಾರಗಳೆಲ್ಲವೂ ಸಾಕ್ಷಿಸ್ವರೂಪದಿಂದ ತಿಳಿಯಲ್ಪಡುವುವೆಂದು ಮಹರ್ಷಿಗಳು ತಿಳಿದಿರುವರು. ಇಂತಹ ಇತರ ಪ್ರಮಾಣಗಳಿಗೆ ವೇದ್ಯವಲ್ಲದ ಮೂಲ ವಸ್ತುವನ್ನು ಮತ್ತೆ ಯಾರು ಹುಡುಕಬಲ್ಲರು ?

೧೩೯. ಆ ಭಗವಂತನಾದ ಪರಮಾತ್ಮನು ಎಲ್ಲರಿಗೂ ಎಲ್ಲವಸ್ತುಗಳನ್ನು ಉಪದೇಶಿಸಿರುವನು. ಈ ಶರೀರ ಮುಂತಾದ ಉಪಾಧಿಯಲ್ಲಿ ಯಾವಾಗ ಯಾವ ಕಾರ್ಯವನ್ನು ನಡೆಸುವನೋ, ಆಗ ಅದನ್ನು ತನ್ನದೆಂದು ಭಾವಿಸುವನು.

೧೪೦. ಮೊದಲಿನಲ್ಲಿ ಯಾವ ಕರ್ಮವು ಮಾಡಲ್ಪಡುವುದೋ ಅದು ಮತ್ತೊಬ್ಬನಿಂದ ಉಪದೇಶಿಸಲ್ಪಟ್ಟಿಲ್ಲ. ಯಾವಾಗ ಯಾರಿಂದಲಾದರೂ ಹೇಗಾದರೂ ಎಲ್ಲಿಯಾದರೂ ಆಚರಿಸಲ್ಪಟ್ಟಿರುವುದು ಬ್ರಹ್ಮಮೂಲಕವೇ ಆಗಿದೆ.

೧೪೧. ಕರ್ತೃ ಪುರುಷರಿಗೆ ಅದೆಲ್ಲವೂ ಬ್ರಹ್ಮನಿಂದಲೇ ರಚಿತವಾಗಿ ತೋರುವುದು. ನ್ಯೂನ-ಅತಿರಿಕ್ತ ; ಜ್ಞಾನ-ಅಜ್ಞಾನ ; ಮತ್ತು ಪ್ರಿಯ-ಅಪ್ರಿಯಗಳು ಬ್ರಹ್ಮವಸ್ತುವಿನ ವಿಕಾರಗಳು.

೧೪೨. ಹಾಗೆಯೇ ಧರ್ಮ-ಅಧರ್ಮ ; ಸುಖ-ದುಃಖ ; ಮೃತ್ಯು-ಅಮೃತ

ಸ್ವಯಂಭುವೋಽಥ ಜ್ಯೇಷ್ಠಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಪ್ರತ್ಯೇಕವೇದ್ಯಂ ಭವತಿ ತ್ರೇತಾಸ್ವಿಹ ಪುನಃ ಪುನಃ ॥ ೧೪೩ ॥

ವ್ಯಸ್ಯತೇ ಹ್ಯೇಕವೇದ್ಯಂ ತು ದ್ವಾಪರೇಷು ಪುನಃ ಪುನಃ ।
ಬ್ರಹ್ಮಾ ಚೈತಾಸುವಾಚಾದೌ ತಸ್ಮಿನ್ ವೈವಸ್ವತೇಽಂತರೇ ॥ ೧೪೪ ॥

ಆವರ್ತಮಾನಾ ಋಷಯೋ ಯುಗಾಖ್ಯಾಸು ಪುನಃ ಪುನಃ ।
ಕುರ್ವಂತಿ ಸಂಹಿತಾ ಹ್ಯೇತೇ ಜಾಯಮಾನಾಃ ಪರಸ್ಪರಮ್ ॥ ೧೪೫ ॥

ಅಷ್ಟಾಶೀತಿಸಹಸ್ರಾಣಿ ಶ್ರುತರ್ಷೀಣಾಂ ಸ್ಮೃತಾನಿ ವೈ ।
ತಾವತ್ಯಃ ಸಂಹಿತಾ ಹ್ಯೇತಾ ಆವರ್ತಂತೇ ಪುನಃ ಪುನಃ ॥ ೧೪೬ ॥

ಶ್ರಿತಾ ದಕ್ಷಿಣಪಂಥಾನಂ ಯೇ ಶ್ಮಶಾನಾನಿ ಭೇಜಿರೇ ।
ಯುಗೇ ಯುಗೇ ತು ತಾಃ ಶಾಖಾ ವ್ಯಸ್ಯಂತೇ ತೈಃ ಪುನಃ ಪುನಃ ॥ ೧೪೭ ॥

---

ಮತ್ತು ಊರ್ಧ್ವ ಅಧೋಭಾಗ ತಿರ್ಯಕ್ ಭಾಗಗಳು ಅಂತರ್ಯಾಮಿಯಾಗಿ ಅದೃಶ್ಯನಾಗಿರುವ ಪರಮಾತ್ಮನ ರೂಪಾಂತರಗಳಾಗಿರುವುವು.

೧೪೩. ಆ ರೂಪವು ಸ್ವಯಂಭುವೂ ಪರಮಸ್ಥಾನದಲ್ಲಿ ಇರುವವನೂ ಮತ್ತು ಜ್ಯೇಷ್ಠಸ್ವರೂಪನೂ ಆದ ಬ್ರಹ್ಮನಿಗೆ ತ್ರೇತಾಯುಗದಲ್ಲಿ ಪುನಃಪುನಃ ವೇದ್ಯವಾಗುವುದು.

೧೪೪. ಬ್ರಹ್ಮನಿಂದ ಪ್ರತ್ಯೇಕ ವೇದ್ಯವಾದ ವಸ್ತುವು ದ್ವಾಪರಯುಗಗಳಲ್ಲಿ ವ್ಯತ್ಯಾಸ ಹೊಂದುವುದು. ಬ್ರಹ್ಮನು ಆದಿಯಲ್ಲಿ ತಪಸ್ವಿಗಳನ್ನು ಕುರಿತು ಆ ವೈವಸ್ವತ ಮನ್ವಂತರದಲ್ಲಿ ಉಪದೇಶಿಸಿದನು.

೧೪೫. ಅಂತಹ ತಪಸ್ವಿ ಋಷಿಗಳು ಯುಗಗಳ ಪರ್ಯಾಯಗಳಲ್ಲಿ ಮತ್ತೆಮತ್ತೆ ಅನ್ಯೋನ್ಯವಾಗಿ ಜನಿಸಿ ಚಕ್ರದಂತೆ ಆವರ್ತನ ಹೊಂದುತ್ತಾ ಈ ಸಂಹಿತೆಗಳನ್ನು ರಚಿಸುವರು.

೧೪೬. ಎಂಭತ್ತೆಂಟುಸಾವಿರ ಸಂಖ್ಯೆಯ ಶ್ರುತ ಋಷಿಗಳೆಂದು ಪ್ರಸಿದ್ಧರಾದ ಮಹರ್ಷಿಗಳು ಸ್ಮರಿಸಲ್ಪಟ್ಟಿರುವರು. ಅವರಿಂದ ರಚಿತವಾದ ಅಷ್ಟು ಸಂಹಿತೆಗಳು ಕಾಲಪರ್ಯಾಯದಿಂದ ಮತ್ತೆ ಮತ್ತೆ ಆವರ್ತಿ ಹೊಂದುವುವು.

೧೪೭. ಪಿತೃಯಾಣವೆಂಬ ದಕ್ಷಿಣ ಮಾರ್ಗವನ್ನು ಆಶ್ರಯಿಸಿರುವ ಶ್ಮಶಾ

ದ್ವಾಪರೇಷ್ವಿಹ ಸರ್ವೇಷು ಸಂಹಿತಾಸ್ತು ಶ್ರುತರ್ಷಿಭಿಃ ।
ತೇಷಾಂ ಗೋತ್ರೇಷ್ವಿಮಾಃ ಶಾಖಾ ಭವಂತಿ ಹಿ ಪುನಃ ಪುನಃ॥ ೧೪೮ ॥

ತಾಃ ಶಾಖಾಸ್ತೇ ಚ ಕರ್ತಾರೋ ಭವಂತೀಹಾಯುಗಕ್ಷಯಾತ್ ।
ಏವಮೇವ ತು ವಿಜ್ಞೇಯಾಃ ಅತೀತಾನಾಗತೇಷ್ವಪಿ ॥ ೧೪೯ ॥

ಮನ್ವಂತರೇಷು ಸರ್ವೇಷು ಶಾಖಾಪ್ರಣಯನಾನಿ ವೈ ।
ಅತೀತೇಷು ವ್ಯತೀತಾನಿ ವರ್ತಂತೇ ಸಾಂಪ್ರತೇಽಂತರೇ ॥ ೧೫೦ ॥

ಭವಿಷ್ಯಂತಿ ಚ ಯಾನಿ ಸ್ಯುರ್ವರ್ತಿಷ್ಯಂತೇಽನಾಗತೇಷ್ವಪಿ ।
ಪೂರ್ವೇಣ ಪಶ್ಚಿಮಂ ಜ್ಞೇಯಂ ವರ್ತಮಾನೇನ ಚೋಭಯಮ್
॥ ೧೫೧ ॥

ಏತೇನ ಕ್ರಮಯೋಗೇನ ಮನ್ವಂತರವಿನಿಶ್ಚಯಃ ।
ಏವಂ ದೇವಾಃ ಸಪಿತರ ಋಷಯೋ ಮನವಶ್ಚ ವೈ ॥ ೧೫೨ ॥

---

ನಾಂತ ಸಂಸ್ಕಾರಗಳಿಂದ ಪವಿತ್ರರಾದವರಿಂದ ಆಯಾಯ ಯುಗಗಳಲ್ಲಿ ಶಾಖೆಗಳು ಮತ್ತೆಮತ್ತೆ ವಿಸ್ತರಿಸಲ್ಪಡುತ್ತವೆ.

೧೪೮. ದ್ವಾಪರಯುಗಗಳಲ್ಲಿ ಎಲ್ಲ ಶ್ರುತರ್ಷಿಗಳೆಂಬ ಮಹಾ ಮುನಿಗಳಿಂದ ಪ್ರವೃತ್ತವಾದ ಸಂಹಿತಾ ಶಾಖೆಗಳು ಅವರ ವಂಶಗಳಲ್ಲಿ ಅಧ್ಯಯನ ಕ್ರಮದಿಂದ ಮತ್ತೆಮತ್ತೆ ಪ್ರಚಾರವಾಗುತ್ತವೆ.

೧೪೯. ಹೀಗೆ ಆ ವೇದಶಾಖೆಗಳು ಮತ್ತು ಕರ್ತೃಗಳು ಯುಗದ ಅವಸಾನದ ವರೆಗೂ ಇರುತ್ತಾರೆ. ಹೀಗೆ ಹಿಂದೆ ಕಳೆದ ಮತ್ತು ಮುಂದೆ ಸಂಭವಿಸುವ ಮನ್ವಂತರ ಗಳಲ್ಲಿಯೂ ವೇದಸಂತತಿಯು ಬೆಳೆಯುವುದು.

೧೫೦. ಎಲ್ಲ ಮನ್ವಂತರಗಳಲ್ಲಿಯೂ ಅಪೂರ್ವ ವೇದಶಾಖೆಗಳ ರಚನೆಯು ಸಮಾನವಾದುದರಿಂದ ಹಿಂದಿನ ಮನ್ವಂತರದಲ್ಲಿದ್ದ ಶಾಖೆಗಳು ಕಳೆದುಹೋಗಿ ವರ್ತ ಮಾನ ಮನ್ವಂತರದಲ್ಲಿ ಈಗಿನ ಶಾಖೆಗಳು ಪ್ರಕಾಶವಾಗಿವೆ.

೧೫೧. ಭಾವಿ ಮನ್ವಂತರಗಳಲ್ಲಿಯೂ ಆ ಶಾಖೆಗಳು ಮತ್ತೆ ಪ್ರಸರಿಸುವುವು. ಹೀಗೆ ಮೊದಲಿನ ವಸ್ತುವಿನಿಂದ ಮುಂದಿನ ವಸ್ತುವು ವರ್ತಮಾನ ಕ್ರಮದಿಂದ ಪೂರ್ವ ಪಶ್ಚಿಮ ಕ್ರಮಗಳು ಊಹಿಸಿ ತಿಳಿಯಲ್ಪಡುವುವು.

೧೫೨. ಈ ಕ್ರಮದಿಂದ ಸಕಲ ಮನ್ವಂತರಗಳಲ್ಲಿ ವೇದಗಳ ಸ್ಥಿತಿಯನ್ನು

ಮಂತ್ರೈಃ ಸಹೋರ್ಧ್ವಂ ಗಚ್ಛಂತಿ ಹ್ಯಾವರ್ತಂತೇ ಚ ತೈಃ ಸಹ ।
ಜನಲೋಕಾತ್ ಸುರಾಃ ಸರ್ವೇ ದಶಕಲ್ಪಾನ್ ಪುನಃ ಪುನಃ ॥ ೧೫೩ ॥

ಪರ್ಯಾಯಕಾಲೇ ಸಂಪ್ರಾಪ್ತೇ ಸಂಭೂತಾ ನಿಧನಸ್ಯ ತೇ ।
ಅವಶ್ಯಭಾವಿನಾರ್ಥೇನ ಸಂಬಧ್ಯಂತೇ ತದಾ ತು ತೇ ॥ ೧೫೪ ॥

ತತಸ್ತೇ ದೋಷವಜ್ಜನ್ಮ ಪಶ್ಯಂತೋ ರೋಗಪೂರ್ವಕಮ್ ।
ನಿವರ್ತತೇ ತದಾ ವೃತ್ತಿಃ ಸಾ ತೇಷಾಂ ದೋಷದರ್ಶನಾತ್ ॥ ೧೫೫ ॥

ಏವಂ ದೇವಯುಗಾನೀಹ ದಶಕೃತ್ವೋ ವಿವರ್ತ್ಯ ವೈ ।
ಜನಲೋಕಾತ್ತಪೋಲೋಕಂ ಗಚ್ಛಂತೀಹಾನಿವರ್ತಕಮ್ ॥ ೧೫೬ ॥

ಏವಂ ದೇವಯುಗಾನೀಹ ವ್ಯತೀತಾನಿ ಸಹಸ್ರಶಃ ।
ನಿಧನಂ ಬ್ರಹ್ಮಲೋಕೇ ವೈ ಗತಾನಿ ಋಷಿಭಿಃ ಸಹ ॥ ೧೫೭ ॥

---

ನಿಶ್ಚಯಿಸಬೇಕು. ಇದಕ್ಕೆ ದೇವತೆಗಳೂ, ಪಿತೃಗಳೂ, ಋಷಿಗಳೂ ಮತ್ತು ಮನುಗಳೂ ಕೂಡ ನಿಯಾಮಕರಾಗಿರುವರು.

೧೫೩. ದೇವಾದಿಗಳೆಲ್ಲರೂ ವೇದಮಂತ್ರಗಳೊಡನೆ ಊರ್ಧ್ವಲೋಕಕ್ಕೆ ಹೋಗಿ ಮತ್ತೆ ಅವುಗಳ ಸಂಗಡ ಜನಲೋಕದಿಂದ ಹತ್ತು ಕಲ್ಪಗಳವರೆಗೆ ಮತ್ತೆ ಮತ್ತೆ ಆವರ್ತಿ ಹೊಂದುವರು.

೧೫೪. ಮಹಾ ಪ್ರಳಯಕಾಲವು ಪ್ರಾಪ್ತವಾಗಲು ಅವರೆಲ್ಲರೂ ಮರಣಕ್ಕೆ ಉನ್ಮುಖರಾಗಿ ಅವಶ್ಯಭಾವಿಯಾದ ದೈವಗತಿಯ ಸಂಬಂಧವನ್ನು ಹೊಂದುವರು.

೧೫೫. ಅನಂತರದಲ್ಲಿ ಅವರು ರೋಗಗಳಿಗೆ ಮೂಲಕಾರಣವಾದ ಜನ್ಮವನ್ನು ದುಷ್ಟವನ್ನಾಗಿ ಅನುಭವಿಸಿ ಆ ದೋಷದರ್ಶನದಿಂದ ತಮ್ಮ ವೃತ್ತಿಯನ್ನು ಪರಿತ್ಯಜಿಸುವರು.

೧೫೬. ಈ ರೀತಿಯಯಗಿ ಹತ್ತುಸಲ ದೇವಯುಗಗಳನ್ನು ಕಳೆದು ಜನಲೋಕದಿಂದ ಪುನರಾವರ್ತಿ ಇಲ್ಲದ ತಪೋಲೋಕವನ್ನು ಕುರಿತು ಹೋಗುತ್ತಾರೆ.

೧೫೭. ಹೀಗೆ ಸಾವಿರಾರು ದೇವಯುಗಗಳು ಹಿಂದೆ ಕಳೆದುಹೋಗಿವೆ. ಅಲ್ಲಿ ಅನೇಕ ಮುನಿಗಳ ಸಂಗಡ ಮರಣಾನಂತರದಲ್ಲಿ ಬ್ರಹ್ಮಲೋಕವನ್ನು ಹೊಂದಿರುವರು.

ನ ಶಕ್ಯ ಆನುಪೂರ್ವ್ಯೇಣ ತೇಷಾಂ ವಕ್ತುಂ ಸುವಿಸ್ತರಃ ।
ಅನಾದಿತ್ವಾಚ್ಚ ಕಾಲಸ್ಯ ಸಂಖ್ಯಾನಾಂ ಚೈವ ಸರ್ವಶಃ ॥ ೧೫೮ ॥

ಮನ್ವಂತರಾಣ್ಯತೀತಾನಿ ಯಾನಿ ಕಲ್ಪೈಃ ಪುರಾ ಸಹ ।
ಪಿತೃಭಿರ್ಮುನಿಭಿರ್ದೇವೈಃ ಸಾರ್ಧಂ ಚ ಋಷಿಭಿಃ ಸಹ ॥ ೧೫೯ ॥

ಕಾಲೇನ ಪ್ರತಿಸೃಷ್ಟಾನಿ ಯುಗಾನಾಂ ಚ ವಿವರ್ತನಮ್ ।
ಏತೇನ ಕ್ರಮಯೋಗೇನ ಕಲ್ಪಮನ್ವಂತರಾಣಿ ಚ ॥ ೧೬೦ ॥

ಸಪ್ರಜಾನಿ ವ್ಯತೀತಾನಿ ಶತಶೋಽಥ ಸಹಸ್ರಶಃ ।
ಮನ್ವಂತರಾನ್ತೇ ಸಂಹಾರಃ ಸಂಹಾರಾಂತೇ ಚ ಸಂಭವಃ ॥ ೧೬೧ ॥

ದೇವತಾನಾಮೃಷೀಣಾಂ ಚ ಮನೋಃ ಪಿತೃಗಣಸ್ಯ ಚ ।
ನ ಶಕ್ಯ ಆನುಪೂರ್ವ್ಯೇಣ ವಕ್ತುಂ ವರ್ಷಶತೈರಪಿ ॥ ೧೬೨ ॥

---

೧೫೮. ಆ ಮುನಿಗಳ ವಿಸ್ತಾರವನ್ನು ಕ್ರಮವಾಗಿ ಹೇಳಲು ಯಾರಿಗೂ ಸಾಧ್ಯವಿಲ್ಲ. ಕಾಲವು ಅನಾದಿಯಾಗಿರುವುದರಿಂದಲೂ ಅಂತಹವರ ಸಂಖ್ಯೆಯನ್ನು ವರ್ಣಿಸಲು ಸಾಧ್ಯವಿಲ್ಲದ್ದರಿಂದಲೂ ಸಂಗ್ರಹವಾಗಿ ಹೇಳಿರುವೆನು.

೧೫೯. ಹಿಂದೆ ಅನೇಕ ಕಲ್ಪಗಳೊಡನೆ ಮನ್ವಂತರಗಳು ಆಯಾಯ ಕಾಲದ ಪಿತೃ, ಮುನಿ, ದೇವತೆ ಮತ್ತು ಋಷಿಗಳೊಡನೆ ಕಳೆದುಹೋಗಿವೆ.

೧೬೦. ಅವು ಕಾಲಕ್ರಮದಿಂದ ಮತ್ತೆ ಸೃಷ್ಟಿಸಲ್ಪಟ್ಟವೆ. ಅದರಿಂದ ಯುಗಗಳು ಪರ್ಯಾಯವಾಗಿ ಸುತ್ತುತ್ತಿರುವುವು. ಇದರಂತೆ ಕಲ್ಪ, ಮನ್ವಂತರಗಳು ಕಳೆಯುತ್ತಿರುವುವು.

೧೬೧. ಕಲ್ಪ, ಮನ್ವಂತರಗಳಲ್ಲಿ ಸಾವಿರಾರು ಪ್ರಜೆಗಳು ಕಳೆದಿರುವರು. ಚಕ್ರದಂತೆ ಆವರ್ತಿ ಹೊಂದುವ ಈ ಪರ್ಯಾಯದಲ್ಲಿ ಮನ್ವಂತರವು ಕಳೆದ ಕೂಡಲೇ ಪ್ರಳಯವೂ, ಪ್ರಳಯಾನಂತರದಲ್ಲಿ ಸೃಷ್ಟಿಯೂ ಉಂಟಾಗುವುವು.

೧೬೨. ಆಯಾಯ ಯುಗಗಳಲ್ಲಿ ದೇವತೆ, ಋಷಿ, ಮನು ಮತ್ತು ಪಿತೃಗಣಗಳ ಕ್ರಮವಾದ ವಿಸ್ತಾರವನ್ನು ನಡೆದ ಆನುಪೂರ್ವಿಯನ್ನನುಸರಿಸಿ ನೂರಾರು ವರ್ಷಗಳಿಂದಲೂ ವರ್ಣಿಸಲು ಸಾಧ್ಯವಿಲ್ಲ.

ವಿಸ್ತರಸ್ತು ನಿಸರ್ಗಸ್ಯ ಸಂಹಾರಸ್ಯ ಚ ಸರ್ವಶಃ ।
ಮನ್ವಂತರಸ್ಯ ಸಂಖ್ಯಾಂ ತು ಮಾನುಷೇಣ ನಿಬೋಧತ ॥ ೧೬೩ ॥

ಮನ್ವಂತರಾಸ್ತು ಸಂಖ್ಯಾತಾಃ ಸಂಖ್ಯಾನಾರ್ಥವಿಶಾರದೈಃ ।
ತ್ರಿಂಶತ್‍ಕೋಟ್ಯಸ್ತು ಸಂಪೂರ್ಣಾಃ ಸಂಖ್ಯಾತಾಃ ಸಂಖ್ಯಯಾ ದ್ವಿಜೈಃ ॥ ೧೬೪ ॥

ಸಪ್ತಷಷ್ಟಿಸ್ತಥಾನ್ಯಾನಿ ನಿಯುತಾನಿ ಚ ಸಂಖ್ಯಯಾ ।
ವಿಂಶತಿಶ್ಚ ಸಹಸ್ರಾಣಿ ಕಾಲೋಽಯಂ ಸಾಧಿಕಂ ವಿನಾ ॥ ೧೬೫ ॥

ಮನ್ವಂತರಸ್ಯ ಸಂಖ್ಯೇಯಂ ಮಾನುಷೇಣ ಪ್ರಕೀರ್ತಿತಾ ।
ವರ್ಷಾಗ್ರೇಣಾಪಿ ದಿವ್ಯೇನ ಪ್ರವಕ್ಷ್ಯಾಮ್ಯುತ್ತರಂ ಮನೋಃ ॥ ೧೬೬ ॥

ಅಷ್ಟೌ ಶತಸಹಸ್ರಾಣಿ ದಿವ್ಯಯಾ ಸಂಖ್ಯಯಾ ಸ್ಮೃತಮ್ ।
ದ್ವಿಪಂಚಾಶತ್ತಥಾನ್ಯಾನಿ ಸಹಸ್ರಾಣ್ಯಧಿಕಾನಿ ತು ॥ ೧೬೭ ॥

---

೧೬೩. ಸೃಷ್ಟಿ ಪ್ರಪಂಚದ ಮತ್ತು ಸಂಹಾರದ ಎಲ್ಲಾ ರೀತಿಗಳ ವಿಸ್ತಾರವನ್ನೂ ಮನ್ವಂತರದ ಸಂಖ್ಯೆಯನ್ನೂ ಮಾನುಷ ಪ್ರಮಾಣವನ್ನನುಸರಿಸಿ ತಿಳಿಯಿರಿ.

೧೬೪. ಕಾಲಗಣನೆಯ ಅರ್ಥವನ್ನು ತಿಳಿದ ಜ್ಞಾನಿಗಳಾದ ದ್ವಿಜರಿಂದ ಮನ್ವಂತರಗಳು ಪೂರ್ತಿಯಾಗಿ ಮೂವತ್ತುಕೋಟಿ ಸಂಖ್ಯೆಯಿಂದ ಪೂರ್ಣವಾಗಿ ಎಣಿಸಲ್ಪಟ್ಟಿವೆ.

೧೬೫. ಮತ್ತು ಅರವತ್ತೇಳುಲಕ್ಷ ಇಪ್ಪತ್ತುಸಾವಿರ ವರ್ಷಗಳು ದಿವ್ಯ ಸಂಖ್ಯೆಯಿಂದ ಕಾಲಪರಿಮಾಣವಾಗುವುದು.

೧೬೬. ಮನ್ವಂತರದ ಸಂಖ್ಯಾ ಪರಿಮಾಣವು ಮನುಷ್ಯ ಪ್ರಮಾಣವನ್ನನುಸರಿಸಿ ಕೀರ್ತಿಸಲ್ಪಟ್ಟಿದೆ. ದಿವ್ಯ ಪ್ರಮಾಣವನ್ನನುಸರಿಸಿ ಈ ವರ್ಷಗಳ ಮುಂದಿನ ಮನ್ವಂತರವನ್ನು ವರ್ಣಿಸುವೆನು.

೧೬೭. ದೇವಮಾನದಿಂದ ಎಂಟುಲಕ್ಷ ಸಂವತ್ಸರಗಳೆಂದು ಸ್ಮರಿಸಲ್ಪಟ್ಟಿದೆ. ಹಾಗೂ ಮತ್ತು ಐವತ್ತೆರಡು ಸಹಸ್ರ ವರ್ಷ ಸಂಖ್ಯೆಯನ್ನು ಅಧಿಕವಾಗಿ ಸೇರಿಸಿಕೊಳ್ಳಬೇಕು.

ಚತುರ್ದಶಗುಣೋ ಹ್ಯೇಷ ಕಾಲೋ ಹ್ಯಾಭೂತಸಂಪ್ಲವಮ್ ।
ಪೂರ್ಣಂ ಯುಗಸಹಸ್ರಂ ಸ್ಯಾತ್ತದಹರ್ಬ್ರಹ್ಮಣಃ ಸ್ಮೃತಮ್॥ ೧೬೮ ॥

ತತಃ ಸರ್ವಾಣಿ ಭೂತಾನಿ ದಗ್ಧಾನ್ಯಾದಿತ್ಯರಶ್ಮಿಭಿಃ ।
ಬ್ರಹ್ಮಾಣಮಗ್ರತಃ ಕೃತ್ವಾ ಸಹ ದೇವರ್ಷಿದಾನವೈಃ ॥ ೧೬೯ ॥

ಪ್ರವಿಶಂತಿ ಸುರಶ್ರೇಷ್ಠಂ ದೇವಂ ನಾರಾಯಣಂ ಪ್ರಭುಮ್ ।
ಸ ಸ್ರಷ್ಟಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ॥ ೧೭೦ ॥

ಇತ್ಯೇಷ ಸ್ಥಿತಿಕಾಲೋ ವೈ ಮತೋ ದೇವರ್ಷಿಭಿಃ ಸಹ ।
ಸರ್ವಮನ್ವಂತರಾಣಾಂ ಹಿ ಪ್ರತಿಸಂಧಿಂ ನಿಬೋಧತ ॥ ೧೭೧ ॥

ಯುಗಾಖ್ಯಾ ಯಾ ಸಮುದ್ದಿಷ್ಟಾ ಪ್ರಾಗೇತಸ್ಮಿನ್ ಮಯಾನಘಾಃ ।
ಕೃತತ್ರೇತಾದಿಸಂಯುಕ್ತಂ ಚತುರ್ಯುಗಮಿತಿ ಸ್ಮೃತಮ್ ॥ ೧೭೨ ॥

---

೧೬೮. ಈ ಕಾಲವು ಮಹಾ ಪ್ರಳಯದವರೆಗೆ ಪ್ರತಿಯೊಂದು ಮನ್ವಂತರಗಳೂ ನಡೆಯುವ ಕ್ರಮದಿಂದ ಹದಿನಾಲ್ಕು ಆವರ್ತಿಯಾಗಿ ಕಳೆಯುವುದು. ಒಂದುಸಾವಿರ ಯುಗಗಳು ಪೂರ್ಣವಾಗಿರಲು ಬ್ರಹ್ಮನಿಗೆ ಅದು ಒಂದು ದಿನವೆಂದು ಸ್ಮರಿಸಲ್ಪಟ್ಟಿದೆ.

೧೬೯. ಅನಂತರದಲ್ಲಿ ಸಮಸ್ತ ಪ್ರಾಣಿಗಳೂ ಪ್ರಳಯಕಾಲದ ಸೂರ್ಯ ರಶ್ಮಿಗಳಿಂದ ದಹಿಸಲ್ಪಡುವುವು. ಆಗ ಸಮಸ್ತ ದೇವ, ಋಷಿ ಮತ್ತು ದಾನವರು ಬ್ರಹ್ಮನನ್ನು ಪುರಸ್ಕರಿಸಿ ಸೃಷ್ಟಿ ಪ್ರಯತ್ನಕ್ಕೆ ಉನ್ಮುಖರಾಗುವರು.

೧೭೦. ದೇವ ಋಷಿ ದಾನವರೆಲ್ಲರೂ ದೇವೋತ್ತಮನೂ ಸರ್ವ ನಿಯಾಮಕನೂ ಆದ ನಾರಾಯಣ ಸ್ವಾಮಿಯನ್ನು ಪ್ರವೇಶಿಸುವರು. ಕಲ್ಪದ ಆದಿಯಲ್ಲಿ ಮತ್ತೆ ಮತ್ತೆ ಆ ಪರಮಾತ್ಮನು ಸರ್ವ ಭೂತಗಳನ್ನೂ ಸೃಷ್ಟಿ ಮಾಡಲು ಸಮರ್ಥನಾಗಿರುವನು.

೧೭೧. ಈ ರೀತಿಯಲ್ಲಿ ಮನ್ವಂತರಗಳ ಸ್ಥಿತಿಸಮಯವು ದೇವಋಷಿಗಳಿಂದ ಸಮ್ಮತಿಸಲ್ಪಟ್ಟಿದೆ. ಇನ್ನು ಮುಂದೆ ಸಮಸ್ತ ಮನ್ವಂತರಗಳ ಪ್ರತಿ ಸಂಧಿಯನ್ನು ಕೇಳಿರಿ.

೧೭೨. ನಿಷ್ಕಲಂಕಕರಾದ ಋಷಿಗಳೇ, ಪೂರ್ವದಲ್ಲಿ ನನ್ನಿಂದ ಮಹಾಕಾಲದ

ತಚ್ಚೈಕಸಪ್ತತಿಗುಣಂ ಪರಿವೃತ್ತಂ ತು ಸಾಧಿಕಮ್ ।
ಮನೋರೇತಮಧೀಕಾರಂ ಪ್ರೋವಾಚ ಭಗವಾನ್ ಪ್ರಭುಃ ॥ ೧೭೩ ॥

ಏವಂ ಮನ್ವಂತರಾಣಾಂ ಚ ಸರ್ವೇಷಾಮೇವ ಲಕ್ಷಣಮ್ ।
ಅತೀತಾನಾಗತಾನಾಂ ವೈ ವರ್ತಮಾನೇನ ಕೀರ್ತಿತಮ್ ॥ ೧೭೪ ॥

ಇತ್ಯೇಷ ಕೀರ್ತಿತಃ ಸರ್ಗೋ ಮನೋಃ ಸ್ವಾಯಂಭುವಸ್ಯ ತೇ ।
ಪ್ರತಿಸಂಧಿಂ ತು ವಕ್ಷ್ಯಾಮಿ ತಸ್ಯ ಚೈವಾಪರಸ್ಯ ಚ ॥ ೧೭೫ ॥

ಮನ್ವಂತರಂ ತಥಾ ಪೂರ್ವಮೃಷಿಭಿರ್ದೈವತೈಃ ಸಹ ।
ಅವಶ್ಯಭಾವಿನಾರ್ಥೇನ ಯಥಾವದ್ವಿನಿವರ್ತತೇ ॥ ೧೭೬ ॥

ಏತಸ್ಮಿನ್ನಂತರೇ ಪೂರ್ವಂ ತ್ರೈಲೋಕ್ಯಸ್ಯೇಶ್ವರಾಸ್ತು ಯೇ ।
ಸಪ್ತರ್ಷಯಶ್ಚ ದೇವಾಶ್ಚ ಪಿತರೋ ಮನವಸ್ತಥಾ ॥ ೧೭೭ ॥

---

ಒಂದು ಭಾಗಕ್ಕೆ ಯುಗ ಎಂಬ ಸಂಕೇತವು ತೋರಿಸಲ್ಪಟ್ಟಿದೆಯಲ್ಲವೇ, ಅದು ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂಬುದಾಗಿ ನಾಲ್ಕು ವಿಧವಾಗಿರುವುದು.

೧೭೩. ಭಗವಂತನಾದ ಪರಮಾತ್ಮನು ಎಪ್ಪತ್ತೊಂದುಸಲ ಗುಣಿಸಲ್ಪಟ್ಟ ಮಹಾಧಿಕ ಪರಿಮಾಣದಿಂದ ಕೂಡಿದ ಕಾಲವು ಸಮಾಪ್ತಿಯಾಗುವವರೆಗೆ ಒಬ್ಬ ಮನುವಿನ ಅಧಿಕಾರದ ಅವಧಿಯನ್ನು ಉಪದೇಶಿಸಿರುವನು.

೧೭೪. ಇಲ್ಲಿ ಹೇಳಿರುವ ಮನ್ವಂತರ ಲಕ್ಷಣವನ್ನು ಸಕಲ ಮನ್ವಂತರಗಳಲ್ಲಿಯೂ ಇದೆ ಎಂದು ಭಾವಿಸಬೇಕು. ಭೂತ ಮತ್ತು ಭವಿಷ್ಯ ಮನ್ವಂತರಗಳ ಲಕ್ಷಣವು ವರ್ತಮಾನ ಮನ್ವಂತರಕ್ಕೆ ತುಲ್ಯವಾಗಿಯೇ ಬೋಧಿಸಲ್ಪಟ್ಟಿದೆ.

೧೭೫. ಹೀಗೆ ಸ್ವಾಯಂಭುವ ಮನುವಿನ ಸೃಷ್ಟಿ ಪ್ರಪಂಚವು ಕೀರ್ತಿಸಲ್ಪಟ್ಟಿರುವುದು ನಿಮಗೆ ಸ್ವಾಯಂಭುವ ಮತ್ತು ಇತರ ಮನ್ವಂತರದ ಪ್ರತಿಸಂಧಿಯನ್ನು ಹೇಳುತ್ತೇನೆ ಕೇಳಿರಿ.

೧೭೬. ಹಿಂದಿನ ಮನ್ವಂತರವು ಋಷಿ ಮತ್ತು ದೇವತೆಗಳ ಸಂಗಡ ವಿಧಿಯ ಅವಶ್ಯ ಭವಿತವ್ಯತೆಯಿಂದ ಅನುರೂಪವಾಗಿ ಪ್ರವರ್ತಿಸಿತು.

೧೭೭. ಹಾಗೆಯೇ ಈ ಮನ್ವಂತರದಲ್ಲಿಯೂ ಋಷಿ, ದೇವ, ಪಿತೃ ಮತ್ತು ಮನುಗಳು ತ್ರಿಲೋಕಗಳಿಗೆ ಈಶ್ವರರಾಗಿ ಮನ್ವಂತರವನ್ನು ಕಳೆಯುವರು.

ಮನ್ವಂತರಸ್ಯ ಕಾಲೇ ತು ಸಂಪ್ರೂರ್ಣೇ ಸಾಧಿಕೇ ತದಾ ।
ಕ್ಷೀಣೇಽಧಿಕಾರೇ ಸಂವಿಗ್ನಾ ಬುದ್ಧ್ವಾ ಪರ್ಯಾಯಮಾತ್ಮನಃ॥ ೧೭೮ ॥

ಮಹರ್ಲೋಕಾಯ ತೇ ಸರ್ವೇ ಉನ್ಮುಖಾ ದಧಿರೇ ಮತಿಮ್ ।
ತತೋ ಮನ್ವಂತರೇ ತಸ್ಮಿನ್ ಪ್ರಕ್ಷೀಣೇ ದೇವತಾಸ್ತು ತಾಃ ॥ ೧೭೯ ॥

ಸಂಪೂರ್ಣೇ ಸ್ಥಿತಿಕಾಲೇ ತು ತಿಷ್ಠೇದೇಕಂ ಕೃತಂ ಯುಗಮ್ ।
ಉತ್ಪದ್ಯಂತೇ ಭವಿಷ್ಯಂತೋ ಯೇ ವೈ ಮನ್ವಂತರೇಶ್ವರಾಃ ॥ ೧೮೦ ॥

ದೇವತಾಃ ಪಿತರಶ್ಚೈವ ಋಷಯೋ ಮನುರೇವ ಚ ।
ಮನ್ವಂತರೇ ತು ಸಂಪ್ರೂರ್ಣೇ ತದ್ವದಂತೇ ಕಲೌ ಯುಗೇ ॥ ೧೮೧ ॥

ಸಂಪದ್ಯತೇ ಕೃತಂ ತೇಷು ಕಲಿಶಿಷ್ಟೇಷು ವೈ ತದಾ ।
ಯಥಾ ಕೃತಸ್ಯ ಸಂತಾನಃ ಕಲಿಪ್ರೂರ್ವಃ ಸ್ಮೃತೋ ಬುಧೈಃ ॥ ೧೮೨ ॥

---

೧೭೮. ಅಧಿಕವಾದ ಮನ್ವಂತರದ ಕಾಲವು ಸಂಪೂರ್ಣವಾಗಿ ಕಳೆಯಲಾಗಿ ತಮ್ಮ ತಮ್ಮ ಅಧಿಕಾರವು ಅವಸಾನ ಹೊಂದಿದ್ದರಿಂದ ತಮ್ಮ ಅವಸಾನವನ್ನು ತಿಳಿದು ಭಯಗ್ರಸ್ತರಾಗುವರು.

೧೭೯. ಆಗ ಅವರೆಲ್ಲರೂ ಮಹರ್ಲೋಕವನ್ನು ಸೇರಲು ಬುದ್ಧಿಯಲ್ಲಿ ಉನ್ಮುಖತೆಯನ್ನು ಹೊಂದುವರು. ಹಾಗೆ ಆ ಮನ್ವಂತರ ಆ ದೇವತಾಗಣಗಳು ಕ್ಷಯಿಸುವುವು.

೧೮೦. ಆಗ ಮತ್ತೆ ಸಂಪೂರ್ಣ ಸ್ಥಿತಿ ಕಾಲವು ಒದಗಲಾಗಿ ಮೊದಲನೆಯದಾದ ಕೃತಯುಗವು ಪುತ್ತೆ ಬರುವುದು, ಆ ಸಮಯದಲ್ಲಿ ಭಾವಿಮನ್ವಂತರಾಧಿಪತಿಗಳು ಉತ್ಪತ್ತಿಯನ್ನು ಹೊಂದುವರು.

೧೮೧. ಮನ್ವಂತರವು ಪೂರ್ತಿಯಾಗಿ ಕಳೆಯಲು ಕಲಿಯುಗದ ಅಂತದಲ್ಲಿ ದೇವತೆ, ಪಿತೃ, ಋಷಿ ಮತ್ತು ಮನುಗಳು ಪುತ್ತೆ ಜನ್ಮವೆತ್ತುವರು.

೧೮೨. ಕಲಿಯುಗವು ಕಳೆದು ಮಿಕ್ಕಿರುವ ಆ ದೇವಾದಿಗಳಲ್ಲಿ ಕೃತಯುಗವು ಸಂಪನ್ನವಾಗುವುದು. ಹೀಗೆ ಕೃತಯುಗದ ಅವಿಚ್ಛಿನ್ನವಾದ ಸಂತತಿಯು ಕಲಿಯುಗದಿಂದಾಗಿರುವುದೆಂದು ಪ್ರಾಜ್ಞರಿಂದ ವರ್ಣಿಸಲ್ಪಟ್ಟಿದೆ.

ತಥಾ ಮನ್ವಂತರಾಂತೇಷು ಆದಿರ್ಮನ್ವಂತರಸ್ಯ ಚ ।
ಕ್ಷೀಣೇ ಮನ್ವಂತರೇ ಪೂರ್ವೇ ಪ್ರವೃತ್ತೇ ಚಾಪರೇ ಪುನಃ ॥ ೧೮೩ ॥

ಮುಖೇ ಕೃತಯುಗಸ್ಯಾಥ ತೇಷಾಂ ಶಿಷ್ಟಾಸ್ತು ಯೇ ತದಾ ।
ಸಪ್ತರ್ಷಯೋ ಮನುಶ್ಚೈವ ಕಾಲಾಪೇಕ್ಷಾಸ್ತು ಯೇ ಸ್ಥಿತಾಃ॥ ೧೮೪ ॥

ಮನ್ವಂತರಪ್ರತೀಕ್ಷಾಸ್ತೇ ಕ್ಷಯಮಾಣಾಸ್ತಪಸ್ವಿನಃ ।
ಮನ್ವಂತರೋತ್ಸವಸ್ಯಾರ್ಥೇ ಸಂತತ್ಯರ್ಥೇ ಚ ಸರ್ವದಾ ॥ ೧೮೫ ॥

ಪೂರ್ವವತ್ ಸಂಪ್ರವರ್ತಂತೇ ಪ್ರವೃತ್ತೇ ವೃಷ್ಟಿಸರ್ಜನೇ ।
ದ್ವಂದ್ವೇಷು ಸಂಪ್ರವೃತ್ತೇಷು ಉತ್ಪನ್ನಾಸ್ವೌಷಧೇಷು ಚ ॥ ೧೮೬ ॥

ಪ್ರಜಾಸು ಚಾನಿಕೇತಾಸು ಸಂಸ್ಥಿತಾಸು ಕ್ವಚಿತ್ ಕ್ವಚಿತ್ ।
ವಾರ್ತಾಯಾಂ ಸಂಪ್ರವೃತ್ತಾಯಾಂ ಧರ್ಮೇ ಚೈವೋಪಸಂಸ್ಥಿತೇ ॥ ೧೮೭ ॥

---

೧೮೩. ಹಾಗೆಯೇ ಒಂದು ಮನ್ವಂತರವು ಕ್ಷಯಿಸಿ ಅದರ ಅಂತ ಭಾಗದಲ್ಲಿ ಸಂತತಿಯಾಗಿ ಮತ್ತೊಂದು ಮನ್ವಂತರವು ಉಪಕ್ರಮಿಸಿ ಅದರ ಆದಿ ಸಮಯವು ಪ್ರಸಕ್ತವಾಗುವುದು.

೧೮೪. ಅನಂತರದಲ್ಲಿ ಕೃತಯುಗದ ಪ್ರಾರಂಭದಲ್ಲಿ ಕಲಿಯುಗಾವಸಾನದಿಂದ ಮಿಕ್ಕಿರುವ ಸಪ್ತಋಷಿ ಮನು ಮುಂತಾದವರು ಮುಂದಿನಕಾಲ ವ್ಯವಸ್ಥೆಯ ಅಪೇಕ್ಷೆಯಿಂದ ಇರುವರು.

೧೮೫. ಆ ತಪಸ್ವಿಗಳು ಹಿಂದಿನ ಮನ್ವಂತರದ ಅಂತದಲ್ಲಿ ಕ್ಷಯವನ್ನು ಹೊಂದಿ ಮತ್ತೊಂದು ಮನ್ವಂತರವನ್ನು ನಿರೀಕ್ಷಿಸಿಕೊಂಡಿರುವರು. ಅವರು ಮುಂದಿನ ಮನ್ವಂತರದ ಉತ್ಸವಾನುಭವಕ್ಕೂ ಸಂತತಿಯ ಪ್ರತಿಷ್ಠೆಗೂ ಯತ್ನಿಸುವರು.

೧೮೬. ಆಗ ವೃಷ್ಟಿಪಾತವು ಪ್ರಾರಂಭವಾಗುವುದು. ಸುಖದುಃಖಾದಿ ದ್ವಂದ್ವಗಳು ಉತ್ಪನ್ನವಾಗುವುವು. ಹಾಗೂ ಓಷಧಿಗಳು ಆವಿರ್ಭವಿಸುವುವು. ಆಗ ಸಪ್ತರ್ಷಿಗಳು ಮುಂತಾದವರು ಮೊದಲಿನಂತೆ ಪ್ರವರ್ತಿಸುವರು.

೧೮೭. ಮತ್ತು ಪ್ರಜೆಗಳು ಸ್ಥಿರವಾದ ವಸತಿ ಗೃಹಗಳಿಲ್ಲದೆ ಅಲ್ಲಲ್ಲಿ ಸ್ಥಿತಿಯನ್ನು ಹೊಂದುವರು. ಧರ್ಮವು ಸಂಪೂರ್ಣವಾಗಿ ಶಾಂತವಾಗುವುದು. ಆಗ ಕೃಷಿ ವಾಣಿಜ್ಯ ಮುಂತಾದ ವಾರ್ತಾವೃತ್ತಿಯು ಉಂಟಾಗುವುದು.

ನಿರಾನಂದೇ ಚಾಪಿ ಲೋಕೇ ನಷ್ಟೇ ಸ್ಥಾವರಜಂಗಮೇ ।
ಅಗ್ರಾಮನಗರೇ ಚೇವ ವರ್ಣಾಶ್ರಮವಿವರ್ಜಿತೇ ॥ ೧೮೮ ॥

ಪೂರ್ವಮನ್ವಂತರೇ ಶಿಷ್ಟಾ ಯೇ ಭವಂತೀಹ ಧಾರ್ಮಿಕಾಃ ।
ಸಪ್ತರ್ಷಯೋ ಮನುಶ್ಚೈವ ಸಂತಾನಾರ್ಥಂ ವ್ಯವಸ್ಥಿತಾಃ ॥ ೧೮೯ ॥

ಪ್ರಜಾರ್ಥಂ ತಪತಾಂ ತೇಷಾಂ ತಪಃ ಪರಮದುಶ್ಚರಮ್ ।
ಉತ್ಪದ್ಯಂತೇ ಹಿ ಪೂರ್ವೇಷಾಂ ನಿಧನೇಷ್ವಿಹ ಪೂರ್ವವತ್ ॥ ೧೯೦ ॥

ದೇವಾಸುರಾಃ ಪಿತೃಗಣಾ ಋಷಯೋ ಮಾನುಷಾಸ್ತಥಾ ।
ಸರ್ಪಾ ಭೂತಪಿಶಾಚಾಶ್ಚ ಗಂಧರ್ವಾ ಯಕ್ಷರಾಕ್ಷಸಾಃ ॥ ೧೯೧ ॥

ತತಸ್ತೇಷಾಂ ತು ಯೇ ಶಿಷ್ಟಾಃ ಶಿಷ್ಟಾಚಾರಾನ್ ಪ್ರಚಕ್ಷತೇ ।
ಸಪ್ತರ್ಷಯೋ ಮನುಶ್ಚೈವ ಹ್ಯಾದೌ ಮನ್ವಂತರಸ್ಯ ಹಿ ॥ ೧೯೨ ॥

---

೧೮೮. ಲೋಕವು ಆನಂದಾಂಶದಿಂದಲೂ ಶೂನ್ಯವಾಗಿ ಸ್ಥಾವರ ಜಂಗಮ ಮುಂತಾದ ಪ್ರಾಣಿವರ್ಗವು ಸಂಪೂರ್ಣ ನಾಶಹೊಂದಿ ಗ್ರಾಮ, ನಗರಗಳಲ್ಲಿ ವರ್ಣ ಮತ್ತು ಆಶ್ರಮಗಳ ಧರ್ಮಗಳು ಸಂಪೂರ್ಣವಾಗಿ ಲಯಹೊಂದುವುವು.

೧೮೯. ಪ್ರಾಚೀನ ಮನ್ವಂತರದಲ್ಲಿ ಶಿಷ್ಟರಾಗಿದ್ದ ಮನು ಸಪ್ತರ್ಷಿ ಮುಂತಾದ ಧಾರ್ಮಿಕ ಪುರುಷರು ಲೋಕಸಂತತಿಗೋಸ್ಕರ ವ್ಯವಸ್ಥೆಯನ್ನು ಹೊಂದುವರು.

೧೯೦. ಸಂತತಿ ಪ್ರಾಪ್ತಿಗೋಸ್ಕರ ಅತಿ ಕಠಿಣವಾದ ತಪಸ್ಸನ್ನು ಆಚರಿಸುತ್ತಿರುವ ಆ ಪ್ರಾಚೀನ ಧಾರ್ಮಿಕರು ಮರಣಾನಂತರದಲ್ಲಿ ಪೂರ್ವದಂತೆಯೇ ಮತ್ತೆ ಜನ್ಮವನ್ನೆತ್ತುವರು.

೧೯೧. ದೇವ, ಅಸುರ, ಪಿತೃ, ಋಷಿ, ಮನುಷ್ಯ, ಸರ್ಪ, ಭೂತ, ಪಿಶಾಚ, ಗಂಧರ್ವ, ಯಕ್ಷ, ಮತ್ತು ರಾಕ್ಷಸರು ಹಿಂದಿನ ಮನ್ವಂತರದಲ್ಲಿ ಶಿಷ್ಟರಾಗಿರುವವರು ಮತ್ತೊಂದು ಮನ್ವಂತರದಲ್ಲಿ ಜನಿಸುವರು.

೧೯೨. ಮತ್ತೊಂದು ಮನ್ವಂತರದ ಆದಿಯಲ್ಲಿ ಮನು ಮತ್ತು ಸಪ್ತರ್ಷಿಗಳು ಪೂರ್ವ ಮನ್ವಂತರದಿಂದ ಶಿಷ್ಟರಾಗಿರುವ ದೇವ ಅಸುರ ಮುಂತಾದವರಿಗೆ ಶಿಷ್ಟಾಚಾರಗಳನ್ನು ಉಪದೇಶಿಸುವರು.

ಪ್ರಾರಭಂತೇ ಚ ಕರ್ಮಾಣಿ ಮನುಷ್ಯೋ ದೈವತೈಃ ಸಹ ।
ಋಷೀಣಾಂ ಬ್ರಹ್ಮಚರ್ಯೇಣ ಗತ್ವಾನೃಣ್ಯಂ ತು ವೈ ತದಾ ॥ ೧೯೩ ॥

ಪಿತೄಣಾಂ ಪ್ರಜಯಾ ಚೈವ ದೇವಾನಾಮಿಜ್ಯಯಾ ತಥಾ ।
ಶತಂ ವರ್ಷಸಹಸ್ರಾಣಾಂ ಧರ್ಮೇ ವರ್ಣಾತ್ಮಕೇ ಸ್ಥಿತಾಃ ॥ ೧೯೪ ॥

ತ್ರಯೀ ವಾರ್ತಾ ದಂಡನೀತಿರ್ಧರ್ಮಾನ್ ವರ್ಣಾಶ್ರಮಾಂಸ್ತಥಾ ।
ಸ್ಥಾಪಯಿತ್ವಾಶ್ರಮಾಂಶ್ಚೈವ ಸ್ವರ್ಗಾಯ ದಧಿರೇ ಮನಃ ॥ ೧೯೫ ॥

ಪೂರ್ವದೇವೇಷು ತೇಷ್ವೇವಂ ಸ್ವರ್ಗಾಯಾಭಿಮುಖೇಷು ವೈ ।
ಪೂರ್ವದೇವಾಸ್ತತಸ್ತೇ ವೈ ಸ್ಥಿತಾ ಧರ್ಮೇಣ ಕೃತ್ಸ್ನಶಃ ॥ ೧೯೬ ॥

ಮನ್ವಂತರೇ ಪುರಾವೃತ್ತೇ ಸ್ಥಾನಾನ್ಯುತ್ಸೃಜ್ಯ ಸರ್ವಶಃ ।
ಮಂತ್ರೈಃ ಸಹೋರ್ಧ್ವಂ ಗಚ್ಛಂತಿ ಮಹರ್ಲೋಕಮನಾಮಯಮ್ ॥ ೧೯೭ ॥

---

೧೯೩. ಆಗ ಮನುಷ್ಯರು ಆಯಾಯ ದೇವತೆಗಳಿಂದ ಅನುಗ್ರಹ ಹೊಂದಿ ಋಷಿಗಳ ಋಣವನ್ನು ಕಳೆದುಕೊಳ್ಳಲು ಬ್ರಹ್ಮಚರ್ಯರೂಪವಾದ ಕ್ರಮವನ್ನು ಆಚರಿಸಲು ಉಪಕ್ರಮ ಮಾಡುವರು.

೧೯೪. ಮತ್ತು ಪಿತೃ ಆನೃಣ್ಯಕ್ಕೋಸ್ಕರ ಪ್ರಜಾಸಂಗ್ರಹವನ್ನೂ ದೇವ ಆನೃಣ್ಯ ಪ್ರಾಪ್ತಿಗೋಸ್ಕರ ಯಜ್ಞಾದಿ ಅನುಷ್ಠಾನವನ್ನೂ ಮಾಡುತ್ತಾ ಸಾವಿರಾರು ವರ್ಷಗಳ ಪರ್ಯಂತವಾಗಿ ವರ್ಣ ಧರ್ಮದಲ್ಲಿ ಆಸಕ್ತರಾಗಿರುವರು.

೧೯೫. ವೇದತ್ರಯಾಧ್ಯಯನ ಕೃಷಿ ವಾಣಿಜ್ಯಾದಿ ವ್ಯಾಪಾರ, ದಂಡನೀತಿ, ಮತ್ತು ವರ್ಣಾಶ್ರಮ ಧರ್ಮಗಳನ್ನು ಸ್ಥಾಪಿಸಿ ಆ ಧಾರ್ಮಿಕ ಶ್ರೇಷ್ಠರು ತಮ್ಮ ಕರ್ತವ್ಯಾವಸಾನದಲ್ಲಿ ಸ್ವರ್ಗಗತಿಗೆ ಮನವನ್ನು ದೃಢಪಡಿಸಿದರು.

೧೯೬. ಪೂರ್ವಕಾಲದ ಆ ದೇವತೆಗಳು ಸ್ವರ್ಗಲೋಕವನ್ನು ಸೇರಲು ಅಭಿಮುಖರಾಗಿರಲು ಆ ದೇವತೆಗಳು ಸಂಪೂರ್ಣವಾದ ಧರ್ಮದಿಂದ ವ್ಯಾಪ್ತವಾಗಿರುವರು.

೧೯೭. ಹಿಂದೆ ನಡೆದ ಮನ್ವಂತರವು ಕಳೆಯಲಾಗಿ ತಮ್ಮ ಅಭಿಮಾನಸ್ಥಾನಗಳನ್ನು ಪರಿತ್ಯಾಗ ಮಾಡಿ ಆ ದೇವತೆಗಳು ಮಂತ್ರಗಳ ಸಂಗಡ ಊರ್ಧ್ವದಲ್ಲಿರುವ ನಿರಾತಂಕವಾದ ಮಹರ್ಲೋಕಕ್ಕೆ ಹೋಗುವರು.

ವಿನಿವೃತ್ತಾಧಿಕಾರಾಸ್ತೇ ಮಾನಸೀಂ ಸಿದ್ಧಿಮಾಸ್ಥಿತಾಃ ।
ಅವೇಕ್ಷಮಾಣಾ ವಶಿನಸ್ತಿಷ್ಠಂತ್ಯಾಭೂತಸಂಪ್ಲವಾತ್ ॥ ೧೯೮ ॥

ತತಸ್ತೇಷು ವ್ಯತೀತೇಷು ಪೂರ್ವದೇವೇಷು ವೈ ತದಾ ।
ಶೂನ್ಯೇಷು ದೇವಸ್ಥಾನೇಷು ತ್ರೈಲೋಕ್ಯೇ ತೇಷು ಸರ್ವಶಃ ॥ ೧೯೯ ॥

ಉಪಸ್ಥಿತಾ ಇಹಾನ್ಯೇ ವೈ ಯೇ ದೇವಾಃ ಸ್ವರ್ಗವಾಸಿನಃ ।
ತತಸ್ತೇ ತಪಸಾ ಯುಕ್ತಾಃ ಸ್ಥಾನಾನ್ಯಾಪೂರಯಂತಿ ಓ ॥ ೨೦೦ ॥

ಸತ್ಯೇನ ಬ್ರಹ್ಮಚರ್ಯೇಣ ಶ್ರುತೇನ ಚ ಸಮನ್ವಿತಾಃ ।
ಸಪ್ತರ್ಷೀಣಾಂ ಮನೋಶ್ಚೈವ ದೇವಾನಾಂ ಪಿತೃಭಿಃ ಸಹ ॥ ೨೦೧ ॥

ನಿಧನಾನೀಹ ಪೂರ್ವೇಷಾಮಾದಿತಾಂ ಚ ಭವಿಷ್ಯತಾಮ್ ।
ತೇಷಾಂ ಸಂತತ್ಯವಿಚ್ಛೇದ ಇಹಾಮನ್ವಂತರಕ್ಷಯಾತ್ ॥ ೨೦೨ ॥

---

೧೯೮. ಮತ್ತು ಅಧಿಕಾರದಿಂದ ನಿವೃತ್ತಿಯನ್ನು ಹೊಂದಿ ಮಾನಸವಾದ ಮಹಾ ಸಿದ್ಧಿಯಿಂದ ಕೂಡಿಕೊಂಡವರಾಗಿ ಪ್ರಳಯಕಾಲದವರೆಗೂ ಜಿತೇಂದ್ರಿಯರಾಗಿ ಪುನಃ ಸೃಷ್ಟಿಯನ್ನು ನಿರೀಕ್ಷಿಸುತ್ತಲಿರುವರು.

೧೯೯. ಅನಂತರದಲ್ಲಿ ಆ ಪೂರ್ವ ದೇವತೆಗಳು ತಮ್ಮ ಕಾಲವನ್ನು ಪೂರ್ತಿಯಾಗಿ ಕಳೆಯಲು ಆಗ ಲೋಕತ್ರಯದಲ್ಲಿ ಸರ್ವ ದೇಶಗಳಲ್ಲಿರುವ ದೇವಸ್ಥಾನಗಳು ಶೂನ್ಯವಾಗುವುವು.

೨೦೦. ಆಗ ಸ್ವರ್ಗದಲ್ಲಿ ವಾಸಮಾಡಿರುವ ಇತರ ದೇವತೆಗಳು ತಪೋಮಹಿಮೆಯಿಂದ ಕೂಡಿ ಮಧ್ಯಲೋಕಕ್ಕೆ ಬಂದು ತಮ್ಮ ತಮ್ಮ ಸ್ಥಾನಗಳನ್ನು ಪೂರ್ತಿ ಮಾಡುವರು.

೨೦೧. ಅಂತಹವರು ಸತ್ಯ, ಬ್ರಹ್ಮಚರ್ಯ, ವೇದಾಧ್ಯಯನ ಮುಂತಾದ ನಿಯಮಗಳಿಂದ ಕೂಡಿರುವರು. ಈ ರೀತಿಯಾಗಿ ಸಪ್ತರ್ಷಿ ಮನು, ದೇವ ಮತ್ತು ಪಿತೃಗಳು ಸಂತತಿ ರೂಪದಿಂದ ಅನಾದಿಯಾಗಿರುವರು.

೨೦೨ ಇವರಲ್ಲಿ ಪೂರ್ವೀಕರಿಗೆ ಅವಸಾನವೂ ಭಾವಿ ವ್ಯಕ್ತಿಗಳಿಗೆ ಆದಿಯೂ ಉಂಟಾಗಿ ಅಂತಹವರ ಸಂತತಿಯು ಮನ್ವಂತರವು ಕ್ಷಯಿಸುವವರೆಗೂ ಸಂತತಿರೂಪದಿಂದಿರುವುದು.

ಏವಂ ಪೂರ್ವಾನುಪೂರ್ವ್ಯೇಣ ಸ್ಥಿತಿಸ್ತೇಷಾಮವಸ್ಥಿತಾ ।
ಮನ್ವಂತರೇಷು ಸರ್ವೇಷು ಯಾವದಾಭೂತಸಂಪ್ಲವಮ್ ॥ ೨೦೩ ॥

ಪೂರ್ವಮನ್ವಂತರಾಣಾಂ ತು ಪ್ರತಿಸಂಧಾನಲಕ್ಷಣಮ್ ।
ಅತೀತಾನಾಗತಾನಾಂ ವೈ ಪ್ರೋಕ್ತಂ ಸ್ವಾಯಂಭುವೇನ ತು ॥ ೨೦೪ ॥

ಮನ್ವಂತರೇಷ್ವತೀತೇಷು ಭವಿಷ್ಯಾಣಾಂ ತು ಸಾಧನಮ್ ।
ಏವಂ ಸಂತತ್ಯವಿಚ್ಛೇದೋ ಭವತ್ಯಾಭೂತಸಂಪ್ಲವಾತ್ ॥ ೨೦೫ ॥

ಮನ್ವಂತರಾಣಾಂ ಪರಿವರ್ತನಾನಿ
ಹ್ಯೇಕಾಂತತಸ್ತಾನಿ ಮಹರ್ಗತಾನಿ ।
ಮಹಾಜನಂ ಚೈವ ಜನಂ ತಪಶ್ಚ
ಚೈಕಾಂತಗಾನಿ ಪ್ರಭವಂತಿ ಸತ್ಯೇ ॥ ೨೦೬ ॥

ತದ್ಭಾವಿನಾಂ ತತ್ರ ತು ದರ್ಶನೇನ
ನಾನಾತ್ವದೃಷ್ಟೇನ ಚ ಪ್ರತ್ಯಯೇನ ।
ಸತ್ಯೇ ಸ್ಥಿತಾ ನಿತ್ಯತಯಾ ತು ನಿತ್ಯಂ
ಪ್ರಾಪ್ತೇ ವಿಕಾರೇ ಪ್ರತಿಸರ್ಗಕಾಲೇ ॥ ೨೦೭ ॥

---

೨೦೩. ಈ ರೀತಿಯಾಗಿ ಅಂತಹವರ ಸ್ಥಿತಿಯು ಪೂರ್ವದಿಂದ ಆನುಪೂರ್ವೀ ಕ್ರಮಸಹಿತವಾಗಿರುವುದು. ಹೀಗೆ ಎಲ್ಲ ಮನ್ವಂತರಗಳಲ್ಲಿಯೂ ಮಹಾ ಪ್ರಳಯವು ಸಂಭವಿಸುವ ವರೆಗೂ ಇರುವುದೆಂದು ತಿಳಿಯಬೇಕು.

೨೦೪. ಹಿಂದೆ ಕಳೆದ ಮನ್ವಂತರಗಳಿಗೆ ಅದರ ಹಿಂದಿನ ಮತ್ತು ಮುಂದಿನ ಮನ್ವಂತರಗಳೊಡನೆ ಪ್ರತಿಸಂಧಿಯ ಸ್ವರೂಪವು ಸ್ವಾಯಂಭುವ ಮನುವಿನಿಂದ ವರ್ಣಿಸಲ್ಪಟ್ಟಿದೆ.

೨೦೫. ಪೂರ್ವ ಮನ್ವಂತರಗಳು ಪೂರ್ತಿಯಾಗಿ ಅವಸಾನ ಹೊಂದಲು ಮುಂದಿನ ಮನ್ವಂತರಗಳ ಸ್ಥಿತಿಯನ್ನು ಸಾಧಿಸಬೇಕು. ಈ ರೀತಿಯಲ್ಲಿ ಮಹಾ ಪ್ರಳಯದವರೆಗೂ ಮನ್ವಂತರಗಳ ಸ್ಥಿತಿಗೆ ವಿಚ್ಛೇದವಿಲ್ಲ.

೨೦೬. ಮನ್ವಂತರಗಳ ಪರಿವರ್ತನದಿಂದ ನಿಯಮವಾಗಿ ಪ್ರಜಾವರ್ಗಗಳು ಮಹರ್ಲೋಕ, ಜನೋಲೋಕ, ಮತ್ತು ತಪೋಲೋಕಗಳನ್ನು ಕ್ರಮದಿಂದ ಹೊಂದಿ ಕಡೆಯಲ್ಲಿ ಸತ್ಯಲೋಕದಲ್ಲಿ ಜನಿಸುವರು.

೨೦೭. ಅಲ್ಲಿ ಸತ್ಯಾತ್ಮನ ಭಾವನಾವಿಶೇಷವುಳ್ಳರಾಗಿ ನಾನಾತ್ವ ದರ್ಶನದಿಂದ

ಮನ್ವಂತರಾಣಾಂ ಪರಿವರ್ತನಾನಿ
ಮುಂಚಂತಿ ಸತ್ಯಂ ತು ತತೋಽಪರಾಂತೇ ।
ತತೋಽಭಿಯೋಗಾ ವಿಷಯಪ್ರಹಾಣಾ-
ದ್ವಿಶಂತಿ ನಾರಾಯಣಮೇವ ದೇವಮ್ ॥ ೨೦೮ ॥

ಮನ್ವಂತರಾಣಾಂ ಪರಿವರ್ತನೇಷು
ಚಿರಪ್ರವೃತ್ತೇಷು ವಿಧಿಸ್ವಭಾವಾತ್ ।
ಕ್ಷಣಂ ನ ವೈ ತಿಷ್ಠತಿ ಜೀವಲೋಕಃ
ಕ್ಷಯೋದಯಾಭ್ಯಾಂ ಪರಿವರ್ತಮಾನಃ ॥ ೨೦೯ ॥

ಇತ್ಯಂತರಾಣ್ಯೇವಮೃಷಿಸ್ತುತಾನಾಂ
ಧರ್ಮಾತ್ಮನಾಂ ದಿವ್ಯದೃಶಾಂ ಮನೂನಾಮ್ ।
ವಾಯುಪ್ರಣೀತಾನ್ಯುಪಲಭ್ಯ ದೃಶ್ಯಾದ್
ದಿವ್ಯೌಜಸಾಂ ವ್ಯಾಸಸಮಾಸಯೋಗ್ಯೈಃ ॥ ೨೧೦ ॥

ಸರ್ವಾಣಿ ರಾಜರ್ಷಿಸುರರ್ಷಿಮಂತಿ
ಬ್ರಹ್ಮರ್ಷಿದೇವೋರಗವಂತಿ ಚೈವ ।
ಸುರೇಶಸಪ್ತರ್ಷಿಪಿತೃಪ್ರಜೇಶೈ—
ರ್ಯುಕ್ತಾನಿ ಸಮ್ಯಕ್ಪರಿವರ್ತನಾನಿ ॥ ೨೧೧ ॥

---

ಸ್ಥಿರವಾದ ಒಂದು ಪ್ರತೀತಿಯಿಂದ ಸತ್ಯಸ್ವರೂಪವನ್ನು ನಿತ್ಯವಾಗಿ ಅವಲಂಬಿಸಿ ಪ್ರಳಯದ ವಿಕಾರಾವಸ್ಥೆಯು ಬರುವವರೆಗೂ ವಾಸಮಾಡುವರು.

೨೦೮. ಹೀಗೆ ಮನ್ವಂತರಗಳ ಪರಿವರ್ತನವಾಗುತ್ತಿರಲು ಲೋಕಾತೀತವಾದ ಉತ್ತಮಗತಿ ಪ್ರಾಪ್ತಿ ಸಮಯದಲ್ಲಿ ಆ ಯೋಗಿಗಳು ಸತ್ಯಲೋಕವನ್ನು ತ್ಯಜಿಸಿ ದಿಷಯಪರಿತ್ಯಾಗವೆಂಬ ನಿಯಮಬಲದಿಂದ ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವರು.

೨೦೯. ವಿಧಿ ಸ್ವಭಾವಬಲದಿಂದ ಮನ್ವಂತರದ ಪರ್ಯಾಯ ಪರಿವರ್ತನೆಯು ಅನಾದಿ ಕಾಲದಿಂದ ನಡೆಯುತ್ತಿರಲು ಜೀವವರ್ಗವು ಕ್ಷಯ ಉದಯಗಳಿಂದ ಪ್ರವೃತ್ತಿಯನ್ನು ಹೊಂದುತ್ತ ಸ್ಥಿರವಾಗಿ ಏಕರೂಪದಿಂದಿರಲಾರದಾಯಿತು.

೨೧೦. ಹೀಗೆ ಮಹರ್ಷಿಗಳಿಂದ ಸ್ತುತಿಸಲ್ಪಟ್ಟವರೂ, ಧರ್ಮಾತ್ಮರೂ, ದಿವ್ಯದೃಷ್ಟಿಸಂಪನ್ನರೂ ಮತ್ತು ದಿವ್ಯವಾದ ಪ್ರಭಾವಶಾಲಿಗಳೂ ಆದ ಮನುಗಳ ಅಂತರಗಳು ವ್ಯಾಸ ಮತ್ತು ಸಮಾಸಗಳಿಂದ ವಾಯುದೇವನು ರಚಿಸಿರುವುದನ್ನು ತಿಳಿಯಬಹುದು.

೨೧೧. ಎಲ್ಲ ಮನ್ವಂತರಗಳ ಪರಿವರ್ತನಗಳು ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ

ಉದಾರವಂಶಾಭಿಜನಶ್ರುತೀನಾಂ
ಪ್ರಕೃಷ್ಟವೇಧಾಭಿಸಮೇಧಿತಾನಾಮ್ ।
ಕೀರ್ತಿದ್ಯುತಿಖ್ಯಾತಿಭಿರರ್ಚಿತಾನಾಂ
ಪುಣ್ಯಂ ಹಿ ವಿಖ್ಯಾಪನಮೀಶ್ವರಾಣಾಮ್ ॥ ೨೧೨ ॥

ಸ್ವರ್ಗೀಯಮೇತತ್ಪರಮಂ ಪವಿತ್ರಂ
ಪುತ್ರೀಯಮೇತಚ್ಚ ಪರಂ ರಹಸ್ಯಮ್ ।
ಜಪ್ಯಂ ಮಹಾಪರ್ವಸು ಚೈತದಗ್ರ್ಯಂ
ದುಃಖೋಪಶಾಂತಿಪ್ರದಮಾಯುಷೀಯಮ್ ॥ ೨೧೩ ॥

ಪ್ರಜೇಶದೇವರ್ಷಿಮನುಪ್ರಧಾನಾಂ
ಪುಣ್ಯಾಂ ಪ್ರಸೂತಿಂ ಪ್ರಥಿತಾಮಜಸ್ಯ ।
ಮಮಾಪಿ ವಿಖ್ಯಾಪಯತಃ ಸಮಾಸಾತ್
ಸಿದ್ಧಿಂ ಪ್ರಜೇಶಾಃ ಪ್ರದಿಶಂತು ಯುಕ್ತಾಃ ॥ ೨೧೪ ॥

---

ದೇವ, ಸರ್ಪ, ದೇವೇಂದ್ರ, ಸಪ್ತರ್ಷಿ, ಪಿತೃ, ಪ್ರಜಾ, ಮತ್ತು ರಾಜರುಗಳಿಂದ ಸಹಿತವಾಗಿರುವುವು.

೨೧೨. ಉದಾರವಾದ ವಂಶ ಗೋತ್ರಗಳ ಶ್ರವಣವುಳ್ಳವರೂ, ಉತ್ಕೃಷ್ಟವಾದ ಪ್ರತಿಭೆಯಿಂದ ಸಂಪನ್ನರೂ, ಕೀರ್ತಿ, ಕಾಂತಿ ಖ್ಯಾತಿಗಳಿಂದ ಪೂಜ್ಯರೂ ಆದ ಮನ್ವಂತರಾಧಿಪತಿಗಳ ಪ್ರಕಾಶನವು ಅತ್ಯಂತ ಪವಿತ್ರವಾದುದು.

೨೧೩. ಇಂತಹವರ ಪ್ರವಚನವು ಸ್ವರ್ಗ ಸುಖವನ್ನು ಕೊಡುವುದೂ, ಪರಮ ಪವಿತ್ರವೂ, ಪುತ್ರಪ್ರಾಪ್ತಿ ಸಾಧನವೂ, ಪರಮ ರಹಸ್ಯವೂ, ದುಃಖಶಾಂತಿಯನ್ನೀಯುವುದೂ ಮತ್ತು ಆಯುಷ್ಯವನ್ನುಂಟುಮಾಡುವುದೂ ಆಗಿರುವುದರಿಂದ ಇದನ್ನು ಪರ್ವಕಾಲಗಳಲ್ಲಿ ಜಪಿಸಬೇಕು.

೨೧೪. ಪ್ರಜಾಪತಿ, ದೇವ, ಋಷಿ, ಮನು ಮುಂತಾದವರಿಂದ ಪ್ರಧಾನವಾದ ಬ್ರಹ್ಮನ ಪವಿತ್ರ ವಂಶಾವಳಿಯನ್ನು ಸಂಗ್ರಹವಾಗಿ ಪ್ರಕಾಶಪಡಿಸುತ್ತಿರುವ ನನಗೆ ಪ್ರಜಾನಾಥರಾದ ಯೋಗಿಗಳು ಮಹಾ ಸಿದ್ಧಿಯನ್ನುಂಟುಮಾಡಲಿ.

**ಇತ್ಯೇತದಂತರಂ ಪ್ರೋಕ್ತಂ ಮನೋಃ ಸ್ವಾಯಂಭುವಸ್ಯ ಚ ।**
**ವಿಸ್ತರೇಣಾನುಪೂರ್ವ್ಯಾ ಚ ಭೂಯಃ ಕಿಂ ವರ್ಣಯಾಮ್ಯಹಮ್**
**॥ ೨೧೫ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಪಂಚತ್ರಿಂಶತ್ತಮೋಽಧ್ಯಾಯಃ**

---

೨೧೫. ಹೀಗೆ ಸ್ವಾಯಂಭುವ ಮನುವಿನ ಮನ್ವಂತರವನ್ನು ವಿಸ್ತಾರವಾಗಿ ಮತ್ತು ಕ್ರಮಬದ್ಧವಾಗಿ ನಿಮಗೆ ಉಪದೇಶ ಮಾಡಿರುವೆನು. ಮುಂದೆ ಯಾವ ವಿಷಯವನ್ನು ವರ್ಣಿಸಲಿ ?

ಬ್ರಹ್ಮಾಂಡಪುರಾಣದಲ್ಲಿ ಮೂವತ್ತೈದನೆಯ ಅಧ್ಯಾಯವು ಮುಗಿದುದು.

## ಷಟ್ತ್ರಿಂಶತ್ತಮೋಽಧ್ಯಾಯಃ

**ಶಾಂಶಪಾಯನ ಉವಾಚ :—**

**ಮನ್ವಂತರಾಣಿ ಶೇಷಾಣಿ ಶ್ರೋತುಮಿಚ್ಛಾಮ್ಯನುಕ್ರಮಾತ್ ।**
**ಮನ್ವಂತರಾಧಿಪಾಂಶ್ಚೈವ ಶಕ್ರದೇವಪುರೋಗಮಾನ್ ॥ ೧ ॥**

**ಸೂತ ಉವಾಚ :—**

**ಮನ್ವಂತರಾಣಿ ಯಾನಿ ಸ್ಯುರತೀತಾನಾಗತಾನಿ ಹ ।**
**ಸಮಾಸಾದ್ವಿಸ್ತರಾಚ್ಚೈವ ಬ್ರುವತೋ ಮೇ ನಿಬೋಧತ ॥ ೨ ॥**

**ಸ್ವಾಯಂಭುವೋ ಮನುಃ ಪೂರ್ವಂ ಮನುಃ ಸ್ವಾರೋಚಿಷಸ್ತಥಾ ।**
**ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೩ ॥**

**ಷಡೇತೇ ಮನವೋಽತೀತಾ ವಕ್ಷ್ಯಾಮ್ಯಷ್ಟಾವನಾಗತಾನ್ ।**
**ಸಾವರ್ಣಿಶ್ಚೈವ ರೌಚ್ಯಶ್ಚ ಭೌತ್ಯೋ ವೈವಸ್ವತಸ್ತಥಾ ॥ ೪ ॥**

---

ಶಾಂಶಪಾಯನ ಮುನಿಯು ಹೀಗೆ ಪ್ರಶ್ನಿಸಿದನು :—

೧. ಮುನಿಯೇ, ಇಂದ್ರದೇವನೇ ಮುಂತಾದ ಸಕಲ ಮನ್ವಂತರಾಧಿಪತಿಗಳನ್ನೂ ಮಿಕ್ಕ ಎಲ್ಲ ಮನ್ವಂತರಗಳನ್ನೂ ಕ್ರಮವಾಗಿ ಕೇಳಲು ಕುತೂಹಲಿಯಾಗಿರುವೆನು.

ಸೂತಮುನಿಯು ಪ್ರತ್ಯುತ್ತರವಿತ್ತನು :—

೨. ಹಿಂದೆ ಕಳೆದಿರುವ ಮುಂದೆ ಬರಲಿರುವ ಮನ್ವಂತರಗಳು ಎಷ್ಟಿವೆಯೋ ಅವುಗಳನ್ನು ಸಂಗ್ರಹ ವಿಸ್ತಾರರೂಪವಾಗಿ ವರ್ಣಿಸುವ ನನ್ನ ವಚನವನ್ನು ಲಾಲಿಸಿರಿ.

೩. ಮನ್ವಂತರ ಪ್ರವರ್ತಕರಲ್ಲಿ ಮೊದಲನೆಯ ಸ್ವಾಯಂಭುವ ಮನುವಿನಿಂದ ಸ್ವಾರೋಚಿಷ, ಉತ್ತಮ, ತಾಮಸ, ರೈವತ ಮತ್ತು ಚಾಕ್ಷುಷರೆಂಬುವರು ಆರು ಮಂದಿ ಪ್ರಸಿದ್ಧರಾಗಿರುವರು.

೪. ಈ ಆರುಮಂದಿ ಮನ್ವಂತರ ಅಧಿಪತಿಗಳು ಅತೀತರಾಗಿರುವರು. ಮುಂದಿನ ಎಂಟು ಮಂದಿ ಮನ್ವಂತರಾಧಿಪರನ್ನು ಹೇಳುವೆನು. ಸಾವರ್ಣಿ, ರೌಚ್ಯ, ಭೌತ್ಯ ಮತ್ತು ವೈವಸ್ವತರೆಂಬುವರು ಆ ಎಂಟುಮಂದಿಯಲ್ಲ ಸೇರಿರುವರು.

ವಕ್ಷ್ಯಾಮ್ಯೇತಾನ್ ಪುರಸ್ತಾತ್ತು ಮನೋರ್ವೈವಸ್ವತಸ್ಯ ಚ ।
ಮನವಃ ಪಂಚ ಯೇಽತೀತಾ ಮಾನಸಾಂಸ್ತಾನ್ನಿಬೋಧತ ॥ ೫ ॥

ಮನ್ವಂತರಂ ಮಯಾ ಪ್ರೋಕ್ತದ್ಯ ಕ್ರಾಂತಂ ಸ್ವಾಯಂಭುವಸ್ಯ ತು ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಮನೋಃ ಸ್ವಾರೋಚಿಷಸ್ಯ ಹ ॥ ೬ ॥

ಪ್ರಜಾಸರ್ಗಂ ಸಮಾಸೇನ ದ್ವಿತೀಯಸ್ಯ ಮಹಾತ್ಮನಃ ।
ಆಸನ್ ವೈ ತುಷಿತಾ ದೇವಾ ಮನೋಃ ಸ್ವಾರೋಚಿಷೇಂತರೇ ॥ ೭ ॥

ಪಾರಾವತಾಶ್ಚ ವಿದ್ವಾಂಸೋ ದ್ವಾವೇವತು ಗಣೌ ಸ್ಮೃತೌ ।
ತುಷಿತಾಯಾಂ ಸಮುತ್ಪನ್ನಾಃ ಕ್ರತೋಃ ಪುತ್ರಾಃ ಸುರೋಚಿಷಃ ॥ ೮ ॥

ಪಾರಾವತಾಶ್ಚ ವಾಸಿಷ್ಠಾ ದ್ವಾದಶ ದ್ವೌಗಣೌ ಸ್ಮೃತೌ ।
ಛಂದಜಾಶ್ಚ ಚತುರ್ವಿಂಶದ್ದೇವಾಸ್ತೇ ವೈ ತದಾ ಸ್ಮೃತಾಃ ॥ ೯ ॥

೫. ಇವರನ್ನು ವೈವಸ್ವತಮನುವಿನ ಅನಂತರದಲ್ಲಿ ವರ್ಣಿಸುವೆನು. ಹಿಂದೆ ಕಳೆದುಹೋದ ಮಾನಸಪುತ್ರರಾದ ಐದುಮಂದಿ ಮನುಗಳನ್ನು ಕೇಳಿರಿ.

೬. ಮುನಿಗಳೇ! ನನ್ನಿಂದ ಇದುವರೆಗೆ ಸ್ವಾಯಂಭುವಮನ್ವಂತರವು ಕ್ರಮವಾಗಿ ಬೋಧಿಸಲ್ಪಟ್ಟಿತು. ಮುಂದೆ ಸ್ವಾರೋಚಿಷಮನುವಿನ ಅಧಿಕಾರಸಮಯವನ್ನು ಉಪದೇಶಿಸುವೆನು.

೭. ಮಹಾತ್ಮನಾದ ಸ್ವಾರೋಚಿಷ ಮನುವಿನ ಆ ಸಮಯದಲ್ಲಿ ಸಂಭವಿಸುವ ಪ್ರಜಾಸೃಷ್ಟಿಯನ್ನು ಸಂಗ್ರಹವಾಗಿ ಬೋಧಿಸುವೆನು. ಆ ಸ್ವಾರೋಚಿಷ ಮನ್ವಂತರದಲ್ಲಿ ತುಷಿತರೆಂಬ ದೇವತೆಗಳು ಇದ್ದರು.

೮. ಮತ್ತು ಜ್ಞಾನಿಗಳಾದ ಪಾರಾವತರು ದೇವತೆಗಳಾಗಿದ್ದರು. ಹೀಗೆ ದೇವತೆಗಳ ಎರಡು ಗಣಗಳು ಇದ್ದುವೆಂದು ಸ್ಮರಿಸಲ್ಪಟ್ಟಿದೆ. ತುಷಿತ ಎಂಬ ದೇವತೆಯಲ್ಲಿ ಸ್ವರೋಚಿಪ್ರಜಾಪತಿಗೆ ಅನೇಕ ಪುತ್ರರು ಜನಿಸಿದರು.

೯. ಹಾಗೆ ವಸಿಷ್ಠಮುನಿಯಿಂದ ಪಾರಾವತವೆಂಬ ಸಂಕೇತವುಳ್ಳ ಹನ್ನೆರಡು ಪುತ್ರರು ಜನಿಸಿದರು. ಇವರು ಎರಡು ಗಣರೂಪವಾಗಿ ಖ್ಯಾತಿಯನ್ನು ಹೊಂದಿದರು. ಹಾಗೆ ಇಪ್ಪತ್ತನಾಲ್ಕು ಛಂದಜರೆಂಬ ದೇವತೆಗಳು ಇದ್ದರು.

ದಿವಸ್ಪೃಶೋಽಥ ಜಾಮಿತ್ರೋ ಗೋಪದೋ ಭಾಸುರಸ್ತಥಾ ।
ಅಜಶ್ಚ ಭಗವಾಂಶ್ಚೈವ ದ್ರವಿಣಶ್ಚ ಮಹಾಬಲಃ ॥ ೧೦ ॥

ಆಯುಶ್ಚಾಪಿ ಮಹಾಬಾಹುರ್ಮಹೌಜಾಶ್ಚಾಪಿ ವೀರ್ಯವಾನ್ ।
ಚಿಕಿತ್ವಾನ್ ವಿಶ್ರುತೋ ಯಸ್ತು ಚಾಂಶೋ ಯಶ್ಚೈವ ಪಠ್ಯತೇ ॥ ೧೧ ॥

ಋತಶ್ಚ ದ್ವಾದಶಸ್ತ್ವೇಷಾಂ ತುಷಿತಾಃ ಪರಿಕೀರ್ತಿತಾಃ ।
ಇತ್ಯೇತೇ ಕ್ರತುಪುತ್ರಾಸ್ತು ತದಾಸನ್ ಸೋಮಪಾಯಿನಃ ॥ ೧೨ ॥

ಪ್ರಚೇತಾಶ್ಚೈವ ಯೋ ದೇವೋ ವಿಶ್ವದೇವಸ್ತಥೈವ ಚ ।
ಸಮಂಜೋ ವಿಶ್ರುತೋ ಯಸ್ತು ಹ್ಯಜಿಹ್ಮಶ್ಚಾರಿಮರ್ದನಃ ॥ ೧೩ ॥

ಆಯುರ್ದಾನೋ ಮಹಾಮಾನೋ ದಿವ್ಯಮಾನಸ್ತಥೈವ ಚ ।
ಅಜೇಯಶ್ಚ ಮಹಾಭಾಗೋ ಯವೀಯಾಂಶ್ಚ ಮಹಾಬಲಃ ॥ ೧೪ ॥

ಹೋತಾ ಯಜ್ವಾ ತಥಾ ಹ್ಯೇತೇ ಪರಿಕ್ರಾಂತಾಃ ಪರಾವತಾಃ ।
ಇತ್ಯೇತಾ ದೇವತಾ ಹ್ಯಾಸನ್ ಮನೋಃ ಸ್ವಾರೋಚಿಷಾಂತರೇ ॥ ೧೫ ॥

---

೧೦-೧೧-೧೨. ದಿವಸ್ಪರ್ಶ, ಜಾಮಿತ್ರ, ಗೋಪದ, ಭಾಸುರ, ಅಜ, ಭಗವಾನ್, ದ್ರವಿಣ, ಆಯು, ಮಹೌಜ, ಚಿಕಿತ್ವಾನ್, ಅಂಶ ಮತ್ತು ಋತ ಎಂಬ ಮಹಾಬಲಿಷ್ಠರೂ, ಮಹಾ ಬಾಹು ಮುಂತಾದ ಲಕ್ಷಣೋಪೇತರೂ, ವೀರ್ಯವಂತರೂ, ಮಹಾಪ್ರಸಿದ್ಧರೂ ಮತ್ತು ಸೋಮಪಾನ ಮಾಡಿದವರೂ ಆದ ಹನ್ನೆರಡುಮಂದಿ ಪುತ್ರರು ಕ್ರತು ಪ್ರಜಾಪತಿಯಿಂದ ತುಷಿತಾದೇವಿಯಲ್ಲಿ ಜನ್ಮವೆತ್ತಿರುವುದರಿಂದ ತುಷಿತ ಎಂಬ ಸಂಕೇತವುಳ್ಳ ದೇವಗಣಕ್ಕೆ ಸೇರಿರುವರು.

೧೩. ಪ್ರಚೇತಾ, ವಿಶ್ವದೇವ, ಸಮಂಜ, ವಿಶ್ರುತ, ಅಜಿಹ್ಮ, ಅರಿಮರ್ದನ ಎಂಬುವರು ಪರಾವತರೆಂಬ ದೇವಗಣವನ್ನು ಸೇರಿದವರಾಗಿರುವರು.

೧೪. ಮತ್ತು ಆಯುರ್ದಾನ, ಮಹಾಮಾನ, ದಿವ್ಯಮಾನ, ಮತ್ತು ಅಜೇಯರೆಂಬುವರು ಮಹಾತ್ಮರೂ ಮಹಾಬಲಿಷ್ಠರೂ ಆದವರಾಗಿ ಆ ಗಣಕ್ಕೆ ಸೇರಿದ್ದಾರೆ. ಅವರಲ್ಲಿ ಅಜೇಯನು ಚಿಕ್ಕವನಾಗಿರುವನು.

೧೫. ಹಾಗೆ ಕಡೆಯವರಾಗಿ ಹೋತಾ ಯಜ್ವಾ ಎಂಬುವರೂ ಸೇರಿ ಒಟ್ಟಾಗಿ

ಸೋಮಪಾಸ್ತು ತದಾ ಹ್ಯೇತಾಶ್ಚತುರ್ವಿಂಶತಿದೇವತಾಃ ।
ತೇಷಾಮಿಂದ್ರಸ್ತದಾ ಹ್ಯಾಸೀದ್ವಿಪಶ್ಚಿಲ್ಲೋಕವಿಶ್ರುತಃ ॥ ೧೬ ॥

ಊರ್ಜಾ ವಸಿಷ್ಠಪುತ್ರಶ್ಚ ಸ್ತಂಬಃ ಕಾಶ್ಯಪ ಏವ ಚ ।
ಭಾರ್ಗವಶ್ಚ ತಥಾ ಪ್ರಾಣ ಋಷಭೋಽಂಗಿರಸಸ್ತಥಾ ॥ ೧೭ ॥

ಪೌಲಸ್ತ್ಯಶ್ಚೈವ ದತ್ತೋಽತ್ರಿರಾತ್ರೇಯೋ ನಿಶ್ಚಲಸ್ತಥಾ ।
ಪೌಲಹೋಽಥೋರ್ವರೀವಾಂಶ್ಚ ಏತೇ ಸಪ್ತರ್ಷಯಸ್ತಥಾ ॥ ೧೮ ॥

ಚೈತ್ರಃ ಕಿಂಪುರುಷಶ್ಚೈವ ಕೃತಾಂತೋ ವಿಭೃತೋ ರವಿಃ ।
ಬೃಹದುಕ್ಥೋ ನವಃ ಸೇತುಃ ಶ್ರುತಶ್ಚೇತಿ ನವ ಸ್ಮೃತಾಃ ॥ ೧೯ ॥

ಮನೋಃ ಸ್ವಾರೋಚಿಷಸ್ಯೈತೇ ಪುತ್ರಾ ವಂಶಕರಾಃ ಪ್ರಭೋ ।
ಪುರಾಣೇ ಪರಿಸಂಖ್ಯಾತಾ ದ್ವಿತೀಯಂ ನೈ ತದಂತರಮ್ ॥ ೨೦ ॥

---

ಹನ್ನೆರಡು ಮಂದಿಯು ಪರಾವತದೇವತಾಗಣವೆಂದು ಕರೆಯಲ್ಪಡುವರು, ಸ್ವಾರೋಚಿಷಮನುವಿನ ಅಂತರದಲ್ಲಿ ಈ ದೇವತೆಗಳು ಪ್ರಸಿದ್ಧರಾಗಿದ್ದರು.

೧೬. ಆಗ ಸೋಮಪಾಯಿಗಳಾದ ಮುಂದೆ ಹೇಳುವ ಇಪ್ಪತ್ತನಾಲ್ಕು ದೇವತೆಗಳು ದೇವತಾಧಿಕಾರದಲ್ಲಿದ್ದರು. ಅವರಲ್ಲಿ ಲೋಕಪ್ರಸಿದ್ಧನೂ ಜ್ಞಾನಿಯೂ ಆದ ಇಂದ್ರನು ಮೊದಲನೆಯವನಾಗಿದ್ದನು.

೧೭-೧೮-೧೯. ಮತ್ತು ವಸಿಷ್ಠ ಮುನಿಯ ಪುತ್ರನಾದ ಊರ್ಜಾ, ಸ್ತಂಬ, ಕಾಶ್ಯಪ, ಭಾರ್ಗವ, ಪ್ರಾಣ, ಋಷಭ, ಅಂಗಿರಸ, ಪೌಲಸ್ತ್ಯ, ದತ್ತ, ಅತ್ರಿ, ಆತ್ರೇಯ, ನಿಶ್ಚಲ, ಪೌಲಹ, ಉರ್ವರೀವಾನ್, ಚೈತ್ರ, ಕಿಂಪುರುಷ, ಕೃತಾಂತ, ವಿಭೃತ, ರವಿ, ಬೃಹದುಕ್ಥ, ನವ, ಸೇತು ಮತ್ತು ಶ್ರುತ ಎಂಬ ಹೆಸರುಗಳಿಂದ ಇಂದ್ರ ಮೊದಲಾದ ಇಪ್ಪತ್ತನಾಲ್ಕು ದೇವತೆಗಳು ಪಠಿಸಲ್ಪಟ್ಟಿರುವರು. ಇವರಲ್ಲಿ ಪೌಲಸ್ತ್ಯ ಮುಂತಾದ ಏಳುಮಂದಿಯು ಸಪ್ತರ್ಷಿಗಳಾಗಿರುವರು. ಮುಂದೆ ಒಂಭತ್ತು ಮಂದಿಯು ಸೇರಿಕೊಂಡವರಾಗಿದ್ದಾರೆ.

೨೦. ಪ್ರಭುವೆ! ಸ್ವಾರೋಚಿಷ ಮನ್ವಂತರದಲ್ಲಿ ಜನಿಸಿರುವ ಈ ಪುತ್ರರು ವಂಶಾವಳಿಯನ್ನು ಅವಿಚ್ಛಿನ್ನವಾಗಿ ಬೆಳಸುವರಾಗಿರುವರು. ಹೀಗೆ ಸ್ವಾರೋಚಿಷ ವೆಂಬ ದ್ವಿತೀಯಮನ್ವಂತರದ ವಂಶಸ್ಥಾಪಕರನ್ನು ಪುರಾಣದಲ್ಲಿ ಹೇಳಿದೆ.

ಸಪ್ತರ್ಷಯೋ ಮನುರ್ದೇವಾಃ ಪಿತರಶ್ಚ ಚತುಷ್ಟಯಮ್ ।
ಮೂಲಂ ಮನ್ವಂತರಸ್ಯೈತೇ ತೇಷಾಂ ಚೈವಾನ್ವಯಾಃ ಪ್ರಜಾಃ॥ ೨೧ ॥

ಋಷೀಣಾಂ ದೇವತಾಃ ಪುತ್ರಾಃ ಪಿತರೋ ದೇವಸೂನವಃ ।
ಋಷಯೋ ದೇವಪುತ್ರಾಶ್ಚ ಇತಿ ಶಾಸ್ತ್ರೇ ವಿನಿಶ್ಚಯಃ ॥ ೨೨ ॥

ಮನೋಃ ಕ್ಷತ್ರಂ ವಿಶಶ್ಚೈವ ಸಪ್ತರ್ಷಿಭ್ಯೋ ದ್ವಿಜಾತಯಃ ।
ಏತನ್ಮನ್ವಂತರಂ ಪ್ರೋಕ್ತಂ ಸಮಾಸಾಚ್ಚ ನ ವಿಸ್ತರಾತ್ ॥ ೨೩ ॥

ಸ್ವಾಯಂಭುವೇನ ವಿಸ್ತಾರೋ ಜ್ಞೇಯಃ ಸ್ವಾರೋಚಿಷಸ್ಯ ತು ।
ನ ಶಕ್ಯೋ ವಿಸ್ತರಸ್ತಸ್ಯ ವಕ್ತುಂ ವರ್ಷಶತೈರಪಿ ॥ ೨೪ ॥

ಪುನರುಕ್ತಬಹುತ್ವಾತ್ತು ಪ್ರಜಾನಾಂ ವೈ ಕುಲೇ ಕುಲೇ ।
ತೃತೀಯೇ ತ್ವಥ ಪರ್ಯಾಯೇ ಉತ್ತಮಸ್ಯಾಂತರೇ ಮನೋಃ
॥ ೨೫ ॥

---

೨೧. ಸಪ್ತರ್ಷಿ, ಮನು, ದೇವ, ಮತ್ತು ಪಿತೃಗಳು ಎಂಬ ನಾಲ್ಕು ವಿಧದ ಪ್ರಜೆಗಳು ಮನ್ವಂತರದ ಪ್ರವೃತ್ತಿಗೆ ಕಾರಣರು. ಅವರ ವಂಶದಿಂದ ಪ್ರಜೆಗಳು ಸಂತತವಾಗಿ ಜನಿಸುವರು.

೨೨. ಋಷಿಗಳಲ್ಲಿ ದೇವತೆಗಳು ಪುತ್ರರಾಗಿ ಜನಿಸುವರು. ದೇವತೆಗಳಿಗೆ ಪಿತೃಗಳು ಪುತ್ರರಾಗುವರು, ಮತ್ತು ಋಷಿಗಳು ದೇವತೆಗಳಿಗೆ ಪುತ್ರರಾಗಿ ಹುಟ್ಟುವರು. ಪರಸ್ಪರವಾಗಿ ಕಾರ್ಯಕಾರಣಭಾವವನ್ನು ಮಾಹಾತ್ಮ್ಯಾತಿಶಯದಿಂದ ಹೊಂದಿರುವರೆಂದು ಶಾಸ್ತ್ರದಲ್ಲಿ ನಿರ್ಣಯದಿಂದ ಹೇಳಿದೆ.

೨೩. ಮನ್ವಂತರದ ಕ್ರಮವನ್ನು ವಿಸ್ತಾರವಾಗಿ ನಿರೂಪಣ ಮಾಡುವುದನ್ನು ಬಿಟ್ಟು ಸಂಗ್ರಹವಾಗಿ ನಿರೂಪಿಸುವುದಾದರೆ ಮನುವಿನಿಂದ ಕ್ಷತ್ರ, ವೈಶ್ಯ ಜಾತಿಗಳೂ, ಸಪ್ತರ್ಷಿಗಳಿಂದ ದ್ವಿಜರೂ ಬೆಳಯುವರು. ಹೀಗೆ ಮನ್ವಂತರವು ಹೇಳಲ್ಪಟ್ಟಿತು.

೨೪. ಹಿಂದೆ ಹೇಳಿದ ಸ್ವಾಯಂಭುವ ಮನ್ವಂತರದ ದೃಷ್ಟಾಂತದಿಂದ ಸ್ವಾರೋಚಿಷ ಮನ್ವಂತರದ ವಿಸ್ತಾರವನ್ನು ಊಹಿಸಬೇಕು. ಅದರ ವಿಸ್ತಾರವನ್ನು ಒಂದು ನೂರು ವರ್ಷಗಳಾದರೂ ಹೇಳಿ ಮುಗಿಸಲು ಅಸಾಧ್ಯವು.

೨೫. ಮತ್ತು ಪ್ರಜೆಗಳ ಆಯಾಯ ವಂಶದಲ್ಲಿ ನಡೆದ ಸಂಗತಿಗಳೇ ನಡೆದು ಇರುವುದರಿಂದ ವಿಸ್ತಾರವಾದ ಆವರ್ಣನೆಯಲ್ಲಿ ಪುನರುಕ್ತಿಯು ಅತಿಯಾಗಿ ಸಂಭವಿ

ಪಂಚ ದೇವಗಣಾಃ ಪ್ರೋಕ್ತಾಸ್ತಾನ್ ವಕ್ಷ್ಯಾಮಿ ನಿಬೋಧತ ।
ಸುಧಾಮಾನಶ್ಚ ಯೇ ದೇವಾ ಯೇ ಚಾನ್ಯೇ ವಂಶವರ್ತಿನಃ ॥ ೨೬ ॥

ಪ್ರತರ್ದನಾಃ ಶಿವಾಃ ಸತ್ಯಾ ಗಣಾ ದ್ವಾದಶಕಾಃ ಸ್ಮೃತಾಃ ।
ಸತ್ಯೋ ಧೃತಿರ್ದನೋ ದಾಂತಃ ಕ್ಷಮಃ ಕ್ಷಾಮೋ ಧ್ವನಿಃ ಶುಚಿಃ॥ ೨೭ ॥

ಇಷೋರ್ಜಶ್ಚ ತಥಾ ಶ್ರೇಷ್ಠಃ ಸುಪರ್ಣೋ ದ್ವಾದಶಸ್ತಥಾ ।
ಇತ್ಯೇತೇ ದ್ವಾದಶ ಪ್ರೋಕ್ತಾಃ ಸುಧಾಮಾನಸ್ತು ನಾಮಭಿಃ ॥ ೨೮ ॥

ಸಹಸ್ರಧಾರೋ ವಿಶ್ವಾಯುಃ ಸಮಿತಾರೋ ಬೃಹದ್ವಸುಃ ।
ವಿಶ್ವಧಾ ವಿಶ್ವಕರ್ಮಾ ಚ ಮಾನಸಸ್ತು ವಿರಾಜಸಃ ॥ ೨೯ ॥

ಜ್ಯೋತಿಶ್ಚೈವ ವಿಭಾಸಶ್ಚ ಕೀರ್ತಿತಾ ವಂಶವರ್ತಿನಃ ।
ಅವಧ್ಯೋಽವರತಿರ್ದೇವೋ ವಸುರ್ಧಿಷ್ಣ್ಯೋ ವಿಭಾವಸುಃ ॥ ೩೦ ॥

---

ಸುವುದು, ಉತ್ತಮನೆಂಬ ಮನುವಿನ ಮನ್ವಂತರ ಕಾಲವು ತೃತೀಯಪರ್ಯಾಯ ದಲ್ಲಿ ಬರುವುದು.

೨೬. ಈ ಮನ್ವಂತರದಲ್ಲಿ ಐದು ದೇವತಾಗಣಗಳು ಪಠಿತವಾಗಿವೆ. ಅವುಗಳನ್ನು ಹೇಳುವೆನು. ಕೇಳಿರಿ. ಐದು ದೇವಗಣಗಳಲ್ಲಿ ಸುಧಾಮಾ ಮತ್ತು ವಂಶವರ್ತಿ ಎಂಬುವು ಮೊದಲನೆಯ ಎರಡುಗಣಗಳಾಗಿವೆ.

೨೭-೨೮. ಪ್ರತರ್ದನ, ಶಿವ, ಮತ್ತು ಸತ್ಯ-ಇವು ಕಡೆಯ ಮೂರು ದೇವಗಣಗಳು, ಈಗಣಗಳು ಹನ್ನೆರಡು ಪ್ರತ್ಯೇಕ ವ್ಯಕ್ತಿಗಳಿಂದ ಸಹಿತವಾಗಿ ಸ್ಮರಿಸಲ್ಪಟ್ಟಿವೆ. ಸತ್ಯ, ದಮ, ಧೃತಿ, ದಾಂತ, ಕ್ಷಮ, ಕ್ಷಾಮ, ಧ್ವನಿ, ಶುಚಿ, ಇಷ, ಊರ್ಜ, ಶ್ರೇಷ್ಠ ಮತ್ತು ಹನ್ನೆರಡನೆಯ ಸುಪರ್ಣ ಎಂಬ ಹನ್ನೆರಡು ಸಂಖ್ಯೆಯಿಂದ ಗಣ್ಯರಾದ ದೇವತೆಗಳ ಗಣವು ಸುಧಾಮಗಣವೆಂದು ನಾಮಾಂಕಿತವಾದುದು.

೨೯. ಸಹಸ್ರಧಾರ ವಿಶ್ವ, ಆಯು, ಸಮಿತಾರ, ಬೃಹತ್, ವಸು, ವಿಶ್ವಧಾ, ವಿಶ್ವಕರ್ಮಾ, ಮಾನಸ. ಮತ್ತು ವಿರಾಜಸ—ಎಂಬುವರು ವಂಶವರ್ತಿಯೆಂಬ ದೇವತಾಗಣದಲ್ಲಿ ಸೇರಿದ ವ್ಯಕ್ತಿಗಳಾಗಿರುವರು.

೩೦. ಮತ್ತು ಜ್ಯೋತಿ, ವಿಭಾಸರು ಆ ಗಣದಲ್ಲಿ ಸೇರಿದವರೆಂದು ಕೀರ್ತಿಸಲ್ಪಟ್ಟಿರುವರು. ಮುಂದೆ ಪ್ರತರ್ದನ ಗಣದಲ್ಲಿ ದೇವತೆಗಳು ಈ ರೀತಿಯಾಗಿರುವರು.

ವಿತ್ತಃ ಕ್ರತುಃ ಸುಧರ್ಮಾ ಚ ಧೃತಧರ್ಮಾ ಯಶಸ್ವಿಜಃ ।
ರಥೋರ್ಮಿಃ ಕೇತುಮಾಂಶ್ಚೈವ ಕೀರ್ತಿತಾಸ್ತು ಪ್ರತರ್ದನಾಃ ॥ ೩೧ ॥

ಹಂಸಸ್ವಾರೌ ವದಾನ್ಯೌ ಚ ಪ್ರತರ್ದನಯಶಸ್ಕರೌ ।
ಸುದಾನೋ ವಸುದಾನಶ್ಚ ಸುಮಂಜಸವಿಷಾವುಭೌ ॥ ೩೨ ॥

ಯಮೋ ವಹ್ನಿರ್ಯತಿಶ್ಚೈವ ಸುಚಿತ್ರಃ ಸುತಪಾಸ್ತಥಾ ।
ಶಿವಾ ಹ್ಯೇತೇ ತು ವಿಜ್ಞೇಯಾ ಯಜ್ಞಿಯಾ ದ್ವಾದಶಾಪರಾಃ ॥ ೩೩ ॥

ಸತ್ಯಾನಾಮಪಿ ನಾಮಾನಿ ನಿಬೋಧತ ಯಥಾತಥಮ್ ।
ದಿಕ್ಪತಿರ್ವಾಕ್ಪತಿಶ್ಚೈವ ವಿಶ್ವಃ ಶಂಭುಸ್ತಥೈವ ಚ ॥ ೩೪ ॥

ಸ್ವಮೃಡೀಕೋ ದಿವಿಶ್ಚೈವ ವರ್ಚೋಧಾಮಾ ಬೃಹದ್ವಪುಃ ।
ಅಶ್ವಶ್ಚೈವ ಸದಶ್ವಶ್ಚ ಕ್ಷೇಮಾನಂದೌ ತಥೈವ ಚ ॥ ೩೫ ॥

---

ಅವಧ್ಯ. ಅವರತಿ, ವಸು, ಧಿಷ್ಣ್ಯ. ವಿಭಾವಸು, ಇವರು ಆ ಗಣವನ್ನು ಅಲಂಕರಿಸಿರುವರು.

೩೧. ವಿತ್ತ, ಕ್ರತು, ಸುಧರ್ಮಾ, ಧೃತಧರ್ಮಾ. ಯಶಸ್ವಿಜ, ರಥೋರ್ಮಿ ಮತ್ತು ಕೇತುಮಾನ್ ಎಂಬುವರು ಕೂಡ ಪ್ರತರ್ದನಗಣದವರಾಗಿರುವರು. ಈ ರೀತಿಯಾಗಿ ಹನ್ನೆರಡು ಮಂದಿ ಪ್ರತರ್ದನ ದೇವತೆಗಳೆಂದು ಕೀರ್ತಿಸಲ್ಪಟ್ಟಿರುವರು.

೩೨. ಹಂಸಸ್ವಾರ, ವದಾನ್ಯ, ಪ್ರತರ್ದನ, ಯಶಸ್ಕರ, ಸುದಾನ, ವಸುದಾನ, ಸುಮಂಜ, ಮತ್ತು ಸವಿಷ ಎಂಬುವರು ಮುಂದಿನ ಶಿವ ಎಂಬ ದೇವಗಣದಲ್ಲಿ ಸೇರಿದ ವ್ಯಕ್ತಿಗಳಾಗಿರುವರು.

೩೩. ಹಾಗೆ ಯಮ, ವಹ್ನಿ, ಯತಿ, ಸುಚಿತ್ರ, ಸುತಪ ಎಂಬುವರು ಸೇರಿ ಹನ್ನೆರಡುಮಂದಿಯು ಯಜ್ಞಾರ್ಹರಾದ "ಶಿವ" ಸಂಕೇತದಿಂದ ಪ್ರಸಿದ್ಧರಾದ ದೇವತೆಗಳಾಗಿ ತಿಳಿಯಲ್ಪಡಬೇಕು.

೩೪. ಮುನಿಗಳೆ! ಮುಂದೆ ಸತ್ಯಗಣದ ದೇವತಾನಾಮಗಳನ್ನು ತಾತ್ತ್ವಿಕ ರೂಪದಿಂದ ಕೇಳಿರಿ. ದಿಕ್ಪತಿ, ವಾಕ್ಪತಿ, ವಿಶ್ವ, ಶಂಭು, ಇವರು ಆ ಗಣವನ್ನು ಭೂಷಿಸುತ್ತಿರುವರು.

೩೫. ಸ್ವಮೃಡೀಕ, ದಿವಿ, ವರ್ಚೋಧಾಮಾ, ಬೃಹದ್ವಪು, ಅಶ್ವ, ಸದಶ್ವ,

ಸತ್ಯಾ ಹ್ಯೇತೇ ಪರಿಕ್ರಾಂತಾ ಯಜ್ಞಿಯಾ ದ್ವಾದಶಾಪರಾಃ ।
ಇತ್ಯೇತಾ ದೇವತಾ ಹ್ಯಾಸನ್ನೌತ್ತಮಸ್ಯಾಂತರೇ ಮನೋಃ ॥ ೩೬ ॥

ತೇಷಾಮಿಂದ್ರಸ್ತು ದೇವಾನಾಂ ಸುಶಾಂತಿರ್ನಾಮ ವಿಶ್ರುತಃ ।
ಪುತ್ರಾಸ್ತ್ವಂಗಿರಸಸ್ತೇ ವೈ ಉತ್ತಮಸ್ಯ ಪ್ರಜಾಪತೇಃ ॥ ೩೭ ॥

ವಸಿಷ್ಠಪುತ್ರಾಃ ಸಪ್ತಾಸನ್ ವಾಸಿಷ್ಠಾ ಇತಿ ವಿಶ್ರುತಾಃ ।
ಸಪ್ತರ್ಷಯಸ್ತು ತೇ ಸರ್ವ ಉತ್ತಮಸ್ಯಾಂತರೇ ಮನೋಃ ॥ ೩೮ ॥

ಅಜಶ್ಚ ಪರಶುಶ್ಚೈವ ದಿವ್ಯೋ ದಿವ್ಯೌಷಧಿರ್ನಯಃ ।
ದೇವಾಂಬುಜಶ್ಚಾಪ್ರತಿಮೋ ಮಹೋತ್ಸಾಹೋ ಗಜಸ್ತಥಾ ॥ ೩೯ ॥

ವಿನೀತಶ್ಚ ಸುಕೇತುಶ್ಚ ಸುಮಿತ್ರಃ ಸುಮತಿಃ ಶ್ರುತಿಃ ।
ಉತ್ತಮಸ್ಯ ಮನೋಃ ಪುತ್ರಾಸ್ತ್ರಯೋದಶ ಮಹಾತ್ಮನಃ ॥ ೪೦ ॥

---

ಕ್ಷೇಮ, ಮತ್ತು ಆನಂದ ಎಂಬುವರು ಎಂಟುಮಂದಿಯೂ ಕೂಡ ಸತ್ಯಗಣಕ್ಕೆ ಸೇರಿದವರಾಗಿರುವರು.

೩೬. ಇವರು ಸತ್ಯನಾಮಾಂಕಿತರಾಗಿ ಯಜ್ಞಾರ್ಹರಾದ ಮತ್ತೊಂದು ಗಣದ ದೇವತೆಗಳೆಂದು ಸ್ಮರಿಸಲ್ಪಟ್ಟಿರುವರು. ಈ ರೀತಿಯಾಗಿ ಉತ್ತಮ ಮನ್ವಂತರದಲ್ಲಿ ಐದು ಗಣಗಳಾಗಿ ದೇವತೆಗಳಿದ್ದರು.

೩೭. ಸುಶಾಂತಿ ಎಂದು ಪ್ರಸಿದ್ಧನಾದವನು ಈ ದೇವತಾಗಣಕ್ಕೆಲ್ಲ ರಾಜನಾದ ಇಂದ್ರನಾಗಿದ್ದನು. ಉತ್ತಮ ಪ್ರಜಾಪತಿಯಿಂದ ಅಂಗಿರಸ್ಸು ಎಂಬ ಪುತ್ರರು ಜನ್ಮವನ್ನೆತ್ತಿದರು.

೩೮. ಆ ಉತ್ತಮ ಮನುವಿನ ಮನ್ವಂತರಾವಧಿಯಲ್ಲಿ ವಾಸಿಸ್ಠ ಎಂಬ ಸಂಜ್ಞೆಯಿಂದ ಪ್ರಸಿದ್ಧರಾದ ವಸಿಷ್ಠ ಪುತ್ರರು ಸಪ್ತರ್ಷಿಗಳಾಗಿದ್ದರು.

೩೯-೪೦. ಉತ್ತಮನೆಂಬ ಮನುವಿಗೆ ಅಜ, ಪರಶು, ದಿವ್ಯ, ದಿವ್ಯೌಷಧಿ, ನಯ, ದೇವಾಂಬುಜ, ಅಪ್ರತಿಮ, ಗಜ, ವಿನೀತ, ಸುಕೇತು, ಸುಮಿತ್ರ, ಸುಮತಿ, ಮತ್ತು ಶ್ರುತಿ ಎಂಬ ಉತ್ಸಾಹವಂತರೂ ಮಹಾತ್ಮರೂ ಆದ ಹದಿಮೂರು ಮಂದಿ ಪುತ್ರರು ಜನಿಸಿರುವರು.

ಏತೇ ಕ್ಷತ್ರಪ್ರಣೇತಾರಸ್ತೃತೀಯಂ ಚೈತದಂತರಮ್ ।
ಔತ್ತಮಃ ಪರಿಸಂಖ್ಯಾತಃ ಸರ್ಗಃ ಸ್ವಾರೋಚಿಷೇಣ ತು ॥ ೪೧ ॥

ವಿಸ್ತರೇಣಾನುಪೂರ್ವ್ಯಾ ಚ ತಾಮಸಸ್ಯ ನಿಬೋಧತ ।
ಚತುರ್ಥೇ ತ್ವಥ ಪರ್ಯಾಯೇ ತಾಮಸಸ್ಯಾಂತರೇ ಮನೋಃ ॥ ೪೨ ॥

ಸತ್ಯಾಃ ಸುರೂಪಾಃ ಸುಧಿಯೋ ಹರಯಶ್ಚ ಗಣಾಃ ಸ್ಮೃತಾಃ ।
ಪುಲಸ್ತ್ಯಪುತ್ರಾಸ್ತೇ ದೇವಾಸ್ತಾಮಸಸ್ಯಾಂತರೇ ಮನೋಃ ॥ ೪೩ ॥

ಗಣಸ್ತು ತೇಷಾಂ ದೇವಾನಾಮೇಕೈಕಃ ಪಂಚವಿಂಶಕಃ ।
ಇಂದ್ರಿಯಾಣಾಂ ಪ್ರತೀಯೇತ ಋಷಯಃ ಪ್ರತಿಜಾನತೇ ॥ ೪೪ ॥

ಸಪ್ರಮಾಣಾಸ್ತು ಶೀರ್ಷಣ್ಯಂ ಮನಶ್ಚೈವಾಷ್ಟಮಂ ತಥಾ ।
ಇಂದ್ರಿಯಾಣಿ ತಥಾ ದೇವಾ ಮನೋಸ್ತಸ್ಯಾಂತರೇ ಸ್ಮೃತಾಃ ॥ ೪೫ ॥

---

೪೧. ಈ ಮನುಪುತ್ರರು ಕ್ಷತ್ರಿಯ ಜಾತಿಯನ್ನು ಬೆಳೆಸಿದವರಾಗಿರುವರು. ಇದು ಮೂರನೆಯ ಮನ್ವಂತರವು, ಉತ್ತಮಮನುವಿನ ಪ್ರಜಾಸರ್ಗವು ಸ್ವಾರೋಚಿಷ ಮನುವಿನ ಪ್ರಜಾಸರ್ಗಕ್ಕೆ ತುಲ್ಯವಾಗಿದೆ.

೪೨. ಮುಂದೆ ತಾಮಸ ಮನ್ವಂತರ ಕ್ರಮವನ್ನು ವಿಸ್ತಾರವಾಗಿಯೂ ಅನುಪೂರ್ವೀ ಸಹಿತವಾಗಿಯೂ ಶ್ರವಣಮಾಡಿರಿ, ತಾಮಸನೆಂಬ ಮನುವಿನ ಮನ್ವಂತರವು ನಾಲ್ಕನೆಯ ಪರ್ಯಾಯದಲ್ಲಿ ನಡೆಯುವುದು.

೪೩. ಆಗ ಸತ್ಯ, ಸುರೂಪ, ಸುಧೀ ಮತ್ತು ಹರ ಎಂದು ನಾನಾವಿಧವಾದ ದೇವಗಣಗಳಿದ್ದುವು, ತಾಮಸ ಮನುವಿನ ಮನ್ವಂತರದಲ್ಲಿ ಪುಲಸ್ತ್ಯ ಮುನಿಪುತ್ರರು ದೇವತೆಗಳಾಗಿದ್ದರು.

೪೪. ಆ ದೇವತೆಗಳ ಗಣವು ಇಪ್ಪತ್ತೈದು ಸಂಖ್ಯೆಯ ತತ್ತ್ವರಾಶಿಯಲ್ಲಿ ಅಂತರ್ಗತವಾದ ಇಂದ್ರಿಯ ಗಣದ ರೂಪದಿಂದ ತಿಳಿಯುವುದೆಂದು ಋಷಿಗಳು ಪ್ರತಿಜ್ಞೆ ಮಾಡುವರು.

೪೫. ಪ್ರಮಾಣ ರೂಪವಾದ ಚಕ್ಷುಸ್ಸು, ಶ್ರೋತ್ರ ಮುಂತಾದ ಶಿರಸ್ಸಿನಲ್ಲಿರುವ ಇಂದ್ರಿಯಗಳು ಮತ್ತು ಎಂಟನೆಯದಾಗಿ ಮನಸ್ಸು ಮುಂತಾದ ಇಂದ್ರಿಯಗಳು ಆ ಮನ್ವಂತರದಲ್ಲಿ ದೇವತೆಗಳೆಂದು ಪ್ರಾಜ್ಞರಿಂದ ಸ್ಮರಿಸಲ್ಪಟ್ಟಿದೆ.

ತೇಷಾಂ ಬಭೂವ ದೇವಾನಾಂ ಶಿಬಿರಿಂದ್ರಃ ಪ್ರತಾಪವಾನ್ ।
ಸಪ್ತರ್ಷಯೋಽಂತರೇ ಯೇ ಚ ತಾನ್ನಿಬೋಧತ ಸತ್ತಮಾಃ ॥ ೪೬ ॥

ಕಾವ್ಯ ಆಂಗಿರಸಶ್ಚೈವ ಕಾಶ್ಯಪಃ ಪೃಥುರೇವ ಚ ।
ಆತ್ರೇಯಸ್ತ್ವಗ್ನಿರಿತ್ಯೇವ ಜ್ಯೋತಿರ್ಧಾಮಾ ಚ ಭಾರ್ಗವಃ ॥ ೪೭ ॥

ಪೌಲಹಶ್ಚರಕಶ್ಚಾತ್ರ ವಸಿಷ್ಠಃ ಪೀವರಸ್ತಥಾ ।
ಚೈತ್ರಸ್ತಥೈವ ಪೌಲಸ್ತ್ಯ ಋಷಯಸ್ತಾಮಸೇಽಂತರೇ ॥ ೪೮ ॥

ಜಾನುಜಂಘಸ್ತಥಾ ಶಾಂತಿರ್ನರಃ ಖ್ಯಾತಿಃ ಶುಭಸ್ತಥಾ ।
ಪ್ರಿಯಭೃತ್ಯೋ ಪರೀಕ್ಷಿಚ್ಚ ಪ್ರಸ್ಥಲೋಽಥ ದೃಢೇಷುಧಿಃ ॥ ೪೯ ॥

ಕೃಶಾಶ್ವಃ ಕೃತಬಂಧುಶ್ಚ ತಾಮಸಸ್ಯ ಮನೋಃ ಸುತಾಃ ।
ಪಂಚಮೇತ್ವಥ ಪರ್ಯಾಯೇ ಮನೋಃ ಸ್ವಾರೋಚಿಷೇಽಂತರೇ ॥ ೫೦ ॥

---

೪೬. ಆ ದೇವಗಣಕ್ಕೆ ಪ್ರತಾಪವಂತನಾದ ಶಿಬಿ ಎಂಬುವನು ರಾಜನಾಗಿ ದೇವೇಂದ್ರನಾಗಿದ್ದನು. ಸಾಧು ಶ್ರೇಷ್ಠರೆ! ಆ ಮನ್ವಂತರದಲ್ಲಿ ಸಪ್ತರ್ಷಿಗಳು ಯಾರಾಗಿದ್ದರೆಂಬುದನ್ನು ಕೇಳಿರಿ.

೪೭. ಕಾವ್ಯ, ಆಂಗಿರಸ, ಕಾಶ್ಯಪ, ಪೃಥು ಆತ್ರೇಯ, ಅಗ್ನಿ, ಜ್ಯೋತಿ-ರ್ಧಾಮ, ಮತ್ತು ಭಾರ್ಗವ-ಎಂಬುವರು ಆ ಮನ್ವಂತರದ ಋಷಿಗಣವನ್ನು ಸೇರಿಕೊಂಡಿರುವರು.

೪೮. ಪೌಲಹ, ಚರಕ, ವಾಸಿಷ್ಠ, ಪೀವರ, ಚೈತ್ರ ಮತ್ತು ಪೌಲಸ್ತ್ಯ ಎಂಬುವರು ಕೂಡ ತಾಮಸ ಮನ್ವಂತರವಲ್ಲಿ ಪ್ರಸಿದ್ಧರಾಗಿದ್ದ ಮಹಾಮುನಿಗಳು.

೪೯. ಜಾನುಜಂಘ, ಶಾಂತಿ, ನರ, ಖ್ಯಾತಿ, ಶುಭ, ಪ್ರಿಯಭೃತ್ಯ, ಪರೀಕ್ಷಿತ್ ಪ್ರಸ್ಥಲ ಮತ್ತು ದೃಢೇಷುಧಿ-ಎಂಬುವರು ತಾಮಸಮನುವಿನ ಪುತ್ರ ಸಂತತಿಯಲ್ಲಿ ಸೇರಿದವರಾಗಿದ್ದಾರೆ.

೫೦. ಕೃಶಾಶ್ವ, ಕೃತಬಂಧು-ಎಂಬೀರ್ವರು ಕೂಡ ತಾಮಸಮನುವಿನ ಪುತ್ರರಾಗಿರುವರು. ಸ್ವಾರೋಚಿಷ ಮನ್ವಂತರದ ಪಂಚಮಪರ್ಯಾಯದಲ್ಲಿದ್ದ ದೇವಗಣವನ್ನು ಮುಂದೆ ಹೇಳುವಂತೆ ಕೇಳಿರಿ.

ಗಣಾಸ್ತು ಯೇ ಸಮಾಖ್ಯಾತಾ ದೇವಾನಾಂ ತಾನ್ನಿಬೋಧತ ।
ಅಮಿತಾಭಾ ಭೂತರಯೋ ವೈಕುಂಠಾಃ ಸಸುಮೇಧಸಃ　　|| ೫೦ ||

ವರಿಷ್ಠಾಶ್ಚ ಶುಭಾಃ ಪುತ್ರಾ ವಸಿಷ್ಠಸ್ಯ ಪ್ರಜಾಪತೇಃ ।
ಚತುರ್ದಶ ತು ಚತ್ವಾರೋ ಗಣಾಸ್ತೇಷಾಂ ಸುಭಾಸ್ವರಾಃ　　|| ೫೧ ||

ಉಗ್ರಃ ಪ್ರಜ್ಞೋಽಗ್ನಿಭಾವಶ್ಚ ಪ್ರಜ್ಯೋತಿಶ್ಚಾಮೃತಸ್ತಥಾ ।
ಸುಮತಿರ್ವಿರಾವಶ್ಚ ಧಾಮಾ ನಾದಃ ಶ್ರವಾಸ್ತಥಾ　　|| ೫೨ ||

ವೃತ್ತಿರಾಶೀ ಚ ವಾದಶ್ಚ ಶಬರಶ್ಚ ಚತುರ್ದಶ ।
ಅಮಿತಾಭಾಃ ಸ್ಮೃತಾ ಹ್ಯೇತೇ ದೇವಾಃ ಸ್ವಾರೋಚಿಷೇಽಂತರೇ
|| ೫೩ ||

ಮತಿಶ್ಚ ಸುಮತಿಶ್ಚೈವ ಋತಸತ್ಯೌ ತಥೈಧನಃ ।
ಅಧೃತಿರ್ವಿಧೃತಿಶ್ಚೈವ ದಮೋ ನಿಯಮ ಏವ ಚ　　|| ೫೪ ||

---

೫೦. ಆ ಮನ್ವಂತರದಲ್ಲಿ ಪ್ರಸಿದ್ಧವಾದ ದೇವತೆಗಳ ಗಣಗಳನ್ನು ಕೇಳಿರಿ, ಅಮಿತಾಭ, ಭೂತರಯ, ವೈಕುಂಠ, ಮತ್ತು ಸುಮೇಧ ಎಂದು ಆ ಗಣಗಳು ಕರೆಯಲ್ಪಟ್ಟಿದ್ದುವು.

೫೧. ವಸಿಷ್ಠ ಪ್ರಜಾಪತಿಯ ಮಂಗಳಕರರೂ ಮತ್ತು ವಾಸಿಷ್ಠನಾಮಾಂಕಿತರೂ ಆದ ಹದಿನಾಲ್ಕು ಮಂದಿ ಪುತ್ರರಿದ್ದರು. ಅವರ ದೀಪ್ಯಮಾನವಾದ ನಾಲ್ಕು ಗಣಗಳು ಪ್ರಸಿದ್ಧವಾದುವು.

೫೨. ಉಗ್ರ. ಪ್ರಜ್ಞ, ಅಗ್ನಿಭಾವ, ಪ್ರಜ್ಯೋತಿ, ಅಮೃತ, ಸುಮತಿ, ವಿರಾವ ಧಾಮಾ, ನಾದ, ಮತ್ತು ಶ್ರವ ಇವರು ಮೊದಲನೆಯ ಅಮಿತಾಭದೇವಗಣದ ವ್ಯಕ್ತಿಗಳಾಗಿರುವರು.

೫೩. ಮತ್ತು ವೃತ್ತಿ, ರಾಶಿ, ವಾದ, ಶಬರ ಎಂಬುವರು ಸೇರಿ ಹಿಂದೆ ಹೇಳಿದ ಹದಿನಾಲ್ಕು ಮಂದಿಯು ಸ್ವಾರೋಚಿಷ ಮನ್ವಂತರದಲ್ಲಿ ಇದ್ದ ಅಮಿತಾಭ ಎಂಬ ಗಣದೇವರಾಗಿ ಸ್ಮರಿಸಲ್ಪಟ್ಟಿರುವರು.

೫೪. ಮತಿ, ಸುಮತಿ, ಋತ, ಸತ್ಯ, ಏಧನ, ಅಧೃತಿ, ವಿಧೃತಿ, ದಮ, ನಿಯಮ ಎಂಬುವರು ಆಭೂತರಯವೆಂಬ ಮತ್ತೊಂದು ಗಣದ ದೇವತೆಗಳು.

ವ್ರತೋ ವಿಷ್ಣುಃ ಸಹಶ್ಚೈವ ದ್ಯುತಿಮಾನ್ ಸುಶ್ರವಾಸ್ತಥಾ ।
ಇತ್ಯೇತಾನೀಹ ನಾಮಾನಿ ಆಭೂತರಯಸಾಂ ವಿದುಃ ॥ ೫೬ ॥

ವೃಷೋ ಭೇತ್ತಾ ಜಯೋ ಭೀಮಃ ಶುಚಿರ್ದಾಂತೋ ಯಶೋ ದಮಃ ।
ನಾಥೋ ವಿದ್ವಾನಜೇಯಶ್ಚ ಕೃಶೋ ಗೌರೋ ಧ್ರುವಸ್ತಥಾ ॥ ೫೭ ॥

ಕೀರ್ತಿತಾಸ್ತು ವಿಕುಂಠಾ ವೈ ಸುಮೇಧಾಂಸ್ತು ನಿಬೋಧತ ।
ಮೇಧಾ ಮೇಧಾತಿಥಿಶ್ಚೈವ ಸತ್ಯಮೇಧಾಸ್ತಥೈವ ಚ ॥ ೫೮ ॥

ಪೃಶ್ನಿಮೇಧಾಲ್ಪಮೇಧಾಶ್ಚ ಭೂಯೋಮೇಧಾಶ್ಚ ಯಃ ಪ್ರಭುಃ ।
ದೀಪ್ತಿಮೇಧಾ ಯಶೋಮೇಧಾ ಸ್ಥಿರಮೇಧಾಸ್ತಥೈವ ಚ ॥ ೫೯ ॥

ಸರ್ವಮೇಧಾ ಸುಮೇಧಾಶ್ಚ ಪ್ರತಿಮೇಧಾಶ್ಚ ಯಃ ಸ್ಮೃತಾಃ ।
ಮೇಧಜಾ ಮೇಧಹಂತಾ ಚ ಕೀರ್ತಿತಾಸ್ತೇ ಸುಮೇಧಸಃ ॥ ೬೦ ॥

---

೫೬. ಮತ್ತು ವ್ರತ, ವಿಷ್ಣು, ಸಹ, ದ್ಯುತಿಮಾನ್ ಮತ್ತು ಸುಶ್ರವ ಎಂಬುವರಿಂದ ಪೂರ್ವೋಕ್ತವಾದ ಆಭೂತರಯವೆಂಬ ದೇವಗಣದಲ್ಲಿ ಹದಿನಾಲ್ಕು ಮಂದಿಯೂ ಪೂರ್ಣರಾಗುವರು.

೫೭. ವೃಷಭೇತ್ತ, ಜಯ. ಭೀಮ, ಶುಚಿ, ದಾಂತ, ಯಶ, ದಮ, ನಾಥ, ವಿದ್ವಾ. ಅಜೇಯ, ಕೃಶ, ಗೌರ ಮತ್ತು ಧ್ರುವ ಇವರು ಮೂರನೆಯ ವೈಕುಂಠ ದೇವತಾಗಣವೆಂದು ತಿಳಿಯಬೇಕು.

೫೮. ಈ ರೀತಿಯಾಗಿ ವೈಕುಂಠ ದೇವತಾಗಣವು ಬೋಧಿಸಲ್ಪಟ್ಟಿದೆ. ಹಾಗೆ ಸುಮೇಧೋಗಣವನ್ನು ಕೇಳಿರಿ. ಮೇಧ, ಮೇಧಾತಿಥಿ, ಸತ್ಯಮೇಧರು ಸುಮೇಧೋ ಗಣದ ಕೆಲವು ವ್ಯಕ್ತಿಗಳು.

೫೯. ಹಾಗೆ ಪೃಶ್ನಿಮೇಧ, ಅಲ್ಪಮೇಧ, ಭೂಯೋಮೇಧ, ದೀಪ್ತಿಮೇಧ, ಯಶೋಮೇಧ ಮತ್ತು ಸ್ಥಿರಮೇಧ ಎಂಬ ಆರುಮಂದಿಯು ಆ ಗಣವನ್ನಲಂಕರಿಸಿರುವರು.

೬೦. ಸರ್ವಮೇಧ. ಸುಮೇಧ, ಪ್ರತಿಮೇಧ, ಮೇಧಜ, ಮತ್ತು ಮೇಧಹಂತ ಎಂಬುವರಿಂದ ಸೇರಿ ಹಿಂದೆ ವರ್ಣಿಸಿದ ಹದಿನಾಲ್ಕು ಮಂದಿ ದೇವತೆಗಳು ಸುಮೇಧೋಗಣವೆಂದು ಪಠಿಸಲ್ಪಟ್ಟಿರುವರು.

ವಿಭುರಿಂದ್ರಸ್ತಥಾ ತೇಷಾಮಾಸೀದ್ವಿಕ್ರಾಂತಪೌರುಷಃ ।
ಪೌಲಸ್ತ್ಯೋ ದೇವಬಾಹುಶ್ಚ ಸುಧಾಮಾ ನಾಮ ಕಾಶ್ಯಪಃ ॥ ೬೧ ॥

ಹಿರಣ್ಯರೋಮಾಂಗಿರಸೋ ವೇದಶ್ರೀಶ್ಚೈವ ಭಾರ್ಗವಃ ।
ಊರ್ಧ್ವಬಾಹುಶ್ಚ ವಾಸಿಷ್ಠಃ ಪರ್ಜನ್ಯಃ ಪೌಲಹಸ್ತಥಾ ॥ ೬೨ ॥

ಸತ್ಯನೇತ್ರಸ್ತಥಾತ್ರೇಯ ಋಷಯೋ ರೈವತೇಽಂತರೇ ।
ಮಹಾವೀರ್ಯಃ ಸುಸಂಭಾವ್ಯಃ ಸತ್ಯಕೋ ಹರಹಾ ಶುಚಿಃ ॥ ೬೩ ॥

ಬಲಬಂಧುರ್ನಿರಾಮಿತ್ರಃ ಕಂಬುಃ ಶೃಂಗೋ ಧೃತವವ್ರತಃ ।
ರೈವತಸ್ಯ ಚ ಪುತ್ರಾಸ್ತೇ ಪಂಚಮಂ ನ್ವೈ ತದಂತರಮ್ ॥ ೬೪ ॥

ಸ್ವಾರೋಚಿಷಶ್ಚೋತ್ತಮೋಽಪಿ ತಾಮಸೋ ರೈವತಸ್ತಥಾ ।
ಪ್ರಿಯವ್ರತಾನ್ವಯಾ ಹ್ಯೇತೇ ಚತ್ವಾರೋ ಮನವಃ ಸ್ಮೃತಾಃ ॥ ೬೫ ॥

---

೬೧. ಆ ದೇವಗಣಕ್ಕೆ ನಿರುಪಮವಾದ ವೀರ್ಯದಿಂದ ಕೂಡಿದ ಇಂದ್ರನು ರಾಜನಾಗಿದ್ದನು. ಪೌಲಸ್ತ್ಯ, ದೇವಬಾಹು, ಸುಧಾಮ, ಕಾಶ್ಯಪರೆಂಬ ಮುನಿಗಳು ಆ ಮನ್ವಂತರದಲ್ಲಿ ಪ್ರಸಿದ್ಧರಾದ ತಪಸ್ವಿಗಳಾಗಿದ್ದರು.

೬೨. ಹಿರಣ್ಯರೋಮ, ಅಂಗಿರಸ, ವೇದಶ್ರೀ, ಭಾರ್ಗವ, ಊರ್ಧ್ವಬಾಹು, ವಾಸಿಷ್ಠ, ಪರ್ಜನ್ಯ ಮತ್ತು ಪೌಲಹ—ಇವರು ಆ ಮನ್ವಂತರದ ಪ್ರಸಿದ್ಧರಾದ ಮುನಿಗಳು.

೬೩-೬೪. ಸತ್ಯನೇತ್ರ, ಆತ್ರೇಯರು ರೈವತ ಮನ್ವಂತರದ ಋಷಿವರ್ಗದಲ್ಲಿ ಪ್ರಸಿದ್ಧರಾದ ಮಹಾಮುನಿಗಳಾಗಿರುವರು. ಮಹಾವೀರ್ಯ, ಸುಸಂಭಾವ್ಯ, ಸತ್ಯಕ, ಹರಹ, ಶುಚಿ, ಬಲಬಂಧು, ನಿರಾಮಿತ್ರ, ಕಂಬು, ಶೃಂಗ, ಮತ್ತು ಧೃತವ್ರತ, ಎಂಬುವರು ಆ ಮನ್ವಂತರಾಧಿಪತಿಯಾದ ರೈವತನೆಂಬುವ ಮನುವಿಗೆ ಪುತ್ರರಾಗಿ ಜನಿಸಿದರು ಆ ಮನ್ವಂತರವು ಐದನೆಯದಾಗಿರುವುದು.

೬೫. ಸ್ವಾರೋಚಿಸ, ಉತ್ತಮ, ತಾಮಸ, ಮತ್ತು ರೈವತ ಎಂಬ ನಾಲ್ಕು ಮಂದಿ ಮನುರಾಜರು ಪ್ರಿಯವ್ರತ ರಾಜನ ವಂಶದಲ್ಲಿ ಹುಟ್ಟಿರುವರೆಂದು ಪ್ರಸಿದ್ಧರಾಗಿರುವರು.

ಷಷ್ಠೇ ಖಲ್ವಪಿ ಪರ್ಯಾಯೇ ದೇವಾ ಯೇ ಚಾಕ್ಷುಷೇಽಂತರೇ ।
ಆದ್ಯಾಃ ಪ್ರಸೂತಾ ಭಾವ್ಯಾಶ್ಚ ಪೃಥುಕಾಶ್ಚ ದಿವೌಕಸಃ ॥ ೧೬ ॥

ಮಹಾನುಭಾವಾ ಲೇಖಾಶ್ಚ ಪಂಚ ದೇವಗಣಾಃ ಸ್ಮೃತಾಃ ।
ದಿವೌಕಸಃ ಸರ್ವ ಏವ ಪ್ರೋಚ್ಯಂತೇ ಮಾತೃನಾಮಭಿಃ ॥ ೧೭ ॥

ಅತ್ರೇಃ ಪುತ್ರಸ್ಯ ನಪ್ತಾರೋ ಹ್ಯಾರಣ್ಯಸ್ಯ ಪ್ರಜಾಪತೇಃ ।
ಗಣಸ್ತು ತೇಷಾಂ ದೇವಾನಾಮೇಕೈಕೋ ಹ್ಯಷ್ಟಕಃ ಸ್ಮೃತಃ ॥ ೧೮ ॥

ಅಂತರಿಕ್ಷೋ ವಸುರ್ಹವ್ಯೋ ಹ್ಯತಿಥಿಶ್ಚ ಪ್ರಿಯವ್ರತಃ ।
ಶ್ರೋತಾ ಮಂತಾಽನುಮಂತಾ ಚ ತ್ವಾದ್ಯಾ ಹ್ಯೇತೇ ಪ್ರಕೀರ್ತಿತಾಃ ॥ ೧೯ ॥

ಶ್ಯೇನಭದ್ರಸ್ತಥಾ ಚೈವ ಶ್ವೇತಚಕ್ಷುರ್ಮಹಾಯಶಾಃ ।
ಸುಮನಾಶ್ಚ ಪ್ರಚೇತಾಶ್ಚ ವನೇನಃಸುಪ್ರಚೇತಸೌ ॥ ೨೦ ॥

---

೧೬. ಮುಂದೆ ಚಾಕ್ಷುಷಮನ್ವಂತರದ ಆರನೆಯ ಪರ್ಯಾಯದಲ್ಲಿ ಇದ್ದ ಮೊದಲನೆಯ ನಾಲ್ಕು ದೇವಗಣಗಳು ಆದ್ಯ, ಪ್ರಸೂತ, ಭಾವ್ಯ, ಮತ್ತು ಪೃಥುಕ, ಎಂದು ನಾಮಾಂಕಿತಗಳಾಗಿದ್ದವು.

೧೭. ಮತ್ತು ಮಹಾನುಭಾವರಾದ ಲೇಖ ಎಂಬ ದೇವತೆಗಳ ಗಣವೂ ಸೇರಿ ಆ ಮನ್ವಂತರದಲ್ಲಿ ಪಂಚ ದೇವಗಣಗಳು ಸ್ಮರಿಸಲ್ಪಟ್ಟಿವೆ. ಈ ಎಲ್ಲ ದೇವತೆಗಳು ಮಾತೃ ಎಂಬ ಹೆಸರಿನಿಂದ ವ್ಯವರಿಸಲ್ಪಡುತ್ತಾರೆ.

೧೮. ಅತ್ರಿ ಮುನಿಯ ಪುತ್ರನಾದ ಆರಣ್ಯ ಪ್ರಜಾಪತಿಯ ಪೌತ್ರರು ದೇವಾಧಿಕಾರವನ್ನು ಹೊಂದಿರುವರು. ಆ ದೇವತೆಗಳ ಒಂದೊಂದು ಗಣವು ಎಂಟುವ್ಯಕ್ತಿಗಳಿಂದ ಕೂಡಿಕೊಂಡಿದೆ.

೧೯. ಅಂತರಿಕ್ಷ, ವಸು, ಹವ್ಯ, ಅತಿಥಿ, ಪ್ರಿಯವ್ರತ, ಶ್ರೋತಾ, ಮಂತಾ ಮತ್ತು ಅನುಮಂತಾ, ಎಂಬ ನಾಮಾಂಕಿತರಾದ ಎಂಟು ಮಂದಿ ಆದ್ಯ ಎಂಬ ದೇವತೆಗಳೆಂದು ಕೀರ್ತಿಸಲ್ಪಟ್ಟಿರುವರು.

೨೦. ಶ್ಯೇನಭದ್ರ, ಶ್ವೇತಚಕ್ಷು, ಮಹಾಯಶ, ಸುಮನ, ಪ್ರಚೇತ, ವನೇನ ಸುಪ್ರಚೇತಸ, ಮತ್ತು ಮಹಾಸತ್ವ ಮುನಿ ಎಂಬ ಎಂಟುಮಂದಿಯು ಪ್ರಸೂತರೆಂಬ ದೇವಗಣವೆಂದು ಪ್ರಸಿದ್ಧರಾಗಿರುವರು.

ಮುನಿಶ್ಚೈವ ಮಹಾಸತ್ತ್ವಃ ಪ್ರಸೂತಾಃ ಪರಿಕೀರ್ತಿತಾಃ ।
ವಿಜಯಃ ಸುಜಯಶ್ಚೈವ ಮನಸ್ಯೋದೌ ತಥೈವ ಚ ॥ ೭೧ ॥

ಮತಿಃ ಪರಿಮತಿಶ್ಚೈವ ವಿಚೇತಾಃ ಪ್ರಿಯನಿಶ್ಚಯಃ ।
ಭವ್ಯಾ ಹ್ಯೇತೇ ಸ್ಮೃತಾ ದೇವಾಃ ಪೃಥುಕಾಂಶ್ಚ ನಿಬೋಧತ ॥ ೭೨ ॥

ಓಜಿಷ್ಠಃ ಶಕುನೋ ದೇವೋ ವಾನಹೃಷ್ಟಸ್ತಥೈವ ಚ ।
ಸತ್ಕೃತಃ ಸತ್ಯದೃಷ್ಟಿಶ್ಚ ಜಿಗೀಷುರ್ವಿಜಯಸ್ತಥಾ ॥ ೭೩ ॥

ಅಜಿತಶ್ಚ ಮಹಾಭಾಗಃ ಪೃಥುಕಾಸ್ತೇ ದಿವೌಕಸಃ ।
ಲೇಖಾಂಸ್ತಥಾ ಪ್ರವಕ್ಷ್ಯಾಮಿ ನಾಮತಸ್ತಾನ್ನಿಬೋಧತ ॥ ೭೪ ॥

ಮನೋಜವಃ ಪ್ರಘಾಸಶ್ಚ ಪ್ರಚೇತಾಶ್ಚ ಮಹಾಯಶಾಃ ।
ಧ್ರುವೋ ಧ್ರುವಕ್ಷಿತಿಶ್ಚೈವ ಅಚ್ಯುತಶ್ಚೈವ ವೀರ್ಯವಾನ್ ॥ ೭೫ ॥

---

೭೧. ವಿಜಯ, ಸುಜಯ, ಮನ, ಸ್ಯೋದ, ಎಂಬ ನಾಲ್ಕು ಮಂದಿಯು ಮುಂದಿನ ಗಣದ ದೇವತೆಗಳಾಗಿ ಸೇರಿರುವರು.

೭೨. ಮತಿ, ಪರಿಮತಿ, ವಿಚೇತ, ಪ್ರಿಯನಿಶ್ಚಯ ಎಂಬ ನಾಲ್ಕು ಮಂದಿಯು ಸೇರಿ ಹಿಂದೆ ಹೇಳಿದ ಎಂಟು ದೇವತೆಗಳು ಭವ್ಯ ಗಣದೇವತೆಗಳೆಂದು ಕೀರ್ತಿಸಲ್ಪಟ್ಟಿರುವರು. ಮುಂದೆ ಪೃಥುಕ ಎಂಬ ದೇವಗಣವನ್ನು ಕೇಳಿರಿ.

೭೩. ಓಜಿಷ್ಠ ಶಕುನ, ವಾನಹೃಷ್ಟ, ಸತ್ಕೃತ, ಸತ್ಯದೃಷ್ಟಿ, ಜಿಗೀಷು, ಮತ್ತು ವಿಜಯ, ಎಂಬುವರು ಆಪೃಥುಕ ಗಣಕ್ಕೆ ಸೇರಿದ ಏಳು ಮುಂದಿಯು.

೭೪. ಹಾಗೆ ಮಹಾತ್ಮನಾದ ಅಜಿತನು ಸೇರಿ ಎಂಟು ಮಂದಿಯು ಪೃಥುಕರೆಂಬ ಗಣ್ಯರಾದ ದೇವತೆಗಳು. ಮುಂದೆ ಲೇಖ ಎಂಬ ದೇವಗಣದ ಹೆಸರನ್ನು ವರ್ಣಿಸುತ್ತೇನೆ, ಕೇಳಿರಿ.

೭೫. ಮನೋಜವ, ಪ್ರಘಾಸ ಪ್ರಚೇತ, ಧ್ರುವಕ್ಷಿತಿ, ಅಚ್ಯುತ, ಎಂಬುವರು ಯಶಸ್ವಿಗಳೂ ಮತ್ತು ವೀರ್ಯಶಾಲಿಗಳೂ ಆದ ಲೇಖಗಣದ ದೇವತೆಗಳಾಗಿರುವರು.

ಯುವನಾ ಬೃಹಸ್ಪತಿಶ್ಚೈವ ಲೇಖಾಃ ಸಂಪರಿಕೀರ್ತಿತಾಃ ।
ಮನೋಜವೋ ಮಹಾವೀರ್ಯಸ್ತೇಷಾಮಿಂದ್ರಸ್ತದಾಭವತ್ ॥ ೭೬ ॥

ಉತ್ತಮೋ ಭಾರ್ಗವಶ್ಚೈವ ಹವಿಷ್ಮಾನಂಗಿರಃಸುತಃ ।
ಸುಧಾಮಾ ಕಾಶ್ಯಪಶ್ಚೈವ ವಸಿಷ್ಠೋ ವಿರಜಾಸ್ತಥಾ ॥ ೭೭ ॥

ಅತಿನಾಮಾ ಚ ಪೌಲಸ್ತ್ಯಃ ಸಹಿಷ್ಣುಃ ಪೌಲಹಸ್ತಥಾ ।
ಮಧುರಾತ್ರೇಯ ಇತ್ಯೇತೇ ಸಪ್ತ ವೈ ಚಾಕ್ಷುಷೇಽಂತರೇ ॥ ೭೮ ॥

ಊರುಃ ಪುರುಃ ಶತದ್ಯುಮ್ನಸ್ತಪಸ್ವೀ ಸತ್ಯವಾಕ್ಕೃತಿಃ ।
ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚೇತಿ ತೇ ನವ ॥ ೭೯ ॥

ಅಭಿಮನ್ಯುಶ್ಚ ದಶಮೋ ನಾಡ್ವಲೇಯಾ ಮನೋಃ ಸುತಾಃ ।
ಚಾಕ್ಷುಷಸ್ಯ ಸುತಾ ಹ್ಯೇತೇ ಷಷ್ಠಂ ಚೈವ ತದಂತರಮ್ ॥ ೮೦ ॥

---

೭೬. ಯುವನ, ಬೃಹಸ್ಪತಿ, ಎಂಬ ಈರ್ವರಿಂದ ಕೂಡಿ ಆ ಲೇಖ ದೇವತೆಗಳು ಎಂಟು ಮಂದಿಯೆಂದು ಸ್ಮರಿಸಲ್ಪಟ್ಟಿರುವರು. ಅವರಲ್ಲಿ ಮಹಾ ವೀರ್ಯಸಂಪನ್ನನಾದ ಮನೋಜವನು ದೇವೇಂದ್ರನಾಗಿದ್ದನು.

೭೭-೭೮. ಈ ಚಾಕ್ಷುಷ ಮನ್ವಂತರದಲ್ಲಿ ಭೃಗುಪುತ್ರನಾದ ಉತ್ತಮ, ಅಂಗಿರೋ ಮುನಿಯ ಪುತ್ರನಾದ ಹವಿಷ್ಮಾನ್, ಕಶ್ಯಪ ಪುತ್ರನಾದ ಸುಧಾಮ, ವಸಿಷ್ಠ ಪುತ್ರನಾದ ವಿರಜ, ಪುಲಸ್ತ್ಯ ಪುತ್ರನಾದ ಅತಿನಾಮ, ಪುಲಹ ಪ್ರಜಾಪ್ರತಿ ಪುತ್ರನಾದ ಸಹಿಷ್ಣು, ಮತ್ತು ಅತ್ರಿಮುನಿಯ ಪುತ್ರನಾದ ಮಧು ಎಂಬ ಏಳು ಮಂದಿ ಸಪ್ತರ್ಷಿಗಳಾಗಿದ್ದರು

೭೯. ಊರು, ಪುರು, ಶತದ್ಯುಮ್ನ, ತಪಸ್ವಿ, ಸತ್ಯವಾಕ್, ಕೃತಿ, ಅಗ್ನಿಷ್ಟುತ್, ಅತಿರಾತ್ರ, ಸುದ್ಯುಮ್ನ—ಈ ಒಂಭತ್ತು ಮಂದಿಯು ಆ ಮನುವಿಗೆ ಜನಿಸಿದ ಪುತ್ರರಲ್ಲಿ ಸೇರಿದವರು.

೮೦. ಮತ್ತು ಹತ್ತನೆಯ ಅಭಿಮನ್ಯುವೆಂಬ ಪುತ್ರನೂ ಸೇರಿ ಈ ಹತ್ತು ಮಂದಿಯು ನಡ್ವಲಾ ಎಂಬ ತಾಯಿಯ ಸಂಬಂಧದಿಂದ ನಾಡ್ವಲೇಯರೆಂದು ಪ್ರಸಿದ್ಧರಾದ ಚಾಕ್ಷುಷಮನುವಿನ ಪುತ್ರರಾಗಿರುವರು. ಈ ಮನ್ವಂತರವು ಪರ್ಯಾಯದಲ್ಲಿ ಆರನೆಯದಾಗಿ ಗಣಿಸಲ್ಪಟ್ಟಿದೆ.

**ವೈವಸ್ವತೇನ ಸಂಖ್ಯಾತಸ್ತತ್ಸರ್ಗಃ ಸಾಂಪ್ರತೇನ ತು ।**
**ವಿಸ್ತರೇಣಾನುಪೂರ್ವ್ಯಾ ಚ ಚಾಕ್ಷುಷಸ್ಯಾಂತರೇ ಮನೋಃ ॥ ೮೧ ॥**

**ಋಷಯ ಊಚುಃ :—**

**ಚಾಕ್ಷುಷಃ ಕಸ್ಯ ದಾಯಾದಃ ಸಂಭೂತಃ ಕಸ್ಯ ವಾನ್ವಯೇ ।**
**ತಸ್ಯಾನ್ವವಾಯೇ ಯೇಽಪ್ಯನ್ಯೇ ತಾನ್ನೋ ಬ್ರೂಹಿ ಯಥಾತಥಮ್ ॥ ೮೨ ॥**

**ಸೂತ ಉವಾಚ :—**

**ಚಾಕ್ಷುಷಸ್ಯ ವಿಸರ್ಗಂ ತು ಸಮಾಸಾಚ್ಛೃಣುತ ದ್ವಿಜಾಃ ।**
**ಯಸ್ಯಾನ್ವವಾಯೇ ಸಂಭೂತಃ ಪೃಥುರ್ವೈನ್ಯಃ ಪ್ರತಾಪವಾನ್ ॥ ೮೩ ॥**

**ಪ್ರಜಾನಾಂ ಪತಯಃ ಶ್ಚಾನ್ಯೇ ದಕ್ಷಃ ಪ್ರಾಚೇತಸಸ್ತಥಾ**
**ಉತ್ತಾನಪಾದಂ ಜಗ್ರಾಹ ಪುತ್ರಮತ್ರಿಪ್ರಜಾಪತಿಃ ॥ ೮೪ ॥**

---

೮೧. ಈ ಚಾಕ್ಷುಷಮನುವಿನ ಮನ್ವಂತರದಲ್ಲಿ ಇರುವ ಪ್ರಜಾಸೃಷ್ಟಿಯ ವಿಸ್ತಾರ ಮತ್ತು ಅನುಪೂರ್ವಿಗಳು ವರ್ತಮಾನವಾದ ವೈವಸ್ವತ ಮನ್ವಂತರಕ್ಕೆ ತುಲ್ಯವಾದುವುಗಳೆಂದು ತಿಳಿಯಬೇಕು.

ಈ ಕಥಾನಕವನ್ನು ಕೇಳಿದ ಮಹರ್ಷಿಗಳು ಪ್ರಶ್ನೆ ಮಾಡಿದರು:—

೮೨. ಮುನಿಯೇ! ಚಾಕ್ಷುಷನೆಂಬ ಮುನಿಯು ಯಾರಿಗೆ ದಾಯಾದನು? ಯಾರ ವಂಶದಲ್ಲಿ ಹುಟ್ಟಿದವನು? ಮತ್ತು ಅವರ ವಂಶದಲ್ಲಿ ಇತರರು ಯಾರು ಹುಟ್ಟಿರುವರು? ಎಂಬುದನ್ನು ಹಿಂದೆ ನಡೆದಂತೆ ನಮಗೆ ಹೇಳಬೇಕು.

ಸೂತಮುನಿಯು ಹೀಗೆ ಪ್ರತ್ಯುತ್ತರವಿತ್ತನು :—

೮೩. ದ್ವಿಜರೇ! ಚಾಕ್ಷುಷಮನುವಿನ ಪ್ರಜಾಸೃಷ್ಟಿಯನ್ನು ಸಂಗ್ರಹವಾಗಿ ಕೇಳಿರಿ. ಆ ಚಾಕ್ಷುಷಮನುವಿನ ವಂಶದಲ್ಲಿ ಪ್ರತಾಪಶಾಲಿಯಾದ ವೇನರಾಜನ ಪುತ್ರನಾದ ಪೃಥುರಾಜನು ಹುಟ್ಟಿರುವನು.

೮೪. ಮತ್ತು ದಕ್ಷ, ಪ್ರಾಚೇತಸ, ಮುಂತಾದ ಪ್ರಜಾಪತಿಗಳು ಆ ವಂಶದಲ್ಲಿ ಹುಟ್ಟಿರುವರು. ಅವರಲ್ಲಿ ಅತ್ರಿ ಪ್ರಜಾಪತಿಯು ಉತ್ತಾನಪಾದನನ್ನು ಪುತ್ರನನ್ನಾಗಿ ಪರಿಗ್ರಹಿಸಿದನು.

ದತ್ತಕಃ ಸ ತು ಪುತ್ರೋಽಸ್ಯ ರಾಜಾ ಹ್ಯಾಸೀತ್ ಪ್ರಜಾಪತಿಃ ।
ಸ್ವಾಯಂಭುವೇನ ಮನುನಾ ದತ್ತೋಽತ್ರೇಃ ಕಾರಣಂ ಪ್ರತಿ ॥ ೮೫ ॥

ಮನ್ವಂತರಮಥಾಸಾದ್ಯ ಭವಿಷ್ಯಚ್ಚಾಕ್ಷುಷಸ್ಯ ಹ ।
ಷಷ್ಠಂ ತದನು ವಕ್ಷ್ಯಾಮಿ ಉಪೋದ್ಘಾತೇನ ವೈ ದ್ವಿಜಾಃ ॥ ೮೬ ॥

ಉತ್ತಾನಪಾದಾಚ್ಚತುರಃ ಸೂನೃತಾಽಸೂತ ಭಾಮಿನೀ ।
ಧರ್ಮಸ್ಯ ಕನ್ಯಾ ಸುಶ್ರೋಣೀ ಸೂನೃತಾ ನಾಮ ವಿಶ್ರುತಾ ॥ ೮೭ ॥

ಉತ್ಪನ್ನಾ ಚಾಪಿ ಧರ್ಮೇಣ ಧ್ರುವಸ್ಯ ಜನನೀ ಶುಭಾ ।
ಧರ್ಮಸ್ಯ ಪುತ್ರ್ಯಾಂ ಲಕ್ಷ್ಮ್ಯಾಂ ವೈ ಉತ್ಪನ್ನಾ ಸಾ ಶುಚಿಸ್ಮಿತಾ ॥ ೮೮ ॥

ಧ್ರುವಂ ಚ ಕೀರ್ತಿಮಂತಂ ಚ ತ್ವಾಯುಷ್ಮಂತಂ ವಸುಂ ತಥಾ ।
ಉತ್ತಾನಪಾದೋಽಜನಯತ್ ಕನ್ಯೇ ದ್ವೇ ಚ ಶುಚಿಸ್ಮಿತೇ ॥ ೮೯ ॥

---

೮೫. ಸ್ವಾಯಂಭುವ ಮನುವಿನಿಂದ ಅತ್ರಿಪ್ರಜಾಪತಿಗೆ ಒಂದಾನೊಂದು ಕಾರಣದಿಂದ ದತ್ತನಾಗಿರುವ ಉತ್ತಾನಪಾದರಾಜನು ಅತ್ರಿಮುನಿಗೆ ದತ್ತಕ ಪುತ್ರನಾದನು.

೮೬. ದ್ವಿಜರೇ! ಚಾಕ್ಷುಷಮನ್ವಂತರದ ತರುವಾಯ ಸಂಭವಿಸುವ ಆರನೆಯದಾದ ಮನ್ವಂತರವನ್ನು ಉಪೋದ್ಘಾತ ಸಹಿತವಾಗಿ ವರ್ಣಿಸುವೆನು.

೮೭. ಧರ್ಮಪ್ರಜಾಪತಿಯ ಕನ್ಯೆಯೂ, ಸುಂದರಿಯೂ, ಸೂನೃತಾ ಎಂಬ ಸಂಜ್ಞೆಯಿಂದ ಪ್ರಸಿದ್ಧಳೂ, ಆದ ಉತ್ತಾನಪಾದರಾಜನ ಪತ್ನಿಯು ನಾಲ್ಕು ಪುತ್ರರನ್ನು ಪ್ರಸವಿಸಿದಳು.

೮೮. ಧ್ರುವನ ಜನನಿಯೂ, ಮಂಗಳಕರಳೂ, ಸ್ವಚ್ಛವಾದ ಮಂದಹಾಸವುಳ್ಳವಳೂ ಆದ ಸೂನೃತಾದೇವಿಯು ಧರ್ಮಪ್ರಜಾಪತಿಯ ಪತ್ನಿಯಾದ ಲಕ್ಷ್ಮೀದೇವಿಯಲ್ಲಿ ಹುಟ್ಟಿರುವಳು.

೮೯. ಅವಳು ಧ್ರುವ, ಕೀರ್ತಿಮಂತ, ಆಯುಷ್ಮಂತ, ಮತ್ತು ವಸು ಎಂಬ ನಾಲ್ಕು ಪುತ್ರರನ್ನು ಪ್ರಸವಿಸಿದಳು. ಮತ್ತು ಉತ್ತಾನಪಾದ ರಾಜನಿಗೆ ಸೌಂದರ್ಯದಿಂದ ರಾಜಿಸುವ ಇಬ್ಬರು ಕನ್ಯೆಯರು ಹುಟ್ಟಿದರು.

ಸ್ವರಾ ಮನಸ್ವಿನೀ ಚೈವ ತಯೋಃ ಪುತ್ರಾಃ ಪ್ರಕೀರ್ತಿತಾಃ ।
ಧ್ರುವೋ ವರ್ಷಸಹಸ್ರಾಣಿ ದಶ ದಿವ್ಯಾನಿ ವೀರ್ಯವಾನ್ ॥ ೯೦ ॥

ತಪಸ್ತೇಪೇ ನಿರಾಹಾರಃ ಪ್ರಾರ್ಥಯನ್ ವಿಪುಲಂ ಯಶಃ ।
ತ್ರೇತಾಯುಗೇ ತು ಪ್ರಥಮೇ ಪೌತ್ರಃ ಸ್ವಾಯಂಭುವಸ್ಯ ತು ॥ ೯೧ ॥

ಆತ್ಮಾನಂ ಧಾರಯನ್ ಯೋಗಾತ್ ಪ್ರಾರ್ಥಯನ್ ಸುಮಹದ್ಯಶಃ ।
ತಸ್ಮೈ ಬ್ರಹ್ಮಾ ದದೌ ಪ್ರೀತೋ ಜ್ಯೋತಿಷಾಂ ಸ್ಥಾನಮುತ್ತಮಮ್ ॥ ೯೨ ॥

ಆಭೂತಸಂಪ್ಲವಾದ್ದಿವ್ಯಮಸ್ತೋದಯವಿವರ್ಜಿತಮ್ ।
ತಸ್ಯಾತಿಮಾತ್ರಾಮೃದ್ಧಿಂ ಚ ಮಹಿಮಾನಂ ನಿರೀಕ್ಷ್ಯ ತು ॥ ೯೩ ॥

ದೈತ್ಯಾಸುರಾಣಾಮಾಚಾರ್ಯಃ ಶ್ಲೋಕಮಪ್ಯುಶನಾ ಜಗೌ ।
ಅಹೋಽಸ್ಯ ತಪಸೋ ವೀರ್ಯಮಹೋ ಶ್ರುತಮಹೋ ವ್ರತಮ್ ॥ ೯೪ ॥

---

೯೦. ಆ ಕನ್ಯೆಯರು ಸ್ವರಾ, ಮನಸ್ವಿನಿ, ಎಂಬ ಪವಿತ್ರನಾಮವನ್ನು ಹೊಂದಿದ್ದರು. ಅವರಿಗೆ ಅನೇಕ ಪುತ್ರರು ಜನಿಸಿ ವಂಶವನ್ನು ಅಭಿವೃದ್ಧಿಮಾಡಿದರು. ಬಲಶಾಲಿಯಾದ ಧ್ರುವನು ಹತ್ತು ಸಹಸ್ರ ದೇವಮಾನದ ವರ್ಷಗಳ ವರೆಗೆ ಮಹತ್ತರವಾದ ತಪಸ್ಸನ್ನು ಆಚರಿಸಿದನು.

೯೧. ಆದಿಯಾದ ತ್ರೇತಾಯುಗದಲ್ಲಿ ಸ್ವಾಯಂಭುವನ ಪೌತ್ರನಾದ ಧ್ರುವನು ವಿಸ್ತಾರವಾದ ಕೀರ್ತಿಯನ್ನು ಪ್ರಾರ್ಥಿಸಿ ನಿರಾಹಾರನಾಗಿ ಮಹಾ ತಪಸ್ಸನ್ನು ಮಾಡಿದನು.

೯೨. ಅವನು ಯೋಗಾಭ್ಯಾಸದಿಂದ ಆತ್ಮವನ್ನು ಧರಿಸಿದವನಾಗಿ ಮಹಾ ಯಶಸ್ಸನ್ನು ಹೊಂದಬೇಕೆಂಬ ಆಕಾಂಕ್ಷೆಯಿಂದ ತಪಸ್ಸನ್ನು ಮಾಡಲಾಗಿ ಬ್ರಹ್ಮನು ಸಂತುಷ್ಟನಾಗಿ ಅವನಿಗೆ ಉತ್ತಮವಾದ ತೇಜೋಮಂಡಲದ ಸ್ಥಾನವನ್ನು ಅನುಗ್ರಹಿಸಿದನು.

೯೩. ಆ ಸ್ಥಾನವು ಪ್ರಳಯಪರ್ಯಂತವಾಗಿಯೂ ಅಸ್ತ ಮತ್ತು ಉದಯಗಳಿಂದ ವರ್ಜಿತವಾಗಿ ದಿವ್ಯವಾದುದಾಗಿತ್ತು. ಆ ಸ್ಥಾನದ ಲೋಕಾತೀತವಾದ ಸಮೃದ್ಧಿ ಮತ್ತು ಮಹಿಮೆಗಳು ಅತಿಶಯವಾಗಿದ್ದುವು.

೯೪. ಇವುಗಳನ್ನು ಕಂಡು ದೈತ್ಯರ ಗುರುವಾದ ಶುಕ್ರಾಚಾರ್ಯನು ಶ್ಲೋಕ

21

ಕೃತ್ವಾ ಯದೇನಮುಪರಿ ಧ್ರುವಂ ಸಪ್ತರ್ಷಯಃ ಸ್ಥಿತಾಃ ।
ಧ್ರುವೇ ತ್ರಿದಿವಮಾಸಕ್ತಮೀಶ್ವರಃ ಸ ದಿವಸ್ಪತಿಃ ॥ ೯೫ ॥

ಧ್ರುವಾತ್ ಸೃಷ್ಟಿಂ ಚ ಭವ್ಯಂ ಚ ಭೂಭಿಸ್ತ್ರೌ ಸುಷುವೇ ನೃಪೌ ।
ಸ್ವಾಂ ಛಾಯಾಮಾಹ ಸ್ವೈ ಸೃಷ್ಟಿರ್ಭವ ನಾರೀತಿ ತಾಂ ಪ್ರಭುಃ ॥ ೯೬ ॥

ಸತ್ಯಾಭಿವ್ಯಾಹೃತೇಸ್ತಸ್ಯ ಸದ್ಯಃ ಸ್ತ್ರೀ ಸಾಽಭವತ್ತದಾ ।
ದಿವ್ಯಸಂಹನನಾ ಛಾಯಾ ದಿವ್ಯಾಭರಣಭೂಷಿತಾ ॥ ೯೭ ॥

ಛಾಯಾಯಾಂ ಸೃಷ್ಟಿರಾಧತ್ತ ಪಂಚ ಪುತ್ರಾನಕಲ್ಮಷಾನ್ ।
ಪ್ರಾಚೀನಗರ್ಭಂ ವೃಷಭಂ ವೃಷಂ ಚ ವೃಕಲಂ ಧೃತಿಮ್ ॥ ೯೮ ॥

ಪತ್ನೀ ಪ್ರಾಚೀನಗರ್ಭಸ್ಯ ಸುವರ್ಚಾ ಸುಷುವೇ ನೃಪಮ್ ।
ನಾಮ್ನೋದಾರಧಿಯಂ ಪುತ್ರಮಿಂದ್ರೋ ಯಃ ಪೂರ್ವಜನ್ಮನಿ ॥ ೯೯ ॥

---

ರೂಪವಾಗಿ ವರ್ಣಿಸಿರುವನು. ಈ ಧ್ರುವನು ಆಚರಿಸಿದ ತಪಸ್ಸಿನ ಮಹಿಮೆ, ಅವನ ವೇದಶಾಸ್ತ್ರ ಪರಿಜ್ಞಾನ ಮತ್ತು ವ್ರತನಿಯಮಗಳು ಅತ್ಯಾಶ್ಚರ್ಯಕರವಾದುವುಗಳು.

೯೫. ಸಪ್ತರ್ಷಿಗಳು ಈ ಮಹಿಮೆಯಿಂದ ಧ್ರುವನನ್ನು ಮೇಲಿರಿಸಿಪುರಸ್ಕಾರ ಮಾಡಿ ತಾವು ವಾಸಮಾಡಿರುವರು. ಧ್ರುವಮಂಡಲದಲ್ಲಿ ಸ್ವರ್ಗವು ಅಧೀನವಾಗಿರುವುದು. ಅಂತಹ ಸ್ವರ್ಗಕ್ಕೆ ಧ್ರುವನು ಈಶ್ವರನು.

೯೬. ಧ್ರುವನಿಂದ ಧ್ರುವ ಪತ್ನಿಯಾದ ಭೂಭಿ ಎಂಬುವಳು ಸೃಷ್ಟಿ, ಭವ್ಯ ಎಂಬ ರಾಜರಾದ ಇಬ್ಬರು ಪುತ್ರರನ್ನು ಹೊಂದಿದಳು. ಅವರಲ್ಲಿ ಸೃಷ್ಟಿ ಎಂಬುವನು ತನ್ನ ಛಾಯೆಯನ್ನು ನೋಡಿ ನಾರಿಯಾಗೆಂದು ನುಡಿದನು.

೯೭. ಅವನ ಸತ್ಯಸಂಕಲ್ಪದಿಂದ ಕೂಡಿದ ವಚನದಿಂದ ಆ ಛಾಯೆಯು ಕೂಡಲೇ ಸ್ತ್ರೀ ರೂಪಿಣಿಯಾದಳು ಛಾಯೆಯು ದಿವ್ಯಾಕೃತಿಯು ದಿವ್ಯವಾದ ಆಭರಣಗಳಿಂದ ಅಲಂಕರಿಸಿ ಶೋಭಾಯಮಾನವಾಗಿತ್ತು.

೯೮. ಸೃಷ್ಟಿಯು ಆ ಛಾಯೆಯೆಂಬ ಪತ್ನಿಯಲ್ಲಿ ಪ್ರಾಚೀನಗರ್ಭ, ವೃಷಭ, ವೃಕ, ವೃಕಲ, ಧೃತಿ, ಎಂಬ ನಿಷ್ಕಳಂಕರಾದ ಐದು ಜನ ಪುತ್ರರನ್ನು ಹೊಂದಿದಳು.

೯೯. ಪ್ರಾಚೀನಗರ್ಭನ ಸುವರ್ಚಾ ಎಂಬ ಧರ್ಮಪತ್ನಿಯು ಪೂರ್ವ ಜನ್ಮದಲ್ಲಿ ಇಂದ್ರ ಪದವಿ ಹೊಂದಿದ್ದ ಉದಾರಧೀ ಎಂಬ ಪುತ್ರನನ್ನು ಪ್ರಸವಿಸಿದಳು.

**ಸಂವತ್ಸರಸಹಸ್ರಾಂತೇ ಸಕೃದಾಹಾರಮಾಹರನ್ ।**
**ಏವಂ ಮನ್ವಂತರಂ ಯುಕ್ತ ಇಂದ್ರತ್ವಂ ಪ್ರಾಪ್ತವಾನ್ ಪ್ರಭುಃ**
**॥ ೧೦೦ ॥**

**ಉದಾರಧೇಃ ಸುತಂ ಭದ್ರಾಽಜನಯತ್ ಸಾ ದಿವಂಜಯಮ್ ।**
**ರಿಪುಂ ರಿಪುಂಜಯಾಚ್ಚಜ್ಞೇ ವರಾಂಗೀ ತು ದಿವಂಜಯಾತ್ ॥ ೧೦೧ ॥**

**ರಿಪೋರಾಧತ್ತ ಬೃಹತೀ ಚಕ್ಷುಷಂ ಸರ್ವತೇಜಸಮ್ ।**
**ತಸ್ಯ ಪುತ್ರೋ ಮನುರ್ವಿದ್ವಾನ್ ಬ್ರಹ್ಮಕ್ಷತ್ರಪ್ರವರ್ತಕಃ**
**ವ್ಯಜೀಜನತ್ ಪುಷ್ಕರಿಣೀ ವಾರುಣೀ ಚಾಕ್ಷುಷಂ ಮನುಮ್ ॥ ೧೦೨ ॥**

**ಋಷಯ ಊಚುಃ :—**

**ಪ್ರಜಾಪತೇಃ ಸುತಾ ಕಸ್ಮಾದ್ವಾರುಣೀ ಪ್ರೋಚ್ಯತೇಽನಘ**
**ಏತದಾಚಕ್ಷ್ವ ತತ್ತ್ವೇನ ಕುಶಲೋ ಹ್ಯಸಿ ವಿಸ್ತರೇ ॥ ೧೦೩ ॥**

---

೧೦೦. ಅವನು ಒಂದು ಸಹಸ್ರ ಸಂವತ್ಸರಗಳ ಅವಸಾನದಲ್ಲಿ ಒಂದು ಸಲ ಆಹಾರವನ್ನು ಸ್ವೀಕರಿಸುತ್ತ ಕಠಿಣವಾದ ತಪಸ್ಸನ್ನು ಆ ಮನ್ವಂತರದಲ್ಲಿ ಆಚರಿಸಿ ಇಂದ್ರ ಪದವಿಯನ್ನು ಹೊಂದಿ ಪ್ರಭುವಾದನು.

೧೦೧. ಆ ಉದಾರಧೀ ಎಂಬುವನ ಮಂಗಳಶೀಲಳಾದ ಪತ್ನಿಯು ದಿವಂಜಯ ನೆಂಬ ಪುತ್ರನನ್ನೂ ಶತ್ರುನಿಗ್ರಹತತ್ಪರನಾದ ಆ ದಿವಂಜಯನ ಪತ್ನಿಯು ರಿಪು ಎಂಬ ಪುತ್ರನನ್ನೂ ಹೊಂದಿದರು.

೧೦೨. ರಿಪುವಿಗೆ ಬೃಹತಿ ಎಂಬ ಪತ್ನಿಯಲ್ಲಿ ಸರ್ವ ತೇಜಸ್ಸುಗಳಿಂದ ಪೂರ್ಣ ನಾದ ಚಕ್ಷು ಎಂಬ ಪುತ್ರನು ಜನಿಸಿದನು. ಆ ಚಕ್ಷು ಎಂಬುವನಿಗೆ ವಾರುಣಿ ಅಥವಾ ಪುಷ್ಕರಿಣಿ ಎಂಬ ಪತ್ನಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ ಮುಂತಾದ ಮಾನವ ಪ್ರಜೆಗಳಿಗೆ ಪ್ರವರ್ತಕನೂ, ಜ್ಞಾನಿಯೂ ಆದ ಚಾಕ್ಷುಷನೆಂಬ ಮನುವು ಪುತ್ರನಾಗಿ ಜನಿಸಿದನು.

೧೦೩. ಋಷಿಗಳು ಮತ್ತೆ ಪ್ರಶ್ನೆ ಮಾಡಿದರು. ಮುನಿಯೇ! ಪ್ರಜಾಪತಿಯ ಪುತ್ರಿಯು ವಾರುಣಿ ಎಂಬ ಹೆಸರಿನಿಂದ ಏಕೆ ಕರೆಯಲ್ಪಡುವಳು ? ಇದರ ತತ್ತ್ವವನ್ನು ಉಪದೇಶಿಸಬೇಕು, ಇದನ್ನು ವರ್ಣಿಸುವುದರಲ್ಲಿ ನೀನು ಕುಶಲನಾಗಿದ್ದೀ.

**ಸೂತ ಉವಾಚ:—**

**ಅರಣ್ಯಸ್ಯೋದಕಃ ಪುತ್ರೋ ವರುಣತ್ವಮುಪಾಗತಃ ।**
**ತೇನ ಸಾ ವಾರುಣೀ ಚ್ಛ್ಲೇಯಾ ಭ್ರಾತ್ರಾ ಖ್ಯಾತಿಮುಪಾಗತಾ ॥ ೧೦೪ ॥**

**ಮನೋರಜಾಯಂತ ದಶ ನಡ್ವಲಾಯಾಂ ಸುತಾಃ ಶುಭಾಃ ।**
**ಕನ್ಯಾಯಾಂ ಸುಮಹಾವೀರ್ಯಾ ವಿರಜಸ್ಯ ಪ್ರಜಾಪತೇಃ ॥ ೧೦೫ ॥**

**ಊರುಃ ಪುರುಃ ಶತದ್ಯುಮ್ನಸ್ತಪಸ್ವೀ ಸತ್ಯವಾಕ್ಕೃತಿಃ ।**
**ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚೇತಿ ವೈ ನವ ॥ ೧೦೬ ॥**

**ಅಭಿಮನ್ಯುಶ್ಚ ದಶಮೋ ನಡ್ವಲಾಯಾಂ ಮನೋಃ ಸುತಾಃ ।**
**ಊರೋರಜನಯತ್ ಪುತ್ರಾನ್ ಷಡಾಗ್ನೇಯೀ ಮಹಾಪ್ರಭಾನ್ ॥ ೧೦೭ ॥**

**ಅಂಗಂ ಸುಮನಸಂ ಖ್ಯಾತಿಂ ಗಯಂ ಶುಕ್ರಂ ವ್ರಜಾಜಿನೌ ।**
**ಅಂಗಾತ್ ಸುನೀಥಾಪತ್ಯಂ ವೈ ವೇನಮೇಕಂ ವ್ಯಜಾಯತ ॥ ೧೦೮ ॥**

---

೧೦೪. ಸೂತಮುನಿಯು ಇಂತೆಂದನು :—ಅರಣ್ಯ ಪ್ರಜಾಪತಿಯ ಉದಕನೆಂಬ ಪುತ್ರನು ವರುಣತ್ವವನ್ನು ಹೊಂದಿರುವುದರಿಂದ ಆ ಸಹೋದರನ ವರುಣ ಎಂಬ ಹೆಸರಿನ ನಿಮಿತ್ತದಿಂದ ಸಹೋದರಿಯು ವಾರುಣಿ ಎಂದು ಖ್ಯಾತಿಯನ್ನು ಆರ್ಜಿಸಿದಳು.

೧೦೫. ಆ ಮನುವಿಗೆ ವಿರಜ ಪ್ರಜಾಪತಿಯ ಕನ್ಯೆಯಾದ ನಡ್ವಲಾ ಎಂಬುವಳಲ್ಲಿ ಕಲ್ಯಾಣಶೀಲರೂ, ಮಹಾ ಬಲಿಷ್ಠರೂ ಆದ ಹತ್ತು ಮಕ್ಕಳು ಜನಿಸಿದರು.

೧೦೬. ಊರು, ಪುರು, ಶತದ್ಯುಮ್ನ, ತಪಸ್ವಿ, ಸತ್ಯವಾಕ್ ಕೃತಿ, ಅಗ್ನಿಷ್ಟುತ್, ಅತಿರಾತ್ರ, ಮತ್ತು ಸುದ್ಯುಮ್ನ ಎಂಬುವರು ಒಂಭತ್ತು ಮಂದಿ ನಾಡ್ವಲೇಯರಲ್ಲಿ ಸೇರಿರುವರು.

೧೦೭. ಮತ್ತು ಆ ಮನುವಿಗೆ ನಡ್ವಲಾ ಎಂಬ ಪತ್ನಿಯಲ್ಲಿ ಜನಿಸಿದ ಪುತ್ರರಲ್ಲಿ ಅಭಿಮನ್ಯು ಎಂಬುವನು ಹತ್ತನೆಯ ಪುತ್ರನು. ಅವರಲ್ಲಿ ಊರು ಎಂಬುವನಿಗೆ ಆಗ್ನೇಯಿ ಎಂಬ ಭಾರ್ಯೆಯಲ್ಲಿ ಮಹಾ ವರ್ಚಸ್ವಿಗಳಾದ ಆರುಮಂದಿ ಪುತ್ರರು ಹುಟ್ಟಿದರು.

೧೦೮. ಆ ಆರು ಮಂದಿಯು ಕ್ರಮವಾಗಿ ಅಂಗ, ಸುಮನಸ, ಖ್ಯಾತಿ, ಗಯ

ತಸ್ಯಾಪರಾಧಾದ್ವೇನಸ್ಯ ಪ್ರಕೋಪಸ್ತು ಮಹಾನಭೂತ್ ।
ಪ್ರಜಾರ್ಥಮೃಷಯೋ ಯಸ್ಯ ಮಮಂಥುರ್ದಕ್ಷಿಣಂ ಕರಮ್॥ ೧೦೯ ॥

ಜನಿತಸ್ತಸ್ಯ ಪಾಣೌ ತು ಮಥಿತೇ ರೂಪವಾನ್ ಪೃಥುಃ ।
ಜನಯಿತ್ವಾ ಸುತಂ ತಸ್ಯ ಪೃಥುಂ ಪ್ರಥಿತಪೌರುಷಮ್　　॥ ೧೧೦ ॥

ಅಬ್ರುವಂಸ್ತ್ವೇಷ ವೋ ರಾಜಾ ಋಷಯೋ ಮುದಿತಾಃ ಪ್ರಜಾಃ ।
ಸ ಧನ್ವೀ ಕವಚೀ ಜಜ್ಞೇ ತೇಜಸಾ ನಿರ್ದಹನ್ನಿವ　　॥ ೧೧೧ ॥

ವೃತ್ತೀನಾಮೇಷ ವೋ ದಾತಾ ಭವಿಷ್ಯತಿ ನರಾಧಿಪಃ ।
ಪೃಥುರ್ವೈನ್ಯಸ್ತಥಾ ಲೋಕಾನ್ ರರಕ್ಷ ಕ್ಷತ್ರಪೂರ್ವಜಃ　　॥ ೧೧೨ ॥

ರಾಜಸೂಯಾಭಿಷಿಕ್ತಾನಾಮಾದ್ಯಃ ಸ ವಸುಧಾಧಿಪಃ ।
ತಸ್ಯ ಸ್ತವಾರ್ಥಮುತ್ಪನ್ನೌ ನಿಪುಣೌ ಸೂತಮಾಗಧೌ　　॥ ೧೧೩ ॥

---

ಶುಕ್ರ, ವ್ರಜ, ಅಜಿನ, ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. ಸುನೀಥಾ ಎಂಬುವಳಿಗೆ ಅಂಗನಿಂದ ವೇನ ಎಂಬುವ ಒಬ್ಬ ಪುತ್ರನು ಹುಟ್ಟಿದನು.

೧೦೯. ಅವನ ಅಪರಾಧದಿಂದ ವೇನರಾಜನಿಗೆ ಪ್ರಬಲವಾದ ಕೋಪವುಂಟಾಯಿತು. ಋಷಿಗಳು ಆ ವೇನರಾಜನ ಪ್ರಜಾಪ್ರಾಪ್ತಿಗೋಸ್ಕರ ಬಲಭಾಗದ ಕೈಯನ್ನು ಮಥನಮಾಡಿದರು.

೧೧೦. ಅವನ ಹಸ್ತವನ್ನು ಮಥನಮಾಡಿದ್ದರಿಂದ ಸುರೂಪದಿಂದ ಕೂಡಿದ ಪೃಥುರಾಜನು ಹುಟ್ಟಿದನು. ಹೀಗೆ ಮಹರ್ಷಿಗಳು ಆ ವೇನರಾಜನಿಗೆ ಅತಿಶಯವಾದ ಪೌರುಷದಿಂದ ಕೂಡಿದ ಪೃಥುರಾಜನೆಂಬ ಪುತ್ರನನ್ನು ದೊರಕಿಸಿದರು.

೧೧೧. ವಿಕ್ರಮದಿಂದ ಕೂಡಿದ ಆ ಪೃಥುರಾಜನನ್ನು ನಿರ್ದೇಶಿಸಿ ಮಹರ್ಷಿಗಳು ಸಂತೋಷದಿಂದಿರುವ ಪ್ರಜೆಗಳಿಗೆ ಇವನು ನಿಮ್ಮೆಲ್ಲರಿಗೆ ರಾಜನು ಎಂಬುದಾಗಿ ಹೇಳಿದರು. ಬಿಲ್ಲು ಕವಚ ಮುಂತಾದ ವೀರೋಪಕರಣಗಳಿಂದ ಕೂಡಿ ತೇಜಸ್ಸಿನಿಂದ ದಹಿಸುತ್ತಿರುವನಂತೆ ಆ ರಾಜನು ಜನಿಸಿದನು.

೧೧೨. ಈ ರಾಜನು ನಿಮ್ಮೆಲ್ಲರಿಗೆ ಜೀವಿಕಾ ಸೌಕರ್ಯಗಳನ್ನು ಕಲ್ಪಿಸುವನು. ಎಂದು ಮುನಿಗಳು ಪ್ರಜೆಗಳಿಗೆ ಆಶ್ವಾಸನವನ್ನು ಕೊಟ್ಟಂತೆ ವೇನಪುತ್ರನಾದ, ಆದಿ ಕ್ಷತ್ರಿಯನಾದ ಪೃಥುರಾಜನು ಲೋಕಗಳನ್ನು ರಕ್ಷಿಸಿದನು.

೧೧೩. ರಾಜಸೂಯಯಾಗವನ್ನು ಮಾಡಿ ಯಾಗಾಂಗ ಅಭಿಷೇಕ ವಿಧಿಯಿಂದ

ತೇನೇಯಂ ಗೌರ್ಮಹಾರಾಜ್ಞಾ ದುಗ್ಧಾ ಸಸ್ಯಾನಿ ಧೀಮತಾ ।
ಪ್ರಜಾನಾಂ ವೃತ್ತಿಕಾಮಾನಾಂ ದೇವೈಶ್ಚರ್ಷಿಗಣೈಃ ಸಹ ॥ ೧೧೪ ॥

ಪಿತೃಭಿರ್ದಾನವೈಶ್ಚೈವ ಗಂಧರ್ವೈಶ್ಚಾಪ್ಸರೋಗಣೈಃ ।
ಸರ್ಪೈಃ ಪುಣ್ಯಜನೈಶ್ಚೈವ ಪರ್ವತೈರ್ವೃಕ್ಷವೀರುಧೈಃ ॥ ೧೧೫ ॥

ತೇಷು ತೇಷು ತು ಪಾತ್ರೇಷು ದುಹ್ಯಮಾನಾ ವಸುಂಧರಾ ।
ಪ್ರಾದಾದ್ಯಥೇಪ್ಸಿತಂ ಕ್ಷೀರಂ ತೇನ ಪ್ರಾಣಾನಧಾರಯನ್ ॥ ೧೧೬ ॥

ಶಾಂಶಪಾಯನ ಉವಾಚ :—

ವಿಸ್ತರೇಣ ಪೃಥೋರ್ಜನ್ಮ ಕೀರ್ತಯಸ್ವ ಮಹಾವ್ರತ ।
ಯಥಾ ಮಹಾತ್ಮನಾ ತೇನ ಪೂರ್ವಂ ದುಗ್ಧಾ ವಸುಂಧರಾ ॥ ೧೧೭ ॥

---

ಸಂಸ್ಕೃತರಾದವರಲ್ಲಿ ಪೃಥುರಾಜನು ಮೊದಲನೆಯವನಾದನು. ಆ ರಾಜನನ್ನು ಮರ್ಯಾದೆಯಿಂದ ಸ್ತುತಿಮಾಡಲು ಸೂತ-ಮಾಗಧರೆಂಬ ಕುಶಲರಾದ ವಂದಿ ಪುರುಷರು ಜನಿಸಿದರು.

೧೧೪. ಬುದ್ಧಿಶಾಲಿಯಾದ ಆ ಪೃಥು ಮಹಾರಾಜನಿಂದ ದೇವ-ಋಷಿಗಣಗಳ ಸಂಗಡ ವೃತ್ತಿಯನ್ನು ಪ್ರಾರ್ಥಿಸುವ ಪ್ರಜೆಗಳಿಗೋಸ್ಕರ ಗೋರೂಪವನ್ನು ಧರಿಸಿರುವ ಭೂಮಿಯಿಂದ ಅನೇಕ ಸಸ್ಯರೂಪವಾದ ಧನಗಳು ಕರೆಯಲ್ಪಟ್ಟುವು.

೧೧೫. ಆಗ ಪಿತೃ, ದಾನವ, ಗಂಧರ್ವ, ಅಪ್ಸರಃಸ್ತ್ರೀ, ಸರ್ಪ, ರಾಕ್ಷಸ, ಪರ್ವತ, ವೃಕ್ಷ, ಮತ್ತು, ಲತಾ ಮುಂತಾದ ವಿವಿಧ ಪ್ರಜಾವರ್ಗದಿಂದ ಗೋರೂಪ ವಾದ ಭೂಮಿಯು ಕರೆಯಲ್ಪಟ್ಟಿತು.

೧೧೬. ಆಯಾಯ ಪಾತ್ರಗಳಲ್ಲಿ ಮುನಿ ಮುಂತಾದವರಿಂದ ಕರೆಯಲ್ಪಟ್ಟಿರುವ ಹಸುವು ಇಷ್ಟಾನುಸಾರವಾಗಿ ಕ್ಷೀರರೂಪವಾದ ಭೋಗ ವಸ್ತುಗಳನ್ನು ಕೊಟ್ಟಿತು, ಅವುಗಳಿಂದ ಪ್ರಜೆಗಳು ಪ್ರಾಣಗಳನ್ನು ಧರಿಸಿದರು.

೧೧೭. ಈ ಕಥಾ ಸಂಗ್ರಹವನ್ನು ಕೇಳಿದ ಶಾಂಶಪಾಯನ ಮುನಿಯು ಪ್ರಶ್ನಿಸಿದನು. ಮಹಾನಿಯಮವಂತನಾದ ಮುನಿಯೆ ! ಪೂರ್ವದಲ್ಲಿ ಭೂಮಿಯನ್ನು ಕರೆದ ಮಹಾತ್ಮನಾದ ಪೃಥುಚಕ್ರವರ್ತಿಯ ಜನ್ಮವೃತ್ತಾಂತವನ್ನು ವಿಸ್ತಾರವಾಗಿ ವರ್ಣಿಸಬೇಕು.

ಯಥಾ ದೇವೈಶ್ಚ ನಾಗೈಶ್ಚ ಯಥಾ ಬ್ರಹ್ಮರ್ಷಿಭಿಃ ಸಹ ।
ಯಕ್ಷೈ ರಾಕ್ಷಸಗಂಧರ್ವೈರಪ್ಸರೋಭಿರ್ಯಥಾ ಪುರಾ ॥ ೧೧೮ ॥

ಯಥಾ ಯಥಾ ಚ ವೈ ಸೂತ ವಿಧಿನಾ ಯೇನಯೇನ ಚ ।
ತೇಷಾಂ ಪಾತ್ರವಿಶೇಷಾಂಶ್ಚ ದೋಗ್ಧಾರಂ ಕ್ಷೀರಮೇವ ಚ ॥ ೧೧೯ ॥

ತಥಾ ವತ್ಸವಿಶೇಷಾಂಶ್ಚ ತ್ವಂ ನಃ ಪ್ರಬ್ರೂಹಿ ಪೃಚ್ಛತಾಮ್ ।
ಯಥಾ ಕ್ಷೀರವಿಶೇಷಾಂಶ್ಚ ಸರ್ವಾನೇವಾನುಪೂರ್ವಶಃ ॥ ೧೨೦ ॥

ಯಸ್ಮಿಂಶ್ಚ ಕಾರಣೇ ಪಾಣಿರ್ವೇನಸ್ಯ ಮಥಿತಃ ಪುರಾ ।
ಕ್ರುದ್ಧೈರ್ಮಹರ್ಷಿಭಿಃ ಪೂರ್ವೈಃ ಕಾರಣಂ ಬ್ರೂಹಿ ತದ್ಧಿ ನಃ॥ ೧೨೧ ॥

ಸೂತ ಉವಾಚ :—

ಕಥಯಿಷ್ಯಾಮಿ ವೋ ವಿಪ್ರಾಃ ಪೃಥೋರ್ವೈನ್ಯಸ್ಯ ಸಂಭವಮ್ ।
ಏಕಾಗ್ರಾಃ ಪ್ರಯತಾಶ್ಚೈವ ಶುಶ್ರೂಷಧ್ವಂ ದ್ವಿಜೋತ್ತಮಾಃ ॥ ೧೨೨ ॥

---

೧೧೮. ದೇವ, ಸರ್ಪ, ಬ್ರಹ್ಮಋಷಿ, ಯಕ್ಷ, ರಾಕ್ಷಸ, ಗಂಧರ್ವ ಮತ್ತು ಅಪ್ಸರಸ್ತ್ರೀಯರಿಂದ ಪೂರ್ವದಲ್ಲಿ ಗೋರೂಪವಾದ ಭೂಮಿಯು ಹೇಗೆ ಕರೆಯಲ್ಪಟ್ಟಿತು.

೧೧೯. ಸೂತಮುನಿಯೇ, ಯಾರಾರು ಯಾವ ಯಾವ ವಿಧಾನದಿಂದ ಭೂಮಿಯನ್ನು ಕರೆದರು ? ಆ ದೋಹನದಲ್ಲಿ ಪಾತ್ರ, ಕರೆಯುವವ, ಮತ್ತು ಕ್ಷೀರಗಳ ವಿಶೇಷಗಳಾವುವು ?

೧೨೦. ಮತ್ತು ಕರು ಕ್ಷೀರವಿಶೇಷ ಮುಂತಾದುದನ್ನು ಕ್ರಮವಾಗಿ ವಿನಯದಿಂದ ಪ್ರಶ್ನೆಮಾಡುತ್ತಿರುವ ಶಿಷ್ಯರಾದ ನಮಗೆ ಉಪದೇಶಿಸು.

೧೨೧. ಪೂರ್ವದಲ್ಲಿ ಯಾವ ಕಾರಣದಿಂದ ಕೋಪಗೊಂಡ ಮಹರ್ಷಿಗಳು ವೇನ ರಾಜನ ಹಸ್ತವನ್ನು ಕಡೆದರು ? ಆ ಮಂಥನಕ್ಕೆ ಕಾರಣವೇನು ? ಅದನ್ನು ನಮಗೆ ಹೇಳಬೇಕು.

೧೨೨. ಸೂತಮುನಿಯು ಹೀಗೆ ಉತ್ತರವಿತ್ತನು :—ದ್ವಿಜಶ್ರೇಷ್ಠರಾದ ಮುನಿ

ನಾಶುದ್ಧಾಯ ನ ಪಾಪಾಯ ನಾಶಿಷ್ಯಾಯಹಿತಾಯ ಚ ।
ವರ್ಣನೀಯಮಿದಂ ಬ್ರಹ್ಮ ಸಾಂಪ್ರತಾಯ ಕಥಂ ಚನ ॥ ೧೨೩ ॥

ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ವೇದೈಶ್ಚ ಸಮ್ಮಿತಮ್ ।
ರಹಸ್ಯಮೃಷಿಭಿಃ ಪ್ರೋಕ್ತಂ ಶೃಣುಯಾದ್ಯೋಽನಸೂಯಕಃ ॥ ೧೨೪ ॥

ಯಶ್ಚೈವಂ ಶ್ರಾವಯೇನ್ಮರ್ತ್ಯಃ ಪೃಥೋರ್ವೈನ್ಯಸ್ಯ ಸಂಭವಮ್ ।
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ನ ಸ ಶೋಚೇತ್ಕೃತಾಕೃತಮ್ ॥ ೧೨೫ ॥

ಗೋಪ್ತಾ ಧರ್ಮಸ್ಯ ರಾಜಾಸೌ ಬಭೂವಾತ್ರಿಸಮಃ ಪ್ರಭುಃ ।
ಅತ್ರಿವಂಶಸಮುತ್ಪನ್ನೋ ಹ್ಯಂಗೋ ನಾಮ ಪ್ರಜಾಪತಿಃ ॥ ೧೨೬ ॥

ತಸ್ಯ ಪುತ್ರೋಽಭವದ್ವೇನೋ ನಾತ್ಯರ್ಥಂ ಧಾರ್ಮಿಕಸ್ತಥಾ ।
ಜಾತೋ ಮೃತ್ಯುಸುತಾಯಾಂ ವೈ ಸುನೀಥಾಯಾಂ ಪ್ರಜಾಪತಿಃ ॥ ೧೨೭ ॥

---

ಗಳೇ! ವೈನ್ಯರಾಜನ ಉತ್ಪತ್ತಿ ಚರಿತ್ರೆಯನ್ನು ನಿಮಗೆ ವರ್ಣಿಸುತ್ತೇನೆ. ಅದನ್ನು ನೀವು ಮನಸ್ಸಿನ ಏಕಾಗ್ರತೆ ಉಳ್ಳವರೂ ಪವಿತ್ರರೂ ಆಗಿ ಶ್ರವಣಮಾಡಿ.

೧೨೩. ಈ ಪಾವನವಾದ ಚರಿತ್ರೆಯನ್ನು ಯಾವ ರೀತಿಯಾಗಿಯೂ ಅಪವಿತ್ರ; ಪಾಪಿಷ್ಠ; ಶಿಷ್ಯರಹಿತ; ಹಿತವನ್ನು ತಿಳಿಯದವ ಮತ್ತು ವ್ರತನಿಯಮ ಶೂನ್ಯನಾದವನಿಗೆ ಉಪದೇಶಿಸಲಾಗದು.

೧೨೪. ಸಂಪತ್ಕರವೂ; ಕೀರ್ತಿಸಾಧನವೂ; ಆಯುಷ್ಯಕಾರಕವೂ; ಪವಿತ್ರವೂ, ವೇದಗಳಿಗೆ ತುಲ್ಯವೂ ಮತ್ತು ರಹಸ್ಯವೂ ಆದ ಋಷಿಗಳಿಂದ ಹೇಳಲ್ಪಟ್ಟ ಈ ಚರಿತ್ರೆಯನ್ನು ಅಸೂಯೆ ಇಲ್ಲದೆ ಶ್ರದ್ಧೆಯಿಂದ ಶ್ರವಣಮಾಡಬೇಕು.

೧೨೫. ವೇನರಾಜನ ಪುತ್ರನಾದ ಪೃಥು ಚಕ್ರವರ್ತಿಯ ಉತ್ಪತ್ತಿಯನ್ನು ಬ್ರಾಹ್ಮಣರಿಗೆ ನಮಸ್ಕರಿಸಿ ಉಪದೇಶಮಾಡಿರುವ ಮಾನವನು ತಾನು ಆಚರಿಸಿದ ಪುಣ್ಯಪಾಪಗಳನ್ನು ಚಿಂತಿಸಿ ಶೋಕಪಡುವುದಿಲ್ಲ.

೧೨೬. ಈ ರಾಜನು ಧರ್ಮವನ್ನು ರಕ್ಷಣಮಾಡಿ ಅತ್ರಿ ಮುನಿಗೆ ಸಮಾನವಾದ ಪ್ರಭುವಾಗಿದ್ದನು, ಪೂರ್ವದಲ್ಲಿ ಅಂಗನೆಂಬ ಪ್ರಜಾಪತಿಯು ಅತ್ರಿಮುನಿಯ ವಂಶದಲ್ಲಿ ಜನಿಸಿದನು.

೧೨೭. ಅವನಿಗೆ ಹೆಚ್ಚಾಗಿ ಧರ್ಮಬುದ್ಧಿ ಇಲ್ಲದ ವೇನರಾಜನೆಂಬ ಪ್ರಜಾಪತಿಯು ಮೃತ್ಯುಪುತ್ರಿಯಾದ ಸುನೀಥ ಎಂಬ ಪತ್ನಿಯಲ್ಲಿ ಪುತ್ರನಾಗಿ ಜನಿಸಿದನು.

ಸ ಮಾತಾಮಹದೋಷೇಣ ವೇನಃ ಕಾಲಾತ್ಮಜಾತ್ಮಜಃ ।
ಸ ಧರ್ಮಂ ಪೃಷ್ಠತಃ ಕೃತ್ವಾ ಕಾಮಾಲ್ಲೋಕೇಷ್ವವರ್ತತ ॥ ೧೨೮ ॥

ಸ್ಥಾಪನಾಂ ಸ್ಥಾಪಯಾಮಾಸ ಧರ್ಮಾಯೈತಾಂ ಸ ಪಾರ್ಥಿವಃ ।
ವೇದಶಾಸ್ತ್ರಾಣ್ಯತಿಕ್ರಮ್ಯ ಸೋಽಧರ್ಮೇ ನಿರತೋಽಭವತ್ ॥ ೧೨೯ ॥

ನಿಃಸ್ವಾಧ್ಯಾಯವಷಟ್ಕಾರೇ ತಸ್ಮಿನ್ ರಾಜ್ಯಂ ಪ್ರಶಾಸತಿ ।
ನ ಪಿಬಂತಿ ತದಾ ಸೋಮಂ ಮಹಾಯಜ್ಞೇಷು ದೇವತಾಃ ॥ ೧೩೦ ॥

ನ ಯಷ್ಟವ್ಯಂ ನ ದಾತವ್ಯಮಿತಿ ತಸ್ಯ ಪ್ರಜಾಪತೇಃ ।
ಆಸೀತ್ ಪ್ರತಿಜ್ಞಾ ಕ್ರೂರೇಯಂ ವಿನಾಶೇ ಪ್ರತ್ಯುಪಸ್ಥಿತೇ ॥ ೧೩೧ ॥

ಅಹಮಿಜ್ಯಶ್ಚ ಪೂಜ್ಯಶ್ಚ ಯಜ್ಞೇ ದೇವದ್ವಿಜಾತಿಭಿಃ ।
ಮಯಿ ಯಜ್ಞಾ ವಿಧಾತವ್ಯಾ ಮಯಿ ಹೋತವ್ಯಮಿತ್ಯಪಿ ॥ ೧೩೨ ॥

---

೧೨೮. ಮೃತ್ಯುವಿನ ಮಗಳಲ್ಲಿ ಜನಿಸಿದ ಆ ವೇನನು ಮಾತಾಮಹನಾದ ಮೃತ್ಯುವಿನ ದೋಷದಿಂದ ಧರ್ಮವನ್ನು ಮೂಲೆಗೆ ಒತ್ತಿ ಲೋಕಗಳಲ್ಲಿ ಸ್ವೇಚ್ಛೆಯಾಗಿ ವಿಹರಿಸಿದನು.

೧೨೯. ಆ ರಾಜನು ಧರ್ಮದ ವಿಷಯದಲ್ಲಿ ವಿರೋಧಮತವನ್ನು ಸ್ಥಿರಗೊಳಿಸಿ ವೇದ-ಶಾಸ್ತ್ರಗಳ ವಿಧಾನವನ್ನು ಉಲ್ಲಂಘಿಸಿ ಅಧರ್ಮಾಚರಣೆಯಲ್ಲಿ ಆಸಕ್ತನಾದನು.

೧೩೦. ಆ ರಾಜನು ವೇದಾಧ್ಯಯನ ಯಜ್ಞಾನುಷ್ಠಾನ ಮುಂತಾದ ಸತ್ಕರ್ಮಗಳಿಗೆ ಅವಕಾಶವನ್ನೀಯದೆ ರಾಜ್ಯವನ್ನು ಆಳುತ್ತಿರಲು ದೇವತೆಗಳು ಯಜ್ಞಾಂಗವಾಗಿ ಸೋಮಪಾನವನ್ನು ಮಾಡಲಿಲ್ಲ.

೧೩೧. ಆ ರಾಜನಿಗೆ ನಾಶಕಾಲವು ಒದಗಿದುದರಿಂದ "ಆ ಕಾಲದಲ್ಲಿ ಯಾಗ ಮಾಡಬಾರದು. ದಾನವನ್ನು ಆಚರಿಸಕೂಡದು" ಮುಂತಾದ ವಿಪರೀತ ಬುದ್ಧಿಯಿಂದ ಕೂಡಿದ ಕ್ರೂರವಾದ ಪ್ರತಿಜ್ಞೆಯು ಪ್ರಸರಿಸಿತು.

೧೩೨. ಮತ್ತು ಯಾಗದಿಂದ ಸತ್ಕರಿಸಲ್ಪಡುವವನು ನಾನು. ದೇವತೆ, ಬ್ರಾಹ್ಮಣರುಗಳಿಗೆ ಪೂಜ್ಯನಾದವನು ನಾನು. ನನಗೋಸ್ಕರ ಶಿಷ್ಟರು ಯಾಗ, ದಾನ, ಹೋಮ ಮುಂತಾದ ಕರ್ಮಗಳನ್ನು ಆಚರಿಸಬೇಕು,

ತಮತಿಕ್ರಾಂತಮರ್ಯಾದಮವದಾನಸುಸಂವೃತಮ್ ।
ಊಚುರ್ಮಹರ್ಷಯಃ ಸರ್ವೇ ಮರೀಚಿಪ್ರಮುಖಾಸ್ತದಾ ॥ ೧೩೩ ॥

ವಯಂ ದೀಕ್ಷಾಂ ಪ್ರವೇಕ್ಷ್ಯಾಮಃ ಸಂವತ್ಸರಶತಂ ನೃಪ ।
ತ್ವಂ ಮಾ ಕಾರ್ಷೀರಧರ್ಮಂ ವೈ ನೈಷ ಧರ್ಮಃ ಸನಾತನಃ ॥ ೧೩೪ ॥

ನಿಧನೇ ಸಂಪ್ರಸೂತಸ್ತ್ವಂ ಪ್ರಜಾಪತಿರಸಂಶಯಃ ।
ಪಾಲಯಿಷ್ಯೇ ಪ್ರಜಾಶ್ಚೇತಿ ಪೂರ್ವಂ ತೇ ಸಮಯಃ ಕೃತಃ ॥ ೧೩೫ ॥

ತಾಂಸ್ತಥಾ ವಾದಿನಃ ಸರ್ವಾನ್ ಬ್ರಹ್ಮರ್ಷೀನಬ್ರವೀತ್ತದಾ ।
ವೇನಃ ಪ್ರಹಸ್ಯ ದುರ್ಬುದ್ಧಿರ್ವಿದಿತೇನ ಚ ಕೋವಿದಃ ॥ ೧೩೬ ॥

ಸ್ರಷ್ಟಾ ಧರ್ಮಸ್ಯ ಕಶ್ಚಾನ್ಯಃ ಶ್ರೋತವ್ಯಂ ಕಸ್ಯ ವಾ ಮಯಾ ।
ವೀರ್ಯೇಣ ತಪಸಾ ಸತ್ಯೈರ್ಮಯಾ ವಾ ಕಃ ಸಮೋ ಭುವಿ ॥ ೧೩೭ ॥

---

೧೩೩. ಆಗ ಮರೀಚಿ ಮುಂತಾದ ಎಲ್ಲಾ ಪ್ರಮುಖ ಮಹರ್ಷಿಗಳು ಮರ್ಯಾದೆಯನ್ನು ಉಲ್ಲಂಘಿಸಿರುವ, ಸತ್ಕರ್ಮಾಚರಣೆಯಿಂದ ದೂರನಾದ ರಾಜನನ್ನು ಕುರಿತು ಹೇಳಿದರು.

೧೩೪. ರಾಜನೇ. ನಾವು ಒಂದುನೂರು ಸಂವತ್ಸರ ಪರ್ಯಂತವಾಗಿ ಮಹಾಯಜ್ಞಾನುಷ್ಠಾನಕ್ಕೆ ದೀಕ್ಷೆಯನ್ನು ಕೈಗೊಳ್ಳುವೆವು; ನೀನು ಇದಕ್ಕೆ ಅಡ್ಡಿಮಾಡಿ ಅಧರ್ಮವನ್ನು ಆಚರಿಸಬೇಡ, ಇದು ಸನಾತನ ಧರ್ಮವಲ್ಲ.

೧೩೫. ನೀನು ನಿಸ್ಸಂಶಯವಾಗಿ ಲೋಕನಾಶಕ್ಕಾಗಿ ಹುಟ್ಟಿರುವ ಪ್ರಜಾಪತಿಯೆಂದು ತೋರುವುದು. ಪ್ರಜೆಗಳನ್ನು ಪಾಲಿಸುತ್ತೇನೆಂದು ನಿನ್ನಿಂದ ಪೂರ್ವದಲ್ಲಿ ಪ್ರತಿಜ್ಞೆಯು ಮಾಡಲ್ಪಟ್ಟಿದೆ.

೧೩೬. ಈ ರೀತಿಯಾಗಿ ಉಪದೇಶಿಸುತ್ತಿರುವ ಸಮಸ್ತ ಬ್ರಹ್ಮರ್ಷಿಗಳನ್ನು ಕುರಿತು ಜ್ಞಾನ ಮದದಿಂದ ತುಂಬಿದ ದುರ್ಬುದ್ಧಿಯಾದ ವೇನರಾಜನು ನಕ್ಕು ಈ ರೀತಿಯಾಗಿ ಹೇಳಿದನು.

೧೩೭. ಧರ್ಮವನ್ನು ಸೃಷ್ಟಿಸಿದ ಮತ್ತೊಬ್ಬನು ಯಾರಿರುವನು. ನನ್ನಿಂದ ಯಾರ ಮಾತು ನಡೆಯಿಸಲ್ಪಡಬೇಕು. ಭೂಲೋಕದಲ್ಲಿ ವೀರ್ಯ ತಪಸ್ಸು ಮತ್ತು ಸತ್ಯವಚನವೆಂಬ ಗುಣಗಳಿಂದ ನನಗೆ ಸಮಾನನು ಯಾರಿಹನು.

ಮಂದಾತ್ಮಾನೋ ನ ನೂನಂ ಮಾಂ ಯೂಯಂ ಜಾನೀತ ತತ್ತ್ವತಃ ।
ಪ್ರಭವಂ ಸರ್ವಲೋಕಾನಾಂ ಧರ್ಮಾಣಾಂ ಚ ವಿಶೇಷತಃ ॥ ೧೩೮ ॥

ಇಚ್ಛನ್ ದಹೇಯಂ ಪೃಥಿವೀಂ ಪ್ಲಾವಯೇಯಂ ಜಲೇನ ವಾ ।
ಸೃಜೇಯಂ ವಾ ಗ್ರಸೇಯಂ ವಾ ನಾತ್ರ ಕಾರ್ಯಾ ವಿಚಾರಣಾ॥ ೧೩೯ ॥

ಯದಾ ನ ಶಕ್ಯತೇ ಸ್ತಂಭಾದನಾರ್ಯಭೃಶಸಂಹಿತಃ ।
ಅನುನೇತುಂ ತದಾ ವೇನಸ್ತತಃ ಕ್ರುದ್ಧಾ ಮಹರ್ಷಯಃ ॥ ೧೪೦ ॥

ನಿಗೃಹ್ಯ ತಂ ಚ ಬಾಹುಭ್ಯಾಂ ವಿಸ್ಫುರಂತಂ ಮಹಾಬಲಮ್ ।
ತತೋಽಸ್ಯ ಸಾಮಹಸ್ತಂ ತೇ ಮಮಂಥುರ್ಭೃಶಕೋಪಿತಾಃ ॥ ೧೪೧ ॥

ತಸ್ಮಾತ್ ಪ್ರಮಥ್ಯಮಾನಾದ್ವೈ ಜಜ್ಞೇ ಪೂರ್ವಮಿತಿ ಶ್ರುತಿಃ ।
ಹ್ರಸ್ವೋಽತಿಮಾತ್ರಂ ಪುರುಷಃ ಕೃಷ್ಣಶ್ಚಾಪಿ ಬಭೂವ ಹ ॥ ೧೪೨ ॥

---

೧೩೮. ಮೂಢ ಬುದ್ಧಿಗಳಾದ ನೀವು ನನ್ನನ್ನು ನಿಜವಾಗಿ ತಾತ್ವಿಕರೂಪದಿಂದ ತಿಳಿದಿಲ್ಲ, ನಾನು ಸರ್ವಲೋಕಗಳಿಗೂ ಧರ್ಮಗಳಿಗೂ ಕಾರಣನಾಗಿರುವೆನು.

೧೩೯. ನನಗೆ ಇಷ್ಟ ಬಂದರೆ ಆಗ ಭೂಮಿಯನ್ನು ಸುಡಬಲ್ಲೆನು, ಅಥವಾ ಜಲ ಪ್ರವಾಹದಿಂದ ಮುಳುಗಿಸಬಲ್ಲೆನು. ಇಷ್ಟಾನುಸಾರವಾಗಿ ಸೃಷ್ಟಿಸಬಲ್ಲೆನು, ಅಥವಾ ನುಂಗಬಲ್ಲೆನು. ಈ ವಿಷಯದಲ್ಲಿ ಸಂಶಯಪಡಬೇಡಿ.

೧೪೦. ಯಾವಾಗ ಆ ವೇನರಾಜನು ದರ್ಪದಿಂದ ಅನಾರ್ಯಮಾರ್ಗವನ್ನು ಹಿಂಬಾಲಿಸುವನಾಗಿ ಸಮಾಧಾನೋಕ್ತಿಯಿಂದ ಅನುನಯಮಾಡಲು ಸಾಧ್ಯವಿಲ್ಲದವನಾದನೋ, ಆಗ ಮಹರ್ಷಿಗಳೆಲ್ಲರೂ ಅತಿಯಾಗಿ ಕೋಪಗೊಂಡರು.

೧೪೧. ಆಗ ಅತಿಯಾಗಿ ಕೋಪಗೊಂಡ ಆ ಮಹರ್ಷಿಗಳು ಬಲಿಷ್ಠನಾಗಿ ವಿಜೃಂಭಿಸುತ್ತಿದ್ದ ಆ ರಾಜನನ್ನು ಬಾಹುಗಳಿಂದ ನಿಗ್ರಹಿಸಿ ಅವನ ಎಡಭಾಗದ ಕೈಯನ್ನು ಮಥನಮಾಡಿದರು.

೧೪೨. ಆ ಮಥನದಿಂದ ಅತಿ ಹ್ರಸ್ವನೂ ಕಪ್ಪು ಬಣ್ಣ ಉಳ್ಳವನೂ ಆದ ಒಬ್ಬ ಪುರುಷನು ಪೂರ್ವದಲ್ಲಿ ಜನಿಸಿದನೆಂದು ಜನರಿಂದ ಕೇಳಲ್ಪಟ್ಟಿರುವುದು.

ಸ ಭೀತಃ ಪ್ರಾಂಜಲಿಶ್ಚೈವ ತಸ್ಥಿವಾನಾಕುಲೇಂದ್ರಿಯಃ ।
ತಮಾರ್ತಂ ವಿಹ್ವಲಂ ದೃಷ್ಟ್ವಾ ನಿಷೀದೇತ್ಯಬ್ರುವನ್ ಕಿಲ ॥ ೧೪೩ ॥

ನಿಷಾದವಂಶಕರ್ತಾಸೌ ಬಭೂವಾನಂತವಿಕ್ರಮಃ ।
ಧೀವರಾನಸೃಜಚ್ಚಾಪಿ ವೇನಕಲ್ಮಷಸಂಭವಾನ್ ॥ ೧೪೪ ॥

ಯೇ ಚಾನ್ಯೇ ವಿಂಧ್ಯನಿಲಯಾಸ್ತುಂಬುರಾಸ್ತುಬುರಾಃ ಖಶಾಃ ।
ಅಧರ್ಮರುಚಯಶ್ಚಾಪಿ ವಿದ್ಧಿ ತಾನ್ ವೇನಕಲ್ಮಷಾನ್ ॥ ೧೪೫ ॥

ಪುನರ್ಮಹರ್ಷಯಸ್ತಸ್ಯ ಪಾಣಿಂ ವೇನಸ್ಯ ದಕ್ಷಿಣಮ್ ।
ಅರಣೀಮಿವ ಸಂರಬ್ಧಾ ಮಮಂಥುರ್ಜಾತಮನ್ಯವಃ ॥ ೧೪೬ ॥

ಪೃಥುಸ್ತಸ್ಮಾತ್ ಸಮುತ್ಪನ್ನಃ ಕರಾಜ್ಜ್ವಲಜಸನ್ನಿಭಾತ್ ।
ಪೃಥೋಃ ಕರತಲಾದ್ವಾಪಿ ಯಸ್ಮಾಜ್ಜಾತಃ ಪೃಥುಸ್ತದಾ ॥ ೧೪೭ ॥

---

೧೪೩. ಆ ಪುರುಷನು ಭಯದಿಂದ ವ್ಯಾಕುಲವಾದ ಇಂದ್ರಿಯ ಉಳ್ಳವನಾಗಿ ವಿನಯದಿಂದ ಅಂಜಲಿಯನ್ನು ಕಟ್ಟಿಕೊಂಡು ನಿಂತನು. ಭೀತನೂ ನಿತ್ರಾಣನೂ ಆದ ಅವನನ್ನು ನೋಡಿ ಋಷಿಗಳು ನಿಷೀದ=ಕುಳಿತುಕೋ, ಎಂಬುದಾಗಿ ಹೇಳಿದರು.

೧೪೪. ಅನಂತವಾದ ವಿಕ್ರಮದಿಂದ ಕೂಡಿದ ಆ ಪುರುಷನು ವ್ಯಾಧವಂಶದ ಸೃಷ್ಟಿಗೆ ಕಾರಣನಾದನು, ಮತ್ತು ವೇನರಾಜನ ಪಾಪಸಂಪರ್ಕದಿಂದ ಕೂಡಿದ ಬೆಸ್ತರನ್ನು ಸೃಷ್ಟಿಮಾಡಿದನು.

೧೪೫. ಮತ್ತು ವಿಂಧ್ಯಗಿರಿಯಲ್ಲಿ ವಾಸಮಾಡುತ್ತಿರುವ ಅಧರ್ಮಶೀಲರಾದ ತುಂಬುರ, ತುಬುರ, ಖಶ ಮುಂತಾದ ನೀಚ ಜಾತಿಯ ಪ್ರಜೆಗಳು ವೇನರಾಜನ ಪಾಪಸಂಪರ್ಕದಿಂದ ಜನಿಸಿದವರೆಂದು ತಿಳಿಯಬೇಕು.

೧೪೬. ಮಹರ್ಷಿಗಳು ಕೋಪಗೊಂಡವರಾಗಿ ವೇಗದಿಂದ ಮತ್ತೆ ವೇನರಾಜನ ಬಲಗೈಯನ್ನು ಅರಣಿಯಂತೆ ಮಥಿಸಿದರು.

೧೪೭. ಆಗ ಕಮಲದಂತೆ ಪ್ರಕಾಶಿಸುತ್ತಿರುವ, ಮಥಿಸಲ್ಪಡುತ್ತಿರುವ ಆ ಕೈಯಿಂದ ಪೃಥುರಾಜನು ಜನಿಸಿದನು. ಪೃಥು=ವಿಸ್ತಾರವಾದ ಹಸ್ತದಿಂದ ಜನಿಸಿದ್ದರಿಂದ ಅವನಿಗೆ ಪೃಥು ಎಂಬ ಸಂಜ್ಞೆಯು ಉಂಟಾಯಿತು.

ದೀಪ್ಯಮಾನಶ್ಚ ವಪುಷಾ ಸಾಕ್ಷಾದಗ್ನಿರಿವ ಜ್ವಲನ್ ।
ಆದ್ಯಮಾಜಗವಂ ನಾಮ ಧನುರ್ಗೃಹ್ಯ ಮಹಾರವಮ್ ॥ ೧೪೮ ॥

ಶರಾಂಶ್ಚ ಬಿಭ್ರದ್ರಕ್ಷಾರ್ಥಂ ಕವಚಂ ಚ ಮಹಾಪ್ರಭಮ್ ।
ತಸ್ಮಿನ್ ಜಾತೇಽಥ ಭೂತಾನಿ ಸಂಪ್ರಹೃಷ್ಟಾನಿ ಸರ್ವಶಃ ॥ ೧೪೯ ॥

ಸಮಾಪೇತುರ್ಮಹಾರಾಜಂ ವೇನಶ್ಚ ತ್ರಿದಿವಂ ಗತಃ ।
ಸಮುತ್ಪನ್ನೇನ ರಾಜರ್ಷಿಃ ಸತ್ಪುತ್ರೇಣ ಮಹಾತ್ಮನಾ ॥ ೧೫೦ ॥

ತ್ರಾತಃ ಸ ಪುರುಷವ್ಯಾಘ್ರಃ ಪುನ್ನಾಮ್ನೋ ನರಕಾತ್ತದಾ ।
ತಂ ನದ್ಯಶ್ಚ ಸಮುದ್ರಾಶ್ಚ ರತ್ನಾನ್ಯಾದಾಯ ಸರ್ವಶಃ ॥ ೧೫೧ ॥

ಅಭಿಷೇಕಾಯ ತೋಯಂ ಚ ಸರ್ವ ಏವೋಪತಸ್ಥಿರೇ ।
ಪಿತಾಮಹಶ್ಚ ಭಗವಾನಂಗಿರೋಭಿಃ ಸಹಾಮರೈಃ ॥ ೧೫೨ ॥

---

೧೪೮. ಅವನು ಅಗ್ನಿಯಂತೆ ಇರುವ ಶರೀರದ ದೀಪ್ತಿಯಿಂದ ಉರಿಯುತ್ತ ಮಹತ್ತಾದ ಟಂಕಾರ ಶಬ್ದದಿಂದ ಕೂಡಿದ ಮೊದಲನೆಯದಾದ ಆಜಗವ ಎಂಬ ಧನುಸ್ಸನ್ನು ಗ್ರಹಿಸಿದನು.

೧೪೯. ಮತ್ತು ರಕ್ಷಣೆಗೋಸ್ಕರ ಬಾಣಗಳನ್ನೂ ಮಹಾಪ್ರಕಾಶದಿಂದ ಕೂಡಿದ ಕವಚವನ್ನೂ ಧರಿಸಿದ್ದನು. ಅವನು ಹುಟ್ಟಿದ ಕೂಡಲೆ ಸಮಸ್ತ ಪ್ರಾಣಿಗಳೂ ಬಹಳ ಸಂತೋಷಪಟ್ಟವು.

೧೫೦. ಮತ್ತು ಎಲ್ಲ ಪ್ರಜೆಗಳು ಸಂತೋಷದಿಂದ ಆ ರಾಜನ ಬಳಿಗೆ ಬಂದರು. ಆಗ ಮಹಾತ್ಮನೂ ಸತ್ಪುತ್ರನೂ ಆದ ಪೃಥುರಾಜನ ಜನ್ಮದಿಂದ ವೇನ ರಾಜರ್ಷಿಯು ಸ್ವರ್ಗವನ್ನು ಹೊಂದಿದನು.

೧೫೧. ಆಗ ಪುರುಷ ಶ್ರೇಷ್ಠನಾದ ವೇನನು ಸತ್ಪುತ್ರನಿಂದ ಪುನ್ನಾಮಕವಾದ ನರಕದಿಂದ ರಕ್ಷಿಸಲ್ಪಟ್ಟನು. ಆಗ ಪೃಥುರಾಜನ ರಾಜ್ಯಾಭಿಷೇಕಕ್ಕೆ ನದೀ, ಸಮುದ್ರಗಳು ರತ್ನಗಳನ್ನು ತೆಗೆದುಕೊಂಡು ನೃಪತಿಯ ಬಳಿಗೆ ಬಂದುವು.

೧೫೨. ಮತ್ತು ಎಲ್ಲರು ಪಟ್ಟಾಭಿಷೇಕಕ್ಕೋಸ್ಕರ ತೀರ್ಥವನ್ನು ತಂದು ಸಿದ್ಧಪಡಿಸಿದರು. ಪೂಜ್ಯನಾದ ಬ್ರಹ್ಮದೇವನು ಅಂಗಿರ ಋಷಿ ಮತ್ತು ದೇವಸಂಘಗಳಿಂದ ಕೂಡಿ ಅಲ್ಲಿಗೆ ಬಂದನು.

ಸ್ಥಾವರಾಣಿ ಚ ಭೂತಾನಿ ಜಂಗಮಾನಿ ಚ ಸರ್ವಶಃ ।
ಸಮಾಗಮ್ಯ ತದಾ ವೈನ್ಯಮಭ್ಯಷಿಂಚನ್ನರಾಧಿಪಮ್ ॥ ೧೫೩ ॥

ಮಹತಾ ರಾಜರಾಜೇನ ಪ್ರಜಾಪಾಲಂ ಮಹಾದ್ಯುತಿಮ್ ।
ಸೋಽಭಿಷಿಕ್ತೋ ಮಹಾರಾಜೋ ದೇವೈರಂಗಿರಸಃ ಸುತೈಃ ॥ ೧೫೪ ॥

ಆದಿರಾಜೋ ಮಹಾಭಾಗಃ ಪೃಥುರ್ವೈನ್ಯಃ ಪ್ರತಾಪವಾನ್ ।
ಪಿತ್ರಾಪರಂಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ ॥ ೧೫೫ ॥

ತತೋ ರಾಜೇತಿ ನಾಮಾಸ್ಯ ಹ್ಯನುರಾಗಾದಜಾಯತ ।
ಆಪಸ್ತಸ್ತಂಭಿರೇ ತಸ್ಯ ಸಮುದ್ರಮಭಿಯಾಸ್ಯತಃ ॥ ೧೫೬ ॥

ಪರ್ವತಾಶ್ಚಾವದೀರ್ಯಂತ ಧ್ವಜಭಂಗಶ್ಚ ನಾಭವತ್ ।
ಅಕೃಷ್ಟಪಚ್ಯಾ ಪೃಥಿವೀ ಸಿಧ್ಯಂತ್ಯನ್ನಾನಿ ಚಿಂತಯಾ ॥ ೧೫೭ ॥

---

೧೫೩. ಆಗ ಚರ-ಆಚರ ಸಮಸ್ತ ಪ್ರಾಣಿಗಳೂ ಅಲ್ಲಿಗೆ ಬಂದು ವೇನರಾಜನ ಮಗನಾದ ಪೃಥುರಾಜನಿಗೆ ಪಟ್ಟಾಭಿಷೇಕ ಮಾಡಿದರು.

೧೫೪. ಮಹಾತ್ಮನಾದ ಕುಬೇರನಿಂದಲೂ ಅಂಗಿರ ಮುನಿಯ ಪುತ್ರರಾದ ದೇವತೆಗಳಿಂದಲೂ ಮಹತ್ತಾದ ಕಾಂತಿ ಪುಂಜದಿಂದ ಬೆಳಗುತ್ತಿದ್ದ ಆ ಮಹಾರಾಜನು ಪಟ್ಟಾಭಿಷಿಕ್ತನಾಗಿ ಪ್ರಜಾಪಾಲಕನಾದನು.

೧೫೫. ಮಹಾತ್ಮನೂ ಪ್ರತಾಪಶಾಲಿಯೂ ಆದ ವೇನಪುತ್ರನಾದ ಆ ಪೃಥು ರಾಜನು ಆದಿರಾಜನಾದನು. ಹಿಂದೆ ತಂದೆಯಿಂದ ವಿರಸರಾಗಿದ್ದ ಪ್ರಜೆಗಳು ಈ ರಾಜ ನಿಂದ ಹೆಚ್ಚಾಗಿ ರಂಜಿಸಲ್ಪಟ್ಟರು.

೧೫೬. ತರುವಾಯ ರಾಜ ಮತ್ತು ಪ್ರಜೆಗಳ ಪರಸ್ಪರ ಅನುರಾಗವನ್ನು ಸೂಚಿಸುವ ರಾಜ ಎಂಬ ಸಂಕೇತವು ಇವನಿಗೆ ಉಂಟಾಯಿತು. ಇವನು ಸಮುದ್ರದಲ್ಲಿ ಪ್ರಯಾಣಮಾಡುವಾಗ ನೀರು ಕೂಡ ತಡೆದುನಿಂತು ಅವಕಾಶವನ್ನು ಕಲ್ಪಿಸಿತು.

೧೫೭. ಪರ್ವತಗಳು ಸೀಳಿ ಸಮಮಟ್ಟವಾದುವು. ಧ್ವಜಕ್ಕೆ ಎಲ್ಲಿಯೂ ಭಂಗ ಉಂಟಾಗಲಿಲ್ಲ. ಭೂಮಿಯು ಕೃಷಿ ವ್ಯವಸಾಯವಿಲ್ಲದೆ ಸಂಕಲ್ಪ ಮಾತ್ರದಿಂದ ಅನ್ನ ವನ್ನು ಕೊಟ್ಟಿತು.

**ಸರ್ವಕಾಮದುಘಾ ಗಾವಃ ಪುಟಕೇ ಪುಟಕೇ ಮಧು ।**
**ಏತಸ್ಮಿನ್ನೇವ ಕಾಲೇ ತು ಯಜ್ಞತಸ್ತಸ್ಯ ವೈ ಮಖೇ ॥ ೧೫೮ ॥**

**ಸೋಮೇ ಸುತೇ ಸಮುತ್ಪನ್ನಃ ಸುತಃ ಸೌತ್ಯೇ ತದಾಹನಿ ।**
**ತಸ್ಮಿನ್ನೇವಂ ಸಮುತ್ಪನ್ನೇ ಪ್ರಸರ್ಜಜ್ಞೇಽಥ ಮಾಗಧಃ ॥ ೧೫೯ ॥**

**ಸಾಮಗೇಷು ಚ ಗಾಯತ್ಸು ಶುಭಾಂಡೇ ವೈಶ್ವದೇವಿಕೇ ।**
**ಸಮಾಗತೇ ಸಮುತ್ಪನ್ನಸ್ತಸ್ಮಾನ್ಮಾಗಧ ಉಚ್ಯತೇ ॥ ೧೬೦ ॥**

**ಐಂದ್ರೇಣ ಹವಿಷಾ ಚಾಪಿ ಹವಿಃ ಪೃಕ್ತಂ ಬೃಹಸ್ಪತೇಃ ।**
**ಜುಹಾವೇಂದ್ರಾಯ ದೈವೇನ ತತಃ ಸೂತೋ ವ್ಯಜಾಯತ ॥ ೧೬೧ ॥**

**ಪ್ರಮಾದಸ್ತತ್ರ ಸಂಜಜ್ಞೇ ಪ್ರಾಯಶ್ಚಿತ್ತಂ ಚ ಕರ್ಮಸು ।**
**ಶಿಷ್ಯಹವ್ಯೇನ ಯತ್ ಪೃಕ್ತಮಭಿಭೂತಂ ಗುರೋರ್ಹವಿಃ ॥ ೧೬೨ ॥**

---

೧೫೮. ಗೋವುಗಳು ಸರ್ವಕಾಮಗಳನ್ನು ಕರೆಯುತ್ತಲಿದ್ದುವು. ಗೂಡುಗೂಡುಗಳಲ್ಲಿ ಮಧುವು ಲಭಿಸಿತು. ಇದೇ ಸಮಯದಲ್ಲಿ ಅವನು ಒಂದು ಮಹಾಯಜ್ಞವನ್ನು ಆಚರಿಸಿದನು.

೧೫೯. ಆ ಯಜ್ಞದಲ್ಲಿ ಸುತ್ಯಾ=ಪ್ರಧಾನ ದಿನದಲ್ಲಿ ಸೋಮಲತೆಯನ್ನು ಹಿಂಡಿ ರಸವನ್ನು ಸಂಗ್ರಹಿಸಲಾಗಿ ಸೂತ= ಸಾರಥಿ ಎಂಬ ಜಾತಿಯ ಪುರುಷನು ಜನಿಸಿದನು. ಅವನು ಹುಟ್ಟಿದ ಕೂಡಲೆ ಮತ್ತೆ ಮಾಗಧ= ಹೊಗಳಭಟ್ಟನ ಜಾತಿಯ ಪುರುಷನು ಜನಿಸಿದನು.

೧೬೦. ಸಾಮವೇದಿಗಳು ಸಾಮಗಾಯನ ಮಂತ್ರವನ್ನು ಗಾನಮಾಡುತ್ತಿರುವಾಗ ವೈಶ್ವದೇವಯಾಗಾಂಗ ಕರ್ಮವು ನಡೆಯುತ್ತಿರುವಾಗ ಜನಿಸಿರುವುದರಿಂದ ಅವನಿಗೆ ಮಾಗಧ ಎಂಬ ಹೆಸರು ಬಂದಿರುವುದು.

೧೬೧. ಆಗ ಇಂದ್ರ ದೇವತೆಯ ಹವಿಸ್ಸಿನಿಂದ ಬೃಹಸ್ಪತಿ ದೇವತೆಯ ಹವಿಸ್ಸು ಪ್ರಕ್ಷಿಪ್ತವಾಯಿತು. ಆದರಿಂದ ಇಂದ್ರನನ್ನು ಉದ್ದೇಶಮಾಡಿ ಹೋಮ ಮಾಡಿದ್ದರಿಂದ ಆ ಅದೃಷ್ಟ ಶಕ್ತಿಯಿಂದ ಸೂತನು ಜನಿಸಿದನು.

೧೬೨. ಹೀಗೆ ಆ ಕರ್ಮದಲ್ಲಿ ಒಂದು ಆಕಸ್ಮಿಕವಾದ ಪ್ರಮಾದವು ಒದಗಿತು. ಪ್ರಾಯಶ್ಚಿತ್ತವನ್ನು ಆಚರಿಸಬೇಕಾದ ಪ್ರಸಂಗಬಂದಿತು. ಶಿಷ್ಯನಾದ ಇಂದ್ರನ ಹವಿಸ್ಸಿನಿಂದ ಗುರುವಾದ ಬೃಹಸ್ಪತಿಯ ಹವಿಸ್ಸು ಸಂಪೃಕ್ತವಾಯಿತು.

**ಅಧರೋತ್ತರಚಾರೇಣ ಜಜ್ಞೇ ತದ್ವರ್ಣವೈಕೃತನ್ ।**
**ಯಚ್ಚ ಕ್ಷತ್ರಾತ್ ಸಮಭವದ್ಬ್ರಾಹ್ಮಣ್ಯಾಂ ಹೀನಯೋನಿತಃ ॥ ೧೬೩ ।**

**ಸೂತಃ ಪೂರ್ವೇಣ ಸಾಧರ್ಮ್ಯಾತ್ ತುಲ್ಯಧರ್ಮಃ ಪ್ರಕೀರ್ತಿತಃ ।**
**ಮಧ್ಯಮೋ ಹ್ಯೇಷ ಸೂತಸ್ಯ ಧರ್ಮಃ ಕ್ಷತ್ರೋಪಜೀವನಮ್ ॥ ೧೬೪ ॥**

**ರಥನಾಗಾಶ್ವಚರಿತಂ ಜಘನ್ಯಂ ಚ ಚಿಕಿತ್ಸಿತಮ್ ।**
**ಪೃಥುಸ್ತವಾರ್ಥಂ ತೌ ತತ್ರ ಸಮಾಹೂತೌ ಮಹರ್ಷಿಭಿಃ ॥ ೧೬೫ ॥**

**ತಾವೂಚುರ್ಮುನಯಃ ಸರ್ವೇ ಸ್ತೂಯತಾಮೇಷ ಪಾರ್ಥಿವಃ ।**
**ಕರ್ಮೈತದನುರೂಪಂ ವಾಂ ಪಾತ್ರಂ ಚಾಯಂ ನರಾಧಿಪಃ ॥ ೧೬೬ ॥**

**ತಾವೂಚತುಸ್ತತಃ ಸರ್ವಾನ್ಸ್ತಾನೃಷೀನ್ ಸೂತಮಾಗಧೌ ।**
**ಆವಾಂ ದೇವಾನ್ನೃಷೀಂಶ್ಚೈವ ಪ್ರೀಣಯಾವಃ ಸ್ವಕರ್ಮತಃ ॥ ೧೬೭ ॥**

---

೧೬೩. ಈ ರೀತಿಯಾಗಿ ಹೀನಜಾತಿಯಾದ ಕ್ಷತ್ರಿಯನಿಂದ ಬ್ರಾಹ್ಮಣ ಜಾತಿಯ ಸ್ತ್ರೀಯಲ್ಲಿ ಹುಟ್ಟಿದ್ದರಿಂದ ಅಧರನಲ್ಲಿ ಉತ್ತಮ ಜಾತಿಯ ಸಂಗದಿಂದ ಆ ಸಂಕರವರ್ಣವು ಹುಟ್ಟಿತು.

೧೬೪. ಇಂತಹ ಸೂತನು ಅನಾದಿಯಾದ ಸೂತ ಜಾತಿಯ ಸಾದೃಶ್ಯದಿಂದ ತುಲ್ಯವಾದ ಧರ್ಮಕ್ಕೆ ಅಧಿಕಾರಿಯಾದನು. ಇಂತಹ ಸೂತನಿಗೆ ಕ್ಷತ್ರೋಪಜೀವನವೆಂಬ ಮಧ್ಯಮ ವಿಧವಾದ ಧರ್ಮವು ಸಂಭವಿಸಿತು.

೧೬೫. ರಥ, ಗಜ, ಅಶ್ವ ಮುಂತಾದ ಯಾನಗಳನ್ನು ನಡೆಯಿಸುವ ಅಧಮವಾದ ಚರಿತವೂ ಆವನಿಗೆ ಮುಖ್ಯವಾಯಿತು. ಆ ಸೂತಮಾಗಧರು ಪೃಥುರಾಜನನ್ನು ಸ್ತುತಿಮಾಡುವುದಕ್ಕೋಸ್ಕರ ಆಹೂತರಾದರು.

೧೬೬. ಆ ಸೂತಮಾಧರನ್ನು ಕುರಿತು ಸಮಸ್ತ ಮಹರ್ಷಿಗಳು ಅನುರೂಪನೂ, ಸತ್ಪಾತ್ರನೂ ಆದ ಈ ರಾಜನನ್ನು ಸ್ತ್ರೋತ್ರಮಾಡುವರು. ನಿಮಗೆ ಉಚಿತ ಕರ್ಮವಾದುದರಿಂದ ರಾಜನನ್ನು ನೀವು ಸ್ತುತಿ ಮಾಡಿರಿ ಎಂದು ಹೇಳಿದರು.

೧೬೭. ಆಗ ಆ ಸೂತಮಾಗಧರು ಸಮಸ್ತ ಮುನಿಗಳನ್ನು ಕುರಿತು ಇಂತೆಂದರು. ನಾವು ನಮ್ಮ ಸ್ತುತಿ ಕರ್ಮದಿಂದ ದೇವ, ಋಷಿಗಳನ್ನು ಸ್ತುತಿಸಿ ತೃಪ್ತಿಪಡಿಸುತ್ತೇವೆ.

ನಚಾಸ್ಯ ವಿದ್ಮೋ ವೈ ಕರ್ಮ ನ ತಥಾ ಲಕ್ಷಣಂ ಯಶಃ ।
ಸ್ತೋತ್ರಂ ಯೇನಾಸ್ಯ ಕುರ್ಯಾಮ ಪ್ರೋಚುಸ್ತೇಜಸ್ವಿನೋ ದ್ವಿಜಾಃ
॥ ೧೬೮ ॥

ಏಷ ಕರ್ಮರತೋ ನಿತ್ಯಂ ಸತ್ಯವಾಕ್ ಸಂಯತೇಂದ್ರಿಯಃ ।
ಜ್ಞಾನಶೀಲೋ ವದಾನ್ಯಶ್ಚ ಸಂಗ್ರಾಮೇಷ್ವಪರಾಜಿತಃ ॥ ೧೬೯ ॥

ಋಷಿಭಿಸ್ತೌ ನಿಯುಕ್ತೌ ತು ಭವಿಷ್ಯೈಃ ಸ್ತೂಯತಾಮಿತಿ ।
ಯಾನಿ ಕರ್ಮಾಣಿ ಕೃತವಾನ್ ಪೃಥುಃ ಪಶ್ಚಾನ್ಮಹಾಬಲಃ ॥ ೧೭೦ ॥

ತಾನಿ ಗೀತನಿಬದ್ಧಾನಿ ಹ್ಯಸ್ತೌತಾಂ ಸೂತಮಾಗಧೌ ।
ತತಃ ಸ್ತವಾಂತೇ ಸುಪ್ರೀತಃ ಪೃಥುಃ ಪ್ರಾದಾತ್ಪ್ರಜೇಶ್ವರಃ ॥ ೧೭೧ ॥

ಅನೂಪದೇಶಂ ಸೂತಾಯ ಮಗಧಂ ಮಾಗಧಾಯ ಚ ।
ತದಾದಿ ಪೃಥಿವೀಪಾಲಾಃ ಸ್ತೂಯಂತೇ ಸೂತಮಾಗಧೈಃ ॥ ೧೭೨ ॥

---

೧೬೮. ತೇಜಸ್ವಿಗಳಾದ ದ್ವಿಜರೇ! ಈ ರಾಜನನ್ನು ನಾವು ಸ್ತೋತ್ರಮಾಡಲು ಇವನ ಸಚ್ಚರಿತ, ಸಲ್ಲಕ್ಷಣ, ಅಥವಾ ವಿಸ್ತಾರವಾದ ಕೀರ್ತಿಯನ್ನು ತಿಳಿಯಲಿಲ್ಲ. ಎಂದು ಹೇಳಿದರು.

೧೬೯. ಇವನು ಸಂತತವಾಗಿ ಕರ್ಮಾಚರಣೆಯಲ್ಲಿ ನಿರತನೂ, ಸತ್ಯವಚನವುಳ್ಳವನೂ, ಜಿತೇಂದ್ರಿಯನೂ, ಜ್ಞಾನಾಭ್ಯಾಸಶೀಲನೂ, ಉದಾರನೂ, ಮತ್ತು ಯುದ್ಧರಂಗಗಳಲ್ಲಿ ಪರಾಜಯವನ್ನು ಹೊಂದದವನೂ ಆಗಿರುವನು.

೧೭೦. ಅನಂತರದಲ್ಲಿ ಬಲಿಷ್ಠನಾದ ಆ ಪೃಥುರಾಜನು ಯಾವ ಶ್ಲಾಘ್ಯ ಕರ್ಮಗಳನ್ನು ಆಚರಿಸಿದನೋ, ಆ ಭವಿಷ್ಯ ಕರ್ಮಗಳಿಂದ ಸ್ತೋತ್ರಮಾಡಬೇಕೆಂದು ಋಷಿಗಳಿಂದ ಆ ಸೂತಮಾಗಧರು ಮತ್ತೆ ನಿಯಮಿಸಲ್ಪಟ್ಟರು.

೧೭೧. ಆಗ ಆ ಸೂತಮಾಗಧರು ಆ ಕರ್ಮಗಳನ್ನು ಗೀತರೂಪವಾಗಿ ಕಟ್ಟಿ ಪ್ರೀತಿಯಿಂದ ಸ್ತುತಿಮಾಡಿದರು. ಆಗ ಆ ಸ್ತೋತ್ರಾಂತದಲ್ಲಿ ಪ್ರೀತನಾದ ರಾಜನು ಅವರಿಗೆ ತನ್ನ ಸಂತೋಷವನ್ನು ವ್ಯಕ್ತಪಡಿಸಿದನು.

೧೭೨. ಸ್ತುತಿಮಾಡಿರುವ ಸೂತನಿಗೆ ಅನೂಪದೇಶವನ್ನೂ, ಮಾಗಧನಿಗೆ

**ಆಶೀರ್ವಾದೈಃ ಪ್ರಬೋಧ್ಯಂತೇ ಸೂತಮಾಗಧವಂದಿಭಿಃ ।**
**ತಂ ದೃಷ್ಟ್ವಾ ಪರಮಪ್ರೀತಾಃ ಪ್ರಜಾ ಊಚುರ್ಮಹರ್ಷಯಃ ॥ ೧೭೩ ॥**

**ಏಷ ವೃತ್ತಿಪ್ರದೋ ವೈನ್ಯೋ ಭವಿಷ್ಯತಿ ನರಾಧಿಪಃ ।**
**ತತೋ ವೈನ್ಯಂ ಮಹಾಭಾಗಂ ಪ್ರಜಾಃ ಸಮಭಿದುದ್ರುವುಃ ॥ ೧೭೪ ॥**

**ತ್ವಂ ನೋ ವೃತ್ತಿಂ ವಿಧತ್ಸ್ವೇತಿ ಮಹರ್ಷಿವಚನಾತ್ತದಾ ।**
**ಸೋಽಭಿದ್ರುತಃ ಪ್ರಜಾಭಿಸ್ತು ಪ್ರಜಾಹಿತಚಿಕೀರ್ಷಯಾ ॥ ೧೭೫ ॥**

**ಧನುರ್ಗೃಹೀತ್ವಾ ಬಾಣಾಂಶ್ಚ ವಸುಧಾಮಾದ್ರವದ್ಬಲೀ ।**
**ತತೋ ವೈನ್ಯಭಯತ್ರಸ್ತಾ ಗೌರ್ಭೂತ್ವಾ ಪ್ರಾದ್ರವನ್ಮಹೀ ॥ ೧೭೬ ॥**

**ತಾಂ ಪೃಥುರ್ಧನುರಾದಾಯ ದ್ರವಂತೀಮನ್ವಧಾವತ ।**
**ಸಾ ಲೋಕಾನ್ ಬ್ರಹ್ಮಲೋಕಾದೀನ್ ಗತ್ವಾ ವೈನ್ಯಭಯಾತ್ತದಾ ॥ ೧೭೭ ॥**

---

ಮಗಧ ದೇಶವನ್ನೂ ಕೊಟ್ಟು ಗೌರವಿಸಿದನು. ಆ ಮೊದಲುಗೊಂಡು ರಾಜರು ಸೂತ ಮಾಗಧರಿಂದ ಸ್ತುತಿಸಲ್ಪಟ್ಟರು.

೧೭೩. ಸೂತ ಮಾಗಧರೆಂಬ ಬಂದಿಗಳಿಂದ ಆಶೀರ್ವಾದ ಪರವಾದ ಸ್ತುತಿ ವಾಕ್ಯಗಳಿಂದ ರಾಜರು ಎಚ್ಚರಗೊಳಿಸಲ್ಪಡುತ್ತಾರೆ. ಆಗ ಅವನನ್ನು ನೋಡಿ ಪರಮ ಸಂತುಷ್ಟರಾದ ಪ್ರಜೆಗಳನ್ನು ಕುರಿತು ಮಹರ್ಷಿಗಳು ಈ ರೀತಿಯಾಗಿ ಹೇಳಿದರು.

೧೭೪. ಈ ವೇನ ಪುತ್ರನಾದ ಪೃಥು ಮಹಾರಾಜನು ನಿಮಗೆ ಜೀವಿಕೆಯನ್ನು ಕೊಡುವನಾಗುವನು, ಎಂದು ಹೇಳಲಾಗಿ ಮಹಾತ್ಮನಾದ ಆ ಪೃಥುರಾಜನನ್ನು ಪ್ರಜೆಗಳು ಸುತ್ತುವರಿದು ಬಂದರು.

೧೭೫ ಆಗ ಪ್ರಜೆಗಳು ಋಷಿಗಳ ವಚನವನ್ನನುಸರಿಸಿ ರಾಜನೇ! ನಮಗೆ ವೃತ್ತಿಯನ್ನು ಕೊಡು ಎಂದು ಕೇಳಿದರು. ಹೀಗೆ ಪ್ರಜೆಗಳಿಂದ ಪ್ರಾರ್ಥಿಸಲ್ಪಟ್ಟ ರಾಜನು ಪ್ರಜಾಹಿತವನ್ನು ಸಂಪಾದಿಸಬೇಕೆಂಬ ಕುತೂಹಲವುಳ್ಳವನಾದನು.

೧೭೬ ಆಗ ಬಲಿಷ್ಠನಾದ ರಾಜನು ಬಾಣ, ಬಿಲ್ಲುಗಳನ್ನು ಧರಿಸಿ ಭೂದೇವಿಯನ್ನು ಅಟ್ಟಿಕೊಂಡು ಬಂದನು. ಇಂತಹ ವೈನ್ಯರಾಜನ ಭಯದಿಂದ ಬೆದರಿದ ಭೂಮಿಯು ಗೋರೂಪವನ್ನು ಧರಿಸಿ ಓಡಿತು.

೧೭೭. ಪೃಥುರಾಜನು ಬಿಲ್ಲನ್ನು ಹಿಡಿದು ಓಡುತ್ತಿದ್ದ ಹಸುವನ್ನು ಅಟ್ಟಿ

ಸಂದದರ್ಶಾಗ್ರತೋ ವೈನ್ಯಂ ಕಾರ್ಮುಕೋದ್ಯತಪಾಣಿಕಮ್ ।
ಜ್ವಲದ್ಭಿರ್ನಿಶಿತೈರ್ಬಾಣೈರ್ದೀಪ್ತತೇಜಸಮಚ್ಯುತಮ್ ॥ ೧೭೮ ॥

ಮಹಾಯೋಗಂ ಮಹಾತ್ಮಾನಂ ದುರ್ಧರ್ಷಮಮರೈರಪಿ ।
ಅಲಭಂತೀ ತು ಸಾ ತ್ರಾಣಂ ವೈನ್ಯಮೇವಾನ್ವಪದ್ಯತ ॥ ೧೭೯ ॥

ಕೃತಾಂಜಲಿಪುಟಾ ದೇವೀ ಪೂಜ್ಯಾ ಲೋಕೈಸ್ತ್ರಿಭಿಃ ಸದಾ ।
ಉವಾಚ ವೈನಂ ನಾಧರ್ಮಂ ಸ್ತ್ರೀವಧೇ ಪರಿಪಶ್ಯಸಿ ॥ ೧೮೦ ॥

ಕಥಂ ಧಾರಯಿತಾಽಸಿ ಪ್ರಜಾ ಯಾ ವರ್ಧಿತಾ ಮಯಾ ।
ಮಯಿ ಲೋಕಾಃ ಸ್ಥಿತಾ ರಾಜನ್ಮಯೇದಂ ಧಾರ್ಯತೇ ಜಗತ್
॥ ೧೮೧ ॥

ಮತ್ಕೃತೇ ನ ವಿನಶ್ಯೇಯುಃ ಪ್ರಜಾಃ ಪಾರ್ಥಿವ ವರ್ಧಿತಾಃ ।
ಸ ಮಾಂ ನಾರ್ಹಸಿ ವೈ ಹಂತುಂ ಶ್ರೇಯಸ್ತ್ವಂ ಚ ಚಿಕೀರ್ಷತಿ
॥ ೧೮೨ ॥

---

ಕೊಂಡು ಹೋಗಲಾಗಿ ವೈನ್ಯರಾಜನ ಭಯದಿಂದ ಬ್ರಹ್ಮಲೋಕ ಮುಂತಾದ ಅನೇಕ ಲೋಕಗಳನ್ನು ಪ್ರವೇಶಿಸಿತು.

೧೭೮. ಆಗ ಜ್ವಲಿಸುತ್ತಿದ್ದ ಹರಿತವಾದ ಬಾಣಗಳಿಂದ ದೀಪ್ಯಮಾನವಾದ ತೇಜಸ್ಸಿನಿಂದ ಕೂಡಿದವನೂ, ಶಾಶ್ವತನೂ, ಬಿಲ್ಲನ್ನು ಎತ್ತಿದ ಹಸ್ತವುಳ್ಳವನೂ ಆದ ವೈನ್ಯರಾಜನನ್ನು ಮುಂದುಗಡೆಯಲ್ಲಿ ನೋಡಿತು.

೧೭೯. ಮತ್ತು ಆ ರಾಜನು ಮಹಾಯೋಗಿಯೂ ಮತ್ತು ಮಹಾತ್ಮನೂ ಅಲ್ಲದೆ ದೇವತೆಗಳಿಂದ ಆಕ್ರಮಿಸಲು ಅಶಕ್ಯನೂ ಆಗಿದ್ದನು. ಆಗ ಆ ಭೂಮಿಯು ಬೇರೆ ಶರಣ ವಿಲ್ಲದೆ ಕಡೆಗೆ ವೈನ್ಯನನ್ನು ಶರಣ ಹೊಂದಿತು.

೧೮೦. ಅಂಜಲಿಬಂಧವನ್ನು ರಚಿಸಿದ ಮತ್ತು ಮೂರು ಲೋಕಗಳಿಗೆ ಯಾವಾಗಲೂ ಪೂಜ್ಯಳಾದ ಭೂದೇವಿಯು ಸ್ತ್ರೀಯಾದ ನನ್ನ ಹತ್ಯೆಯನ್ನು ಅಧರ್ಮವೆಂದು ತಿಳಿದಿಲ್ಲವೇ ? ಎಂದು ಕೇಳಿದಳು.

೧೮೧. ಮತ್ತು ರಾಜನೇ! ಲೋಕಗಳು ನನ್ನಲ್ಲಿ ಸ್ಥಿತಿಯನ್ನು ಹೊಂದಿವೆ. ಈ ಜಗತ್ತು ನನ್ನಿಂದ ಧರಿಸಲ್ಪಟ್ಟಿದೆ. ನನ್ನನ್ನು ಕೊಂದು ನನ್ನಿಂದ ವೃದ್ಧಿಗೊಳಿಸಲ್ಪಟ್ಟ ಈ ಪ್ರಜೆಗಳನ್ನು ಹೇಗೆ ತಾನೇ ಧರಿಸುವಿ ?

೧೮೨. ಎಲೈ ರಾಜನೇ! ವೃದ್ಧಿಹೊಂದಿದ ಈ ಪ್ರಜೆಗಳು ನನ್ನ ನಿಮಿತ್ತದಿಂದ

ಪ್ರಜಾನಾಂ ಪೃಥಿವೀಪಾಲ ಶೃಣು ಚೇದಂ ವಚೋ ಮಮ ।
ಉಪಾಯತಃ ಸಮಾರಬ್ಧಾಃ ಸರ್ವೇ ಸಿಧ್ಯಂತ್ಯುಪಕ್ರಮಾಃ ॥ ೧೮೩ ॥

ಹತ್ವಾಪಿ ಮಾಂ ನಶಕ್ತಸ್ತ್ವಂ ಪ್ರಜಾನಾಂ ಪಾಲನೇ ನೃಪ ।
ಅಂತರ್ಭೂತಾ ಭವಿಷ್ಯಾಮಿ ಜಹಿ ಕೋಪಂ ಮಹಾದ್ಯುತೇ ॥ ೧೮೪ ॥

ಅವಧ್ಯಾಶ್ಚ ಸ್ತ್ರಿಯಃ ಪ್ರಾಹುಸ್ತಿರ್ಯಗ್ಯೋನಿಗತೇಷ್ವಪಿ ।
ಸತ್ತ್ವೇಷು ಪೃಥಿವೀಪಾಲ ಧರ್ಮಂ ನ ತ್ಯಕ್ತುಮರ್ಹಸಿ ॥ ೧೮೫ ॥

ಏವಂ ಬಹುವಿಧಂ ವಾಕ್ಯಂ ಶ್ರುತ್ವಾ ತಸ್ಯಾ ಮಹಾಮನಾಃ ।
ಕ್ರೋಧಂ ನಿಗೃಹ್ಯ ಧರ್ಮಾತ್ಮಾ ವಸುಧಾಮಿದಮಬ್ರವೀತ್ ॥ ೧೮೬ ॥

ಏಕಸ್ಯಾರ್ಥಾಯ ಯೋ ಹನ್ಯಾದಾತ್ಮನೋ ವಾ ಪರಸ್ಯ ಚ ।
ಏಕಂ ಪ್ರಾಣೀ ಬಹೂನ್ವಾಪಿ ಕರ್ಮ ತಸ್ಯಾಸ್ತಿ ಪಾತಕಮ್ ॥ ೧೮೭ ॥

---

ನಾಶವನ್ನು ಹೊಂದಬಾರದು ಆದುದರಿಂದ ನೀನು ಪ್ರಜೆಗಳ ಶ್ರೇಯಸ್ಸನ್ನು ಸಂಪಾದಿಸಲು ಇಷ್ಟವುಳ್ಳವನಾದರೆ ನನ್ನನ್ನು ಕೊಲ್ಲದಿರಲು ಅರ್ಹನಾಗಿದ್ದಿ.

೧೮೩. ರಾಜನೇ, ನನ್ನ ಹಿತಕರವಾದ ವಚನವನ್ನು ಕೇಳು. ಎಲ್ಲ ಉದ್ಯೋಗಗಳು ಉಪಾಯದಿಂದ ಅನುಷ್ಠಾನ ಮಾಡಲಾಗಿ ನಿರಪಾಯವಾದ ಸಿದ್ಧಿಯನ್ನು ಹೊಂದುತ್ತವೆ.

೧೮೪. ನೃಪತಿಯೇ! ನನ್ನನ್ನು ಸಂಹರಿಸಿದ ಮಾತ್ರದಿಂದ ನೀನು ಪ್ರಜೆಗಳನ್ನು ಪಾಲಿಸಲು ಶಕ್ತನಾಗಲಾರೆ, ಆಗ ನಾನು ಅಂತರ್ಭೂತಳಾಗಿ ಅದೃಶ್ಯಳಾಗುವೆನು. ವೀರ್ಯವಂತನೇ! ಕೋಪವನ್ನು ತ್ಯಜಿಸು.

೧೮೫. ತಿರ್ಯಕ್ ಪ್ರಾಣಿಗಳಲ್ಲಿಯೂ ಸ್ತ್ರೀ ವ್ಯಕ್ತಿಗಳು ವಧ್ಯರಲ್ಲವೆಂದು ಪ್ರಾಜ್ಞರು ಹೇಳುತ್ತಿರುವರು. ಭೂಪತಿಯೇ! ಇಂತಹ ಅನಾದಿ ಧರ್ಮವನ್ನು ನೀನು ತ್ಯಾಗಮಾಡುವುದು ಉಚಿತವಲ್ಲ.

೧೮೬. ಮಹಾಮಾನಿಯೂ, ಧರ್ಮಾತ್ಮನೂ, ಆದ ಆ ರಾಜನು ಗೋರೂಪವಾದ ಭೂದೇವಿಯ ನಾನಾವಿಧವಾದ ವಚನಗಳನ್ನು ಕೇಳಿ ಕೋಪವನ್ನು ನಿಗ್ರಹಿಸಿ ಈ ಮಾತನ್ನು ಆಡಿದನು.

೧೮೭. ಯಾವ ಪ್ರಾಣಿಯು ತನ್ನ ಅಥವಾ ಪರನ ಒಂದು ಅರ್ಥಕ್ಕೋಸ್ಕರ

ಯಸ್ಮಿಂಸ್ತು ನಿಹತೇ ಭದ್ರೇ ಜೀವಂತೇ ಬಹವಃ ಸುಖಮ್ ।
ತಸ್ಮಿನ್ ಹತೇ ನಾಸ್ತಿ ಶುಭೇ ಪಾತಕಂ ಚೋಪಪಾತಕಮ್ ॥೧೮೮ ॥

ಸೋಽಹಂ ಪ್ರಜಾನಿಮಿತ್ತಂ ತ್ವಾಂ ಹನಿಷ್ಯಾಮಿ ವಸುಂಧರೇ ।
ಯದಿ ಮೇ ವಚನಂ ನಾದ್ಯ ಕರಿಷ್ಯಸಿ ಜಗದ್ಧಿತಮ್ ॥ ೧೮೯ ॥

ತ್ವಾಂ ನಿಹತ್ವಾಶು ಬಾಣೇನ ಮಚ್ಛಾಸನಪರಾಙ್ಮುಖೀಮ್ ।
ಆತ್ಮಾನಂ ಪ್ರಥಯಿತ್ವೇಹ ಪ್ರಜಾ ಧಾರಯಿತಾ ಸ್ವಯಮ್ ॥ ೧೯೦ ॥

ಸಾ ತ್ವಂ ವಚನಮಾಸ್ಥಾಯ ಮಮ ಧರ್ಮಭೃತಾಂ ವರೇ ।
ಸಂಜೀವಯ ಪ್ರಜಾ ನಿತ್ಯಂ ಶಕ್ತಾ ಹ್ಯಸಿ ನ ಸಂಶಯಃ ॥ ೧೯೧ ॥

ದುಹಿತೃತ್ವಂ ಚ ಮೇ ಗಚ್ಛ ಚೈವಮೇತಮಹಂ ಶರಮ್ ।
ನಿಯಚ್ಛೇಯಂ ತ್ವದ್ವಧಾರ್ಥಮುದ್ಯತಂ ಘೋರದರ್ಶನಮ್ ॥ ೧೯೨ ॥

---

ಒಂದು ಅಥವಾ ಅನೇಕ ಪ್ರಾಣಿಗಳನ್ನು ಸಂಹರಿಸುವನೋ, ಅವನಿಗೆ ಪಾತಕ ಉಪಾತಕಗಳು ತಪ್ಪುವುದಿಲ್ಲ.

೧೮೮. ಮಂಗಳಕರಳಾದ ಭೂಮಿಯೇ! ಯಾರನ್ನು ಕೊಂದರೆ ಅನೇಕ ಪ್ರಾಣಿಗಳು ಸುಖವಾಗಿ ಜೀವನ ಹೊಂದುವರೋ ಅಂಥವರನ್ನು ಸಂಹರಿಸಿದುದರಿಂದ ಪಾತಕ ಮತ್ತು ಉಪಪಾತಕಗಳು ಸಂಭವಿಸುವುದಿಲ್ಲ.

೧೮೯. ಭೂದೇವಿಯೇ, ಜಗತ್ತಿಗೆ ಹಿತಕರವಾದ ನನ್ನ ವಚನವನ್ನು ಈಗ ನೀನು ನೆರವೇರಿಸದೇ ಇದ್ದರೆ ಪ್ರಜೆಗಳ ನಿಮಿತ್ತದಿಂದ ನಾನು ನಿನ್ನನ್ನು ನಾಶಮಾಡುತ್ತೇನೆ.

೧೯೦. ನಾನು ನನ್ನ ಆಜ್ಞೆಯನ್ನು ಉಲ್ಲಂಘಿಸಿದ ನಿನ್ನನ್ನು ಬೇಗ ಬಾಣದಿಂದ ಕೊಂದು ಲೋಕದಲ್ಲಿ ನನ್ನನ್ನು ಪ್ರಸಿದ್ಧಿಗೊಳಿಸಿ ನನ್ನ ಭುಜಬಲದಿಂದ ಪ್ರಜೆಗಳನ್ನು ಧಾರಣಮಾಡುವೆನು.

೧೯೧. ಧರ್ಮಪ್ರವರ್ತಕರಲ್ಲಿ ಶ್ರೇಷ್ಠಳಾದ ಭೂಮಾತೆಯೇ! ನೀನು ನನ್ನ ವಚನವನ್ನು ಅಂಗೀಕರಿಸಿ ಪ್ರಜೆಗಳನ್ನು ಸಂತತವಾಗಿ ಜೀವಿಸುವಂತೆ ಮಾಡು. ನೀನು ಯಾವಾಗಲೂ ಅದಕ್ಕೆ ಶಕ್ತಳಾಗಿರುತ್ತೀ, ಇದರಲ್ಲಿ ಸಂಶಯವಿಲ್ಲ.

೧೯೨. ಮತ್ತು ನೀನು ನನಗೆ ಮಗಳಾಗಿ ಹುಟ್ಟು, ಹೀಗೆ ನೀನು ನಡೆಯು

ಪ್ರತ್ಯುವಾಚ ತತೋ ವೈನ್ಯಮೇವಮುಕ್ತಾ ಸತೀ ಮಹೀ ।
ಸರ್ವಮೇತದಹಂ ರಾಜನ್ ವಿಧಾಸ್ಯಾಮಿ ನ ಸಂಶಯಃ ॥ ೧೯೩ ॥

ವತ್ಸಂ ತು ಮಮ ತಂ ಪಶ್ಯ ಕ್ಷರೇಯಂ ಯೇನ ವತ್ಸಲಾ ।
ಸಮಾಂ ಚ ಕುರು ಸರ್ವತ್ರ ಮಾಂ ತ್ವಂ ಧರ್ಮಭೃತಾಂ ವರ
ಯಥಾ ವಿಸ್ಯಂದಮಾನಂ ಮೇ ಕ್ಷೀರಂ ಸರ್ವತ್ರ ಭಾವಯೇತ್ ॥ ೧೯೪ ॥

ಸೂತ ಉವಾಚ :—

ತತ ಉತ್ಸಾರಯಾಮಾಸ ಶಿಲಾಜಾಲಾನಿ ಸರ್ವಶಃ ।
ಧನುಷ್ಕೋಟ್ಯಾ ತಥಾ ವೈನ್ಯಸ್ತೇನ ಶೈಲಾ ವಿವರ್ಧಿತಾಃ ॥ ೧೯೫ ॥

ಮನ್ವಂತರೇಷ್ವತೀತೇಷು ವಿಷಮಾಸೀದ್ವಸುಂಧರಾ ।
ಸ್ವಭಾವೇನಾಭವತ್ತಸ್ಯಾಃ ಸಮಾನಿ ವಿಷಮಾಣಿ ಚ ॥ ೧೯೬ ॥

---

ವುದಾದರೆ ನಿನ್ನ ವಧೆಕ್ಕೋಸ್ಕರ ಸಿದ್ಧವಾದ ಘೋರವಾದ ದರ್ಶನವುಳ್ಳ ಈ ಬಾಣವನ್ನು ಉಪಸಂಹಾರ ಮಾಡುವೆನು.

೧೯೩. ಭೂದೇವಿಯು ರಾಜನಿಂದ ಈ ರೀತಿಯಾಗಿ ಹೇಳಲ್ಪಡಲಾಗಿ ವೈನ್ಯ ರಾಜನನ್ನು ಕುರಿತು ಪ್ರತಿವಚನವನ್ನು ಆಡಿದಳು. ರಾಜನೇ! ನಾನು ಎಲ್ಲವನ್ನೂ ಆಚರಿಸುವೆನು, ಇದರಲ್ಲಿ ಸಂದೇಹವಿಲ್ಲ.

೧೯೪. ಧರ್ಮಿಷ್ಠರಲ್ಲಿ ಅಗ್ರಗಣ್ಯನೇ! ಆದರೆ ನಾನು ಪ್ರೀತಿಯಿಂದ ಕ್ಷೀರವನ್ನು ಸುರಿಸುವಂತೆ ಯೋಗ್ಯವಾದ ಕರುವನ್ನು ಯೋಚಿಸು. ಮತ್ತು ನನ್ನಿಂದ ಸುರಿದ ಕ್ಷೀರವು ಸರ್ವ ಪ್ರದೇಶಗಳಲ್ಲಿಯೂ ಹರಿಯುವಂತೆ ನನ್ನನ್ನು ಸಮಮಟ್ಟವನ್ನಾಗಿ ಮಾಡು.

ಸೂತಮುನಿಯು ಇಂತೆಂದನು :—

೧೯೫. ಆಗ ವೈನ್ಯರಾಜನು ಹಾಗಾಗಲೆಂದು ಸಮ್ಮತಿಸಿ ಬಿಲ್ಲಿನ ಅಗ್ರದಿಂದ ಸುತ್ತಲೂ ಶಿಲೆಗಳ ಗುಂಪನ್ನು ಒತ್ತಿ ಭೂಮಿಯನ್ನು ಸಮಮಾಡಿದನು. ಅದರಿಂದ ಅಲ್ಲಲ್ಲಿ ಬೆಟ್ಟಗಳು ವೃದ್ಧಿ ಹೊಂದಿದುವು.

೧೯೬. ಹಿಂದೆ ಕಳೆದ ಮನ್ವಂತರಗಳಲ್ಲಿ ಭೂಮಿಯು ವಿಷಮವಾಗಿತ್ತು. ಆ

ನ ಹಿ ಪೂರ್ವನಿಸರ್ಗೇ ವೈ ವಿಷಮೇ ಪೃಥಿವೀತಲೇ ।
ಪ್ರವಿಭಾಗಃ ಪುರಾಣಾಂ ವಾ ಗ್ರಾಮಾಣಾಂ ವಾಪಿ ವಿದ್ಯತೇ　॥ ೧೯೭ ॥

ನ ಸಸ್ಯಾನಿ ನ ಗೋರಕ್ಷಂ ನ ಕೃಷಿರ್ನ ವಣಿಕ್ಪಥಃ ।
ಚಾಕ್ಷುಷಸ್ಯಾಂತರೇ ಪೂರ್ವಮಾಸೀದೇತತ್ ಪುರಾ ಕಿಲ　॥ ೧೯೮ ॥

ವೈವಸ್ವತೇಽಂತರೇ ತಸ್ಮಿನ್ ಸರ್ವಸ್ಯೈತಸ್ಯ ಸಂಭವಃ ।
ಸಮತ್ವಂ ಯತ್ರ ಯತ್ರಾಸೀದ್ಭೂಮೇಃ ಕಸ್ಮಿಂಶ್ಚಿದೇವ ಹಿ　॥ ೧೯೯ ॥

ತತ್ರ ತತ್ರ ಪ್ರಜಾಸ್ತಾ ವೈ ನಿವಸಂತಿ ಚ ಸರ್ವಶಃ ।
ಆಹಾರಃ ಫಲಮೂಲೇ ತು ಪ್ರಜಾನಾಮಭವತ್ಕಿಲ　॥ ೨೦೦ ॥

ಕೃಚ್ಛ್ರೇಣೈವ ತದಾ ತಾಸಾಮಿತ್ಯೇವಮನುಶುಶ್ರುಮ ।
ವೈನ್ಯಾತ್ ಪ್ರಭೃತಿ ಲೋಕೇಽಸ್ಮಿನ್ ಸರ್ವಸ್ಯೈತಸ್ಯ ಸಂಭವಃ ॥ ೨೦೧ ॥

---

ಭೂಮಿಯ ಕೆಲಕೆಲವು ಭಾಗಗಳು ಸಮವಾಗಿಯೂ, ವಿಷಮವಾಗಿಯೂ, ಸ್ವಭಾವ ವಾಗಿಯೇ ಇದ್ದುವು.

೧೯೭. ಪೂರ್ವ ಸೃಷ್ಟಿಯಲ್ಲಿ ವಿಷಮವಾದ ಭೂತಲದಲ್ಲಿ ಗ್ರಾಮ ಮತ್ತು ನಗರಗಳ ವಿಭಾಗವು ಲೇಶವೂ ಇರಲಿಲ್ಲ.

೧೯೮. ಮೊದಲು ಸಸ್ಯ, ಗೋವುಗಳ ರಕ್ಷಣೆ, ಕೃಷಿ, ವಾಣಿಜ್ಯ, ಮುಂತಾದ ಯಾವುದೊಂದು ವೃತ್ತಿಯೂ ಇರಲಿಲ್ಲ. ಪೂರ್ವದಲ್ಲಿ ಚಾಕ್ಷುಷಮನ್ವಂತರದಲ್ಲಿ ಇದೆಲ್ಲವೂ ಅಸಂಭವಿಯಾಗಿತ್ತು.

೧೯೯. ಆ ವೈವಸ್ವತ ಮನ್ವಂತರದಲ್ಲಿ ಇವುಗಳ ಉತ್ಪತ್ತಿಗೆ ಉಪಕ್ರಮ ವಾಯಿತು. ಭೂಮಿಯು ಆಯಾಯ ಕೆಲವೆಡೆಗಳಲ್ಲಿ ಸಮತ್ವವನ್ನು ಹೊಂದಿತ್ತು.

೨೦೦. ಆಯಾಯ ಸ್ಥಳದಲ್ಲಿ ಸುತ್ತಲೂ ಪ್ರಜೆಗಳು ವಾಸಮಾಡುತ್ತಿದ್ದರು. ಆ ಪ್ರಜೆಗಳಿಗೆ ಫಲ ಮತ್ತು ಮೂಲಗಳು ಆಹಾರವಾಗಿದ್ದುವು.

೨೦೧. ಆ ಪ್ರಜೆಗಳಿಗೆ ಫಲಮೂಲಗಳ ಆಹಾರವು ವಿವಿಧವಾಗಿ ಬಹಳ ಕಷ್ಟ ದಿಂದ ಉಂಟಾಯಿತೆಂದು ಕೇಳುತ್ತಿದ್ದೇವೆ. ಈ ಲೋಕದಲ್ಲಿ ವೈನ್ಯರಾಜನ ಮೊದಲು ಗೊಂಡು ಈ ವಿಧವಾದ ವರ್ತನವು ಉಪಕ್ರಮಿಸಿತು.

ಸ ಕಲ್ಪಯಿತ್ವಾ ವತ್ಸಂ ತು ಚಾಕ್ಷುಷಂ ಮನುಮೀಶ್ವರಃ ।
ಪೃಥುರ್ದುದೋಹ ಸಸ್ಯಾನಿ ಸ್ವೇ ತಲೇ ಪೃಥಿವೀಂ ತತಃ ॥ ೨೦೨ ॥

ತೇನಾನ್ನೇನ ತತಸ್ತಾ ವೈ ವರ್ತಯಂತಿ ಶುಭಾಃ ಪ್ರಜಾಃ ।
ಋಷಿಭಿಃ ಶ್ರೂಯತೇ ಚಾಪಿ ಪುನರ್ದುಗ್ಧಾ ವಸುಂಧರಾ ॥ ೨೦೩ ॥

ವತ್ಸಃ ಸೋಮಸ್ತ್ವಭೂತ್ತೇಷಾಂ ದೋಗ್ಧಾ ಚಾಪಿ ಬೃಹಸ್ಪತಿಃ ।
ಛಂದಾಂಸಿ ಪಾತ್ರಮಾಸೀತ್ತು ಗಾಯತ್ರ್ಯಾದೀನಿ ಸರ್ವಶಃ ॥ ೨೦೪ ॥

ಕ್ಷೀರಮಾಸೀತ್ತದಾ ತೇಷಾಂ ತಪೋ ಬ್ರಹ್ಮ ಚ ಶಾಶ್ವತಮ್ ।
ಪುನಸ್ತತೋ ದೇವಗಣೈಃ ಪುರಂದರಪುರೋಗಮೈಃ ॥ ೨೦೫ ॥

ಸೌವರ್ಣಪಾತ್ರಮಾದಾಯ ದುಗ್ಧಾ ಸಂಶ್ರೂಯತೇ ಮಹೀ ।
ವತ್ಸಸ್ತು ಮಘವಾನಾಸೀದ್ದೋಗ್ಧಾ ಚ ಸವಿತಾ ವಿಭುಃ ॥ ೨೦೬ ॥

---

೨೦೨. ದಕ್ಷನಾದ ಈ ಪೃಥುರಾಜನು ಚಾಕ್ಷುಷ ಮನುವನ್ನು ಕರುವನ್ನಾಗಿ ಕಲ್ಪಿಸಿ ತನ್ನ ಹಸ್ತತಲದಲ್ಲಿ ಭೂಮಿಯಿಂದ ಅನೇಕವಿಧವಾದ ಸಸ್ಯವೆಂಬ ಕ್ಷೀರವನ್ನು ಕರೆದನು.

೨೦೩. ಅನಂತರದಲ್ಲಿ ಆ ಮಂಗಳಕರರಾದ ಪ್ರಜೆಗಳು ಆ ಸಸ್ಯಾನ್ನದಿಂದ ಜೀವನವನ್ನು ನಡೆಸಿದರು. ತರುವಾಯ ಮಹರ್ಷಿಗಳು ಆ ಗೋರೂಪ ಭೂಮಿಯನ್ನು ಮತ್ತೆ ದೋಹನ ಮಾಡಿದರೆಂದು ಕೇಳುತ್ತೇವೆ.

೨೦೪. ಅವರಲ್ಲಿ ಬೃಹಸ್ಪತಿಯು ದೋಹನ ಮಾಡುವ ಪುರುಷನಾಗಿದ್ದನು. ಸೋಮನು ಕರುವಾಗಿದ್ದನು. ಗಾಯತ್ರೀ ಮುಂತಾದ ಸಮಸ್ತ ಛಂದಸ್ಸುಗಳು ಪಾತ್ರರೂಪಗಳಾಗಿದ್ದುವು.

೨೦೫. ಆಗ ಅನಾದಿಯಾದ ಮತ್ತು ಶಾಶ್ವತವಾದ ತಪಸ್ಸೆಂಬ ಬ್ರಹ್ಮವು ಕ್ಷೀರವಾಗಿ ಸ್ರವಿಸಿತು. ಅನಂತರದಲ್ಲಿ ಮತ್ತೆ ದೇವೇಂದ್ರನೇ ಮುಂತಾದ ದೇವಗಣವು ಭೂಮಿಯನ್ನು ಕರೆದರು.

೨೦೬. ಅವರು ಸುವರ್ಣದ ಪಾತ್ರವನ್ನು ಧರಿಸಿ ಭೂಮಿಯನ್ನು ಕರೆದರೆಂದು ಹೇಳುವರು. ಆಗ ವತ್ಸವು ಇಂದ್ರನಾಗಿದ್ದನು. ಪರಮಾತ್ಮನಾದ ಸೂರ್ಯನು ದೋಹನಮಾಡುವವನಾಗಿದ್ದನು.

ಕ್ಷೀರಮೂರ್ಜಂ ಚ ಮಧು ಚ ವರ್ತಂಶೇ ತೇನ ದೇವತಾಃ ।
ಪಿತೃಭಿಃ ಶ್ರೂಯತೇ ಚಾಪಿ ಪುನರ್ದುಗ್ಧಾ ವಸುಂಧರಾ ॥ ೨೦೭ ॥

ರಜತಂ ಪಾತ್ರಮಾದಾಯ ಸ್ವಧಾಮಾಶು ವಿತೃಪ್ತಯೇ ।
ವೈವಸ್ವತೋ ಯಮಸ್ತ್ವಾಸೀತ್ತೇಷಾಂ ವತ್ಸಃ ಪ್ರತಾಪವಾನ್॥ ೨೦೮ ॥

ಅಂತಕಶ್ಚಾಭವದ್ದೋಗ್ಧಾ ಪಿತೃಣಾಂ ಬಲವಾನ್ ಪ್ರಭುಃ ।
ಅಸುರೈಃ ಶ್ರೂಯತೇ ಚಾಪಿ ಪುನರ್ದುಗ್ಧಾ ವಸುಂಧರಾ ॥ ೨೦೯ ॥

ಆಯಸಂ ಪಾತ್ರಮಾದಾಯ ಕಿಲ ಮಾಯಾಶ್ಚ ಸರ್ವಶಃ ।
ವಿರೋಚನಸ್ತು ಪ್ರಾಹ್ರಾದಿರ್ವತ್ಸಸ್ತೇಷಾಂ ಮಹಾಯಶಾಃ ॥ ೨೧೦ ॥

ತ್ರಿತ್ವಿಗ್ದ್ವಿಮೂರ್ಧಾ ದೈತ್ಯಾನಾಂ ದೋಗ್ಧಾಭೂದ್ದಿತಿನಂದನಃ ।
ಪಯಸಾ ತೇ ಚ ಮಾಯಾಭಿಃ ಸರ್ವೇ ಮಾಯಾವಿನೋಽಸುರಾಃ
॥ ೨೧೧ ॥

---

೨೦೭. ಆಗ ಊರ್ಜರೂಪವಾದ ಅನ್ನ, ಮಧು ಇವುಗಳು ಕ್ಷೀರವಾಗಿ ಪರಿಣಮಿಸಿದುವು. ದೇವತೆಗಳು ಇದರಿಂದ ಜೀವನ ಮಾಡುವರು. ಅನಂತರದಲ್ಲಿ ಪಿತೃಗಳು ಭೂಮಿಯನ್ನು ಕರೆದರೆಂದು ಶ್ರವಣಮಾಡುತ್ತಿದ್ದೇವೆ.

೨೦೮. ಅವರು ಪ್ರತಾಪವಂತನಾದ ಮತ್ತು ಸೂರ್ಯಪುತ್ರನಾದ ಯಮನನ್ನು ಕರುವನ್ನಾಗಿ ಕಲ್ಪಿಸಿಕೊಂಡು ರಜತಪಾತ್ರದಲ್ಲಿ ತೃಪ್ತಿಗೋಸ್ಕರ ಬೇಗ ಸ್ವಧಾರೂಪವಾದ ಅನ್ನವನ್ನು ಕರೆದರು.

೨೦೯. ಆಗ ಪಿತೃಗಳಲ್ಲಿ ಬಲಿಷ್ಠನೂ, ಪ್ರಭುವೂ ಆದ ಅಂತಕನು ದೊಗ್ಧೃವಾಗಿದ್ದನು. ಮತ್ತೆ ಅಸುರರಿಂದ ಭೂಮಿಯು ಕರೆಯಲ್ಪಟ್ಟಿತೆಂದು ಕೇಳುತ್ತೇವೆ.

೨೧೦. ಆಗ ಉಕ್ಕಿನ ಪಾತ್ರೆಯನ್ನು ತೆಗೆದುಕೊಂಡು ಅನೇಕವಿಧವಾದ ಮಾಯೆಗಳನ್ನು ಕರೆದರು. ಮಹಾ ಕೀರ್ತಿವಂತನಾದ ವಿರೋಚನನೆಂಬ ಆದಿ ಪುರುಷನು ಕರುವಾಗಿದ್ದನು.

೨೧೧. ದೈತ್ಯರಲ್ಲಿ ಶ್ರೇಷ್ಠನೂ, ದಿತಿದೇವಿಯ ಪುತ್ರನೂ ಆದ ವಿಮೂರ್ಧ ಎಂಬುವನು ಕರೆಯುವವನಾಗಿದ್ದನು. ಮಾಯಾವಿಗಳಾದ ರಾಕ್ಷಸರು ಆ ದೋಹನದಿಂದ ಮಾಯೆಯನ್ನು ಕ್ಷೀರವನ್ನಾಗಿ ಆರ್ಜಿಸಿದರು.

ವರ್ತಯಂತಿ ಮಹಾವೀರ್ಯಾಸ್ತದೇಷಾಂ ಪರಮಂ ಬಲಮ್ ।
ನಾಗೈಸ್ತು ಶ್ರೂಯತೇ ದುಗ್ಧಾ ವತ್ಸಂ ಕೃತ್ವಾ ತು ತಕ್ಷಕಮ್ ॥ ೨೧೨ ॥

ಅಲಾಬೂಪಾತ್ರಮಾದಾಯ ವಿಷಂ ಕ್ಷೀರಂ ತದಾ ಮಹೀ ।
ತೇಷಾಂ ವೈ ವಾಸುಕಿರ್ದೋಗ್ಧಾ ಕಾದ್ರವೇಯಃ ಪ್ರತಾಪವಾನ್
॥ ೨೧೩ ॥

ನಾಗಾನಾಂ ವೈ ದ್ವಿಜಶ್ರೇಷ್ಠ ಸರ್ಪಾಣಾಂ ಚೈವ ಸರ್ವಶಃ ।
ತೇನೈವ ವರ್ತಯಂತ್ಯುಗ್ರಾ ಮಹಾಕಾಯಾ ವಿಷೋಲ್ಬಣಾಃ ॥ ೨೧೪ ॥

ತದಾಹಾರಾಸ್ತದಾಚಾರಾಸ್ತದ್ವೀರ್ಯಾಸ್ತದುಪಾಶ್ರಯಾಃ ।
ಆಮಪಾತ್ರೇ ಪುನರ್ದುಗ್ಧಾ ತ್ವಂತರ್ಧಾನಪ್ರಿಯಂ ಮಹೀ ॥ ೨೧೫ ॥

ವತ್ಸಂ ವೈಶ್ರವಣಂ ಕೃತ್ವಾ ಯಕ್ಷೈಃ ಪುಣ್ಯಜನೈಸ್ತಥಾ ।
ದೋಗ್ಧಾ ರಜತನಾಭಸ್ತು ಪಿತಾ ಮಣಿಧರಸ್ಯ ಯಃ ॥ ೨೧೬ ॥

---

೨೧೨. ಮಹಾ ವೀರ್ಯವಂತರಾದ ಆ ರಾಕ್ಷಸರು ಮಾಯಾ ಕ್ಷೀರದಿಂದ ಜೀವನ ಮಾಡಿದರು. ಅನಂತರದಲ್ಲಿ ತಕ್ಷಕ ಸರ್ಪವನ್ನು ಕರುವನ್ನಾಗಿ ಮಾಡಿಕೊಂಡು ಸರ್ಪಗಳು ಗೋವನ್ನು ಕರೆದರು.

೨೧೩. ಆಗ ಸೋರೇಬುರುಡೆಯು ಪಾತ್ರವಾಗಿಯೂ, ವಿಷವು ಹಾಲಾಗಿಯೂ, ಕದ್ರು ಎಂಬುವಳ ಪುತ್ರನೂ, ಪ್ರತಾಪವಂತನೂ ಆದ ವಾಸುಕಿಯು ಕರೆಯುವವನೂ ಆಗಿದ್ದನು.

೨೧೪. ದ್ವಿಜಶ್ರೇಷ್ಠರೇ ! ನಾಗ, ಸರ್ಪಜಾತಿಗಳಲ್ಲಿ ಶ್ರೇಷ್ಠನಾದ ವಾಸುಕಿಯು ಕರೆದಿರುವ ವಿಷವೆಂಬ ಕ್ಷೀರದಿಂದ ಉಲ್ಬಣರೂಪವುಳ್ಳವುಗಳೂ, ಉನ್ನತದೇಹವುಳ್ಳವುಗಳೂ ಆದ ಸರ್ಪಗಳು ಜೀವಿಸಿದುವು.

೨೧೫. ಅವು ವಿಷದ ಆಹಾರ, ಅದಕ್ಕೆ ಅನುರೂಪವಾದ ಆಚಾರ, ತದನುಗುಣವಾದ ವೀರ್ಯ --ಇವುಗಳ ಅವಲಂಬನೆಯಿಂದಿದ್ದುವು. ಭೂಮಿಯು ಮತ್ತೆ ಆಮಪಾತ್ರದಲ್ಲಿ ಅಂತರ್ಧಾನ ಪ್ರೀತಿಯೆಂಬ ಹಾಲನ್ನು ಕರೆಯಲ್ಪಟ್ಟಿತು.

೨೧೬. ಆಗ ಪುಣ್ಯಜನರಾದ ಯಕ್ಷರು ಕುಬೇರನನ್ನು ಕರುವನ್ನಾಗಿ ಮಾಡಿ ಕರೆದರು. ಮಣಿಧರನೆಂಬುವನ ತಂದೆಯಾದ ರಜತನಾಭನು ದೋಹನ ಮಾಡುವ ಪುರುಷನಾಗಿದ್ದನು.

ಯಕ್ಷಾತ್ಮಜೋ ಮಹಾತೇಜಾ ವಶೀ ಚ ಸುಮಹಾಯಶಾಃ ।
ತೇನ ತೇ ವರ್ತಯಂತೀತಿ ಪರಮಾರ್ಥತಯಾ ಚ ಹ ॥ ೨೧೭ ॥

ರಾಕ್ಷಸೈಶ್ಚ ಪಿಶಾಚೈಶ್ಚ ಪುನರ್ದುಗ್ಧಾ ವಸುಂಧರಾ ।
ಬ್ರಹ್ಮಾ ಬ್ರಾಹ್ಮೋಽಸ್ತು ವೈ ದೋಗ್ಧಾ ತೇಷಾಮಾಸೀತ್ ಕುಬೇರಕಃ ॥ ೨೧೮ ॥

ವತ್ಸಃ ಸುಮಾಲೀ ಬಲವಾನ್ ಕ್ಷೀರಂ ರುಧಿರಮೇವ ಚ ।
ಕಪಾಲಪಾತ್ರೇ ನಿರ್ದುಗ್ಧಾ ಹ್ಯಂತರ್ಧಾನಂ ಚ ರಾಕ್ಷಸೈಃ ॥ ೨೧೯ ॥

ತೇನ ಕ್ಷೀರೇಣ ರಕ್ಷಾಂಸಿ ವರ್ತಯಂತೀಹ ಸರ್ವಶಃ ।
ಪದ್ಮಪಾತ್ರೇ ಪುನರ್ದುಗ್ಧಾ ಗಂಧರ್ವೈಶ್ಚಾಪ್ಸರೋಗಣೈಃ ॥ ೨೨೦ ।

ವತ್ಸಂ ಚಿತ್ರರಥಂ ಕೃತ್ವಾ ಶುಚೀನ್ ಗಂಧಾನ್ ಮಹೀ ತದಾ ।
ತೇಷಾಂ ವಸುರುಚಿಸ್ತ್ವಾಸೀದ್ದೋಗ್ಧಾ ಪುತ್ರೋ ಮನೋಃ ಶುಭಃ ॥ ೨೨೧ ॥

---

೨೧೭. ಆ ದೋಗ್ಧೃ ಪುರುಷನು ಯಕ್ಷಪುತ್ರನೂ, ಮಹಾ ತೇಜಸ್ವಿಯೂ, ಜಿತೇಂದ್ರಿಯನೂ ಮತ್ತು ಬಹು ಕೀರ್ತಿವಂತನೂ ಆಗಿದ್ದನು. ಆಗ ಕರೆದ ಅಮೂಲ್ಯ ವಸ್ತುವೆಂಬ ಕ್ಷೀರದಿಂದ ವೃತ್ತಿಯನ್ನು ನಡೆಸಿದರು.

೨೧೮. ಅನಂತರದಲ್ಲಿ ರಾಕ್ಷಸ, ಪಿಶಾಚಗಳಿಂದ ಭೂಮಿಯು ಪುನಃ ಕರೆಯಲ್ಪಟ್ಟಿತು. ಆಗ ಸ್ಥೂಲಕಾಯನಾದ, ಯಕ್ಷಗಣದಲ್ಲಿ ಸೇರಿದ ಕುಬೇರನು ಭೂಮಿಯನ್ನು ಕರೆದನು.

೨೧೯. ಆಗ ವೀರ್ಯವಂತನಾದ ಸುಮಾಲಿಯು ಕರುವಾಗಿದ್ದನು. ರಕ್ತವು ಕ್ಷೀರವಾಗಿತ್ತು. ಮತ್ತು ರಾಕ್ಷಸರು ನರಕಪಾಲ ಪಾತ್ರದಲ್ಲಿ ಅಂತರ್ಧಾನಶಕ್ತಿಯನು ಕರೆದರು.

೨೨೦. ಆ ಕ್ಷೀರದಿಂದ ಎಲ್ಲ ರಾಕ್ಷಸರೂ ವೃತ್ತಿಯನ್ನು ನಡೆಸಿದರು. ಮತ್ತೆ ಗಂಧರ್ವರೂ, ಅಪ್ಸರ ಸ್ತ್ರೀಯರೂ, ಪದ್ಮಪುಷ್ಪವೆಂಬ ಪಾತ್ರೆಯಲ್ಲಿ ಭೂಮಿಯನ್ನು ಕರೆದರು.

೨೨೧. ಆಗ ಚಿತ್ರರಥನೆಂಬ ಯಕ್ಷನು ವತ್ಸನಾಗಿದ್ದನು. ಭೂಮಿಯು ಆಗ ಹೆಚ್ಚು ಸುಗಂಧವನ್ನು ಕ್ಷೀರವನ್ನಾಗಿ ಕರೆಯಿತು. ಮನುವಿನ ಪುತ್ರನಾದ, ಮಂಗಳಶೀಲನಾದ ವಸುರುಚಿಯು ಅವರಿಗೆ ದೋಗ್ಧೃ ಪುರುಷನಾಗಿದ್ದನು.

ಗಂಧರ್ವರಾಜೋಽತಿಬಲೋ ಮಹಾತ್ಮಾ ಸೂರ್ಯಸನ್ನಿಭಃ ।
ಶೈಲೈಶ್ಚ ಶ್ರೂಯತೇ ದುಗ್ಧಾ ಪುನರ್ದುಗ್ಧಾ ವಸುಂಧರಾ ॥ ೨೨೨ ॥

ತದೌಷಧೀರ್ಮೂರ್ತಿಮತೀ ರತ್ನಾನಿ ವಿವಿಧಾನಿ ಚ ।
ವತ್ಸಸ್ತು ಹಿಮವಾನಾಸೀದ್ದೋಗ್ಧಾ ಮೇರುರ್ಮಹಾಗಿರಿಃ ॥ ೨೨೩ ॥

ಪಾತ್ರಂ ತು ಶೈಲಮೇವಾಸೀತ್ತೇನ ಶೈಲಾಃ ಪ್ರತಿಷ್ಠಿತಾಃ ।
ಶ್ರೂಯತೇ ವೃಕ್ಷವೀರುದ್ಭಿಃ ಪುನರ್ದುಗ್ಧಾ ವಸುಂಧರಾ ॥ ೨೨೪ ॥

ಪಾಲಾಶಂ ಪಾತ್ರಮಾದಾಯ ಛಿನ್ನದಗ್ಧಪ್ರರೋಹಣಮ್ ।
ಕಾಮಧುಕ್ ಪುಷ್ಪಿತಃ ಶಾಲಃ ಪ್ಲಕ್ಷೋ ವತ್ಸೋ ಯಶಸ್ವಿನಾಮ್ ॥ ೨೨೫ ॥

ಸರ್ವಕಾಮದುಘಾ ದೋಗ್ಧ್ರೀ ಪೃಥಿವೀ ಭೂತಭಾವಿನೀ ।
ಸೈವ ಧಾತ್ರೀ ವಿಧಾತ್ರೀ ಚ ಧಾರಿಣೀ ಚ ವಸುಂಧರಾ ॥ ೨೨೬ ॥

---

೨೨೨. ಅವನು ಸೂರ್ಯನಿಗೆ ಸಮಾನನೂ, ಮಹಾತ್ಮನೂ, ಅತಿ ಬಲಿಷ್ಠನೂ ಮತ್ತು ಗಂಧರ್ವರಾಜನೂ ಆಗಿದ್ದನು. ಮತ್ತೆ ಪರ್ವತಗಳು ಭೂದೇವಿಯನ್ನು ಹಾಲು ಕರೆದುವು.

೨೨೩. ಆಗ ಮೂರ್ತಿಮತ್ತಾದ ಅನೇಕ ಓಷಧಿಗಳನ್ನೂ ಅನೇಕ ವಿಧವಾದ ರತ್ನಗಳನ್ನೂ ಕರೆದುವು. ಪರ್ವತಗಳಲ್ಲಿ ಹಿಮವಂತನು ಕರುವಾಗಿದ್ದನು. ಮೇರುವೆಂಬ ಮಹಾ ಪರ್ವತವು ದೋಗ್ಧ್ರುವಾಗಿಯೂ ಇತ್ತು.

೨೨೪. ಪಾತ್ರವು ಶಿಲಾಮಯವಾಗಿತ್ತು. ಆದರಿಂದ ಪರ್ವತಗಳು ಪ್ರತಿಷ್ಠಿತಗಳಾದುವು. ಮತ್ತೆ ವೃಕ್ಷ ಮತ್ತು ಲತೆಗಳಿಂದ ಭೂದೇವಿಯು ಕರೆಯಲ್ಪಟ್ಟಳೆಂದು ಕೇಳುತ್ತೇವೆ.

೨೨೫. ಆಗ ವೃಕ್ಷದ ಎಲೆಯನ್ನು ಪಾತ್ರವನ್ನಾಗಿ ಧರಿಸಿ ಪುಷ್ಪಗಳಿಂದ ಅಲಂಕೃತವಾದ ಸಾಲವೃಕ್ಷವನ್ನು ಕರುವನ್ನಾಗಿ ಮಾಡಿಕೊಂಡು ಕೀರ್ತಿಶಾಲಿಯಾದ ವೃಕ್ಷದ ಜಾತಿಗೆ ಛೇದನ, ದಹನಗಳಾದರೂ ಮತ್ತೆ ಪ್ರರೋಹಣವೆಂಬ ಕ್ಷೀರವನ್ನು ಕರೆದುವು.

೨೨೬. ಹೀಗೆ ಭೂತಗಳಿಗೆ ಆಧಾರವಾದ ಭೂಮಿಯು ನಾನಾವಿಧವಾದ ಇಷ್ಟಾರ್ಥಗಳನ್ನು ಕರೆಯುವ ಧೇನುವಾಯಿತು. ನಾನಾ ವಿಧವಾದ ರತ್ನಾದಿ ವಸ್ತು

ದುಗ್ಧಾ ಹಿತಾರ್ಥಂ ಲೋಕಾನಾಂ ಪೃಥುನೇತಿ ಹಿ ನಃ ಶ್ರುತಮ್ ।
ಚರಾಚರಸ್ಯ ಲೋಕಸ್ಯ ಪ್ರತಿಷ್ಠಾ ಯೋನಿರೇವ ಚ　　॥ ೨೨೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಷಟ್ತ್ರಿಂಶತ್ತಮೋಽಧ್ಯಾಯಃ

---

ಗಳಿಗೆ ಆಧಾರವಾಗಿ ಭೂತಗಳ ಧಾರಣ, ಪೋಷಣ ಮುಂತಾದುವುಗಳನ್ನು ಮಾಡುವುದರಿಂದ ಧಾತ್ರೀ, ವಿಧಾತ್ರೀ ಮತ್ತು ಧಾರಿಣಿ ಎಂಬುದಾಗಿ ಕರೆಯಲ್ಪಡುತ್ತದೆ.

೨೨೭. ಚರ ಮತ್ತು ಅಚರ ಪ್ರಾಣಿವರ್ಗದಿಂದ ಕೂಡಿದ ಲೋಕಗಳಿಗೆ ಕಾರಣವೂ, ಆಧಾರವೂ ಆದ ಭೂಮಿಯನ್ನು ಪೃಥುರಾಜನು ಲೋಕಕಲ್ಯಾಣಕ್ಕಾಗಿ ಪೂರ್ವದಲ್ಲಿ ಕರೆದನೆಂದು ನಮ್ಮಿಂದ ಕೇಳಲ್ಪಟ್ಟಿದೆ.

ಬ್ರಹ್ಮಾಂಡಪುರಾಣದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.

# ಸಪ್ತತ್ರಿಂಶತ್ತಮೋಽಧ್ಯಾಯಃ

**ಸೂತ ಉವಾಚ :—**

**ಆಸೀದಿಹ ಸಮುದ್ರಾಂತಾ ವಸುಧೇತಿ ಯಥಾಶ್ರುತಮ್ ।**
**ವಸು ಧತ್ತೇ ಯತಸ್ತಸ್ಮಾದ್ವಸುಧಾ ಸೇತಿ ಗೀಯತೇ ॥ ೧ ॥**

**ಮಧುಕೈಟಭಯೋಃ ಪೂರ್ವಂ ಮೇದಸಾ ಸಂಪರಿಪ್ಲುತಾ ।**
**ತೇನೇಯಂ ಮೇದಿನೀತ್ಯುಕ್ತಾ ನಿರುಕ್ತ್ಯಾ ಬ್ರಹ್ಮವಾದಿಭಿಃ ॥ ೨ ॥**

**ತತೋಽಭ್ಯುಪಗಮಾದ್ರಾಜ್ಞಃ ಪೃಥೋರ್ವೈನ್ಯಸ್ಯ ಧೀಮತಃ ।**
**ದುಹಿತೃತ್ವಮನುಪ್ರಾಪ್ತಾ ಪೃಥಿವೀ ಪಠ್ಯತೇ ತತಃ । ॥ ೩ ॥**

**ಪೃಥುನಾ ಪ್ರವಿಭಾಗಶ್ಚ ಧರಾಯಾಃ ಸಾಧಿತಃ ಪುರಾ ।**
**ತಸ್ಯಾಕರವತೀ ರಾಜ್ಞಃ ಪತ್ತನಾಕರಮಾಲಿನೀ । ॥ ೪ ॥**

---

ಸೂತಮುನಿಯು ಮುಂದೆ ಹೇಳಿದನು :—

೧. ಹಿಂದೆ ನಾವು ಭೂಮಿಯು ಸಮುದ್ರಗಳವರೆಗೆ ವಿಶಾಲವಾಗಿತ್ತೆಂದು ಕೇಳಿರುವೆವು. ಇದು ನಾನಾ ವಿಧವಾದ ಧನವನ್ನು ಧಾರಣ ಮಾಡಿರುವುದರಿಂದ "ವಸುಧಾ" ಎಂಬ ಸಂಜ್ಞೆಯಿಂದ ಕರೆಯಲ್ಪಟ್ಟಿದೆ.

೨. ಭೂಮಿಯು ಪೂರ್ವದಲ್ಲಿ ಮಧು ಮತ್ತು ಕೈಟಭರೆಂಬ ದಾನವರ ಮೇದಸ್ಸಿನಿಂದ ವ್ಯಾಪ್ತವಾಗಿತ್ತು. ಆದುದರಿಂದ ಬ್ರಹ್ಮವಾದಿಗಳು ಮೇದಸ್ಸಿನಿಂದ ವ್ಯಾಪ್ತವಾದುದು ಮೇದಿನೀ ಎಂಬುದಾಗಿ ಮೇದಿನೀ ಶಬ್ದದ ಅನ್ವರ್ಥತೆಯನ್ನು ನಿರೂಪಿಸಿರುವರು.

೩. ಅನಂತರದಲ್ಲಿ ಪ್ರಾಜ್ಞನೂ, ವೇನಪುತ್ರನೂ ಆದ ಪೃಥು ರಾಜನಿಗೆ ಭಾಷೆಯನ್ನಿತ್ತಿರುವಂತೆ ಆ ರಾಜನ ಪುತ್ರಿಯಾದುದರಿಂದ ಪೃಥುರಾಜನ ಪುತ್ರಿಯು ಪೃಥಿವೀ ಎಂದು ಭೂಮಿಯು ಅನ್ವರ್ಥವಾಗಿ ಕರೆಯಲ್ಪಡುತ್ತದೆ.

೪. ಪೂರ್ವದಲ್ಲಿ ಪೃಥುವಿಗೆ ಪೃಥುರಾಜನಿಂದ ನಾನಾವಿಧವಾದ ಪ್ರದೇಶವಿಭಾಗ

ಚಾತುರ್ವರ್ಣ್ಯಸಮಾಕೀರ್ಣಾ ರಕ್ಷಿತಾ ತೇನ ಧೀಮತಾ ।
ಏವಂ ಪ್ರಭಾವೋ ರಾಜಾಸೀದ್ವೈನ್ಯಸ್ತು ದ್ವಿಜಸತ್ತಮಾಃ ॥ ೫ ॥

ನಮಸ್ಯಶ್ಚೈವ ಪೂಜ್ಯಶ್ಚ ಭೂತಗ್ರಾಮೇಣ ಸರ್ವಶಃ ।
ಬ್ರಾಹ್ಮಣೈಶ್ಚ ಮಹಾಭಾಗೈರ್ವೇದವೇದಾಂತಪಾರಗೈಃ ॥ ೬ ॥

ಪೃಥುರೇವ ನಮಸ್ಕಾರ್ಯೋ ಬ್ರಹ್ಮಯೋನಿಃ ಸನಾತನಃ ।
ಪಾರ್ಥಿವೈಶ್ಚ ಮಹಾಭಾಗೈಃ ಪ್ರಾರ್ಥಯದ್ಭಿರ್ಮಹದ್ಯಶಃ ॥ ೭ ॥

ಆದಿರಾಜೋ ನಮಸ್ಕಾರ್ಯಃ ಪೃಥುರ್ವೈನ್ಯಃ ಪ್ರತಾಪವಾನ್ ।
ಯೋಧೈರಪಿ ಚ ಸಂಗ್ರಾಮೇ ಪ್ರಾಪ್ತುಕಾಮೈರ್ಜಯಂ ಯುಧಿ ॥ ೮ ॥

ಆದಿಕರ್ತಾ ರಣಾನಾಂ ವೈ ನಮಸ್ಯಃ ಪೃಥುರೇವ ಹಿ ।
ಯೋ ಹಿ ಯೋದ್ಧಾ ರಣಂ ಯಾತಿ ಕೀರ್ತಯಿತ್ವಾ ಪೃಥುಂ ನೃಪಮ್
॥ ೯ ॥

---

ಗಳು ಕಲ್ಪಿಸಲ್ಪಟ್ಟವು. ಆ ರಾಜನಿಗೆ ಪಟ್ಟಣ, ಗಣಿಗಳ ಮಾಲೆಗಳೆಂಬ ವಿಭಾಗಗಳಿಂದ ಭೂಮಿಯು ಅಧೀನವಾಗಿತ್ತು.

೫. ಪ್ರಾಜ್ಞನಾದ ಆ ರಾಜನು ಚಾತುರ್ವರ್ಣ್ಯದಿಂದ ಕೂಡಿರುವ ಭೂಮಿಯನ್ನು ಪಾಲಿಸಿದನು. ದ್ವಿಜಶ್ರೇಷ್ಠರೇ! ಈ ವಿಧವಾದ ವಿಶಿಷ್ಟ ಪ್ರಭಾವದಿಂದ ಕೂಡಿದವನಾಗಿ ವೇನಪುತ್ರನಾದ ಪೃಥುರಾಜನು ಪ್ರಸಿದ್ಧನಾಗಿದ್ದನು.

೬. ಪೃಥಿವಿಯಲ್ಲಿ ಸಕಲ ಭೂತವೃಂದಗಳಿಗೂ ವೇದ-ವೇದಾಂತಗಳಲ್ಲಿ ಪಾರಂಗತರಾದ ಮಹಾತ್ಮರಾದ ಬ್ರಾಹ್ಮಣರಿಗೂ ಪೃಥುರಾಜನು ಪೂಜಾ-ನಮಸ್ಕಾರ ಮುಂತಾದ ಸತ್ಕಾರಗಳಿಗೆ ಅರ್ಹನಾಗಿರುವನು.

೭. ಮಹಾತ್ಮರೂ, ಯಶಸ್ಸನ್ನು ಕಾಮಿಸುವವರೂ ಆದ ಸಮಸ್ತ ಪಾರ್ಥಿವರಿಗೆ ಪುರಾಣನೂ ಬ್ರಾಹ್ಮಣಾದಿ ಧರ್ಮಪ್ರವರ್ತಕನೂ ಆದ ಪೃಥು ಚಕ್ರವರ್ತಿಯು ವಂದಿಸಲು ಅರ್ಹನು.

೮. ರಣರಂಗದಲ್ಲಿ ಯುದ್ಧದಿಂದ ಜಯವನ್ನು ಪ್ರಾರ್ಥಿಸುತ್ತಿರುವ ಯೋಧರಿಂದ ಪ್ರತಾಪಶಾಲಿಯೂ, ಆದಿ ಕ್ಷತ್ರಿಯ ರಾಜನೂ ಆದ ವೇನಪುತ್ರನಾದ ಪೃಥುವು ನಮಸ್ಕರಿಸಲ್ಪಡಲು ಅರ್ಹನಾಗಿರುವನು.

೯. ಪೃಥುವು ಯುದ್ಧದಲ್ಲ ವಿಜಯವನ್ನು ಹೊಂದಿದ ವೀರರಲ್ಲಿ ಮೊದಲನೆ

ಸ ಘೋರರೂಪಾತ್ ಸಂಗ್ರಾಮಾತ್ ಕ್ಷೇಮೀ ತರತಿ ಕೀರ್ತಿಮಾನ್ ।
ವೈಶ್ಯೈರಪಿ ಚ ರಾಜರ್ಷಿರ್ವೈಶ್ಯವೃತ್ತಿಮಿಹಾಸ್ಥಿತೈಃ ॥ ೧೦ ॥

ಪೃಥುರೇವ ನಮಸ್ಕಾರ್ಯೋ ವೃತ್ತಿದಾನಾನ್ಮಹಾಯಶಾಃ ।
ಏತೇ ವತ್ಸವಿಶೇಷಾಶ್ಚ ದೋಗ್ಧಾರಃ ಕ್ಷೀರಮೇವ ಚ ॥ ೧೧ ॥

ಪಾತ್ರಾಣಿ ಚ ಮಯೋಕ್ತಾನಿ ಸರ್ವಾಣ್ಯೇವ ಯಥಾಕ್ರಮಮ್ ।
ಬ್ರಹ್ಮಣಾ ಪ್ರಥಮಂ ದುಗ್ಧಾ ಪುರಾ ಪೃಥ್ವೀ ಮಹಾತ್ಮನಾ ॥ ೧೨ ॥

ವಾಯುಂ ಕೃತ್ವಾ ತಥಾ ವತ್ಸಂ ಬೀಜಾನಿ ವಸುಧಾತಲೇ ।
ತತಃ ಸ್ವಾಯಂಭುವೇ ಪೂರ್ವಂ ತದಾ ಮನ್ವಂತರೇ ಪುನಃ ॥ ೧೩ ॥

---

ಯವನೆಂಬ ಕೀರ್ತಿಯಿಂದಲೂ ವಂದ್ಯನಾಗಿರುವನು. ಆದುದರಿಂದ ಯೋಧನು ಪೃಥುರಾಜನನ್ನು ಕೀರ್ತನ ಮಾಡಿ ಯುದ್ಧರಂಗಕ್ಕೆ ಇಳಿಯಬೇಕು.

೧೦. ಪೃಥುರಾಜನನ್ನು ಸ್ಮರಿಸಿ ಜೈತ್ರಯಾತ್ರೆಗೆ ತೆರಳಿದ ಯೋಧನು ಘೋರವಾದ ಸಂಗ್ರಾಮದಿಂದ ಕ್ಷೇಮವಾಗಿ ಜಯಿಸಿ ಕೀರ್ತಿಯನ್ನು ಗಳಿಸುವನು. ವೈಶ್ಯವೃತ್ತಿಯನ್ನು ಅವಲಂಬಿಸಿರುವ ವೈಶ್ಯರಿಗೂ ಆ ರಾಜನು ನಮಸ್ಕಾರಾರ್ಹನಾಗಿರುವನು.

೧೧. ಮಹಾ ಕೀರ್ತಿವಂತನಾದ ಪೃಥುರಾಜನು ವೈಶ್ಯರಿಗೆ ಕೃಷಿ ಮುಂತಾದ ವೃತ್ತಿಯನ್ನು ಕೊಟ್ಟವನಾಗಿರುವನು. ಆದುದರಿಂದ ವೈಶ್ಯಜನಾಂಗಕ್ಕೆ ವಂದ್ಯನು. ಈ ರೀತಿಯಾಗಿ ಭೂಮಿಯನ್ನು ಕರೆಯುವಾಗ ವತ್ಸ, ದೋಹನ ಮಾಡಿದ ವ್ಯಕ್ತಿ ಕ್ಷೀರ ಮುಂತಾದುವುಗಳು ವಿಶೇಷರೂಪವಾಗಿದ್ದುವು.

೧೨. ಅವುಗಳನ್ನೂ ಪಾತ್ರವಿಶೇಷಗಳನ್ನೂ ಕ್ರಮವಾಗಿಯೂ ಸಮಗ್ರವಾಗಿಯೂ ನಾನು ವರ್ಣಿಸಿರುವೆನು. ಪೂರ್ವದಲ್ಲಿ ಮೊದಲು ಮಹಾತ್ಮನಾದ ಬ್ರಹ್ಮದೇವನಿಂದ ಭೂಮಿಯು ಕರೆಯಲ್ಪಟ್ಟಿತು.

೧೩. ಬ್ರಹ್ಮನು ವಾಯುವನ್ನು ವತ್ಸವನ್ನಾಗಿ ಕಲ್ಪಿಸಿ ಭೂಮಿಯಲ್ಲಿ ಅನೇಕ ಬೀಜ ರೂಪವಾದ ಕ್ಷೀರವನ್ನು ಕರೆದಿರುವನು. ಅನಂತರದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಮತ್ತೆ ಭೂಮಿಯು ಕರೆಯಲ್ಪಟ್ಟಿತು.

ವತ್ಸಂ ಸ್ವಾಯಂಭುವಂ ಕೃತ್ವಾ ಸರ್ವಸಸ್ಯಾನಿ ಚೈವ ಹಿ ।
ತತಃ ಸ್ವಾರೋಚಿಷೇ ವಾಪಿ ಪ್ರಾಪ್ತೇ ಮನ್ವಂತರೇಽಧುನಾ ॥ ೧೪ ॥

ವತ್ಸಂ ಸ್ವಾರೋಚಿಷಂ ಕೃತ್ವಾ ದುಗ್ಧಾ ಸಸ್ಯಾನಿ ಮೇದಿನೀ ।
ಉತ್ತಮೇನ ತು ತೇನಾಪಿ ದುಗ್ಧಾ ದೇವಾನುಜೇನ ತು ॥ ೧೫ ॥

ಮನುಂ ಕೃತ್ವೋತ್ತಮಂ ವತ್ಸಂ ಸರ್ವಸಸ್ಯಾನಿ ಧೀಮತಾ ।
ಪುನಶ್ಚ ಪಂಚಮೇ ಪೃಥ್ವೀ ತಾಮಸಸ್ಯಾಂತರೇ ಮನೋಃ ॥ ೧೬ ॥

ದುಗ್ಧೇಯಂ ತಾಮಸಂ ವತ್ಸಂ ಕೃತ್ವಾ ವೈ ಬಲಬಂಧುನಾ ।
ಚಾರಿಷ್ಣವಸ್ಯ ವೈ ಷಷ್ಠೇ ಸಂಪ್ರಾಪ್ತೇ ಚಾಂತರೇ ಮನೋಃ ॥ ೧೭ ॥

ದುಗ್ಧಾ ಮಹೀ ಪುರಾಣೇನ ವತ್ಸಂ ಚಾರಿಷ್ಣವಂ ಪ್ರತಿ ।
ಚಾಕ್ಷುಷೇ ಚಾಪಿ ಸಂಪ್ರಾಪ್ತೇ ತಥಾ ಮನ್ವಂತರೇ ಪುನಃ ॥ ೧೮ ॥

---

೧೪. ಆಗ ಸ್ವಾಯಂಭುವನು ವತ್ಸರೂಪನಾಗಿದ್ದನು. ಸಕಲ ಸಸ್ಯಗಳು ಕರೆಯಲ್ಪಟ್ಟ ಕ್ಷೀರರೂಪಗಳಾಗಿದ್ದುವು. ತರುವಾಯ ಕ್ರಮವಾಗಿ ಸ್ವಾರೋಚಿಷವೆಂಬ ಮನ್ವಂತರವು ಪ್ರಾಪ್ತವಾಯಿತು.

೧೫. ಆಗ ಸ್ವಾರೋಚಿಷನನ್ನು ಕರುವನ್ನಾಗಿ ಮಾಡಿ ಭೂಮಿಯು ಸಸ್ಯಕ್ಷೀರವನ್ನು ಕರೆಯಲ್ಪಟ್ಟಿತು. ದೇವತೆಗಳ ಅನುಜನಾದ ಉತ್ತಮನಿಂದ ಮತ್ತೆ ಭೂಮಿಯ ದೋಹನವು ನಡೆಯಿತು.

೧೬. ಉತ್ತಮ ಮನುವು ಆಗ ವತ್ಸರೂಪನಾಗಿದ್ದನು. ಮತ್ತು ಸಸ್ಯ ಬೀಜಗಳು ಕ್ಷೀರ ರೂಪಗಳಾಗಿಯೂ ಇದ್ದುವು. ಮತ್ತೆ ತಾಮಸ ಮನುವಿನ ಪಂಚಮ ಮನ್ವಂತರದಲ್ಲಿ ಭೂಮಿ ದೋಹನವು ಉಂಟಾಯಿತು.

೧೭. ಆಗ ಬಲಬಂಧುವು ತಾಮಸ ಮನುವನ್ನು ವತ್ಸವನ್ನಾಗಿ ಕಲ್ಪಿಸಿ ಗೋದೋಹನಮಾಡಿದನು. ಅನಂತರದಲ್ಲಿ ಚಾರಿಷ್ಣವನೆಂಬ ಮನುವಿನ ಆರನೆಯ ಮನ್ವಂತರವು ಪ್ರಾಪ್ತವಾಯಿತು.

೧೮. ಚಾರಿಷ್ಣವನನ್ನು ವತ್ಸವನ್ನಾಗಿ ಮಾಡಿ ಪುರಾಣನಾದ ದೋಗ್ಧೃ ಪುರುಷನಿಂದ ಭೂಮಿಯು ಕರೆಯಲ್ಪಟ್ಟಿತು. ಮತ್ತೆ ಚಾಕ್ಷುಷವೆಂಬ ಮನ್ವಂತರವು ಕ್ರಮವಾಗಿ ಪ್ರಾಪ್ತವಾಯಿತು.

ದುಗ್ಧಾ ಮಹೀ ಪುರಾಣೇನ ವತ್ಸಂ ಕೃತ್ವಾ ತು ಚಾಕ್ಷುಷಮ್ ।
ಚಾಕ್ಷುಷಸ್ಯಾಂತರೇಽತೀತೇ ಪ್ರಾಪ್ತೇ ವೈವಸ್ವತೇ ಪುನಃ ॥ ೧೯ ॥

ವೈನ್ಯೇನೇಯಂ ಪುರಾ ದುಗ್ಧಾ ಯಥಾ ತೇ ಕಥಿತಂ ಮಯಾ ।
ಏತೈರ್ದುಗ್ಧಾ ಪುರಾ ಪೃಥ್ವೀ ವ್ಯತೀತೇಷ್ವಂತರೇಷು ವೈ ॥ ೨೦ ॥

ದೇವಾದಿಭಿರ್ಮನುಷ್ಯೈಶ್ಚ ತತೋ ಭೂತಾದಿಭಿಶ್ಚ ಹ ।
ಏವಂ ಸರ್ವೇಷು ವಿಜ್ಞೇಯಾ ಅತೀತಾನಾಗತೇಷ್ವಿಹ ॥ ೨೧ ॥

ದೇವಾ ಮನ್ವಂತರೇ ಸ್ವಸ್ಥಾಃ ಪೃಥೋಸ್ತು ಶೃಣುತ ಪ್ರಜಾಃ ।
ಪೃಥೋಸ್ತು ಪುತ್ರೌ ವಿಕ್ರಾಂತೌ ಜಜ್ಞಾತೇಽಂತರ್ಧಿಪಾವನೌ ॥ ೨೨ ॥

ಶಿಖಂಡಿನೀ ಹವಿರ್ಧಾನಮಂತರ್ಧಾನಾದ್ವ್ಯಜಾಯತ ।
ಹವಿರ್ಧಾನಾತ್ ಷಡಾಗ್ನೇಯೀ ಧಿಷಣಾಜನಯತ್ ಸುತಾನ್ ॥ ೨೩ ॥

---

೧೯. ಆಗ ಚಾಕ್ಷುಷನನ್ನು ಕರುವನ್ನಾಗಿ ಮಾಡಿಕೊಂಡು ಪುರಾಣಪುರುಷನಿಂದ ಮತ್ತೆ ಭೂಮಿಯು ಕರೆಯಲ್ಪಟ್ಟಿತು. ಹಾಗೆ ಚಾಕ್ಷುಷ ಮನ್ವಂತರವು ಕಳೆದ ತರುವಾಯ ವೈವಸ್ವತವೆಂಬ ಮನ್ವಂತರವು ಕ್ರಮ ಪ್ರಾಪ್ತಯಿತು.

೨೦. ಆಗ ನಾನು ಹಿಂದೆ ವರ್ಣಿಸಿದಂತೆ ಪೂರ್ವದಲ್ಲಿ ವೈನ್ಯ ರಾಜನಿಂದ ಭೂಮಿಯು ಕರೆಯಲ್ಪಟ್ಟಿತು. ಹೀಗೆ ಹಿಂದೆ ಕಳೆದ ಎಲ್ಲ ಮನ್ವಂತರಗಳಲ್ಲಿ ಗೋರೂಪವಾದ ಭೂಮಿಯು ಮತ್ತೆ ಮತ್ತೆ ದೋಹನಮಾಡಲ್ಪಟ್ಟಿತು.

೨೧. ದೇವತೆ, ಮನುಷ್ಯ, ಪ್ರಾಣಿವರ್ಗಗಳಿಂದ ಆಯಾಯ ಸಮಯಗಳಲ್ಲಿ ಕರೆಯಲ್ಪಟ್ಟಿರುವುದು. ಹೀಗೆ ಅತೀತ ಮತ್ತು ಅನಾಗತ ಮನ್ವಂತರಗಳಲ್ಲಿ ಪೃಥಿವೀ ದೋಹನವು ನಡೆಯುವುದೆಂದು ತಿಳಿಯಬೇಕು.

೨೨. ಎಲ್ಲ ಮನ್ವಂತರಗಳಲ್ಲಿ ದೇವತೆಗಳು ಸ್ವರ್ಗಲೋಕದಲ್ಲಿ ವಾಸಿಸುವರಾದರು. ಮುಂದೆ ಪೃಥು ಚಕ್ರವರ್ತಿಯ ಪ್ರಜಾ ಸಂತಾನವನ್ನು ಕೇಳಿರಿ. ಪೃಥುರಾಜನಿಗೆ ಅಂತರ್ಧಿ, ಪಾವನರೆಂಬ ವಿಕ್ರಮಶಾಲಿಗಳಾದ ಇಬ್ಬರು ಪುತ್ರರು ಹುಟ್ಟಿದರು.

೨೩. ಅಂತರ್ಧಾನನೆಂಬ ಪುತ್ರನಿಗೆ ಶಿಖಂಡಿನಿ ಎಂಬ ಪತ್ನಿಯಲ್ಲಿ ಹವಿರ್ಧಾನ ಎಂಬ ಪುತ್ರನು ಜನಿಸಿದನು. ಹವಿರ್ಧಾನನಿಗೆ ಅಗ್ನಿ ಪುತ್ರಿಯಾದ ಧಿಷಣಾ ದೇವಿಯಲ್ಲಿ ಆರು ಮಂದಿ ಪುತ್ರರು ಹುಟ್ಟಿದರು.

ಪ್ರಾಚೀನಬರ್ಹಿಷಂ ಶುಕ್ಲಂ ಗಯಂ ಕೃಷ್ಣಂ ವ್ರಜಾಜಿನೌ ।
ಪ್ರಾಚೀನಬರ್ಹಿರ್ಭಗವಾನ್ ಮಹಾನಾಸೀತ್ ಪ್ರಜಾಪತಿಃ ॥ ೨೪ ॥

ಬಲಶ್ರುತತಪೋವೀರ್ಯೈಃ ಪೃಥಿವ್ಯಾಮೇಕರಾಡಸೌ ।
ಪ್ರಾಚೀನಾಗ್ರಾಃ ಕುಶಾಸ್ತಸ್ಯ ತಸ್ಮಾತ್ ಪ್ರಾಚೀನಬರ್ಹ್ಯಸೌ ॥ ೨೫ ॥

ಸಮುದ್ರತನಯಾಯಾಂ ತು ಕೃತದಾರಃ ಸ ವೈ ಪ್ರಭುಃ ।
ಮಹತಸ್ತಪಸಃ ಪಾರೇ ಸವರ್ಣಾಯಾಂ ಪ್ರಜಾಪತಿಃ ॥ ೨೬ ॥

ಸವರ್ಣಾಧತ್ತ ಸಾಮುದ್ರೀ ದಶ ಪ್ರಾಚೀನಬರ್ಹಿಷಃ ।
ಸರ್ವಾನ್ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾನ್ ॥ ೨೭ ॥

ಅಪೃಥಗ್ಧರ್ಮಚರಣಾಸ್ತೇಽತಪ್ಯಂತ ಮಹತ್ತಪಃ ।
ದಶ ವರ್ಷಸಹಸ್ರಾಣಿ ಸಮುದ್ರಸಲಿಲೇಶಯಾಃ ॥ ೨೮ ॥

---

೨೪. ಅವರು ಪ್ರಾಚೀನಬರ್ಹಿ, ಶುಕ್ಲ, ಗಯ, ಕೃಷ್ಣ, ವ್ರಜ ಮತ್ತು ಅಜಿನ ಎಂದು ನಾಮಾಂಕಿತರಾಗಿದ್ದರು. ಅವರಲ್ಲಿ ಪ್ರಾಚೀನ ಬರ್ಹಿಯು ಪೂಜ್ಯನೂ ಮಹಾತ್ಮನೂ ಆದ ಪ್ರಜಾಪತಿ ಸ್ವರೂಪನಾದನು.

೨೫. ಅವನು ಬಲ, ವೇದಶಾಸ್ತ್ರ ಪರಿಜ್ಞಾನ, ತಪಸ್ಸು, ಮತ್ತು ವೀರ್ಯ ಗುಣಗಳಿಂದ ಪೃಥಿವಿಯಲ್ಲಿ ಏಕ ಚಕ್ರಾಧಿಪತಿಯಾಗಿದ್ದನು, ಅವನು ಪೂರ್ವ ದಿಕ್ಕಿಗೆ ಅಭಿಮುಖವಾದ ಅಗ್ರಗಳಿಂದ ಕೂಡಿದ ದರ್ಭಮಯವಾದ ಸತ್ಕರ್ಮಾಚರಣೆಯನ್ನು ಸೂಚಿಸುವ ಪ್ರಾಚೀನ ಬರ್ಹಿಯೆಂಬ ಸಂಜ್ಞೆಯನ್ನು ಹೊಂದಿದ್ದನು.

೨೬. ಆ ಪ್ರಭುವಾದ ಪ್ರಾಚೀನ ಬರ್ಹಿಯು ಮಹತ್ತರವಾದ ತಪೋನುಷ್ಠಾನವನ್ನು ಮಾಡಿದ ತರುವಾಯ ಸಮುದ್ರನ ಮಗಳಾದ ಸವರ್ಣಾ ಎಂಬುವಳನ್ನು ವಿವಾಹ ಮಾಡಿಕೊಂಡನು.

೨೭. ಸಮುದ್ರ ಪುತ್ರಿಯಾದ ಸವರ್ಣೆಯು ಪ್ರಾಚೀನ ಬರ್ಹಿಯ ಸಂಗದಿಂದ ಪ್ರಚೇತ ಎಂಬ ನಾಮಾಂಕಿತರೂ, ಧನುರ್ವೇದದಲ್ಲಿ ಪಾರಂಗತರೂ ಆದ ಹತ್ತು ಮಂದಿ ಪುತ್ರರನ್ನು ಪ್ರಸವಿಸಿದಳು.

೨೮. ಆ ಪುತ್ರರು ಎಲ್ಲರೂ ಒಟ್ಟುಗೂಡಿ ಧರ್ಮಾಚರಣೆಯ ಶೀಲವುಳ್ಳವರಾಗಿ ಸಮುದ್ರದ ಜಲರಾಶಿಯಲ್ಲಿ ಶಯನ ಮಾಡಿ ಹತ್ತುಸಾವಿರ ವರ್ಷಗಳವರೆಗೆ ಮಹತ್ತ ಮವಾದ ತಪಸ್ಸನ್ನು ಆಚರಿಸಿದರು.

ತಪಶ್ಚ ತೇಷು ಪೃಥಿವೀಂ ತಷ್ಯತ್ಸ್ವಥ ಮಹೀರುಹಾಃ ।
ಅರಕ್ಷ್ಯಮಾಣಾಮಾವವ್ರುರ್ಬಭೂವಾಥ ಪ್ರಜಾಕ್ಷಯಃ ॥ ೨೯ ॥

ಪ್ರತ್ಯಾಹೃತೇ ತದಾ ತಸ್ಮಿನ್ ಚಾಕ್ಷುಷಸ್ಯಾಂತರೇ ಮನೋಃ ।
ನಾಶಕನ್ಮಾರುತೋ ವಾತುಂ ವೃತ್ತಂ ಖಮಭವದ್ದ್ರುಮೈಃ ॥ ೩೦ ॥

ದಶ ವರ್ಷಸಹಸ್ರಾಣಿ ನ ಶೇಕುಶ್ಚೇಷ್ಟಿತುಂ ಪ್ರಜಾಃ ।
ತದುಪಶ್ರುತ್ಯ ತಪಸಾ ಸರ್ವೇ ಯುಕ್ತಾಃ ಪ್ರಚೇತಸಃ ॥ ೩೧ ॥

ಮುಖೇಭ್ಯೋ ವಾಯುಮಗ್ನಿಂ ಚ ಸಸೃಜುರ್ಜಾತಮನ್ಯವಃ ।
ಉನ್ಮೂಲಾನಥ ವೃಕ್ಷಾಂಸ್ತಾನ್ ಕೃತ್ವಾ ವಾಯುರಶೋಷಯತ್
॥ ೩೨ ॥

ತಾನಗ್ನಿರದಹದ್ಘೋರ ಏವಮಾಸೀದ್ದ್ರುಮಕ್ಷಯಃ ।
ದ್ರುಮಕ್ಷಯಮಥೋ ಬುದ್ಧ್ವಾ ಕಿಂಚಿಚ್ಛಿಷ್ಟೇಷು ಶಾಖಿಷು ॥ ೩೩ ॥

---

೨೯. ಅವರು ತಪವನ್ನು ಆಚರಿಸುತ್ತಿರಲು ತಪೋಜ್ವಾಲೆಯಿಂದ ಪೃಥಿವಿಯು ರಕ್ಷಣ ಶೂನ್ಯವಾಗಲಾಗಿ ವೃಕ್ಷಗಳು ಭೂಮಿಯನ್ನು ಆವರಿಸಿದವು. ಅದರಿಂದ ಪ್ರಜೆಗಳಿಗೆ ನಾಶವು ಉಂಟಾಯಿತು.

೩೦. ಆ ರೀತಿಯಾಗಿ ಚಾಕ್ಷುಷ ಮನ್ವಂತರದಲ್ಲಿ ವಿನಾಶವು ಪ್ರಾಪ್ತವಾಗಲು ಅವಕಾಶವೆಲ್ಲ ವೃಕ್ಷಗಳಿಂದ ಆವೃತವಾದ್ದರಿಂದ ಗಾಳಿಯು ಬೀಸಲಾರದೇ ಹೋಯಿತು.

೩೧. ಹೀಗೆ ಹತ್ತು ಸಾವಿರ ವರ್ಷಗಳ ವರೆಗೆ ಗಾಳಿ ಬೀಸದಿರುವುದರಿಂದ ಪ್ರಜೆಗಳು ಯಾವ ಚೇಷ್ಟೆಯನ್ನೂ ಮಾಡಲಾಗಲಿಲ್ಲ. ತಪೋನುಷ್ಠಾನ ಪರರಾದ ಎಲ್ಲ ಪ್ರಚೇತರು ತಪಸ್ಸಿನಿಂದ ಆದ ಈ ಪರಿಣಾಮವನ್ನು ಕೇಳಿದರು.

೩೨. ಆಗ ಪ್ರಚೇತರು ವಿಶೇಷವಾಗಿ ಕೋಪಗೊಂಡವರಾಗಿ ತಮ್ಮ ಮುಖದಿಂದ ವಾಯು ಮತ್ತು ಅಗ್ನಿಗಳನ್ನು ಸೃಷ್ಟಿಮಾಡಿದರು, ಆಗ ವಾಯುವು ಆ ವೃಕ್ಷಗಳನ್ನು ಕಿತ್ತುಹಾಕಿ ಒಣಗಿಸಿದನು.

೩೩. ಹೀಗೆ ಒಣಗಿದ ವೃಕ್ಷಗಳನ್ನು ಉಗ್ರವಾಗಿ ಅಗ್ನಿಯು ಸುಟ್ಟುಹಾಕಿತು. ಈ ಕ್ರಮದಿಂದ ವೃಕ್ಷಗಳು ನಾಶ ಹೊಂದುತ್ತ ಬಂದುವು. ಹೀಗೆ ಅನೇಕ ವೃಕ್ಷಗಳು ನಾಶಹೊಂದಿ ಕೆಲವು ವೃಕ್ಷಗಳು ಮಾತ್ರ ವಿರಳವಾಗಿ ಉಳಿದುವು.

ಉಪಗಮ್ಯಾಬ್ರವೀದೇತಾನ್ ರಾಜಾ ಸೋಮಃ ಪ್ರಚೇತಸಃ ।
ದೃಷ್ಟ್ವಾ ಪ್ರಯೋಜನಂ ಸತ್ಯಂ ಲೋಕಸಂತಾನಕಾರಣಾತ್ ॥ ೩೪ ॥

ಕೋಪಂ ತ್ಯಜತ ರಾಜಾನಃ ಸರ್ವೇ ಪ್ರಾಚೀನಬರ್ಹಿಷಃ ।
ವೃಕ್ಷಾಃ ಕ್ಷಿತ್ಯಾಂ ಜನಿಷ್ಯಂತಿ ಶಾಮ್ಯತಾಮಗ್ನಿಮಾರುತೌ ॥ ೩೫ ॥

ರತ್ನಭೂತಾ ಚ ಕನ್ಯೇಯಂ ವೃಕ್ಷಾಣಾಂ ವರವರ್ಣಿನೀ ।
ಭವಿಷ್ಯಜ್ಞಾನತಾ ಹ್ಯೇಷಾ ಧೃತಾ ಗರ್ಭೇಣ ವೈ ಮಯಾ ॥ ೩೬ ॥

ಮಾರಿಷಾ ನಾಮ ನಾಮ್ನೈಷಾ ವೃಕ್ಷೈರೇವ ವಿನಿರ್ಮಿತಾ ।
ಭಾರ್ಯಾ ಭವತು ವೋ ಹ್ಯೇಷಾ ಸೋಮಗರ್ಭಾ ವಿವರ್ಧಿತಾ ॥ ೩೭ ॥

ಯುಷ್ಮಾಕಂ ತೇಜಸಾರ್ಧೇನ ಮಮ ಚಾರ್ಧೇನ ತೇಜಸಾ ।
ಅಸ್ಯಾಮುತ್ಪತ್ಸ್ಯತೇ ವಿದ್ವಾನ್ ದಕ್ಷೋ ನಾಮ ಪ್ರಜಾಪತಿಃ ॥ ೩೮ ॥

---

೩೪. ಆಗ ಓಷಧಿಗಳ ಪತಿಯಾದ ಸೋಮರಾಜನು ಈ ಪ್ರಚೇತರ ಸಮೀಪಕ್ಕೆ ಬಂದು ಲೋಕಗಳಿಗೆ ಸಂಪೂರ್ಣಕ್ಷಯ ಒದಗದಂತೆ ಸಂತತಿಯು ಶಾಶ್ವತವಾಗಿರಬೇಕೆಂಬ ಸತ್ಯ ಪ್ರಯೋಜನೋದ್ದೇಶದಿಂದ ಹೇಳಿದನು.

೩೫. ಪ್ರಾಚೀನ ಬರ್ಹಿಯ ಪುತ್ರರೂ ರಾಜರೂ ಆದ ಪ್ರಚೇತರಾಜರೆ! ಕೋಪವನ್ನು ತ್ಯಜಿಸಿರಿ. ಈ ಅಗ್ನಿ ಮತ್ತು ಮಾರುತರು ಶಾಂತಗಳಾಗಲಿ, ಭೂಮಿಯಲ್ಲಿ ಮತ್ತೆ ವೃಕ್ಷಗಳು ಬೆಳೆಯಲಿ.

೩೬. ಸ್ತ್ರೀರತ್ನ ಪ್ರಾಯಳೂ ಸಾಧ್ವೀಮಣಿಯೂ ಆದ ಈ ಕನ್ಯೆಯು ಭವಿಷ್ಯವನ್ನು ತಿಳಿದಿರುವ ನನ್ನಿಂದ ಗರ್ಭರೂಪವಾಗಿ ಧರಿಸಲ್ಪಟ್ಟಿರುವಳು.

೩೭. ಮಾರಿಷಾ ಎಂಬ ನಾಮ ಪ್ರಸಿದ್ಧಿಯುಳ್ಳ ಈ ಕನ್ಯೆಯು ವೃಕ್ಷಗಳಿಂದ ನಿರ್ಮಿಸಲ್ಪಟ್ಟಿರುವಳು. ಸೋಮರಾಜನಾದ ನನ್ನ ಗರ್ಭದಲ್ಲಿ ಬೆಳೆದ ಈ ಕನ್ಯೆಯು ನಿಮಗೆ ಭಾರ್ಯೆಯಾಗುವಳು.

೩೮. ಇವಳಲ್ಲಿ ಮುಂದೆ ನಿಮ್ಮ ಎಲ್ಲರ ಅರ್ಧತೇಜಸ್ಸಿನಿಂದಲೂ ನನ್ನ ಅರ್ಧಭಾಗ ತೇಜಸ್ಸಿನಿಂದಲೂ ಜ್ಞಾನಿಯಾದ ದಕ್ಷನೆಂಬ ಪ್ರಜಾಪತಿಯು ಜನಿಸುವನು.

ಸ ಇಮಾಂ ದಗ್ಧಭೂಯಿಷ್ಠಾಂ ಯುಷ್ಮತ್ತೇಜೋಮಯೇನ ವೈ ।
ಅಗ್ನಿನಾಗ್ನಿಸಮೋ ಭೂಯಃ ಪ್ರಜಾಃ ಸಂವರ್ಧಯಿಷ್ಯತಿ ॥ ೩೯ ॥

ತತಃ ಸೋಮಸ್ಯ ವಚನಾಜ್ಜಗೃಹುಸ್ತೇ ಪ್ರಚೇತಸಃ ।
ಸಂಹೃತ್ಯ ಕೋಪಂ ವೃಕ್ಷೇಭ್ಯಃ ಪತ್ನೀಂ ಧರ್ಮೇಣ ಮಾರಿಷಾಮ್ ॥ ೪೦ ॥

ಮಾರಿಷಾಯಾಂ ತತಸ್ತೇ ವೈ ಮನಸಾ ಗರ್ಭಮಾದಧುಃ ।
ದಶಭ್ಯಸ್ತು ಪ್ರಚೇತೋಭ್ಯೋ ಮಾರಿಷಾಯಾಂ ಪ್ರಜಾಪತಿಃ ॥ ೪೧ ॥

ದಕ್ಷೋ ಜಜ್ಞೇ ಮಹಾತೇಜಾಃ ಸೋಮಸ್ಯಾಂಶೇನ ವೀರ್ಯವಾನ್ ।
ಅಸೃಜನ್ಮನಸಾ ತ್ವಾದೌ ಪ್ರಜಾ ದಕ್ಷೋಽಥ ಮೈಥುನಾತ್ ॥ ೪೨ ॥

ಅಚರಾಂಶ್ಚ ಚರಾಂಶ್ಚೈವ ದ್ವಿಪದೋಽಥ ಚತುಷ್ಪದಃ ।
ವಿಸೃಜ್ಯ ಮನಸಾ ದಕ್ಷಃ ಪಶ್ಚಾದಸೃಜತ ಸ್ತ್ರಿಯಃ ॥ ೪೩ ॥

---

೩೯. ನಿಮ್ಮ ತೇಜೋಮಯವಾದ ಅಗ್ನಿಯಿಂದ ವಿಶೇಷವಾಗಿ ಭಸ್ಮೀಭೂತವಾದ ಈ ಪ್ರಜಾಸೃಷ್ಟಿಯನ್ನು ಅಗ್ನಿಗೆ ಸಮಾನನಾದ ತೇಜೋವೀರ್ಯವುಳ್ಳವನಾಗಿ ಮತ್ತೆ ವೃದ್ಧಿಪಡಿಸುವನು.

೪೦. ಅನಂತರದಲ್ಲಿ ಸೋಮರಾಜನ ಈ ವಚನವನ್ನು ಕೇಳಿ ಆ ಪ್ರಚೇತರು ಕೋಪವನ್ನು ಬಿಟ್ಟು ಧರ್ಮವನ್ನು ಅನುಸರಿಸಿ ವೃಕ್ಷಗಳಿಂದ ಮಾರಿಷಾ ಎಂಬ ಕನ್ಯೆಯನ್ನು ಪತ್ನಿಯನ್ನಾಗಿ ಪರಿಗ್ರಹಿಸಿದರು.

೪೧. ತರುವಾಯ ಆ ಪ್ರಚೇತರು ಮನಃಶಕ್ತಿಯಿಂದ ಮಾರಿಷಾ ದೇವಿಯಲ್ಲಿ ಗರ್ಭವನ್ನು ಉತ್ಪತ್ತಿಮಾಡಿದರು. ಹತ್ತು ಮಂದಿ ಪ್ರಚೇತರ ವೀರ್ಯದಿಂದ ಮಾರಿಷಾದೇವಿಯಲ್ಲಿ ದಕ್ಷನೆಂಬ ಪ್ರಜಾಪತಿಯು ಜನಿಸಿದನು.

೪೨. ಮಹಾ ತೇಜಸ್ವಿಯಾದ ದಕ್ಷಬ್ರಹ್ಮನು ಸೋಮನ ಅಂಶದಿಂದ ವೀರ್ಯವಂತನಾಗಿ ಜನಿಸಿದನು. ತರುವಾಯ ಅವನು ಮನಸ್ಸಿನಿಂದ ಮೈಥುನ ಧರ್ಮದಿಂದ ಪ್ರಜೆಗಳನ್ನು ಸೃಷ್ಟಿಸಿದನು.

೪೩. ಆ ದಕ್ಷಬ್ರಹ್ಮನು ಸ್ಥಾವರ, ಜಂಗಮ, ದ್ವಿಪಾತ್, ಚತುಷ್ಪಾತ್ ಮುಂತಾದ ಪ್ರಾಣಿಗಳನ್ನು ಮನಸ್ಸಿನಿಂದ ಸೃಷ್ಟಿಮಾಡಿ, ಅನಂತರದಲ್ಲಿ, ಸ್ತ್ರೀಯರನ್ನು ಸೃಷ್ಟಿಸಿದನು.

ದದೌ ಸ ದಶ ಧರ್ಮಾಯ ಕಾಶ್ಯಪಾಯ ತ್ರಯೋದಶ ।
ಕಾಲಸ್ಯ ನಯನೇ ಯುಕ್ತಾಃ ಸಪ್ತವಿಂಶತಿಮಿಂದವೇ ॥ ೪೪ ॥

ಏಭ್ಯೋ ದತ್ವಾ ತತೋಽನ್ಯಾ ವೈ ಚತಸ್ರೋಽರಿಷ್ಟನೇಮಿನೇ ।
ದ್ವೇ ಚೈವ ಬಹುಪುತ್ರಾಯ ದ್ವೇ ಚೈವಾಂಗಿರಸೇ ತಥಾ ॥ ೪೫ ॥

ಕನ್ಯಾಮೇಕಾಂ ಕೃಶಾಶ್ವಾಯ ತೇಭ್ಯೋಽಪತ್ಯಂ ಬಭೂವ ಹ ।
ಅಂತರಂ ಚಾಕ್ಷುಷಸ್ಯಾಥ ಮನೋಃ ಷಷ್ಠಂ ತು ಗೀಯತೇ ॥ ೪೬ ॥

ಮನೋರ್ವೈವಸ್ವತಸ್ಯಾಪಿ ಸಪ್ತಮಸ್ಯ ಪ್ರಜಾಪತೇಃ ।
ವಸುದೇವಾಃ ಖಗಾ ಗಾವೋ ನಾಗಾ ದಿತಿಜದಾನವಾಃ ॥ ೪೭ ॥

ಗಂಧರ್ವಾಪ್ಸರಸಶ್ಚೈವ ಜಜ್ಞಿರೇಽನ್ಯಾಶ್ಚ ಜಾತಯಃ ।
ತತಃ ಪ್ರಭೃತಿ ಲೋಕೇಽಸ್ಮಿನ್ ಪ್ರಜಾ ಮೈಥುನಸಂಭವಾಃ ।
ಸಂಕಲ್ಪಾದ್ದರ್ಶನಾತ್ ಸ್ಪರ್ಶಾತ್ ಪೂರ್ವಾಸಾಂ ಸೃಷ್ಟಿರುಚ್ಯತೇ॥ ೪೮ ॥

---

೪೪. ಅವನು ಆ ಕನ್ಯೆಯರಲ್ಲಿ ಹತ್ತುಮಂದಿಯನ್ನು ಧರ್ಮ ಪ್ರಜಾಪತಿಗೂ, ಹದಿಮೂರು ಮಂದಿಯನ್ನು ಕಶ್ಯಪ ಮುನಿಗೂ ಕೊಟ್ಟು ಕಾಲದ ಪರಿಣಾಮದಲ್ಲಿ ನಿಯಮಿಸಲ್ಪಟ್ಟ ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೆ ದಾನಮಾಡಿದನು.

೪೫. ಇವರಿಗೆ ಈ ಕ್ರಮದಿಂದ ಕನ್ಯಾದಾನಮಾಡಿ ಮಿಕ್ಕ ಕನ್ನಿಕೆಯರಲ್ಲಿ ನಾಲ್ಕು ಕನ್ಯೆಯರನ್ನು ಅರಿಷ್ಟನೇಮಿಗೆ, ಇಬ್ಬರನ್ನು ಬಹು ಪುತ್ರನಿಗೆ ಮತ್ತು ಇಬ್ಬರನ್ನು ಅಂಗಿರ ಮುನಿಗೆ ಕೊಟ್ಟನು.

೪೬. ಹಾಗೂ ಒಬ್ಬಳು ಕನ್ಯೆಯನ್ನು ಕೃಶಾಶ್ವನಿಗೆ ಕೊಟ್ಟನು. ಅವರಿಂದ ಅನೇಕ ಪ್ರಜಾಸಂತತಿಯು ಬೆಳೆಯಿತು. ಹೀಗೆ ಚಾಕ್ಷುಷನೆಂಬ ಮನುವಿನ ಆರನೆಯ ಮನ್ವಂತರವು ವರ್ಣಿಸಲ್ಪಟ್ಟಿದೆ.

೪೭. ಏಳನೆಯ ವೈವಸ್ವತಮನುವೆಂಬ ಪ್ರಜಾಪತಿಗೆ ವಸುದೇವತೆ, ಪಕ್ಷಿ, ಗೋವು, ಸರ್ಪ, ದಿತಿಜ, ಮತ್ತು ದಾನವರು ಪ್ರಜೆಯಾಗಿ ಹುಟ್ಟಿದರು.

೪೮. ಹಾಗೂ ಗಂಧರ್ವ, ಅಪ್ಸರಸ್ತ್ರೀಯರು ಮತ್ತು ಇತರ ಅನೇಕ ಜಾತಿಗಳೂ ಪ್ರಜೆಯಾಗಿ ಹುಟ್ಟಿದರು, ಆ ಮೊದಲುಗೊಂಡು ಈ ಲೋಕದಲ್ಲಿ ಪ್ರಜೆಗಳು ಮೈಥುನ

**ಋಷಿರುವಾಚ :—**

**ದೇವಾನಾಂ ದಾನವಾನಾಂ ಚ ದೇವರ್ಷೀಣಾಂ ಚ ತೇ ಶುಭಃ ।**
**ಸಂಭವಃ ಕಥಿತಃ ಪೂರ್ವಂ ದಕ್ಷಸ್ಯ ಚ ಮಹಾತ್ಮನಃ ॥ ೪೯ ॥**

**ಪ್ರಾಣಾತ್ ಪ್ರಜಾಪತೇರ್ಜನ್ಮ ದಕ್ಷಸ್ಯ ಕಥಿತಂ ತ್ವಯಾ ।**
**ಕಥಂ ಪ್ರಚೇತಸತ್ವಂ ಚ ಪುನರ್ಲೇಭೇ ಮಹಾತಪಾಃ ॥ ೫೦ ॥**

**ಏತಂ ನಃ ಸಂಶಯಂ ಸೂತ ವ್ಯಾಖ್ಯಾತುಂ ತ್ವಮಿಹಾರ್ಹಸಿ ।**
**ದೌಹಿತ್ರಶ್ಚೈವ ಸೋಮಸ್ಯ ಕಥಂ ಶ್ವಶುರತಾಂ ಗತಃ ॥ ೫೧ ॥**

**ಸೂತ ಉವಾಚ :—**

**ಉತ್ಪತ್ತಿಶ್ಚ ನಿರೋಧಶ್ಚ ನಿತ್ಯಂ ಭೂತೇಷು ಸತ್ತಮಾಃ ।**
**ಋಷಯೋಽತ್ರ ನ ಮುಹ್ಯಂತಿ ವಿದ್ಯಾವಂತಶ್ಚ ಯೇ ಜನಾಃ ॥ ೫೨ ॥**

---

ಕರ್ಮದಿಂದ ಜನಿಸಿದರು, ಪೂರ್ವೀಕರ ಸೃಷ್ಟಿಯು ಸಂಕಲ್ಪ, ದರ್ಶನ ಮತ್ತು ಸ್ಪರ್ಶನಗಳಿಂದ ನಡೆಯುತ್ತಿತ್ತು.

೪೯. ಋಷಿಯು ಹೀಗೆ ಹೇಳಿದನು :—ಹಿಂದೆ ದೇವ, ದಾನವ ಮತ್ತು ದೇವರ್ಷಿ ಮುಂತಾದವರ ಮಂಗಳಕರವಾದ ಉತ್ಪತ್ತಿಯೂ ಮಹಾತ್ಮನಾದ ದಕ್ಷ ಪ್ರಜಾಪತಿಯ ಉತ್ಪತ್ತಿಯೂ ವರ್ಣಿಸಲ್ಪಟ್ಟವು.

೫೦. ಪ್ರಾಣದಿಂದ ದಕ್ಷಪ್ರಜಾಪತಿಯ ಜನ್ಮವು ನಿನ್ನಿಂದ ವರ್ಣಿಸಲ್ಪಟ್ಟದೆ. ಆ ಮಹಾತಪಸ್ವಿಯಾದ ದಕ್ಷನು ಮತ್ತೆ ಪ್ರಚೇತರ ಪುತ್ರತ್ವವನ್ನು ಹೇಗೆ ಹೊಂದಿದನು?

೫೧. ಸೂತಮುನಿಯೆ, ನಮ್ಮ ಸಂಶಯವು ಹೋಗುವಂತೆ ನೀನು ವ್ಯಾಖ್ಯಾನ ಮಾಡಲು ಅರ್ಹನಾಗಿದ್ದೀ. ಸೋಮರಾಜನ ದೌಹಿತ್ರನಾದ ದಕ್ಷನು ಮತ್ತೆ ಶ್ವಶುರತ್ವವನ್ನು ಹೊಂದಿದುದು ಹೇಗೆ?

೫೨. ಸಾಧುಗಳೇ, ಸೂತಮುನಿಯು :—ಇಂತೆಂದನು ಪ್ರಾಣಿಗಳ ಉತ್ಪತ್ತಿ, ನಾಶಗಳು ಅನಾದಿ ಮತ್ತು ಅನಂತವಾಗಿ ನಡೆಯುತ್ತಿವೆ. ಈ ವಿಷಯದಲ್ಲಿ ವಿದ್ಯಾವಂತರಾದ ಋಷಿಗಳು ಮೋಹಗೊಳ್ಳುವುದಿಲ್ಲ.

**ಯುಗೇ ಯುಗೇ ಭವಂತ್ಯೇತೇ ಸರ್ವೇ ದಕ್ಷಾದಯೋ ದ್ವಿಜಾಃ ।**
**ಪುನಶ್ಚೈವ ನಿರುಧ್ಯಂತೇ ವಿದ್ವಾಂ ಸ್ತತ್ರ ನ ಮುಹ್ಯತಿ ॥ ೫೩ ॥**

**ಜ್ಯೈಷ್ಠ್ಯಕಾನಿಷ್ಠ್ಯಮಪ್ಯೇಷಾಂ ಪೂರ್ವಮಾಸೀದ್ದ್ವಿಜೋತ್ತಮಾಃ ।**
**ತಪ ಏವ ಗರೀಯೋಽಭೂತ್ ಪ್ರಭಾವಶ್ಚೈವ ಕಾರಣಮ್ ॥ ೫೪ ॥**

**ಇಮಾಂ ವಿಸೃಷ್ಟಿಂ ಯೋ ವೇದ ಚಾಕ್ಷುಷಸ್ಯ ಚರಾಚರಮ್ ।**
**ಪ್ರಜಾವಾನಾಯುಷಸ್ತೀರ್ಣಃ ಸ್ವರ್ಗಲೋಕೇ ಮಹೀಯತೇ ॥ ೫೫ ॥**

**ಏವಂ ಸರ್ಗಃ ಸಮಾಖ್ಯಾತಶ್ಚಾಕ್ಷುಷಸ್ಯ ಸಮಾಸತಃ ।**
**ಇತ್ಯೇತೇ ಷಟ್ ನಿಸರ್ಗಾಶ್ಚ ಕ್ರಾಂತಾ ಮನ್ವಂತರಾತ್ಮಕಾಃ ॥ ೫೬ ॥**

**ಸ್ವಾಯಂಭುವಾದ್ಯಾಃ ಸಂಕ್ಷೇಪಾಚ್ಚಾಕ್ಷುಷಾಂತಾ ಯಥಾಕ್ರಮಮ್ ।**
**ಏತೇ ಸರ್ಗಾ ಯಥಾ ಪ್ರಾಜ್ಞೈಃ ಪ್ರೋಕ್ತಾ ಯೇ ದ್ವಿಜಸತ್ತಮಾಃ ॥ ೫೭ ॥**

---

೫೩. ಈ ದಕ್ಷ ಪ್ರಜಾಪತಿ ಮುಂತಾದ ದ್ವಿಜರು ಪ್ರತಿಯೊಂದು ಯುಗದಲ್ಲಿಯೂ ಜನ್ಮವೆತ್ತಿ ಹಾಗೆಯೇ ನಾಶವನ್ನು ಹೊಂದುತ್ತಿರುವರು. ಈ ಉತ್ಪತ್ತಿ ನಾಶಗಳಲ್ಲಿ ಜ್ಞಾನಿಯು ಭ್ರಾಂತಿಗೊಳ್ಳುವುದಿಲ್ಲ.

೫೪. ದ್ವಿಜೋತ್ತಮರೇ, ಈ ಮುನಿಗಳಲ್ಲಿ ಜೇಷ್ಠತ್ವ ಮತ್ತು ಕನಿಷ್ಠತ್ವಗಳು ಪೂರ್ವದಲ್ಲಿದ್ದವು. ತಪಸ್ಸೇ ಪೂಜಾಸ್ಥಾನವಾಗಿತ್ತು. ಮತ್ತು ಮಹಿಮೆಯು ಹಿರಿಯತನಕ್ಕೆ ಕಾರಣವಾಗಿತ್ತು.

೫೫. ಯಾವ ಮಾನವನು ಚಾಕ್ಷುಷಮನುವಿನ ಚರ ಅಚರ ಪ್ರಜಾಸೃಷ್ಟಿಯನ್ನು ಕೇಳುವನೋ, ಅವನು ಪ್ರಜಾವಂತನಾಗಿ ಪೂರ್ಣ ಆಯುಷ್ಯನ್ನು ಅನುಭವಿಸಿ ಅನಂತರದಲ್ಲಿ ಸ್ವರ್ಗಲೋಕದಲ್ಲಿ ಪೂಜ್ಯನಾಗುತ್ತಾನೆ.

೫೬. ಈ ರೀತಿಯಾಗಿ ಚಾಕ್ಷುಷ ಮನುವಿನ ಸೃಷ್ಟಿ ಪ್ರಪಂಚವು ಸಂಗ್ರಹವಾಗಿ ವರ್ಣಿಸಲ್ಪಟ್ಟಿತು. ಒಟ್ಟಾಗಿ ಮನ್ವಂತರ ರೂಪವಾದ ಆರು ಸೃಷ್ಟಿಗಳು ಕ್ರಮವಾಗಿ ವರ್ಣಿಸಲ್ಪಟ್ಟವು.

೫೭. ದ್ವಿಜಶ್ರೇಷ್ಠರೇ, ಸ್ವಾಯಂಭುವ ಮೊದಲುಗೊಂಡು ಚಾಕ್ಷುಷ ಪರ್ಯಂತವಾಗಿ ಕ್ರಮವಾಗಿ ಸಂಕ್ಷೇಪದಿಂದ ಮನ್ವಂತರಸೃಷ್ಟಿಗಳು ಪ್ರಾಜ್ಞರಿಂದ ವರ್ಣಿಸಲ್ಪಟ್ಟಂತೆ ನನ್ನಿಂದ ಉಪದೇಶಿಸಲ್ಪಟ್ಟಿವೆ.

ವೈವಸ್ವತನಿಸರ್ಗೇಣ ತೇಷಾಂ ಜ್ಞೇಯಸ್ತು ವಿಸ್ತರಃ ।
ಅನ್ಯೂನಾನತಿರಿಕ್ತಾಸ್ತೇ ಸರ್ವೇ ಸರ್ಗಾ ವಿವಸ್ವತಃ ॥ ೫೮ ॥

ಆರೋಗ್ಯಾಯುಃಪ್ರಮಾಣೇಭ್ಯೋ ಧರ್ಮತಃ ಕಾಮತೋಽರ್ಥತಃ ।
ಏತಾನೇವ ಗುಣಾನೇತಿ ಯಃ ಪಠನ್ನನಸೂಯಕಃ ॥ ೫೯ ॥

ವೈವಸ್ವತಸ್ಯ ವಕ್ಷ್ಯಾಮಿ ಸಾಂಪ್ರತಸ್ಯ ಮಹಾತ್ಮನಃ ।
ಸಮಾಸವ್ಯಾಸತಃ ಪೂರ್ವಂ ಬ್ರುವತೋ ಮೇ ನಿಬೋಧತ ॥ ೬೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಸಪ್ತತ್ರಿಂಶತ್ತಮೋಽಧ್ಯಾಯಃ

---

೫೮. ವೈವಸ್ವತ ಮನ್ವಂತರದ ಸೃಷ್ಟಿ ಕ್ರಮದಿಂದ ಎಲ್ಲಾ ಇತರ ಮನ್ವಂತರಗಳ ವಿಸ್ತಾರವನ್ನು ತಿಳಿಯಬೇಕು. ಆ ಎಲ್ಲ ಸೃಷ್ಟಿಗಳು ವೈವಸ್ವತಮನು ಸೃಷ್ಟಿಗಿಂತಲೂ ನ್ಯೂನತೆ, ಅತಿರೇಕಗಳಿಂದ ರಹಿತವಾಗಿವೆ.

೫೯. ವೈವಸ್ವತ ಮನ್ವಂತರದ ಪ್ರಜೆಗಳಲ್ಲಿರುವ ಆರೋಗ್ಯ, ಆಯುಷ್ಯ, ಪ್ರಮಾಣ, ಧರ್ಮ, ಅರ್ಥ, ಕಾಮಗಳೆಂಬ ಗುಣಗಳಲ್ಲಿ ಇತರ ಮನ್ವಂತರದ ಪ್ರಜೆಗಳು ತಾರತಮ್ಯವನ್ನು ಹೊಂದಿಲ್ಲ. ಇದನ್ನು ಅಸೂಯೆಯಿಲ್ಲದೆ ಶ್ರದ್ಧೆಯಿಂದ ಪಠಿಸಿದವನು ಆರೋಗ್ಯ ಮುಂತಾದ ಗುಣಗಳನ್ನು ಹೊಂದುತ್ತಾನೆ.

೬೦. ಮುನಿಗಳೆ! ಮುಂದೆ ವರ್ತಮಾನಕಾಲದ ಮಹಾತ್ಮನಾದ ವೈವಸ್ವತ ಮನುವಿನಿಂದ ಉಂಟಾದ ಸೃಷ್ಟಿಯನ್ನು ಸಂಗ್ರಹ—ವಿಸ್ತಾರಗಳಿಂದ ವರ್ಣಿಸುತ್ತೇನೆ. ಅದನ್ನು ಶ್ರವಣಮಾಡಿರಿ.

ಬ್ರಹ್ಮಾಂಡ ಪುರಾಣದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದುದು.

## ಅಷ್ಟತ್ರಿಂಶತ್ತಮೋಽಧ್ಯಾಯಃ

**ಸೂತ ಉವಾಚ :—**

**ಸಪ್ತಮೇ ತ್ವಥ ಪರ್ಯಾಯೇ ಮನೋರ್ವೈವಸ್ವತಸ್ಯ ಹ ।**
**ಮಾರೀಚಾತ್ ಕಶ್ಯಪಾದ್ದೇವಾ ಜಜ್ಞಿರೇ ಪರಮರ್ಷಯಃ ॥ ೧ ॥**

**ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿಶ್ವೇ ಮರುದ್ಗಣಾಃ ।**
**ಭೃಗವೋಽಂಗಿರಸಶ್ಚೈವ ತೇಽಷ್ಟೌ ದೇವಗಣಾಃ ಸ್ಮೃತಾಃ ॥ ೨ ॥**

**ಆದಿತ್ಯಾ ಮರುತೋ ರುದ್ರಾ ವಿಜ್ಞೇಯಾಃ ಕಶ್ಯಪಾತ್ಮಜಾಃ ।**
**ಸಾಧ್ಯಾಶ್ಚ ವಸವೋ ವಿಶ್ವೇ ಧರ್ಮಪುತ್ರಾಸ್ತ್ರಯೋ ಗಣಾಃ ॥ ೩ ॥**

**ಭೃಗೋಸ್ತು ಭೃಗವೋ ದೇವಾ ಹ್ಯಂಗಿರಸೋಽಂಗಿರಃಸುತಾಃ ।**
**ವೈವಸ್ವತೇಽಂತರೇ ಹ್ಯಸ್ಮಿನ್ನಿತ್ಯೇತೇ ಛಂದಜಾ ಮತಾಃ ॥ ೪ ॥**

---

ಸೂತಮುನಿಯು ಕಥಾನಕವನ್ನು ಮುಂದುವರಿಸಿದನು :—

೧. ಸೃಷ್ಟಿಪ್ರಸ್ತಾವದಲ್ಲಿ ಏಳನೆಯ ಪರ್ಯಾಯವಾದ ವೈವಸ್ವತ ಮನುವಿನ ಮನ್ವಂತರದಲ್ಲಿ ಶ್ರೇಷ್ಠರಾದ ಮಹರ್ಷಿಗಳೂ ದೇವತೆಗಳೂ ಕಶ್ಯಪಮುನಿಯಿಂದ ಜನ್ಮವೆತ್ತಿದರು.

೨. ಆಗ ಜನಿಸಿದ ದೇವಗಣಗಳು ಆದಿತ್ಯ, ವಸು, ರುದ್ರ, ಸಾಧ್ಯ, ವಿಶ್ವ ದೇವ, ಮರುತ್, ಭೃಗು ಮತ್ತು ಅಂಗಿರ ಎಂಬುದಾಗಿ ಎಂಟು ವಿಧಗಳಾಗಿ ಸ್ಮರಿಸಲ್ಪಟ್ಟಿವೆ.

೩. ಇವುಗಳಲ್ಲಿ ಆದಿತ್ಯ, ವಸು ಮತ್ತು ರುದ್ರರೆಂಬ ದೇವಗಣಗಳು ಕಶ್ಯಪ ಪುತ್ರರೆಂದು ತಿಳಿಯಬೇಕು. ಸಾಧ್ಯ, ವಸು ಮತ್ತು ವಿಶ್ವೇದೇವರೆಂಬ ಮೂರು ದೇವಗಣಗಳು ಧರ್ಮ ಪ್ರಜಾಪತಿಯ ಪುತ್ರರಾಗಿರುವರು.

೪. ಭೃಗುಮುನಿಯಿಂದ ಭೃಗು ಎಂಬ ದೇವಗಣವೂ ಅಂಗಿರೋಮುನಿಯಿಂದ ಅಂಗಿರ ಎಂಬ ದೇವಗಣವೂ ಪುತ್ರರಾಗಿ ಜನಿಸಿರುವರು. ಹೀಗೆ ವೈವಸ್ವತ ಮನ್ವಂತರದಲ್ಲಿ ಇವರೆಲ್ಲರೂ ಛಂದಜರಾದ ದೇವತೆಗಳೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿರುವರು.

ಏತೇಽಪಿ ಚ ಗಮಿಷ್ಯಂತಿ ಮಹಾಂತಂ ಕಾಲಪರ್ಯಯಾತ್ ।
ಏವಂ ಸರ್ಗಸ್ತು ಮಾರೀಚೋ ವಿಜ್ಞೇಯಃ ಸಾಂಪ್ರತಃ ಶುಭಃ ॥ ೫ ॥

ತೇಜಸ್ವೀ ಸಾಂಪ್ರತಸ್ತೇಷಾಮಿಂದ್ರೋ ನಾಮ್ನಾ ಮಹಾಬಲಃ ।
ಅತೀತಾನಾಗತಾ ಯೇ ಚ ವರ್ತಂತೇ ಸಾಂಪ್ರತಂ ಚ ಯೇ ॥ ೬ ॥

ಸರ್ವೇ ಮನ್ವಂತರೇಂದ್ರಾಸ್ತೇ ವಿಜ್ಞೇಯಾಸ್ತುಲ್ಯಲಕ್ಷಣಾಃ ।
ಭೂತಭವ್ಯಭವನ್ನಾಥಾಃ ಸಹಸ್ರಾಕ್ಷಾಃ ಪುರಂದರಾಃ ॥ ೭ ॥

ಮಘವಂತಶ್ಚ ತೇ ಸರ್ವೇ ಶೃಂಗಿಣೋ ವಜ್ರಪಾಣಯಃ ।
ಸರ್ವೈಃ ಕ್ರತುಶತೇನೇಷ್ಟಂ ಪೃಥಕ್ ಶತಗುಣೇನ ತು ॥ ೮ ॥

ತ್ರೈಲೋಕ್ಯೇಯಾನಿ ಸತ್ತ್ವಾನಿ ಗತಿಮಂತಿ ಧ್ರುವಾಣಿ ಚ ।
ಅಭಿಭೂಯಾವತಿಷ್ಠಂತಿ ಧರ್ಮಾದ್ಯೈಃ ಕಾರಣೈರಪಿ ॥ ೯ ॥

---

೫. ಇವರೆಲ್ಲರೂ ಅತಿಶಯವಾದ ಕಾಲಪರ್ಯಾಯವನ್ನು ಹೊಂದುವರು. ಹೀಗೆಯೇ ವರ್ತಮಾನವೂ, ಮಂಗಳಕರವೂ ಆದ ಮರೀಚಿ ಮುನಿಯ ಸೃಷ್ಟಿಯನ್ನು ತಿಳಿಯಬೇಕು.

೬. ಅವರಲ್ಲಿ ಮಹಾ ಬಲಿಷ್ಠನೂ, ತೇಜಸ್ವಿಯೂ ಆದ ಒಬ್ಬ ಪುತ್ರನು ಈಗ ಇಂದ್ರನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವನು. ಅತೀತ, ಅನಾಗತ ಮತ್ತು ವರ್ತಮಾನ ಮಹಾಪುರುಷರು ಪ್ರತಿ ಮನ್ವಂತರದಲ್ಲಿಯೂ ಆವರ್ತಿಸುತ್ತಿರುವರು.

೭. ಆ ಎಲ್ಲ ಮನ್ವಂತರಾಧಿಪತಿಗಳು ತುಲ್ಯವಾದ ಲಕ್ಷಣಗಳಿಂದ ಕೂಡಿರುವರೆಂದು ತಿಳಿಯಬೇಕು. ಅವರು ಭೂತ, ಭವಿಷ್ಯ ಮತ್ತು ವರ್ತಮಾನ ಲೋಕಗಳಿಗೆ ಪ್ರಭುಗಳಾಗಿ, ಸಹಸ್ರಾಕ್ಷ, ಪುರಂದರ ಮುಂತಾದ ಸಂಜ್ಞೆಯಿಂದ ಪ್ರತಿಪಾದ್ಯನಾದ ಇಂದ್ರನ ಅಧಿಕಾರವನ್ನು ಹೊಂದಿರುವರು.

೮. ಮತ್ತು ಸಮೃದ್ಧಿಯಾದ ಅನ್ನಕ್ಕೆ ಅಧಿಪತಿಗಳೂ, ಶೃಂಗ, ವಜ್ರ ಮುಂತಾದ ಆಯುಧಗಳನ್ನು ಧರಿಸಿದವರೂ ಆಗಿರುವರು. ಅವರೆಲ್ಲರಿಂದಲೂ ಪ್ರತ್ಯೇಕವಾಗಿ ಶತಗುಣವಾಗಿ ನೂರು ಯಾಗಗಳು ಆಚರಿಸಲ್ಪಟ್ಟಿವೆ.

೯. ಮತ್ತು ಲೋಕತ್ರಯದಲ್ಲಿರುವ ಜಂಗಮ ಅಥವಾ ಸ್ಥಾವರ ಪ್ರಾಣಿಗಳನ್ನು ಧರ್ಮ ಮುಂತಾದ ಕಾರಣ ವಿಶೇಷಗಳಿಂದ ತಿರಸ್ಕರಿಸಿ ಇರುವರು.

ತೇಜಸಾ ತಪಸಾ ಬುದ್ಧ್ಯಾ ಬಲಶ್ರುತಪರಾಕ್ರಮೈಃ ।
ಭೂತಭವ್ಯಭವನ್ನಾಥಾ ಯಥಾ ತೇ ಪ್ರಭವಿಷ್ಣವಃ ॥ ೧೦ ॥

ಏತತ್ ಸರ್ವಂ ಪ್ರವಕ್ಷ್ಯಾಮಿ ಬ್ರುವತೋ ಮೇ ನಿಬೋಧತ ।
ಭೂತಭವ್ಯಭವದ್ಧ್ಯೇತತ್ ಸ್ಮೃತಂ ಲೋಕತ್ರಯಂ ದ್ವಿಜೈಃ ॥ ೧೧ ॥

ಭೂರ್ಲೋಕೋಽಯಂ ಸ್ಮೃತೋ ಭೂತಮಂತರಿಕ್ಷಂ ಭವತ್ ಸ್ಮೃತಮ್।
ಭವ್ಯಂ ಸ್ಮೃತಂ ದಿವಂ ಹ್ಯೇತತ್ ತೇಷಾಂ ವಕ್ಷ್ಯಾಮಿ ಸಾಧನಮ್॥ ೧೨ ॥

ಧ್ಯಾಯತಾ ಲೋಕನಾಮಾನಿ ಬ್ರಹ್ಮಣಾಗ್ರೇ ವಿಭಾಷಿತಮ್ ।
ಭೂರಿತಿ ವ್ಯಾಹೃತಂ ಪೂರ್ವಂ ಭೂರ್ಲೋಕೋಽಯಮಭೂತ್ತದಾ ॥ ೧೩ ॥

ಭೂ ಸತ್ತಾಯಾಂ ಸ್ಮೃತೋ ಧಾತುಸ್ತಥಾಸೌ ಲೋಕದರ್ಶನೇ ।
ಭೂತತ್ವಾದ್ದರ್ಶನಾಚ್ಚೈವ ಭೂರ್ಲೋಕೋಽಯಮಭೂತ್ತತಃ॥ ೧೪ ॥

---

೧೦. ಹಾಗೆಯೇ ತೇಜಸ್ಸು, ತಪಸ್ಸು, ಸೂಕ್ಷ್ಮಬುದ್ಧಿ, ದೇಹಬಲ, ಶಾಸ್ತ್ರಾರ್ಥ ಪರಿಜ್ಞಾನ ಮತ್ತು ಪರಾಕ್ರಮಗಳೆಂಬ ಗುಣವಿಶೇಷಗಳಿಂದ ಭೂತ, ಭವಿಷ್ಯ ಮತ್ತು ವರ್ತಮಾನ ಲೋಕಗಳ ಅಧಿಪತಿಗಳಾಗಿ ಲೋಕದ ಪ್ರಭುತ್ವಾಧಿಕಾರವನ್ನು ಹೊಂದಿರುವರು.

೧೧. ಈ ಸಮಸ್ತ ಚರಿತ್ರೆಯನ್ನು ಉಪದೇಶಿಸುವ ನನ್ನ ವಚನವನ್ನು ಕೇಳಿರಿ. ದ್ವಿಜರಿಂದ ಈ ಲೋಕತ್ರಯವು ಭೂತ, ಭವಿಷ್ಯ ಮತ್ತು ವರ್ತಮಾನ ಕಾಲಗಳಲ್ಲಿ ಅನುವೃತ್ತವಾಗಿರುವುದೆಂದು ಹೇಳಲ್ಪಟ್ಟಿದೆ.

೧೨. ಈ ಭೂಲೋಕವು ಭೂತ ಎಂದೂ, ಅಂತರಿಕ್ಷಲೋಕವು ಭವತ್ ಎಂದೂ ಮತ್ತು ಈ ದ್ಯುಲೋಕವು ಭವ್ಯ ಎಂದೂ ಪ್ರತ್ಯೇಕ ಸಂಜ್ಞೆಗಳಿಂದ ಸ್ಮರಿಸಲ್ಪಟ್ಟಿವೆ. ಅವುಗಳ ಸಾಧನವನ್ನು ಹೇಳುವೆನು.

೧೩. ಪೂರ್ವದಲ್ಲಿ ಬ್ರಹ್ಮನು ಲೋಕಗಳ ನಾಮಗಳನ್ನು ಧ್ಯಾನಿಸಿ ಆಯಾಯ ಸಂಜ್ಞೆಯನ್ನು ಉಚ್ಚರಿಸಿದನು. ಪೂರ್ವದಲ್ಲಿ ಭೂ ಎಂದು ಉಚ್ಚರಿಸಿದ ನಾಮದಿಂದ ಈ ಭೂಲೋಕವು ಉತ್ಪನ್ನವಾಯಿತು.

೧೪. ಭೂ ಎಂಬ ಧಾತುವು ಸತ್ತ್ವ=ಇರುವಿಕೆ ಮತ್ತು ಲೋಕಗಳ ದರ್ಶನ ಎಂಬ ಅರ್ಥಗಳಲ್ಲಿ ಸ್ಮರಿಸಲ್ಪಟ್ಟಿದೆ. ಆದುದರಿಂದ ಭೂತತ್ವ, ದರ್ಶನಗಳಿಂದ ಈ ಭೂಲೋಕವು ಅನ್ವರ್ಥ ಸಂಜ್ಞೆಯನ್ನು ಹೊಂದಿರುವುದು.

ಅತೋಽಯಂ ಪ್ರಥಮೋ ಲೋಕೋ ಭೂತತ್ವಾದ್ಭೂರ್ದ್ವಿಜೈಃ ಸ್ಮೃತಃ ।
ಭೂತೇಽಸ್ಮಿನ್ ಭವದಿತ್ಯುಕ್ತಂ ದ್ವಿತೀಯಂ ಬ್ರಹ್ಮಣಾ ಪುನಃ ॥ ೧೫ ॥

ಭವದಿತ್ಯುತ್ಪದ್ಯಮಾನೇ ಕಾಲೇ ಶಬ್ದೋಽಯಮುಚ್ಯತೇ ।
ಭವನಾತ್ತು ಭುವರ್ಲೋಕೋ ನಿರುಕ್ತ್ಯಾ ಹಿ ನಿರುಚ್ಯತೇ ॥ ೧೬ ॥

ಅಂತರಿಕ್ಷಂ ಭವತ್ತಸ್ಮಾದ್ದ್ವಿತೀಯೋ ಲೋಕ ಉಚ್ಯತೇ ।
ಉತ್ಪನ್ನೇ ತು ತಥಾ ಲೋಕೇ ದ್ವಿತೀಯೇ ಬ್ರಹ್ಮಣಾ ಪುನಃ ॥ ೧೭ ॥

ಭವ್ಯೇತಿ ವ್ಯಾಹೃತಂ ಪಶ್ಚಾದ್ಭವ್ಯೋ ಲೋಕಸ್ತತೋಽಭವತ್ ।
ಅನಾಗತೇ ಭವ್ಯ ಇತಿ ಶಬ್ದ ಏಷ ವಿಭಾವ್ಯತೇ ॥ ೧೮ ॥

ತಸ್ಮಾದ್ಭವ್ಯೋ ಹ್ಯಸೌ ಲೋಕೋ ನಾಮತಸ್ತ್ರಿದಿವಂ ಸ್ಮೃತಮ್ ।
ಭೂರಿತೀಯಂ ಸ್ಮೃತಾ ಭೂಮಿರಂತರಿಕ್ಷಂ ಭುವಃ ಸ್ಮೃತಮ್ ॥ ೧೯ ॥

---

೧೫. ಆದ್ದರಿಂದ ಮೊದಲನೆಯ ಈ ಲೋಕವು ಸತ್ತಾ ಮತ್ತು ದರ್ಶನ ನಿಮಿತ್ತದಿಂದ ದ್ವಿಜರಿಂದ ಭೂಲೋಕವೆಂದು ಸ್ಮರಿಸಲ್ಪಟ್ಟಿತು. ಈ ಲೋಕವು ಸಂಭವಿಸಿದ ಮೇಲೆ ಮತ್ತೆ ಬ್ರಹ್ಮನಿಂದ ಎರಡನೆಯ ಭವತ್ ಎಂಬ ಶಬ್ದರೂಪವು ಹೇಳಲ್ಪಟ್ಟಿತು.

೧೬. ಭವತ್ ಎಂಬ ಶಬ್ದವು ಹುಟ್ಟುತ್ತಲಿರುವ ಕಾಲವಿಶೇಷವನ್ನು ಬೋಧಿಸುವುದು. ಆ ಭವನ ಎಂಬ ಗುಣನಿಮಿತ್ತದಿಂದ ಭುವರ್ಲೋಕವೆಂಬ ಶಬ್ದವು ಅನ್ವರ್ಥವಾಗಿ ವಿವರಿಸಲ್ಪಟ್ಟದೆ.

೧೭. ಆದ್ದರಿಂದ ಎರಡನೆಯ ಅಂತರಿಕ್ಷವೆಂಬ ಲೋಕವು ಭವತ್ ಎಂದು ವ್ಯವಹರಿಸಲ್ಪಟ್ಟದೆ. ಹಾಗೆ ದ್ವಿತೀಯ ಲೋಕವು ಉತ್ಪನ್ನವಾಗಲು ಬ್ರಹ್ಮನು ಮತ್ತೆ ತೃತೀಯಲೋಕ ಸೃಷ್ಟಿಗೆ ಯತ್ನಿಸಿದನು.

೧೮. ಅನಂತರದಲ್ಲಿ ಬ್ರಹ್ಮನಿಂದ ಭವ್ಯ ಎಂದು ಉಚ್ಚರಿಸಲ್ಪಟ್ಟಿತು. ಆ ಉಚ್ಚಾರಣದಿಂದ ಭವ್ಯಲೋಕವು ಉತ್ಪನ್ನವಾಯಿತು. ಮುಂದೆ ಬರುವ ವಸ್ತುವಿನಲ್ಲಿ ಭವ್ಯ ಎಂಬ ಶಬ್ದವು ರೂಢಿಯಿಂದ ಪ್ರಯೋಗಿಸಲ್ಪಡುತ್ತಿದೆ.

೧೯. ಆದ್ದರಿಂದ ತ್ರಿದಿವ ಎಂಬ ಆಮುಷ್ಮಿಕಲೋಕವು ಭವ್ಯಲೋಕವೆಂದು ಸ್ಮರಿಸಲ್ಪಟ್ಟಿರುವುದು. ಭೂಮಿಯು ಭೂಲೋಕವೆಂದು ಹೇಳಲ್ಪಟ್ಟದೆ. ಹಾಗೂ ಅಂತರಿಕ್ಷ ಲೋಕವು ಭುವರ್ಲೋಕವೆಂದು ಗಣಿಸಲ್ಪಟ್ಟದೆ.

ದಿವಂ ಸ್ಮೃತಂ ತಥಾ ಭವ್ಯಂ ತ್ರೈಲೋಕ್ಯಸ್ಯೈಷ ನಿರ್ಣಯಃ ।
ತ್ರೈಲೋಕ್ಯಯುಕ್ತೈರ್ವ್ಯಾಹಾರೈಸ್ತಿಸ್ರೋ ವ್ಯಾಹೃತಯೋಽಭವನ್ ॥ ೨೦ ॥

ನಾಥ ಇತ್ಯೇಷ ಧಾತುರ್ವೈ ಧಾತುಜ್ಞೈಃ ಪಾಲನೇ ಸ್ಮೃತಃ ।
ಯಸ್ಮಾದ್ಭೂತಸ್ಯ ಲೋಕಸ್ಯ ಭವ್ಯಸ್ಯ ಭವತಸ್ತಥಾ ॥ ೨೧ ॥

ಲೋಕತ್ರಯಸ್ಯ ನಾಥಾಸ್ತೇ ತಸ್ಮಾದಿಂದ್ರಾ ದ್ವಿಜೈಃ ಸ್ಮೃತಾಃ ।
ಪ್ರಧಾನಭೂತಾ ದೇವೇಂದ್ರಾ ಗುಣಭೂತಾಸ್ತಥೈವ ಚ ॥ ೨೨ ॥

ಮನ್ವಂತರೇಷು ಯೇ ದೇವಾ ಯಜ್ಞಭಾಜೋ ಭವಂತಿ ಹಿ ।
ಯಕ್ಷಗಂಧರ್ವರಕ್ಷಾಂಸಿ ಪಿಶಾಚೋರಗಮಾನುಷಾಃ ॥ ೨೩ ॥

ಮಹಿಮಾನಃ ಸ್ಮೃತಾ ಹ್ಯೇತೇ ದೇವೇಂದ್ರಾಣಾಂ ತು ಸರ್ವಶಃ ।
ದೇವೇಂದ್ರಾ ಗುರವೋ ನಾಥಾ ರಾಜಾನಃ ಪಿತರೋ ಹಿ ತೇ ॥ ೨೪ ॥

---

೨೦. ದ್ಯುಲೋಕವು ಭವ್ಯಲೋಕವೆಂದು ಪಠಿತವಾಗಿದೆ. ಇದು ಲೋಕತ್ರಯ ವಿಷಯದಲ್ಲಿ ಮುಖ್ಯವಾದ ನಿರ್ಣಯವು. ಹೀಗೆ ಮೂರು ಲೋಕಗಳಿಂದ ಕೂಡಿದ ಶಬ್ದಪ್ರಯೋಗ ವಿಶೇಷಗಳಿಂದ ಭೂಃ, ಭುವಃ, ಸ್ವಃ ಎಂಬ ಮೂರು ವ್ಯಾಹೃತಿಗಳು ಉತ್ಪನ್ನವಾದುವು.

೨೧. ಧಾತು ಪಾಠಜ್ಞಾನಿಗಳಿಂದ ನಾಥ ಎಂಬ ಧಾತುವು ಪಾಲನವೆಂಬ ಅರ್ಥದಲ್ಲಿ ಸ್ಮರಿಸಲ್ಪಟ್ಟಿದೆ. ಹಿಂದೆ ಹೇಳಿದ ಅಧಿಪತಿಗಳು ಭೂತ, ಭವ್ಯ ಮತ್ತು ಭವತ್ ಎಂಬ ಲೋಕಗಳಿಗೆ ಪ್ರಭುಗಳಾಗಿರುವರು.

೨೨. ಮತ್ತು ಲೋಕತ್ರಯಕ್ಕೆ ಪಾಲಕರಾಗಿರುವುದರಿಂದ ದ್ವಿಜರು ಅವರನ್ನು ಇಂದ್ರ ಎಂದು ಗೌರವಿಸುವರು. ಆ ದೇವತೆಗಳು ದೇವೇಂದ್ರರಾಗಿ ಪ್ರಧಾನರಾಗಿಯೂ ಕಾರ್ಯವಶದಿಂದ ಗುಣಭೂತರಾಗಿಯೂ ಇರುವರು.

೨೩. ಅವರು ಆಯಾಯ ಮನ್ವಂತರಗಳಲ್ಲಿ ಯಜ್ಞೀಯ ದೇವತೆಗಳಾಗಿ ಹವಿರ್ಭಾಗವನ್ನು ಹೊಂದುವರು. ಯಕ್ಷ, ಗಂಧರ್ವ, ರಾಕ್ಷಸ, ಪಿಶಾಚ, ಸರ್ಪ ಮತ್ತು ಮನುಷ್ಯರು ಆ ದೇವತೆಗಳ ವಿಭೂತಿ ವಿಶೇಷಗಳು.

೨೪. ಹಿಂದೆ ಹೇಳಿದ ಯಕ್ಷ ಮುಂತಾದವರು ದೇವೇಂದ್ರರ ಮಹಿಮೆಯ ರೂಪರಾಗಿ ಎಲ್ಲ ಕಡೆಯಲ್ಲಿಯೂ ಇರುವರು. ದೇವೇಂದ್ರರು, ಗುರು, ನಾಥ, ರಾಜ, ಪಿತೃ ಮುಂತಾದ ಸರ್ವ ಪ್ರಕಾರಗಳಿಂದಲೂ ಇರುವರು.

ರಕ್ಷಂತೀಮಾಃ ಪ್ರಜಾ ಹ್ಯೇತೇ ಧರ್ಮೇಣೇಹ ಸುರೋತ್ತಮಾಃ ।
ಇತ್ಯೇತಲ್ಲಕ್ಷಣಂ ಪ್ರೋಕ್ತಂ ದೇವೇಂದ್ರಾಣಾಂ ಸಮಾಸತಃ ॥ ೨೫ ॥

ಸಪ್ತರ್ಷೀನ್ ಸಂಪ್ರವಕ್ಷ್ಯಾಮಿ ಸಾಂಪ್ರತಂ ಯೇ ದಿವಂ ಶ್ರಿತಾಃ ।
ಗಾಧಿಜಃ ಕೌಶಿಕೋ ಧೀಮಾನ್ ವಿಶ್ವಾಮಿತ್ರೋ ಮಹಾತಪಾಃ ॥ ೨೬ ॥

ಭಾರ್ಗವೋ ಜಮದಗ್ನಿಶ್ಚ ಹ್ಯೌರ್ವಪುತ್ರಃ ಪ್ರತಾಪವಾನ್।
ಬೃಹಸ್ಪತಿಸುತಶ್ಚಾಪಿ ಭರದ್ವಾಜೋ ಮಹಾಯಶಾಃ ॥ ೨೭ ॥

ಔತಥ್ಯೋ ಗೌತಮೋ ವಿದ್ವಾನ್ ಶರದ್ವಾನ್ನಾಮ ಧಾರ್ಮಿಕಃ ।
ಸ್ವಾಯಂಭುವೋಽತ್ರಿರ್ಭಗವಾನ್ ಬ್ರಹ್ಮಕೋಶಃ ಸ ಪಂಚಮಃ ॥ ೨೮ ॥

ಷಷ್ಠೋ ವಸಿಷ್ಠಪುತ್ರಸ್ತು ವಸುಮಾಂಲ್ಲೋಕವಿಶ್ರುತಃ ।
ವತ್ಸರಃ ಕಾಶ್ಯಪಶ್ಚೈವ ಸಪ್ತೈತೇ ಸಾಧುಸಂಮತಾಃ ॥ ೨೯ ॥

---

೨೫. ಆ ಸುರೋತ್ತಮರು ಧರ್ಮದಿಂದ ಸಮಸ್ತ ಪ್ರಜೆಗಳನ್ನು ರಕ್ಷಿಸುತ್ತಿರುವರು. ಹೀಗೆ ಮನ್ವಂತರಗಳಲ್ಲಿರುವ ದೇವೇಂದ್ರನ ಲಕ್ಷಣವು ಸಂಗ್ರಹವಾಗಿ ವರ್ಣಿಸಲ್ಪಟ್ಟಿತು.

೨೬. ಮುಂದೆ ಈಗ ಸ್ವರ್ಗವನ್ನು ಆಶ್ರಯಿಸಿರುವ ಸಪ್ತ ಋಷಿಗಳನ್ನು ವರ್ಣಿಸುತ್ತೇನೆ. ಅವರಲ್ಲಿ ಗಾಧಿರಾಜನ ಪುತ್ರನೂ, ಕುಶಿಕಮುನಿಯ ಗೋತ್ರದಲ್ಲಿ ಹುಟ್ಟಿದವನೂ, ಜ್ಞಾನಿಯೂ ಮತ್ತು ಮಹಾ ತಪಸ್ವಿಯೂ ಆದ ವಿಶ್ವಾಮಿತ್ರ ಮುನಿಯು ಗಣ್ಯನಾಗಿರುವನು.

೨೭. ಭೃಗುಮುನಿಯ ಪುತ್ರನಾದ ಜಮದಗ್ನಿ, ಔರ್ವಮುನಿಯ ಪುತ್ರನಾದ ಪ್ರತಾಪವಂತ, ಬೃಹಸ್ಪತಿಯ ಪುತ್ರನೂ, ಮಹಾ ಕೀರ್ತಿವಂತನೂ ಆದ ಭರದ್ವಾಜ ಎಂಬುವರು ಆ ಗಣದಲ್ಲಿ ಸೇರಿರುವರು.

೨೮. ಮತ್ತು ಉತಥ್ಯ ಋಷಿಯ ಮಗ, ಗೌತಮ ವಂಶ ಸಂಭೂತನೂ, ಜ್ಞಾನಿಯೂ ಮತ್ತು ಧಾರ್ಮಿಕನೂ ಆದ ಶರದ್ವಾನ್, ಸ್ವಯಂಭುಪುತ್ರನೂ, ಪೂಜ್ಯನೂ, ಬ್ರಹ್ಮಜ್ಞಾನಕ್ಕೆ ಕೋಶರೂಪನೂ ಆದ ಐದನೆಯ ಅತ್ರಿ ಮುನಿಯು ಅವರಲ್ಲಿ ಅಂತರ್ಗತನಾಗಿರುವನು.

೨೯. ಲೋಕಗಳಲ್ಲಿ ಪ್ರಸಿದ್ಧನಾದ, ವಸಿಷ್ಠಪುತ್ರನಾದ ವಸುಮಾನ್ ಎಂಬುವನು ಆರನೆಯವನಾಗಿರುವನು. ಹಾಗೆ ಕಶ್ಯಪಪುತ್ರನಾದ ವತ್ಸರ ಮುನಿಯು

ಏತೇ ಸಪ್ತರ್ಷಯಶ್ಚೋಕ್ತಾ ವರ್ತಂತೇ ಸಾಂಪ್ರತೇಽಂತರೇ ।
ಇಕ್ಷ್ವಾಕುಶ್ಚ ನೃಗಶ್ಚೈವ ಧೃಷ್ಟಃ ಶಾರ್ಯಾತಿರೇವ ಚ ॥ ೩೦ ॥

ನರಿಷ್ಯಂತಶ್ಚ ವಿಖ್ಯಾತೋ ನಾಭಾಗೋ ದಿಷ್ಟ ಏವ ಚ ।
ಕರೂಷಶ್ಚ ಪೃಷಧ್ರಶ್ಚ ಪ್ರಾಂಶುಶ್ಚ ನವಮಃ ಸ್ಮೃತಃ ॥ ೩೧ ॥

ಮನೋರ್ವೈವಸ್ವತಸ್ಯೈತೇ ನವ ಪುತ್ರಾಃ ಸುಧಾರ್ಮಿಕಾಃ ।
ಕೀರ್ತಿತಾ ವೈ ತಥಾ ಹ್ಯೇತೇ ಸಪ್ತಮಂ ಚೈತದಂತರಮ್ ॥ ೩೨ ॥

ಇತ್ಯೇಷ ಹ ಮಯಾ ಪಾದೋ ದ್ವಿತೀಯಃ ಕಥಿತೋ ದ್ವಿಜಾಃ
ವಿಸ್ತರೇಣಾನುಪೂರ್ವ್ಯಾ ಚ ಭೂಯಃ ಕಿಂ ಕಥಯಾಮ್ಯಹಮ್ ॥ ೩೩ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಅಷ್ಟತ್ರಿಂಶತ್ತಮೋಽಧ್ಯಾಯಃ

---

ಏಳನೆಯವನಾಗಿರುವನು. ಹೀಗೆ ಈ ಏಳುಮಂದಿ ಸಾಧುಗಳಾದ ಸಪ್ತರ್ಷಿಗಳೆಂದು ಸಮ್ಮತರಾಗಿರುವರು.

೩೦. ಈ ವರ್ತಮಾನ ಮನ್ವಂತರದಲ್ಲಿ ಇವರು ಸಪ್ತರ್ಷಿಗಳಾಗಿ ಇರುವರೆಂದು ಹೇಳಲ್ಪಟ್ಟಿದೆ. ಮುಂದೆ ವೈವಸ್ವತ ಮನುವಿನ ಪುತ್ರರ ಹೆಸರನ್ನು ಕೇಳಿರಿ:— ಇಕ್ಷ್ವಾಕು, ನೃಗ, ಶರ್ಯಾತಿ ಪುತ್ರನಾದ ಧೃಷ್ಟ ಎಂಬುವರು ವೈವಸ್ವತ ಮನುವಿನ ಪುತ್ರರಾಗಿರುವರು.

೩೧. ನರಿಷ್ಯಂತ, ಪ್ರಸಿದ್ಧನಾದ ನಾಭಾಗ, ದಿಷ್ಟ, ಕರೂಷ, ಪೃಷಧ್ರ ಮತ್ತು ನವಮನಾದ ಪ್ರಾಂಶು ಇವರು ಆ ಗಣದಲ್ಲಿ ಸೇರಿರುವರೆಂದು ಸ್ಮರಿಸಲ್ಪಟ್ಟಿದೆ.

೩೨. ಈ ವೈವಸ್ವತ ಮನುವಿನ ಧಾರ್ಮಿಕರಾದ ಒಂಭತ್ತು ಮಂದಿ ಪುತ್ರರು ನನ್ನಿಂದ ಕ್ರಮವಾಗಿ ಹೇಳಲ್ಪಟ್ಟಿರುವರು. ಹೀಗೆ ಇವರಿಂದ ಏಳನೆಯ ಮನ್ವಂತರವು ನಡೆಯುವುದಾಗಿದೆ.

೩೩. ದ್ವಿಜರೇ! ಈ ರೀತಿಯಾಗಿ ನನ್ನಿಂದ ಎರಡನೆಯ ಪಾದವು ವಿಸ್ತಾರ ಮತ್ತು ಆನುಪೂರ್ವೀ ಸಹಿತವಾಗಿ ವರ್ಣಿಸಲ್ಪಟ್ಟಿದೆ. ಇನ್ನು ಮುಂದೆ ನಿಮಗೆ ಯಾವುದನ್ನು ವರ್ಣಿಸಲಿ?

ಬ್ರಹ್ಮಾಂಡಪುರಾಣದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

**ಪೂರ್ವಾರ್ಧವು ಸಮಾಪ್ತವು.**